ಸಂಪುಟ ೬ ಸಂಯುಕ್ತ ಸಂಚಿಕೆ ೧-೨
ಜನವರಿ - ಡಿಸೆಂಬರ್ ೨೦೦೪

# ಮಹಿಳಾ ಅಧ್ಯಯನ



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

13

# ಮಹಿಳಾ ಅಧ್ಯಯನ

## ಸಂಯುಕ್ತ ಸಂಚಿಕೆ

ಸಂಪಾದಕರು

ಡಾ. ಶಿವಾನಂದ ಎಸ್. ವಿರಕ್ತಮಠ




ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

MAHILA ADHYAYANA
Bi-Annual, Vol.-6, Combined Issue-1+2
Jan-June & July-December 2004

*Edited* by
**Dr. Shivananda S. Viraktamath**
Sr. Lecturer, Women's Studies Dept.
Kannada University, Hampi
Vidyaranya 583 276

*Published by*
**Prof. Mallepuram G. Venkatesha**
Director, Prasaranga
Kannada University, Hampi
Vidyaranya 583 276

Pages : vi + 242, Price : Rs. 50/-

www.kannadauniversity.org

ಅರ್ಧವಾರ್ಷಿಕ ಪತ್ರಿಕೆ, ಸಂಪುಟ ೬, ಸಂಯುಕ್ತ ಸಂಚಿಕೆ ೧+೨
ಜನವರಿ-ಜೂನ್ ಮತ್ತು ಜುಲೈ-ಡಿಸೆಂಬರ್ ೨೦೦೪





*ಪ್ರಕಾಶನ*

**ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ**
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಬಿಡಿ ಪ್ರತಿ ಬೆಲೆ : ರೂ. ೫೦.೦೦

ವಾರ್ಷಿಕ ಚಂದಾ : ರೂ. ೫೦.೦೦

ಐದು ವರ್ಷದ ಚಂದಾ : ರೂ. ೨೦೦.೦೦

*ಮುಖಪುಟ* : **ಕೆ.ಕೆ. ಮಕಾಳಿ**

*ಅಕ್ಷರ ಸಂಯೋಜನೆ*
ವಿದ್ಯಾರಣ್ಯ ಗಣಕ ಕೇಂದ್ರ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

*ಮುದ್ರಣ*
ಪ್ರಿಂಟ್ ಪಾರ್ಕ್, ಬೆಂಗಳೂರು

# ಮಹಿಳಾ ಅಧ್ಯಯನ ಮತ್ತು ಚಳುವಳಿಗಳ ಸಂಬಂಧದ ಸ್ವರೂಪ

ವಸಾಹತೋತ್ತರ ಸಂದರ್ಭದ ಅಧ್ಯಯನ ವಲಯಗಳಲ್ಲಿ ಸ್ತ್ರೀವಾದ ಮತ್ತು ಮಹಿಳಾ ಅಧ್ಯಯನಗಳು ಬೆಳೆದುಬಂದ ಪರಿಣಾಮವಾಗಿ ಈಗ ಬಹುತೇಕ ಎಲ್ಲಾ ಜ್ಞಾನ ಶಾಖೆಗಳ ಅಧ್ಯಯನ ಮಾದರಿಗಳಲ್ಲಿ ಒಂದು ಬಗೆಯ ಚಲನಶೀಲತೆಯು ಉಂಟಾಗಿದೆ. ಈ ಬಗೆಯ ಜಂಡರ್ ಸ್ಟಡೀಸ್‌ನ ನೆಲೆಗಳು ಇಂದು ಎಲ್ಲಾ ಜ್ಞಾನ ಶಾಖೆಗಳ ಗ್ರಹಿಕಾ ಕ್ರಮಗಳಲ್ಲಿ ವಿದ್ಯುತ್ ಸಂಚಲನವನ್ನೇನೊ ಮಾಡುತ್ತಿವೆ. ಈ ಪ್ರಕ್ರಿಯೆ ಆಯಾ ಜ್ಞಾನ ಶಾಖೆಗಳಿಗೆ ಎಷ್ಟೆಷ್ಟು ಪ್ರಯೋಜನವಾಗುತ್ತಿದೆಯೋ ಗೊತ್ತಿಲ್ಲ. ಆದರೆ ಇದು ಮಹಿಳಾ ಅಧ್ಯಯನ ಶಾಖೆಯ ಬೆಳವಣಿಗೆಗಂತೂ ತುಂಬಾ ಪ್ರಯೋಜನಕಾರಿಯಾಗಿದೆ ಎಂಬುದರಲ್ಲಿ ಎರಡು ಮಾತಿಲ್ಲ. ಈ ಚಿಂತನಾಕ್ರಮ ವಿದ್ವತ್‌ಲೋಕ ಹಾಗೂ ವಿಶ್ವವಿದ್ಯಾಲಯಗಳ ಶೈಕ್ಷಣಿಕ ಮಟ್ಟದಲ್ಲಿ ಗಂಭೀರವಾದ ಅಸ್ತಿತ್ವ ಪಡೆದುಕೊಳ್ಳುತ್ತಿರುವುದರ ಪರಿಣಾಮ ಸ್ತ್ರೀ-ಪುರುಷ ಸಮಾನತೆಯ ನೈಜ ಸ್ವರೂಪದ ಹುಟ್ಟಿಗೆ ಕಾರಣವಾಗಬಹುದು. ಈ ಬಗೆಯ ಅಧ್ಯಯನಗಳ ಪರಿಣಾಮ ಕೂಡ ಇದೇ ಆಗಿದ್ದಿರಬಹುದೆಂಬುದು ತರ್ಕದ ಮಾತು, ಸರಿ.

ಪ್ರಶ್ನೆಯಿರುವುದು 'ಮಹಿಳಾ ಚಿಂತನೆ'ಯನ್ನು ಸಾಮಾಜಿಕ ಬದುಕಿನ ಬದಲಾವಣೆಯ ಸಾವಯವ ಸಂಬಂಧವಾಗಿ ಕಲ್ಪಿಸುವ ಬಗೆಗೆ. ಸ್ತ್ರೀವಾದಿ ಚಳುವಳಿ, ಸಂಘಟನೆ ಮತ್ತು ಹೋರಾಟಗಳಲ್ಲಿ ತೊಡಗಿಕೊಂಡಿರುವ ಕ್ರಿಯಾಶೀಲರು ಮಹಿಳಾ ಬದುಕಿನ ತಳಮಟ್ಟದ ಬದಲಾವಣೆಯನ್ನು ಬಯಸಿ ನಿರಂತರವಾಗಿ ದುಡಿಯುತ್ತಿದ್ದಾರೆ. ಅವರು ಕೇವಲ ಬೌದ್ಧಿಕ ಚಿಂತನೆಯ ನಡೆಯಿಂದ ಹೆಚ್ಚು ಪ್ರಯೋಜನವಾಗದು ಎಂದು ಕೇಳುತ್ತಿದ್ದಾರೆ. ಮಹಿಳೆ ಎಲ್ಲಿದ್ದಾಳೆಯೊ ಅಲ್ಲಿಗೆ, ಅವಳ ಹತ್ತಿರ ಬಂದು ಹೋರಾಟ ನಡೆಸುವ ಮೂಲಕವೇ ಮಹಿಳಾ ಬದುಕಿನಲ್ಲಿ ಬದಲಾವಣೆಯನ್ನು ತರಬೇಕೆಂಬುದು ಇವರ ಆಶಯವಾಗಿದೆ. ಈ ಹೋರಾಟಗಳ ಕ್ರಿಯಾಶೀಲ ಮಾದರಿಗಳು ಮಹಿಳಾ ಬದುಕಿನಲ್ಲಿ ಅನೇಕ ಬದಲಾವಣೆಯನ್ನು ತಂದಿರುವುದಕ್ಕೆ ಅವರು ಹಲವು ಪುರಾವೆಗಳನ್ನು ನೀಡುತ್ತಾರೆ. ಇನ್ನೊಂದು ನಿಟ್ಟಿನಲ್ಲಿ ಮಹಿಳಾ ಅಧ್ಯಯನ ಹಾಗೂ ಚಿಂತನೆಗಳ ಅಕಾಡೆಮಿಕ್ ವಲಯಗಳಲ್ಲಿ ತೊಡಗಿರುವವರು, ಮಹಿಳಾಪರ ಹಕ್ಕೊತ್ತಾಯಗಳನ್ನು ಮೇಲ್ಪದರಿನ ನೆಲೆಯಲ್ಲಿ ಕಲ್ಪಿಸಿ, ಸಂಘಟಿಸಿ ಹೋರಾಟ ನಡೆಸಿದರೆ ಸಾಲದು. ಈ ಅಸಮಾನತೆಯ ನೈಜ ಸ್ವರೂಪವನ್ನು ಗ್ರಹಿಸುವಲ್ಲಿ ಗಂಭೀರ ಅಧ್ಯಯನಗಳ ಪಾತ್ರವೂ ಮುಖ್ಯ ಎಂದು ಹೇಳುತ್ತಿದ್ದಾರೆ. ಈ ಬಗೆಯ ಆರೋಪ ಪ್ರತ್ಯಾರೋಪಗಳಿಂದ ಪ್ರಯೋಜನವೇನೋ ಆಗುವುದಿಲ್ಲ. ಬರಿ ಪರ-ವಿರೋಧದ

ಚರ್ಚಾಗೋಷ್ಠಿಯನ್ನು ನಡೆಸಬಹುದು ಅಷ್ಟೆ. ಈ ಪ್ರಸ್ತಾಪದ ಉದ್ದೇಶ ಅದಲ್ಲ. ವಾಸ್ತವವಾಗಿ ಇಲ್ಲಿ ಚಳುವಳಿಗಳ ನಡೆಯೂ ಸತ್ಯ; ಹಾಗೆಯೇ ಅಧ್ಯಯನಕಾರರ ನೆಲೆಯೂ ಮುಖ್ಯ. ಪರಸ್ಪರ ಸಾಹಚರ್ಯದ ಸಂಬಂಧ ಮಾತ್ರದಿಂದಲೇ 'ಮಹಿಳಾ ವಿಮೋಚನೆ' ಸಾಧ್ಯವಾಗುತ್ತದೆಂಬುದನ್ನು ಗಮನಿಸಬೇಕಾಗುತ್ತದೆ. ಸಾಮಾಜಿಕ ಪಾತಳಿಯಲ್ಲಿ ಸಿಕ್ಕಿ ಹಾಕಿಕೊಂಡ, ದೈನಿಕ ಸಮಸ್ಯೆಗಳ ಗೂಡಾಗಿರುವ 'ಮಹಿಳಾ ಬದುಕು' ಏಕಕಾಲದಲ್ಲಿ ಅಧ್ಯಯನಕಾರರ ಮತ್ತು ಹೋರಾಟಗಾರರ ಎರಡೂ ನೆಲೆಯಿಂದ ಶಕ್ತಿಯನ್ನೂ, ಅರಿವನ್ನೂ ಪಡೆದುಕೊಳ್ಳಬೇಕಾಗಿದೆ. ಈ ನಿಟ್ಟಿನಲ್ಲಿ ಪರಸ್ಪರ ಎರಡೂ ಬಗೆಯ ಚಟುವಟಿಕೆಗಳ ಸಹಚರ ಸಂಬಂಧವು ಏರ್ಪಡಬೇಕು. ನಿರಂತರವಾಗಿ ಕೂಡಿ ಕಾರ್ಯಕ್ರಮಗಳನ್ನು ರೂಪಿಸಬೇಕು ಹಾಗೂ ಸ್ತ್ರೀಪುರುಷ ಸಮಾನತೆಯ ಸಂಘಟನೆಯನ್ನು ನಿರ್ವಹಿಸಬೇಕು. ಆವಾಗ ಸಾಮಾಜಿಕ ಸ್ವಾಸ್ಥ್ಯದ ಮಹಿಳಾ ಬದುಕನ್ನು ನಿರೀಕ್ಷಿಸಬಹುದು.

ಮಹಿಳಾ ಅಧ್ಯಯನ ಪತ್ರಿಕೆಯ ಈ ಸಂಪುಟದಲ್ಲಿ ಶೈಕ್ಷಣಿಕ ನೆಲೆಯಿಂದ ಸಾಧ್ಯವಾಗುವ ಸಬಲೀಕರಣದ ಚರ್ಚೆ ಹಾಗೂ ಅದರ ಸಾಧ್ಯತೆಗಳ ಚಿಂತನಾಲೋಕವನ್ನು ಪರಿಚಯಿಸಲಾಗಿದೆ. ವಿಶೇಷವಾಗಿ ಹಿರಿಯ ಲೇಖಕಿಯ ಸಂದರ್ಶನವನ್ನು, ಜಾನಪದ ಲೋಕದ ಮಹಿಳಾ ಅನುಭವಕಥನವನ್ನು ಹಾಗೂ ದಲಿತ ಮಹಿಳಾ ಲೋಕದ ಹುಡುಕಾಟವನ್ನು ಕಟ್ಟಿಕೊಡಲು ಇಲ್ಲಿ ಪ್ರಯತ್ನಿಸಲಾಗಿದೆ. ಮಹಿಳೆಯನ್ನು ಕುರಿತ ಸಾಹಿತ್ಯ, ಸಂಸ್ಕೃತಿ ಚಿಂತನೆ, ಸಾಮಾಜಿಕ ಸಮಸ್ಯೆ ಹಾಗೂ ಸೈದ್ಧಾಂತಿಕತೆಗಳ ವೈವಿಧ್ಯತೆಯ ಅನುಭವವನ್ನು ತರುವಂತೆ ಈ ಸಂಪುಟವನ್ನು ರೂಪಿಸಲಾಗಿದೆ. ಎಂದಿನಂತೆ ಪತ್ರಿಕೆಯ ಗುಣಮಟ್ಟವನ್ನು ಕಾಯ್ದುಕೊಳ್ಳಲಾಗಿದೆ. ಕೋರಿಕೆಯಂತೆ ಲೇಖನಗಳನ್ನು ಸಕಾಲಕ್ಕೆ ಒದಗಿಸಿದ್ದಕ್ಕಾಗಿ ಮೊದಲಿಗೆ ಎಲ್ಲಾ ಲೇಖಕರನ್ನು ವಂದಿಸುತ್ತೇನೆ.

ಪತ್ರಿಕೆಯ ಎಲ್ಲಾ ಪ್ರಕ್ರಿಯೆಗಳ ಹಿಂದೆ ಬೆಂಬಲವಾಗಿ ನಿಂತಿರುವ ಹಾಗೂ ಪತ್ರಿಕೆಯ ಪ್ರಧಾನ ಸಂಪಾದಕರೂ ಆಗಿರುವ ಗೌರವಾನ್ವಿತ ಕುಲಪತಿಯವರಾದ ಡಾ. ಬಿ.ಎ. ವಿವೇಕ ರೈ ಅವರಿಗೆ ಹೃತ್ಪೂರ್ವಕ ನಮಸ್ಕಾರಗಳು. ಪತ್ರಿಕೆಯ ಯಾವತ್ತೂ ಸಲಹಾ ಮಂಡಳಿಯ ಸದಸ್ಯರಿಗೆ; ಡಿ.ಟಿ.ಪಿ., ರಕ್ಷಾಕವಚದ ಸಿದ್ಧತೆ, ಮುದ್ರಣ ಮೊದಲಾದವುಗಳ ಹೊಣೆ ಹೊತ್ತಿರುವ ಪ್ರಸಾರಾಂಗದ ನಿರ್ದೇಶಕರು ಹಾಗೂ ಅವರ ಸಹೋದ್ಯೋಗಿ ಬಳಗಕ್ಕೆ ವಂದಿಸುತ್ತಾ; ಕಾರಣಾಂತರಗಳಿಂದ ಪತ್ರಿಕೆ ತಡವಾಗಿ ತಲುಪುತ್ತಿರುವುದಕ್ಕೆ ಓದುಗರಲ್ಲಿ ಕ್ಷಮೆ ಕೋರುತ್ತಾ ಈ ಸಂಪುಟವನ್ನು ಒಪ್ಪಿಸುತ್ತಿದ್ದೇನೆ.

**ಶಿವಾನಂದ ಎಸ್. ವಿರಕ್ತಮಠ**

# ಪರಿವಿಡಿ

## ಮಾತುಕತೆ

# ಖ್ಯಾತ ಲೇಖಕಿ ನಾಡೋಜ ಸಾರಾ ಅಬೂಬಕ್ಕರ್ ಅವರೊಂದಿಗೆ

ಸಂಪಾದಕ

(ಮೊದಲ ಕೃತಿ 'ಚಂದ್ರಗಿರಿಯ ತೀರದಲ್ಲಿ' ಕೃತಿಯ ಮೂಲಕ ಆಧುನಿಕ ಕನ್ನಡ ಸಾಹಿತ್ಯಕ್ಕೆ ಮುಸ್ಲಿಂ ಮಹಿಳಾ ಸಂವೇದನೆಯನ್ನು ತಂದು ಕೊಟ್ಟ ಖ್ಯಾತಿಯ ಬರಹಗಾರ್ತಿ ಶ್ರೀಮತಿ ಸಾರಾ ಅಬೂಬಕ್ಕರ್ ಅವರು ಅದೇ ಕೃತಿಯಿಂದ ಪ್ರಸಿದ್ಧರೂ ಆದರು. ಕರಾವಳಿ ಕರ್ನಾಟಕದ ಗಡಿ ಭಾಗದ ಕಾಸರಗೋಡು ಜಿಲ್ಲೆಯಲ್ಲಿ ಜನಿಸಿ, ತದನಂತರದಲ್ಲಿ ಮಂಗಳೂರಿನಲ್ಲಿ ನೆಲಸಿದ ಸಾರಾ ಅವರು ಈಗಾಗಲೇ ಕನ್ನಡ ಸಾಹಿತ್ಯ ಲೋಕಕ್ಕೆ ಎಂಟು ಕಾದಂಬರಿಗಳನ್ನೂ (ಚಂದ್ರಗಿರಿ ತೀರದಲ್ಲಿ-೧೯೮೪, ಸಹನಾ-೧೯೮೫, ವಜ್ರಗಳು-೧೯೮೮, ಕದನ ವಿರಾಮ-೧೯೯೧, ಸುಳಿಗೆ ಸಿಕ್ಕವರು-೧೯೮೪, ಪ್ರವಾಹ ಸುಳಿ-೧೯೯೬, ತಳವೊಡೆದ ದೋಣಿಯಲ್ಲಿ-೧೯೯೭, ಪಂಜರ-೨೦೦೪); ಐದು ಕಥಾಸಂಕಲನಗಳನ್ನೂ (ಚಪ್ಪಲಿಗಳು-೧೯೮೯, ಪಯಣ ಮತ್ತು ಇತರ ಕಥೆಗಳು-೧೯೯೨, ಅರ್ಧರಾತ್ರಿಯಲ್ಲಿ ಹುಟ್ಟಿದ ಕೂಸು-೧೯೯೬, ಖೆಡ್ಡಾ-೧೯೯೯, ಸುಮಯ್ಯಾ-೨೦೦೪); ಮೂರು ಅನುವಾದ ಕೃತಿಗಳನ್ನೂ (ಮಲಯಾಳಂ ನಿಂದ ಕನ್ನಡಕ್ಕೆ ಮನೋಮಿ, ಬಲೆ, ನಾನಿನ್ನು); ಎರಡು ಲೇಖನ ಸಂಕಲನಗಳನ್ನೂ (ಲೇಖನ ಗುಚ್ಛ, ಅನಾವರಣ); ಒಂದು ಪ್ರವಾಸ ಕಥನವನ್ನೂ (ಇಷಾರಾಮದ ಆಳದಲ್ಲಿ-೨೦೦೧) ನೀಡಿದವರು.

ಶ್ರೀಮತಿ ಸಾರಾ ಅವರು ಲೇಖಕಿಯಾಗಿ ಮಾತ್ರವಲ್ಲದೇ ಅನೇಕ ಮಹಿಳಾ ಸಂಘಟನೆಗಳಲ್ಲಿಯೂ ಸಕ್ರಿಯವಾಗಿ ಪಾಲ್ಗೊಳ್ಳುವುದರ ಮೂಲಕ ಮಹಿಳೆಯರ ಅನೇಕ ಸಮಸ್ಯೆಗಳಿಗೆ ಸೃಜನೇತರವಾಗಿಯೂ ಸ್ಪಂದಿಸುತ್ತಾ ಬಂದವರಾಗಿದ್ದಾರೆ. ಸಾರಾ ಅವರ ಸಾಹಿತ್ಯ ಸೇವೆಗಾಗಿ ಸಂದ ಪ್ರಶಸ್ತಿ ಸನ್ಮಾನಗಳು ಕೂಡ ಅನೇಕ. ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ-೧೯೯೧, ಕರ್ನಾಟಕ ರಾಜ್ಯ ಪ್ರಶಸ್ತಿ-೧೯೯೫, ದಾನ ಚಿಂತಾಮಣಿ ಅತ್ತಿಮಬ್ಬೆ ಪ್ರಶಸ್ತಿ-೨೦೦೧, ಬಾಬಾ ಸಾಹೇಬ ಅಂಬೇಡ್ಕರ್ ಪ್ರಶಸ್ತಿ-೨೦೦೩, ಸಂದೇಶ ಸಾಹಿತ್ಯ ಪ್ರಶಸ್ತಿ-೨೦೦೩ ಮೊದಲಾದವುಗಳಲ್ಲದೆ ೨೦೦೫ರಲ್ಲಿ ಕನ್ನಡ ವಿಶ್ವವಿದ್ಯಾಲಯವು ಗೌರವ ಡಾಕ್ಟರೇಟ್ ನಾಡೋಜ ಪದವಿಯನ್ನೂ ನೀಡಿ ಗೌರವಿಸಿದೆ. ಇಂಥ ಖ್ಯಾತ ಲೇಖಕಿಯು ಕನ್ನಡ ವಿಶ್ವವಿದ್ಯಾಲಯದ ಯುಜಿಸಿ ಮಹಿಳಾ ಅಧ್ಯಯನ ಕೇಂದ್ರದ ಕಾರ್ಯಕ್ರಮವೊಂದಕ್ಕೆ

ಆಗುಮಿಸಿದ್ದಾಗ ಈ ಸಂದರ್ಶನವನ್ನು ನಡೆಸಲಾಯಿತು. ಅದರ ಭಾಗವನ್ನು ಇಲ್ಲಿ ಮುದ್ರಿಸಲಾಗಿದೆ. -ಸಂ)

**ಸಂ :** **ಮೇಡಂ, ನೀವು ನಿಮ್ಮ ಕಥನಗಳಲ್ಲಿ ಶಿಕ್ಷಣವನ್ನು ಮಹಿಳೆಯ ಜಾಗೃತಿಯ ಸಾಧನವನ್ನಾಗಿ ಗ್ರಹಿಸುತ್ತೀರಿ. ಮಹಿಳೆಗೆ ಶಿಕ್ಷಣವನ್ನು ಕೊಡಲೇಬೇಕು ಎಂಬ ನಿಮ್ಮ ಆಲೋಚನೆಗೆ ಇರುವ ಮಹಿಳಾ ಕಾರಣವನ್ನು ತಿಳಿಯುವ ಪ್ರಶ್ನೆಯೊಂದಿಗೆ ಈ ಮಾತುಕತೆಯನ್ನು ಆರಂಭ ಮಾಡಬೇಕೆನಿಸುತ್ತದೆ.**

ಸಾರಾ : ಮಹಿಳೆಯಲ್ಲಿ ಜಾಗೃತಿ ಮೂಡಲು ಶಿಕ್ಷಣದಿಂದ ಎಷ್ಟರಮಟ್ಟಿಗೆ ಸಾಧ್ಯ ಅಂತಾ ನೀವು ಕೇಳ್ತೀರಿ. ನನಗೆ ಜಾಗೃತಿ ಮೂಡಿರುವುದು ಶಿಕ್ಷಣದಿಂದ ಮಾತ್ರ. ಅದಕ್ಕೆ ನಾನೇ ಜೀವಂತ ಉದಾಹರಣೆಯಾಗಿದ್ದೇನೆ. ಮಹಿಳೆಗೆ ಶಿಕ್ಷಣ ಕೊಟ್ಟರೆ ಮಾತ್ರ ಆಕೆಯಲ್ಲಿ ಜಾಗೃತಿ ಮೂಡ್ತದೆ. ನನ್ನಲ್ಲಿ ಆ ಜಾಗೃತಿ ಮೂಡಿದ್ದು ಯಾಕೆಂದ್ರೆ ಆ ಶಿಕ್ಷಣದಿಂದಲೇ. ಇಲ್ಲದಿದ್ದರೇ ನಾನು ಆ 'ಚಂದ್ರಗಿರಿಯ ತೀರದಲ್ಲಿ' ಅದನ್ನ ಆ ರೀತಿಯಲ್ಲಿ ಪ್ರಶ್ನೆ ಮಾಡುವ ಸಾಧ್ಯತೆಯೇ ಇರಲಿಲ್ಲ. ನಾನು ಒಪ್ಪಿಕೊಳ್ತಾ ಇದ್ದೆನೊ ಏನೊ? ಬಹುಶಃ ಇದು ನನ್ನ ಧರ್ಮ, ಇದು ಹೀಗಿಯೇ ಇರಬೇಕು ಅಂತಾ ಹೇಳಿ. ಆ ಹುಡುಗಿಗೆ ಆದಂತ, ನನ್ನ ಕಣ್ಣೆದುರಿಗೇ ನಡೆದಂಥ ಒಂದು ಅನ್ಯಾಯ, ಅವಳಿಗೆ ಅದೇ ಗಂಡನ ಜೊತೆಯಲ್ಲಿ ಬಾಳಲಿಕ್ಕೆ ಸಾಧ್ಯ ಆಗಲಿಲ್ಲ. ಸಾಧ್ಯ ಆಗಿದ್ರೆ ಆಕೆಯ ಬದುಕು ಸಾಧಾರಣ ಚೆನ್ನಾಗಿ ಒಳ್ಳೆಯ ಮಟ್ಟದಲ್ಲಿ ನಡೀತಾ ಇತ್ತು. ಚಂದ್ರಗಿರಿಯ ತೀರದಲ್ಲಿ ಕೃತಿಯ ಪಾತ್ರದ ರಚನೆಯ ಪ್ರೇರಣೆಯ ಸಂದರ್ಭವನ್ನು ನೆನಪಿಸಿಕೊಳ್ಳುತ್ತಾ ನಾನು ಮೊನ್ನೆ ಕೂಡ ಊರಿಗೆ ಹೋದಾಗ ಅವಳನ್ನು ನೋಡ್ದೆ. ಅದು ಬೇರೆಯ ವಿಷಯ. ಅದು ಯಾಕೆ ಹಾಗಾಯ್ತು ಅಂತಹೇಳಿ.

ನನ್ನ ಮನಸ್ಸಿನಲ್ಲಿದ್ದಂತೆ ನನಗೆ ಶಿಕ್ಷಣ ದೊರೆಯದೆ ಹೋಗಿದ್ದರೆ, ನಾನು ಅದನ್ನು ಪ್ರಶ್ನೆ ಮಾಡುವ ಸಾಧ್ಯತೆಯೇ ಇರಲಿಲ್ಲ. ನನಗೆ ಶಿಕ್ಷಣ ದೊರೆತಾಗ, ನನಗೆ ಒಂದು ದೃಷ್ಟಿಕೋನ ಸ್ವಲ್ಪ ಬ್ರಾಡ್ ಆಗ್ತಾ ಬಂತು. ಹೌದು ಇದು ಯಾಕೆ ಹೀಗೆ ಆಗ್ತದೆ ಮಹಿಳೆಗೆ ಯಾಕೆ ಇಂಥಾ ಅನ್ಯಾಯ ಆಗ್ತದೆ. ಮತ್ತೆ ಇದನ್ನ ಯಾರೂ ಪ್ರಶ್ನಿಸುವುದಿಲ್ಲ. ನಮ್ಮ ಮಹಿಳೆಯರು ತಲೆ ತಗ್ಗಿಸಿ ಒಪ್ಪಿಕೊಳ್ತಾರೆ. ಒಬ್ಬ ಅವನಿಷ್ಟಕ್ಕೆ ಆವನು ತಲಾಕ್ ಹೇಳಿ ಹೋಗ್ತಾನೆ. ಮತ್ತೆ ಸ್ವಲ್ಪ ಸಮಯ ಆದ ಮೇಲೆ ಅವನೇ ಬರ್ತಾನೆ. ನಾನು ಅವಳನ್ನು ಮದುವೆ ಆಗ್ತೀನಿ ಅಂತಾ ಹೇಳಿ. ಅವನಿಗೆ ಶಿಕ್ಷೆ ಕೊಡ್ತಾ ಇಲ್ಲ. ಇದನ್ನು ಪ್ರಶ್ನೆ ಮಾಡಬೇಕು ಅಂತಾ ಹೇಳಿ ಯಾರೂ ಬರಲ್ಲ.

**ಸಂ :** **ನೀವು ಶುರು ಮಾಡಿದ ಬರವಣಿಗೆಯ ಹಿಂದಿನ ಪ್ರೇರಣೆ, ಪ್ರಚೋದನೆಯ ಸ್ವರೂಪವನ್ನು ಕುರಿತು ಸ್ವಲ್ಪದರಲ್ಲಿ ಹೇಳ್ತೀರಾ?**

ಸಾರಾ : ನನ್ನ ಬರಹ... ಮತ್ತೆ ಅದನ್ನು ಪ್ರತಿಭೆ ಅಂತಾ ಹೇಳಬೇಕು. ನನ್ನ ತಂದೆಯ ಹತ್ರ ಒಂದು ಸಾರ್ತಿ ಹೇಳ್ದೆ. ನೀವು ಬರೀರಿ ಅಂತಾ. ಅವರಿಗೆ ತುಂಬಾ ಅನುಭವ ಇದೆ. ಇಂಥ ಮಹಿಳೆಯರ ವಿಷಯದಲ್ಲೆಲ್ಲಾ ತುಂಬಾ ಹೋರಾಡಿದ್ದಾರೆ. ಯಾಕೆಂದ್ರೆ, ಅವರು ವಕೀಲರು. ಆಗಿನ ಕಾಲದಲ್ಲಿ ಕೆಲವು ಮಹಿಳೆಯರು ಬಂದಿದ್ದರು. ಅವರಿಗೆ ಹಸಿವೆ ಆಗುವಾಗ, ಬಡತನದಲ್ಲಿ ಗಂಡ ಹೆಂಡತಿಯನ್ನು ಬಿಟ್ಟು ಹೋದಾಗ, ಆ ಗಂಡನಿಂದ ಏನಾದರೂ ಹಿಟ್ಟು ದೋರೀತದಾ ಅಂತಾ ಇತ್ಯಾದಿ ಕೇಳ್ತಾ ಇದ್ರು. ಅವರಿಗೆ ನಮ್ಮ ತಂದೆ ಸಹಾಯ ಮಾಡ್ತಾ ಇದ್ರು. ಇಂಥ ಅನುಭವಗಳೆಲ್ಲಾ ಇರುವ ನಮ್ಮ ತಂದೆಯನ್ನು ನೀವು ಬರೀರಿ, ನಿಮ್ಮ ಅನುಭವವನ್ನು ಬರೆದರೆ ಚೆನ್ನಾಗಿರುತ್ತೆ ಅಂತಾ ಹೇಳಿದೆ. ಅದಕ್ಕೆ ಅವರು ಹೇಳ್ತಾ ಇದ್ರು, ಬರೆಯುವುದಕ್ಕೆ ಒಂದು ಪ್ರತಿಭೆ ಬೇಕು. ಅದು ನಿನಗಿದೆ ನೀನು ಬರಿ ಅಂತಾ ಹೇಳ್ತಿದ್ರು.

ಸಂ : **ಮಹಿಳೆಗೆ ಪ್ರೋತ್ಸಾಹಿಸೋದು ಕೂಡಾ ಮೌಲ್ಯ ಅಲ್ವಾ? ನೀವು ಬರವಣಿಗೆ ಶುರು ಮಾಡುವ ಕಾಲಘಟ್ಟದಲ್ಲಂತೂ ಈ ಬಗೆಯ ಪ್ರೋತ್ಸಾಹ ಮುಖ್ಯ ಅಲ್ವಾ?**

ಸಾರಾ : ಮಹಿಳೆಗೆ ಎಜ್ಯುಕೇಶನ್ ಇಲ್ಲದಾಗ ಬರೆಯುವ ಪ್ರಶ್ನೆ ಎಲ್ಲಿ ಬರ್ತದೆ. ಮಹಿಳೆಯರಿಗೆ ಶಿಕ್ಷಣ ಸಿಕ್ಕಿದರೆ ಮಾತ್ರ ಜನಗಳಿಗೆ ಆಲೋಚನೆ ಬರ್ತದೆ. ಶಿಕ್ಷಣ ಅರಿವಾಗಿ, ಆಲೋಚನೆ ಬರ್ತವೆ. ನನಗೆ ಎಜ್ಯುಕೇಶನ್ ಇದ್ದಿದ್ದರಿಂದ ನಾನು ಅಷ್ಟನ್ನು ಬರೆದೆ; ಪ್ರಶ್ನಿಸಿದೆ; ನಮ್ಮ ಜನರಿಗೆ ಸಿಟ್ಟು ಬಂತು. ಸಿಟ್ಟು ಬರಬೇಕಾಗಿತ್ತು, ಬಂತು. ಅವರು ಆಲೋಚನೆ ಮಾಡುವುದಕ್ಕೆ ಶುರು ಮಾಡಿದರು. ನಾನು ಆ ಕಾದಂಬರಿ ಬರೆದು ಇಪ್ಪತ್ತು ವರ್ಷಗಳು ಕಳೆದ ಮೇಲೆ ಆದರೂ ಕೂಡ ಈಗ ಚಿಂತಿಸ್ತಾ ಇದ್ದಾರೆ. ಮೂರು ತಲಾಖ್ ಒಂದೇ ಸಾರ್ತಿ ಕೊಡುವುದು ಸರಿಯಲ್ಲ ಅಂತಾ ಹೇಳಿ. ತುಂಬಾ ಆ ವಿಷಯ ಚರ್ಚೆ ಮಾಡ್ತಾ ಇದ್ದಾರೆ. ಅವರಲ್ಲಿ ಈಗ ಜಾಗೃತಿ ಮೂಡತಾ ಇದೆ. ನಮ್ಮಲ್ಲಿ ಮುಸ್ಲಿಮ್ 'ಪರ್ಸನಲ್‌ಲಾ'ನಲ್ಲಿ ಕೆಲವು ಮಹಿಳೆಯರು ಸೇರಿಕೊಂಡು ನಮಗೆ ತುಂಬಾ ಅನ್ಯಾಯ ಆಗ್ತಾ ಇದೆ ಅಂತಾ ಹೇಳಿ ಕೇಳ್ತಿದ್ದಾರೆ. ಈಗಲಾದರೂ ಅವರಲ್ಲಿ ಆ ಒಂದು ಜಾಗೃತಿ ಬರ್ತಾ ಇದೆ. ಅದನ್ನ ಪ್ರಶ್ನೆ ಮಾಡ್ತಾರೆ.

ಸಂ : **ನೀವು ನಿಮ್ಮ ಸೃಜನಶೀಲತೆಯ ಕಥನಗಳ ಒಳಗೆ ಹಲವು ಬಗೆಯ ಪ್ರತಿರೋಧಗಳನ್ನು ವ್ಯಕ್ತಪಡಿಸಿದ್ದೀರಿ. ಮುಖ್ಯವಾಗಿ ಎಜ್ಯುಕೇಶನ್‌ದಿಂದ ವಂಚಿತವಾದ ಮಹಿಳಾ ಲೋಕ ಮತ್ತು ಪುರುಷ ಪ್ರಧಾನ ಸಮಾಜ ವ್ಯವಸ್ಥೆಯ ವೈರುಧ್ಯಗಳನ್ನು ಧಾರ್ಮಿಕ ವಸ್ತು ವಿಷಯವಾಗಿ ಪ್ರಸ್ತಾಪಿಸಿದ್ದೀರಲ್ವಾ?**

ಸಾರಾ : ಹೌದು, ಶಿಕ್ಷಣವನ್ನು ನಮ್ಮ ಧರ್ಮದ ಪೈಗಂಬರರು ನಿಷೇಧಿಸಲಿಲ್ಲ. ಮಹಿಳೆಯರಿಗೆ, ಪೈಗಂಬರರು ಏನು ಹೇಳಿದ್ದಾರೆ ಅಂತಾ ಅಂದರೆ ಅರಬ ದೇಶದಿಂದ

ಚೀನಾದವರೆಗಾದರೂ ಹೋಗಿ ಹೆಣ್ಣು ಮಕ್ಕಳಿಗೆ ವಿದ್ಯೆ ಕೊಡಬೇಕು. ಅವರು ಕೂಡ ಗಂಡು ಮಕ್ಕಳಂತೆ ಅರಬ ದೇಶದಿಂದ ಚೀನಾಕ್ಕೆ ಓದಲಿಕ್ಕೆ ಹೋಗಬೇಕು. ಆ ಕಾಲಕ್ಕೆ ಚೀನಾದವರು ತುಂಬಾ ವಿದ್ಯಾವಂತರು. ತುಂಬಾ ಮುಂದುವರಿದಿದ್ದರು. ಆದರೆ ಅರಬ ದೇಶದಲ್ಲಿ ಅಷ್ಟು ವಿದ್ಯಾಭ್ಯಾಸ ಇರಲಿಲ್ಲ. ಪೈಗಂಬರರಿಗೆ ಅಕ್ಷರ ಸ್ವತಃ ಇಲ್ಲದಿದ್ದರೂ ಕೂಡ ಬಾಕಿಯವರಿಂದ ವಿದ್ಯಾಭ್ಯಾಸ ಪಡೀಬೇಕು ಅಂತಾ ಅವರು ಹೇಳಿದ್ದರು. ಗಂಡು ಮಕ್ಕಳಿಗೆ ಮಾತ್ರವಲ್ಲ ಹೆಣ್ಣು ಮಕ್ಕಳಿಗೆ ಕೂಡ ಅದೇ ತರಹ ಅರಬ ದೇಶದಿಂದ ಚೀನಾದವರೆಗೆ ಕಳಿಸಿ ವಿದ್ಯಾಭ್ಯಾಸ ಕೊಡಬೇಕು ಅಂತಾ ಆ ಪ್ರವಾದಿಗಳು ಹೇಳಿದ್ದಾರೆ. ಹಾಗೆಯೇ ಅವರು ವೇದಿಕೆ ಹತ್ತಿ ಭಾಷಣ ಮಾಡ್ತಾ ಇದ್ದರು. ಪೈಗಂಬರರ ಮರಣಾನಂತರ ಒಂದು ನಾಲ್ಕೈದು ಶತಮಾನಗಳು ಸಾಧಾರಣ ೧೫ನೆಯ ಶತಮಾನದವರೆಗೆ ಅದು ಎಲ್ಲ ಹೋಗಿ ಪುನಃ ಹೆಂಗಸರನ್ನು ಇದೇ ತೆರನಾಗಿ ಅವರಿಗೆ ಶಿಕ್ಷಣ ಕೊಡಬಾರದು, ಅವರು ಮುಂದೆ ಬರಬಾರದು ಎಂದು ಮಾಡಿದರು. ಇದನ್ನು ಧರ್ಮ ಮಾಡಿದುದಲ್ಲ. ಧರ್ಮದ ಹೆಸರಿನಲ್ಲಿ ನಮ್ಮ ಗಂಡಸರ ಸಮಾಜ ಅಂದರೆ ಪುರುಷಪ್ರಧಾನ ಸಮಾಜ ಮಾಡಿದ್ದು. ಹೆಂಗಸರಿಗೆ ಶಿಕ್ಷಣ ಕೊಟ್ಟರೆ ಅವರ ಮೇಲೆ ಅಧಿಕಾರ ಚಲಾಯಿಸೋದಿಕ್ಕೆ ಸಾಧ್ಯ ಆಗೋದಿಲ್ಲ. ಯಾಕೆಂದ್ರೆ, ನಮ್ಮ ಧರ್ಮದ ಪ್ರಕಾರ ಮಹಿಳೆಯರಿಗೆ ತುಂಬಾ ಹಕ್ಕುಗಳಿವೆ. ಆ ಹಕ್ಕುಗಳು ಈವತ್ತು ಯಾರಿಗೂ ಗೊತ್ತಿಲ್ಲ. ಗೊತ್ತಿಲ್ಲಾ ಅಂತಾ ಹೇಳಿದರೆ ಅವರಿಗೆ ಅದನ್ನ ಕಲಿಸಲೇ ಇಲ್ಲ. ಅವರಿಗೆ ಕಲಿಸಿದ್ದೇನು ಅಂತ ಹೇಳಿದರೆ ಬರೇ ನೀವು ನಮಾಜು ಮಾಡಿ, ನೀವು ಉಪವಾಸ ಮಾಡಿ, ಎಲ್ಲಾ ಅಲ್ಲಿ ಇದೆ, ಈ ಪ್ರಪಂಚದಲ್ಲಿ ಏನೂ ಇಲ್ಲ. ನೀವು ಏನೂ ಆಶೆ ಪಡೋದು ಬೇಡ ಅಂತಾ.

**ಸಂ :** **ಮಹಿಳೆಯ ಎಲ್ಲ ಸಮಸ್ಯೆಗಳಿಗೆ ಈ ಅನಕ್ಷರತೆಯೇ ಮೂಲ ಕಾರಣ ಎನ್ನುವಂತಹದ್ದು; ಹಾಗೂ ಕೌಟುಂಬಿಕ, ವೈವಾಹಿಕ ಎಲ್ಲ ಬಗೆಯ ಸಮಸ್ಯೆಗಳ ನಿರ್ಮೂಲವನ್ನು ಕೇವಲ ಶಿಕ್ಷಣದಿಂದ ಮಾತ್ರ ಸಾಧ್ಯ ಎನ್ನುವಂಥದ್ದು ಎಷ್ಟರಮಟ್ಟಿಗೆ ಸರಿ? ಆದರಲ್ಲಿ ಸಾಮಾಜಿಕತೆಯ ಪಾತ್ರವೇನಾದರೂ ಇದೆಯಾ?**

**ಸಾರಾ :** ಶಿಕ್ಷಣ ಮೊದಲ ಆದ್ಯತೆಯಾಗಬೇಕು. ಆಮೇಲೆ ಮದುವೆ. ನಮ್ಮ ಸಮಾಜದಲ್ಲಿ ಏನಾಗಿದೆ ಅಂದ್ರೆ. ಹೆಣ್ಣು ಮಗು ಹುಟ್ಟಿದ ಕೂಡಲೇ ಮದುವೆಯಾಗಬೇಕು. ತಂದೆ-ತಾಯಿಯ ತಲೆಯಲ್ಲಿ ಇರೋದು ಅದೇ. ಮಗಳ ತಲೆಯಲ್ಲೂ ಅದನ್ನೇ ತುಂಬಿಸಿ ಬಿಡ್ತಾರೆ. ಮದುವೆಯೇ ಅಂತಿಮ ಗುರಿ ಅಂತಾದಾಗ ಈ ವರದಕ್ಷಿಣೆ, ಈ ಭ್ರೂಣ ಹತ್ಯೆ ಎಲ್ಲಾ ಪ್ರಾರಂಭವಾಗೋದು ಅಲ್ಲಿಂದಲೇ. ಹೆಣ್ಣು ಮಗುವಿಗೆ ಮದುವೆ ಮಾಡಿಕೊಡಬೇಕು. ಅದಕ್ಕಾಗಿ ಹುಡುಗನಿಗೆ ಹುಡುಕಾಡಿದರೆ, ಹುಡುಗ ಡಿಮಾಂಡ್ ಮಾಡ್ತಾನೆ. ಅಷ್ಟು ಕೊಡು, ಇಷ್ಟು ಕೊಡು ಅಂತ ಅಂದಾಗ ತಂದೆ-

ತಾಯಿಗಳು ತಲೆ ಬಿಸಿ ಮಾಡಿಕೊಂಡು ಈ ಹೆಣ್ಣು ಬೇಡವೇ ಬೇಡ ಅಂತಾ ಯೋಚಿಸ್ತಾರೆ. ಇದರ ಪರಿಣಾಮವಾಗಿ ಭ್ರೂಣ ಹತ್ಯೆ, ಹೆಣ್ಣು ಶಿಶುಹತ್ಯೆ ಎಲ್ಲಾ ನಡೀತದೆ. ಅದಕ್ಕಾಗಿಯೇ ಮೊದಲ ಆದ್ಯತೆಗಾಗಿ ಮದುವೆ ತಂದರೆ ಈ ಎಲ್ಲಾ ಸಮಸ್ಯೆಗಳು ಬರ್ತವೆ. ಇದು ಹೋಗಬೇಕು.

ಸಂ : 'ಮದುವೆ' ಅನ್ನುವ ವ್ಯವಸ್ಥೆಯ ಮೂಲಕವೇ ಪುರುಷ ಪ್ರಧಾನ ಸಮಾಜ 'ಲಿಂಗ ತಾರತಮ್ಯವನ್ನು' ಆಚರಿಸುತ್ತೆ ಅಂತೀರಾ ಮೇಡಂ. 'ಮನುಧರ್ಮಶಾಸ್ತ್ರ' ಮೊದಲಾಗಿ ಬೇರೆ ಬೇರೆ ಧರ್ಮಶಾಸ್ತ್ರ ಗ್ರಂಥಗಳು ಕೂಡಾ ಮಹಿಳಾ ಬದುಕಿನ ಮೊದಲ ಆದ್ಯತೆಯಾಗಿ 'ಮದುವೆ'ಯನ್ನು ಕಲ್ಪಿಸುತ್ತವೆ ಅಲ್ವಾ?

ಸಾರಾ : ಟಿ.ವಿ. ಧಾರವಾಹಿ ಮೊದಲಾವುಗಳಲ್ಲೆನ್ನಾ ನಾವು ನೋಡುವಂತೆ ಹೆಂಡತಿಗೆ ಗಂಡ ಯಜಮಾನನೆಂದೇ ಹೇಳ್ತವೆ. ಹಾಗೇ ಕಟ್ಟಿಕೊಡ್ತವೆ. ಅಷ್ಟೇ ಅಲ್ಲ ಬಹುಪತ್ನಿತ್ವಕ್ಕೆ ಒಂದು ರೀತಿ ಪ್ರಚೋದನೆ ಕೊಡುವ ರೀತಿ ಧಾರವಾಹಿಗಳನ್ನು ರೂಪಿಸಲಾಗುತ್ತೆ. ಹಾಗೆ ತೋರಿಸ್ತಾ ಇದ್ದಾರೆ.

ಸಂ : ಮುಖ್ಯವಾಗಿ ತಾವು ಜರೀನಾಳ ಕಥೆಯ ಸಂದರ್ಭದಲ್ಲಿ ಹಾಗೂ ಇನ್ನಿತರ ಕಥನಗಳಲ್ಲಿ 'ಮದುವೆ' ಅನ್ನುವ ಸಂಸ್ಥೆ ಹೇಗೆ ಮಹಿಳೆಗೆ ಆಂತಂಕಕ್ಕೆ ತಳ್ತಾ ತಳ್ತಾ ಅವಳ ಇಡೀ ಬದುಕನ್ನೇ ಹೊಸಕಿ ಹಾಕಿಬಿಡ್ತದೆ ಅನ್ನುವುದನ್ನು ಸೃಜನಾತ್ಮಕವಾಗಿ ಕಟ್ಟಿಕೊಡ್ತೀರಿ? ಇದನ್ನು ನಿಮ್ಮ ಕಥನಗಳ ಹಿನ್ನೆಲೆಯಲ್ಲಿ ವಿವರಿಸ್ತೀರಾ?

ಸಾರಾ : ನನ್ನ ಧ್ವನಿಯಿಲ್ಲದ ನೋವುಗಳು ಕಥೆಯಲ್ಲಿನ ಜರೀನಾಳಿಗೆ ಪತ್ರ ಓದಲಿಕ್ಕೆ ಬರುವುದಿಲ್ಲ. ಜರೀನಾಳಿಗೆ ಅವಳ ಗಂಡ ಬರೆದ ಪತ್ರದಲ್ಲಿ 'ತಲಾಖ್' ಎಂಬುದು ಬರೆಯಲಾಗಿದ್ದರೂ ಕೂಡ ಅದನ್ನು ಓದಲಾರದ, ಗ್ರಹಿಸಲಾರದ ಇಕ್ಕಟ್ಟು ಅವಳದು. 'ಚಂದ್ರಗಿರಿಯ ತೀರದಲ್ಲಿ'ನ ಕಥೆಯಲ್ಲೂ ಹೀಗೆನೇ ಇರೋದು. ಅದು ಎಂಥ ಬರಿದಿದ್ದಾರೆ ಅನ್ನೋದು ಓದಲಿಕ್ಕೆ ಬರುವುದಿಲ್ಲ. ಬರಹ ಇಲ್ಲದಿದ್ದರೆ ಎಷ್ಟು ತೊಂದರೆ ಆಗ್ತದೆ ಅನ್ನುವುದನ್ನು ನನ್ನ ಎರಡು ಮೂರು ಕಥನಗಳಲ್ಲಿ ಹೇಳಿದ್ದೇನೆ. ಅವಳ ಸುಖ-ದುಃಖಗಳ ಬಗೆಗೆ ಅವಳ ಅಣ್ಣ ಬರೆಯೋದು. ಗಂಡ ಎಲ್ಲಿಂದಲೊ ಪಾತ್ರದಲ್ಲಿ ತಲಾಖ್ ಕೊಡುವುದು. ಓದು ಇಲ್ಲದಿರುವುದು ಕೂಡ ಎಷ್ಟೊಂದು ಬಗೆಯ ಸಮಸ್ಯೆಗೆ ತಳ್ತದೆ ನೋಡಿ.

ಸಂ : ಯಾವುದೇ ಧರ್ಮಗಳಲ್ಲೂ ಕೂಡ ಮಹಿಳೆಯ ಪರವಾಗಿ ವಿವಾಹ ನಿಯಮಗಳು ರಚಿತವಾಗಿಲ್ಲ. ಹಿಂದೂ ಧರ್ಮ ಎಂದು ಹೇಳುವ ಗ್ರಂಥಗಳಲ್ಲಿ ವೈಧವ್ಯ ಕುರಿತಾಗಿ ಕಠೋರವಾದ ನೀತಿಗಳಿವೆ. 'ತಿರುಮಲಾಂಬಾ' ತರಹದ ಹಿರಿಯ ಲೇಖಕಿಯರು ಈ ಸಮಸ್ಯೆಯನ್ನು ತುಂಬಾ ಎದುರಿಸಿದರು ಅಲ್ವಾ? ಶಿಕ್ಷಣ ಇಲ್ಲದೆ ಹೋಗಿದ್ದರೆ ಅವರ ಬದುಕು ಏನಾಗುತಿತ್ತೊ ಗೊತ್ತಿಲ್ಲ. ಆದರೂ ಅವರೆಲ್ಲಾ ಬರವಣಿಗೆಯ ಮೂಲಕವೇ ಬದುಕಿನ ದಾರಿಗಳನ್ನು ಕಂಡುಕೊಂಡರು. ಇದೂ ಒಂದು ಬಗೆಯ ಇಕ್ಕಟ್ಟು ಅಲ್ವಾ ಮೇಡಂ?

ಸಾರಾ : ತಿರುಮಲಾಂಬಾ ವಿಧವೆಯ ಪಟ್ಟವನ್ನು ವಿರೋಧಿಸುವುದಿಲ್ಲ. ಆದರೆ ಮಹಿಳೆಗೆ ಶಿಕ್ಷಣ ಬೇಕು ಅಂತಾ ಹೇಳ್ತಾರೆ. ಆಗಿನ ಕಾಲದಲ್ಲಿ ಅವರು ಅಷ್ಟು ಬರೆದಿದ್ದಕ್ಕೆನೆ ಪುರುಷ ಸಮಾಜ ಒಪ್ಪಿಕೊಳ್ಳಲಿಲ್ಲ. ಗಿರಿಬಾಲೆ ರಾಜವಾಡೆ ಅವರನ್ನು ಕೂಡ ಹಾಗೇ ಮಾಡಿದರಲ್ಲ. ವಿಧವಾ ವಿವಾಹ ಹಾಗೂ ಅಂತರ್‌ಜಾತೀಯ ವಿವಾಹ ಅಂತಾ ಒಂದೆರಡು ಕತೆಗಳನ್ನು ಬರೆದಾಗ ಶಿವರಾಮ ಕಾರಂತರು ಕೂಡ ಅವರನ್ನು ವಿರೋಧಿಸಿದರಂತೆ. ಆ ಕಾಲದ ಕೆಲವು ಲೇಖಕಿಯರು ತಮ್ಮ ಬರಹವನ್ನೇ ನಿಲ್ಲಿಸಿದ್ದು ಪುರುಷರ ಕಿರುಕುಳದಿಂದಾಗಿ ಎಂಬಂತಹ ಮಾತುಗಳಿವೆ. ಗೊತ್ತಿಲ್ಲ ಅದು ಎಷ್ಟರಮಟ್ಟಿಗೆ ನಿಜ ಅಂತಾ. ಆದರೆ ಗಿರಿಬಾಲೆ ಅವರು ಹೇಳಿದರು. ನಾನು ಬರೆದದ್ದು, ಕಾರಂತರು ಅವರಿಗೆಲ್ಲಾ ಇಷ್ಟ ಆಗಲಿಲ್ಲ ಅಂತಾ. ಅವರನ್ನು ಭೇಟಿಯಾಗಿದ್ದೆ ನಾನು.

**ಪ್ರಶ್ನೆ : ಮಹಿಳಾ ಲೇಖಕಿಯರನ್ನು ನಮ್ಮ ಪುರುಷ ವಿಮರ್ಶಾಲೋಕ ತುಂಬಾ ಕಡೆಗಣಿಸಿದೆ ಅಥವಾ ಪ್ರಧಾನಧಾರೆಯ ಕನ್ನಡ ವಿಮರ್ಶೆ ಲಿಂಗತಾರತಮ್ಯದಿಂದ ಕೂಡಿದೆ ಎಂಬ ಆರೋಪವನ್ನು ಸ್ತ್ರೀವಾದಿಗಳು ಮಾಡುತ್ತಾ, ಅದಕ್ಕಿರುವ ಕಾರಣಗಳನ್ನು ಮುಂದಿ ಸುತ್ತಿದ್ದಾರೆ. ಮಾಸ್ತಿಯವರು ತಿರುಮಲಾಂಬಾ ಅವರ ಬಗ್ಗೆ ಮಾಡಿರುವ ವಿಮರ್ಶೆ ಮೊದಲಾದವುಗಳನ್ನು ಗಮನಿಸಿದ ಸ್ತ್ರೀವಾದಿಗಳು ಮಹಿಳಾ ಸಾಹಿತ್ಯವನ್ನು ಬೇರೆಯಾಗಿಯೇ ನೋಡಬೇಕು. ಅವಳ ಹಿನ್ನೆಲೆ ಇತ್ಯಾದಿ ಬಿಟ್ಟು ನೋಡ ಕೂಡದು ಎಂಬ ವಿಚಾರವನ್ನು ಮುಂದಿಸ್ತಾ ಇದ್ದಾರೆ. ಈ ಮಾತಿಗೆ ನೀವೇನು ಹೇಳ್ತೀರಿ?**

ಸಾರಾ : ಗಿರಿಬಾಲೆಯವರ ಬಗ್ಗೆ ಕಾರಂತರು ಮಾಡಿದ ಹಾಗೆ ತಿರುಮಲಾಂಬಾ ಅವರ ಬಗ್ಗೆ ಮಾಸ್ತಿಯವರು ಬರೆದಿದ್ದು ಇದೆ. ಆಮೇಲೆ ಅವರು ಬರೆಯಲಿಲ್ಲ ಎಂಬ ಮಾತಿದೆ. ಅವರೇನೂ ಧರ್ಮದ ವಿರುದ್ಧ ಹೋಗಲಿಲ್ಲ. ಮಹಿಳೆಯರು ಬರೆದದ್ದೇ ಇವರಿಗೆ ದೊಡ್ಡ ಆಘಾತವಾಯಿತು. ಗಿರಿಬಾಲೆಯವರು ಪ್ರಾಯದವರಾಗಿದ್ದಾಗ ತುಂಬಾ ವಯಸ್ಸಾದ ಗಂಡನ ಜೊತೆ ಬದುಕಬೇಕಾಯ್ತು. ಬಹಳ ಕಷ್ಟ ಅನುಭವಿಸಿದರು. ಇವರ ತಂದೆಯ ಪ್ರಾಯದವರು ಗಂಡ. ಬಾಲ್ಯ ವಿವಾಹ ತರಹ ಅವರ ಮದುವೆ.

**ಸಂ : ಸಮಾಜ ಸುಧಾರಣಾ ವಾದಿಗಳು ಎತ್ತಿಕೊಂಡ ಆ ಕಾಲದ ಮಹಿಳಾ ಸಮಸ್ಯೆಗಳಾದ ವಿಧವಾ ಪುನರ್‌ವಿವಾಹ, ಬಾಲ್ಯವಿವಾಹ ನಿಷೇಧ, ಸತಿಪದ್ಧತಿ ನಿಷೇಧ, ಇಂಥವುಗಳ ಬಗ್ಗೆ ಆ ಕಾಲದ ಲೇಖಕಿಯರ ಅಭಿಪ್ರಾಯ ಏನಿತ್ತು?**

ಸಾರಾ : ಲೇಖಕಿಯರಾದ ಆ ಕಾಲದ ಹೆಣ್ಣು ಮಕ್ಕಳು ಆ ಕಾಲದ ಚಳುವಳಿಯಿಂದ ಪ್ರಭಾವಿತರಾದರು. ಇದು ಆ ಕಾಲದ ಪುರುಷರಿಗೆ ತಡೀಲಿಕ್ಕೆ ಆಗಲಿಲ್ಲ. ಪುರುಷರು ಸ್ತ್ರೀಯರ ಸಾಹಿತ್ಯವನ್ನು ಕುರಿತು ಬಹಳ ಕಾಲದವರೆಗೆ ವಿಮರ್ಶೆ ಮಾಡಲಿಲ್ಲ ಎನ್ನುವುದು ನಿಜವೇ. ಅಡಿಗೆ ಮನೆ ಸಾಹಿತ್ಯ ಅಂತಾ ಹೇಳಿ ಸಾಹಿತ್ಯ

ಸಮ್ಮೇಳನದಲ್ಲೇ ಅಕಾಡೆಮಿ ಅಧ್ಯಕ್ಷರು ಹೇಳಿದಾಗ ಆಗ ಕೆಲ ಮಹಿಳೆಯರು ಗಲಾಟೆ ಮಾಡಿದರು. ಹಾಗೆ ನೋಡಿದರೆ ಅಡಿಗೆ ಮನೆ ಸಾಹಿತ್ಯವೂ ಸಾಹಿತ್ಯವೆ. ಸಿಕ್ಕಿದ್ದೇ ಅಡಿಗೆ ಮನೆ. ಅವರು ಇದ್ದದ್ದೇ ಅಲ್ಲಿ. ಅಲ್ಲಿಂದ ಹೊರಗೆ ಬಂದಿದ್ದು ಯಾವಾಗ. ಅರವತ್ತರ ದಶಕದ ನಂತರವೇ ಅವಳು ಹೊರಗೆ ಬಂದದ್ದು. ಅವಳೇನು ಆಫೀಸಿನಲ್ಲಿದ್ದದ್ದು ಬರೀಬೇಕಾ. ಅಡಿಗೆ ಮನೆಯಲ್ಲಿದ್ದವಳು ಆಫೀಸಿನಲ್ಲಿದ್ದದ್ದು ಬರಿಯಲಿಕ್ಕೆ ಆಗ್ತಾದಾ. ಆಫೀಸಿನಲ್ಲಿದ್ದವರು ಆಫೀಸಿನ ಬಗ್ಗೆ ಬರೀಬೇಕು. ಅಡಿಗೆ ಮನೆಯ ಅನುಭವದ ಬಗ್ಗೆ ಆಫೀಸಿನಲ್ಲಿರುವರಿಗೆ ಬರೀಲಿಕ್ಕೆ ಆಗುವುದಿಲ್ಲ. ಈಗ ಗರ್ಭಿಣಿ ಆಗುವುದು, ಹೇಗೆ ನೋವು ಆಗುವುದನ್ನು ಪುರುಷರು ಬರೆಯಲಿ ನೋಡೋಣ. ಈ ದೂರದರ್ಶನ ಚಲನಚಿತ್ರಗಳಲ್ಲಿ ಗರ್ಭಿಣಿಯ ಬಗ್ಗೆ ತೋರಿಸ್ತಾರೆ. ಹೆರಿಗೆ ನೋವನ್ನು ತೋರಿಸ್ತಾರಲ್ಲ! ಅದು ಹಾಗೆ ಬರುವುದೇ ಇಲ್ಲ. ಅದನ್ನೆಲ್ಲಾ ಮಾಡೋರು ಗಂಡಸರೆ ನೋಡಿ. ಈ ಪುರುಷರಿಗೆ ಈವತ್ತಿಗೂ ಅದರ ಬಗೆಗೆ ಐಡಿಯಾನೇ ಇಲ್ಲ. ಒಬ್ಬ ಮಹಿಳೆಯನ್ನು ಕರೆದುಕೊಂಡು ಬಂದು, ಅವಳನ್ನು ಕೇಳಿಯಾದರೂ ಮಾಡಬಹುದಾಗಿತ್ತು. ಅಮೇರಿಕಾದಲ್ಲಿ ಹಾಗಲ್ಲ, ಒಂದು ಹೆರಿಗೆ ನೋವನ್ನು ಫರಫೆಕ್ಟ್ ಮಾಡಿ ತೋರಿಸ್ತಾರೆ ಅವರು.

ಸಂ : **ಗೈನಾಕಾಲಾಜಿ ಇದೆಯಲ್ಲ ಮೇಡಂ, ಅದು ಮಹಿಳೆಯ ಪರವಾಗಿ ಬಳಕೆಯಾಗುವುದಕ್ಕಿಂತ ಹೆಚ್ಚಾಗಿ ಪುರುಷ ಪ್ರಧಾನ ವ್ಯವಸ್ಥೆಯ ಆಲೋಚನೆಗೆ ಪೂರಕವಾಗಿ ಕೆಲಸ ನಿರ್ವಹಿಸುವಂತೆ ತೋರ್ತದೆ ಅಲ್ವಾ?**

ಸಾರಾ : ಮಹಿಳೆಯ ಪರವಾಗಿ ಆಗಬೇಕಿದ್ದ ಸಂಶೋಧನೆಯ ಫಲಗಳು ಪುರುಷರ ಹಿತಾಸಕ್ತಿಗಳಿಗೆ ಅನುಗುಣವಾಗಿ ಬಳಕೆಯಾಗ್ತವೆ. ಇತ್ತೀಚೆಗೆ ಸುಮ್ಮನೆ ಆಫರೇಶನ್ ಮಾಡುವುದು. ಇತ್ತೀಚೆಗಂತೂ ಶಸ್ತ್ರ ಚಿಕಿತ್ಸೆ ಮಾಡಿಯೇ ಮಗುವನ್ನು ಹೊರ ತೆಗೆಯುವಂತಹದು. ಆರ್ಥಿಕ ಲಾಭಕ್ಕಾಗಿ ಮಾಡುವಂತದ್ದು. ಎಲ್ಲೆಲ್ಲ ಮಹಿಳೆಯನ್ನು ಶೋಷಣೆ ಮಾಡಲಿಕ್ಕೆ ಸಾಧ್ಯವೊ ಅಲ್ಲೆಲ್ಲಾ ನಡೀತದೆ. ವಿಜ್ಞಾನದ ಆಧುನಿಕ ಸಂಶೋಧನೆಗಳೆಲ್ಲಾ ಹಾಗೇನೆ. ನಾನು ಈವತ್ತು ಬೆಳಿಗ್ಗೆ ಹೇಳಿದೆ. ಕಳೆದ ವಾರ ಏಷ್ಯಾನೆಟ್‌ನಲ್ಲಿ ತೋರಿಸಿದ್ರು. ಒಂದು ಹುಡುಗಿ ಆತ್ಮಹತ್ಯೆ ಮಾಡಿಕೊಂಡ್ಳು. ಆಧುನಿಕ ಸಂಶೋಧನೆಯಲ್ಲೂ ಕೊನೆಗೆ ಬಲಿ ಪಶು ಮಹಿಳೆನೇ. ಆದೇನೋ ತಂತ್ರಜ್ಞಾನ ಅವಳ ನಗ್ನ ಶರೀರವನ್ನು ತೋರಿಸಿತಂತೆ. ಅದು ಎಂಥದರಿಂದ ಮಾಡಿದರೊ ಏನೋ. ಇದನ್ನು ಆ ಹುಡುಗಿಯ ಹತ್ತಿರ ಹೇಳಿದರಂತೆ. ನಿನ್ನ ನಗ್ನ ಶರೀರ ನೋಡಿದೆ ಅಂತಾ. ಅದನ್ನು ಕೇಳಿ ಒಂದು ದಿವಸ ಸುಮ್ನೆ ಮನೆಯಲ್ಲಿ ಕುಳಿತಳಂತೆ. ಪುನಃ ಕ್ಲಾಸಿಗೆ ಹೋದಾಗ ಹುಡುಗ ಅದನ್ನು ಹೇಳಿದನಂತೆ. ಕೊನೆಗೆ ಆ ಹುಡುಗಿ ಆತ್ಮಹತ್ಯೆ ಮಾಡಿಕೊಂಡು ಬಿಟ್ಟಳಂತೆ.

ಇನ್ನು ಮೊಬೈಲ್ ಫೋನು, ಕೆಲವು ವಿದ್ಯಾರ್ಥಿನಿಯರ ತಂದೆ-ತಾಯಿಗಳಿಗೂ ಅವಳ ಹತ್ತಿರ ಫೋನ್ ಇದೆ ಅಂತಾ ಗೊತ್ತಿಲ್ಲ. ಇಂಥಾ ಪರಿಸ್ಥಿತಿ ಬಂದಿದೆ. ಬ್ರೋಕರ್‌ಗಳು ಇರತಾರಲ್ಲ, ಬಡತನದ ಹುಡುಗಿಯಾದರೆ ಅವರು ಕರೆದಲ್ಲಿಗೆ ಅವಳು ಹೋಗ್ತಾಳೆ. ಮೊಬೈಲ್ ಫೋನ್ ಇಟ್ಟುಕೊಂಡ ಆ ಬ್ರೋಕರ್ ಅವಳಿಗೆ ಅರ್ಧ ಹಣ ಕೊಟ್ಟು ಇನ್ನರ್ಧ ತಾನು ಇಟ್ಟುಕೊಂಡು ಇಂಥಾ ವ್ಯವಸ್ಥೆ ಮುಂದುವರಿಸ್ತಾರೆ. ಮೊನ್ನೆ ಅಂಥವರನ್ನು ಇಂಟ್ರ್ಯೂ ಮಾಡಿ ತೋರಿಸಿದರೆ, ಅವಳು ಹೇಳ್ತಾಳೆ. ದೊಡ್ಡ ದೊಡ್ಡ ಮನೆತನದ ಹೆಣ್ಣು ಮಕ್ಕಳು ಕೂಡಾ ಬರ್ತಾರೆ ಅಂತಾ. ಯಾಕೆಂದರೆ ಅವರಿಗೆ ಮನೆಯಲ್ಲಿ ಅಷ್ಟು ಹಣ ಸಿಕ್ಕೊಲ್ಲ. ಅವರಿಗೆ, ಎಲ್ಲಾ ಸೇರಿಕೊಂಡು ತಿನ್ನೋದು, ಕುಡಿಯೋದು, ತಮಾಷೆ ಮಾಡೋದು ಎಲ್ಲಾ ಆಗ್ತದೆ ನೋಡಿ. ಮಲೆಯಾಳಿಯಲ್ಲಿ ರಿಜಿಬುಳಕಿ ಅಂತಾ ಹೇಳ್ತಾರೆ. ಎರಡು-ಮೂರು ಸ್ನೇಹಿತರನ್ನು ಸೇರಿಕೊಂಡು, ಒಂದು ಹೋಟೆಲಿಗೆ ಹೋಗಿ, ಡ್ಯಾನ್ಸ್ ಮಾಡಿ ಅಥವಾ ಸಿನೆಮಾ ನೋಡಿ ಎಲ್ಲಾ ಮಾಡ್ಲಿಕ್ಕೆ ಅವಳಿಗೆ ಹಣ ಬೇಕು. ಅದಕ್ಕಾಗಿ ಈ ಕೆಲಸಕ್ಕೆ ಹೋಗ್ತಾರೆ. ಆ ಹೆಂಗಸು ಮೊನ್ನೆ ಇಂಟ್ರ್ಯೂನಲ್ಲಿ ಚೆನ್ನಾಗಿ ಹೇಳಿದ್ದಾಳೆ. ಬಡತನದ ಹೆಣ್ಣುಗಳಿಗಿಂತ ದೊಡ್ಡ ಮನೆತನದ ಹೆಣ್ಣು ಮಕ್ಕಳು ಇದನ್ನು ಹೆಚ್ಚು ಮಾಡ್ತಾರೆ. ಬಡ ಹುಡುಗಿಯರು ಹೇಗೂ ಇದರಲ್ಲಿ ಬಿದ್ದೇ ಬೀಳ್ತಾರೆ.

ಪ್ರಶ್ನೆ : ಕನ್ನಡದ ಪ್ರಧಾನ ವಿಮರ್ಶಾಲೋಕ ಮಹಿಳಾ ಬರಹವನ್ನು ಕಡೆಗಣಿಸಿದೆ ಅಂತಾ ಹೇಳ್ತಾರೆ. ನಿಮ್ಮ ಮೆಚ್ಚಿಗೆ ಇದು ನಿಜವಿಲ್ಲದೆ ಇರಬಹುದು. ಒಟ್ಟಾರೆ ಮಹಿಳಾ ಬರವಣಿಗೆಯ ಹಿನ್ನೆಲೆಯಲ್ಲಿ ಇದನ್ನು ವಿವರಿಸ್ತೀರಾ ಮೇಡಂ.

ಸಾರಾ : ತೊಂಬತ್ತರ ದಶಕದಲ್ಲಿ ಇದು ಕಡಿಮೆಯಾಯ್ತು. ನನ್ನ 'ಚಂದ್ರಗಿರಿಯ ತೀರದಲ್ಲಿ' ಕೃತಿಗೆ ಒಳ್ಳೆಯ ವಿಮರ್ಶೆ ಎಲ್ಲಾ ಬಂತು. ಒಬ್ಬ ಮುಸ್ಲಿಂ ಲೇಖಕಿ ಬಂದಿದ್ದೆ ಅವರಿಗೆ ಆಶ್ಚರ್ಯ ಆಗಿರಬಹುದು. ದಲಿತ-ಬಂಡಾಯ ಚಳುವಳಿಯ ನಂತರದಲ್ಲಿ ೮೦-೮೫ರಲ್ಲಿ ನನ್ನ ಕತೆ ಪ್ರಕಟವಾಗಿರೋದು.

ನನ್ನನ್ನು ಗುರುತು ಹಿಡಿಯುವುದು ಈವತ್ತಿಗೂ 'ಚಂದ್ರಗಿರಿಯ ತೀರದಲ್ಲಿ' ಕೃತಿಯ ಮೂಲಕ. ಆಮೇಲೆ ನಾನು ಐದಾರು ಕಾದಂಬರಿಗಳನ್ನು ಬರೆದೆ. ಆ ವಿಷಯ ಯಾರೂ ಮಾತಾಡುವುದಿಲ್ಲ. ಕಾದಂಬರಿ ಅಂದರೆ 'ಚಂದ್ರಗಿರಿಯ ತೀರದಲ್ಲಿ'; ಸಣ್ಣಕತೆ ಅಂದ್ರೆ 'ಚಪ್ಪಲಿಗಳು' ಅಂತಾ. ಇತರ ಬರವಣಿಗೆಯ ಬಗ್ಗೆ ಒಂದು ಒಳ್ಳೆಯ ವಿಮರ್ಶೆ ಬಂದೇ ಇಲ್ಲ. ಪರಿಹಾರವೆಂದರೆ ಮಹಿಳಾ ವಿಮರ್ಶಕಿಯರು ಹುಟ್ಟಬೇಕು. ಮಹಿಳಾ ವಿಮರ್ಶಕಿಯರು ಮಹಿಳಾ ಸಾಹಿತ್ಯವನ್ನು ವಿಶೇಷವಾಗಿ ಪರಿಗಣಿಸಿ ವಿಮರ್ಶೆ ಮಾಡಬೇಕು. ನನ್ನದೇ ಆದ ಬಹಳ ಕಾದಂಬರಿಗಳಿಗೆ ಸರಿಯಾದ ವಿಮರ್ಶೆ ಬಂದೇ ಇಲ್ಲ. 'ವಜ್ರಗಳು' ಇತ್ಯಾದಿ. ವಿಮರ್ಶಕರು

ಏನಾದರೂ ಹೇಳಲಿ ಚೆನ್ನಾಗಿಲ್ಲ ಅಂತಾದರೂ ಹೇಳಬಹುದಲ್ಲ. ನನ್ನ ಕಾದಂಬರಿ ಅಂದರೆ ಚಂದ್ರಗಿರಿಯ ತೀರದಲ್ಲಿ ಅದು ಒಂದೆಯಾ? ನನ್ನ ಪ್ರಕಾರ 'ವಜ್ರಗಳು' ತುಂಬಾ ಇಷ್ಟದ ಕೃತಿ.

ಸಂ : **ಕೋಮುವಾದ ಇಂದು ಬೃಹದಾಕಾರವಾಗಿ ಬೆಳೆದಿದೆ. ಈ ಕೋಮುವಾದವನ್ನು ಮೀರುವ ಸೃಜನಶೀಲ ಸಾಧ್ಯತೆಗಳನ್ನು ನಮ್ಮ ಆಧುನಿಕ ಲೇಖಕರಲ್ಲಿ ಹೆಚ್ಚಾಗಿ ಕಾಣೆಸ್ತಾ ಇಲ್ಲ. ಇದಕ್ಕೆ ನೀವೇನು ಹೇಳ್ತೀರಿ.**

ಸಾರಾ : ಗುಜರಾತ ಘಟನೆಗಳು ಆಗಿರಬಹುದು, ಬಾಬಾ ಬುಡನಗಿರಿ ವಿಷಯ ಆಗ ಬಹುದು. ಇಂತಹುಗಳ ಬಗೆಗೆ ಲೇಖಕರು ಯಾರೂ ಬರೀತಾ ಇಲ್ಲ. ದೊಡ್ಡ ದೊಡ್ಡ ಲೇಖಕರು ಆ ಕುರಿತು ಬರೆದೇ ಇಲ್ಲ. ಅನಂತಮೂರ್ತಿ ಅವರ ಸಣ್ಣಕತೆ ಒಂದು ಇದೆ. 'ಬರ' ಕತೆನ್ನು ಬಹಳ ಚೆನ್ನಾಗಿ ಬರೆದರು. ಹಾಗೆಯೇ ಎಲ್ಲೋ ಒಂದು ಕಡೆ ಈ ತರಹ ಬರೀತಿರುತ್ತಾರೆ ಅಷ್ಟೆ. ನಿಜವಾಗಿ ಪೂರ್ಣವಾಗಿ ತಮ್ಮನ್ನು ತೊಡಗಿಸಿಕೊಂಡು ಬರೆಯುವವರು ಕಡಿಮೆ. ಗುಜರಾತನ್ನು ವಿಷಯವಾಗಿ ಇಟ್ಟುಕೊಂಡು ಯಾರೂ ಬರೆದದ್ದು ನಾ ಕಾಣೆ. ನನ್ನದೊಂದು ಕತೆ ಬಂತು. 'ಓ ರಾಮಾ' ಅಂತಾ. ಅದು ಬರೆದ ಕೂಡಲೇನೆ ಈ ಕೋಮುವಾದಿಗಳಿಂದ ನನಗೆ ಫೋನ್ ಬಂತು. ನಾನು ಮುಸಲ್ಮಾನರದು ಎಷ್ಟು ಬರೆದರೂ ಅವರಿಗೆ ಸಂತೋಷವಾಗ್ತದೆ. ಇದರಿಂದ ಮಾತ್ರ ಅವರಿಗೆ ಸಿಟ್ಟು ಬಂತು.

ಸಂ : **ಸಾರಾಂಶ ಕತೆಯಲ್ಲಿ ನೀವು 'ಹಿಂದೂ-ಮುಸ್ಲಿಂ' ಬಗೆಗಿನ ಸಾಮಾಜಿಕ ಇಕ್ಕಟ್ಟು ಗಳನ್ನು ಕಥನ ಮಾಡಿದ್ದೀರಿ. ಅದು ಈ ತರಹದ್ದೇ ಅಲ್ವಾ?**

ಸಾರಾ : ಹಿಂದೂ-ಮುಸ್ಲಿಂ ಗಲಾಟೆಗಳು ನಡೆದದ್ದರ ಬಗೆಗಿನ ಕಥೆ ಅದು. ನಾನು ಬೆಂಗಳೂರಿನಲ್ಲಿದ್ದಾಗ ನನ್ನ ಸ್ವಂತ ಅನುಭವವೇ ಆ ಕಥೆ ಆಗಿತ್ತು. ನನ್ನ ಎಲ್ಲಾ ಕಥೆಗಳು ಅಷ್ಟೇನೆ, ಕಾಲ್ಪನಿಕವಾದ ಕಥೆ ಯಾವುದೂ ಇಲ್ಲ. 'ಓ ರಾಮಾ' ಕತೆ ಬರೆದ ಮೇಲೆ ನನಗೆ ಫೋನ್ ಬಂತು. ಹಿಂದೂಗಳನ್ನು ಬಹಳ ಕೆಟ್ಟದಾಗಿ ಚಿತ್ರಿಸಿದ್ದೀರಿ ನೀವು ಅಂತಾ. ಅದೇ ನಾನು ಮುಸ್ಲಿಮರನ್ನು ಎಷ್ಟು ಕೆಟ್ಟದಾಗಿ ಚಿತ್ರಿಸಿದರೂ ಅದು ಇವರಿಗೆ ಸಂತೋಷವಾಗ್ತತೆ. ಆದರೆ, ಅದೇ ನಮ್ಮ ಜನಕ್ಕೆ ಸಿಟ್ಟು ಬರ್ತದೆ. ಇದು ನೋಡಿ ಹೇಗಿದೆ. ನನ್ನ ಸಾರಾಂಶ ಕತೆಯಲ್ಲಿ ಸಹಾಯಕ್ಕಾಗಿ ಬರುವುದು ಹಿಂದೂ ಮಹಿಳೆ. ಅದನ್ನೆಲ್ಲಾ ನೋಡಿ ಅಷ್ಟು ಸಹನೆ ಕೂಡ ಇರುವುದಿಲ್ಲ. ಹಿಂದೂಗಳನ್ನು ನೋಡಿ 'ಓ ರಾಮ'ದಲ್ಲಿ ಕೆಟ್ಟದಾಗಿ ಚಿತ್ರಿಸಿದ್ದಾರೆ ಅಂತಾರೆ. ಗುಜರಾತಿನಲ್ಲಿ ಹಿಂದೂಗಳು ಅಷ್ಟು ಕೆಟ್ಟದಾಗಿ ಮಾಡಿದ್ದು ಇವರು ಒಪ್ಪುವುದಕ್ಕೆ ರೆಡಿ ಇಲ್ಲ. ಇಂಥಾ ಸಮಾಜ ನೋಡಿ, ಅವರಿಗೆ ಅಷ್ಟನ್ನು ನುಂಗಿಕೊಳ್ಳುವುದಕ್ಕೆ ಸಾಧ್ಯವಿಲ್ಲ. ಹೌದು ನಮ್ಮ ಗಂಡಸರು ಈ ತರಹ ಮಾಡಿದಾರೆ. ಈ ತರಹದಲ್ಲಿ ಎನ್ನುವ ಒಳ್ಳೆಯ ಮನಸು ಕೂಡ ಇರುವುದಿಲ್ಲ.

ಹಿಂದೂಗಳನ್ನೆಲ್ಲ ಬಹಳ ಕೆಟ್ಟದಾಗಿ ಚಿತ್ರಿಸಿಬಿಟ್ಟಿದ್ದಾಳೆ ಅಂತಾ ಆರೋಪ ಮಾಡ್ತಾರೆ.

ಸಂ : ಹೀಗೆ ಆರೋಪ ಮಾಡುವುದರಲ್ಲಿ ನಿಮ್ಮ ಬರವಣಿಗೆಯನ್ನು ನಿಲ್ಲಿಸುವ ಒತ್ತಾಯದ ಪ್ರವೃತ್ತಿ ಇರುತ್ತದಲ್ವಾ. ಸಮಾಜ ವ್ಯವಸ್ಥೆಯಲ್ಲಿ ಕೋಮುವಾದಿ ಭಾವನೆಗಳು ಬೃಹದಾಕಾರವಾಗಿ ಬೆಳೆದಿರುವುದು ಕೂಡ ಈ ಬಗೆಯ ಆಕ್ಷೇಪಣೆ ಗಳಿಗೆ ಕಾರಣವಾಗಿರಬಹುದಲ್ವಾ? ಹಾಗೆ ನೋಡಿದರೆ ನೀವು ಹಿಂದೂಗಳಿಗಿಂತ ಹೆಚ್ಚಾಗಿ ಮುಸ್ಲಿಂ ಮೂಲಭೂತವಾದಿಗಳು ಕೂಡ ಹೇಗೆ ಹೆಣ್ಣನ್ನು ಹಿಂಸಿ ಸುತ್ತಿದ್ದಾರೆ ಅನ್ನುವುದನ್ನು ನಿಮ್ಮೆಲ್ಲ ಕಥನಗಳಲ್ಲಿ ಪರಿಣಾಮಕಾರಿಯಾಗಿ ಚಿತ್ರಿಸಿದ್ದೀರಿ.

ಸಾರಾ : ಜಾತಿ-ಧರ್ಮಗಳು ನಮ್ಮ ಮನೆಯೊಳಗಿರಲಿ, ನಮ್ಮ ನಮ್ಮ ಆರಾಧನಾ ಸ್ಥಳ ಗಳಲ್ಲಿರಲಿ. ಆದರೆ ಅಂತಿಮವಾಗಿ ಬೇಕಾಗಿರುವುದು ಮಾನವೀಯತೆ. ಮುಖ್ಯವಾಗಿ ನಾವೆಲ್ಲರೂ ಮನುಷ್ಯರಾಗಿ ಬದುಕಬೇಕು. ನನಗೆ ಸಂದೇಶ ಪ್ರಶಸ್ತಿ ಬಂದಾಗಲೂ ಇದೇ ಮಾತನ್ನು ಹೇಳಿದೆ. ಸಹೃದಯರಲ್ಲಿ ಕಳಕಳಿಯ ನನ್ನ ವಿನಂತಿ ಏನೆಂದರೆ, ಸಾರ್ವಜನಿಕವಾಗಿ ನಾವು ಹೊರಗೆ ಬಂದ ಮೇಲೆ ಮನುಷ್ಯರಾಗಿ ಮಾತ್ರ ವ್ಯವಹರಿಸಬೇಕು. ಹಣೆಪಟ್ಟಿ ನೋಡಿ ಯಾರೂ ವ್ಯವಹರಿಸಬಾರದು. ಅವರು ಮುಸ್ಲಿಂ ಅಥವಾ ಹಿಂದೂವಾ ಅಂತಾ ನೋಡಿಕೊಂಡು ಅವರ ಹತ್ತಿರ ಸಂವಾದ ನಡೆಸುವ ಪರಿಸ್ಥಿತಿ ಯಾಕೆ ಬಂದಿದೆ. ಮನುಷ್ಯರು ಅಂತಾ ಗುರುತಿಸಲಿಕ್ಕೆ ಆಗಲ್ವಾ? ಬರಗೂರು ರಾಮಚಂದ್ರಪ್ಪ ಒಂದು ಕತೆ ಬರೆದಿದ್ರು. ಹಿಂದೂ-ಮುಸ್ಲಿಂ ಗಲಾಟೆ ಆದಾಗ ಹಿಂದೂಗಳು ಎಷ್ಟು ಜನ ಸತ್ರು, ಮುಸಲ್ಮಾನರು ಎಷ್ಟು ಜನ ಸತ್ರು ಅಂತ ಬಿಬಿಸಿ ನ್ಯೂಸ್‌ನವರು ಲೆಕ್ಕ ಹೇಳ್ತಾರೆ. ಅದಕ್ಕೆ ಪ್ರತಿಕ್ರಿಯಿಸಿ ಅವರು ಎಷ್ಟು ಜನ ಮನುಷ್ಯರು ಸತ್ರು ಅಂತ ಕೇಳುವುದಿಲ್ಲ. ಬದಲಾಗಿ ಹಾಗೆನೇ ಕೋಮುವಾದಿ ತರಹ ಲೆಕ್ಕ ಮಾಡಿಕೊಂಡು ಹೋಗ್ತಾರೆ ಅಂತಾ.

ಸಂ : ಇನ್ನೊಂದು ಮುಖ್ಯ ಪ್ರಶ್ನೆ ಮೇಡಂ. ಮಹಿಳೆಯರಿಗೆ ನೀಡಬೇಕಾಗಿರುವ ರಾಜಕೀಯ ಮೀಸಲಾತಿ ಬಗೆಗೆ ನೀವೇನು ಹೇಳ್ತೀರಿ.

ಸಾರಾ : ಶೇಕಡ ೩೩ ರ ರಾಜಕೀಯ ಮಹಿಳಾ ಮೀಸಲಾತಿ ಬಗೆಗೆ ಕೇಳ್ತಿದ್ದೀರಾ ನನ್ನ ಪ್ರಕಾರ ಓಬಿಸಿ ಶೇಕಡ ೨೭ ರ ಮೀಸಲಾತಿ ಮತ್ತು ಪರಿಶಿಷ್ಟ ಜಾತಿ/ಪಂಗಡಕ್ಕೆ ಇರುವ ಶೇಕಡ ೧೮ ರ ಮೀಸಲಾತಿಯಲ್ಲಿ ಹೇಗೆಯೋ ಹಾಗೆ ಇದು ಕೂಡ ಏನೂ ಪ್ರಯೋಜನಕ್ಕೆ ಬರೋಲ್ಲ. ಪ್ರತ್ಯೇಕವಾಗಿ ಮಹಿಳೆಯರಿಗೆ ಮೀಸಲಾತಿ ಬೇಕು. ಅಷ್ಟೇ ಅಲ್ಲ. ಒಳ ಮೀಸಲಾತಿಯೂ ಬೇಕು. ಇಲ್ಲದಿದ್ದರೆ ಬರೀ ಮೇಲ್ಜಾತಿ ಮಹಿಳೆಯರು ಮಾತ್ರವೇ ಎಲ್ಲಾ ಅವಕಾಶಗಳನ್ನು ಪಡೆದುಕೊಂಡು ಬಿಡ್ತಾರೆ. ಶ್ರೀ ಲಲ್ಲೂ ಪ್ರಸಾದ್ ಯಾದವ ಅವರು ಹೇಳಿದ ಈ ಒಳ ಮೀಸಲಾತಿ

ಕೂಡ ಬಹಳ ಮುಖ್ಯ ಅಂತ ನನಗೆ ಅನಿಸ್ತದೆ. ಇಲ್ಲದಿದ್ದರೆ ಮುಸ್ಲಿಂ ಮಹಿಳೆ ಮುಂದೆ ಬರೋದಿಕ್ಕೇ ಸಾಧ್ಯವಾಗಲ್ಲ. ಮುಸ್ಲಿಂ ಮಹಿಳೆ ಆಗಲಿ, ದಲಿತ ಮಹಿಳೆಯಾಗಲಿ, ಹಿಂದುಳಿದ ವರ್ಗದ ಮಹಿಳೆಯಾಗಲೀ ಇಂದಿನ ದಿನಗಳಲ್ಲಿ ಲಕ್ಷಾನುಗಟ್ಟಲೆ ಖರ್ಚು ಮಾಡಿ ಎಂ.ಪಿ. ಆಗುವುದಕ್ಕೆ ಸಾಧ್ಯವೇ ಇಲ್ಲ. ಅದು ಮತ್ತೂ ಹೋಗುವುದು ಮೇಲ್ವರ್ಗಕ್ಕೇನೆ. ಅದಕ್ಕಾಗಿ ಮೀಸಲಾತಿಯನ್ನು ಆ ತರಹದಲ್ಲೇ ಇಟ್ಟುಕೊಳ್ಳಬೇಕು ನಾವು. ಪಾರ್ಲಿಮೆಂಟಿನಲ್ಲಿ ನೋಡಿ. ಮಹಿಳೆಯರ ಸಂಖ್ಯೆ ಕಡಿಮೆ ಆಗ್ತಾ ಹೋಗ್ತಾ ಇದೆ. ಟಿಕೆಟ್ ಕೊಡೋದೆ ಇಲ್ಲ ಅಂದ್ರೆ ಬರೋದಕ್ಕೆ ಹೇಗೆ ಸಾಧ್ಯ. ಯಾವ ಪಕ್ಷನೂ ಶೇಕಡ ೩೩ ಕೊಡೋದಿಲ್ವಲ್ಲಾ. ಹತ್ತು-ಹದಿನೈದು ಮಹಿಳೆಯರಿಗೆ ಕೊಡ್ತಾರೇನೊ. ಇವರ ಮಾತು ಕೇಳುವ ಮಹಿಳೆ; ಇವರ ಜಾತಿಯ ಮಹಿಳೆ ಅದು ಹಾಗೆಯೇ ಹೋಗ್ತದೆ.

**ಸಂ :** **ಮಹಿಳಾ ಸಬಲೀಕರಣದ ಪ್ರಶ್ನೆ ಕೂಡ ಇದೆ ನೋಡಿ. ಎಲ್ಲೆಲ್ಲಿ ಮಹಿಳಾ ಪರ ಡಿಸಿಜನ್ ಮಾಡಬೇಕಾಗಿರುತ್ತೊ ಅಲ್ಲಿ ಮಹಿಳೆ ಇಲ್ಲದೆ ಅವಳ ಪರವಾಗಿ ಪುರುಷ ಭಾಗವಹಿಸಿದ್ದರೆ ಏನು ಪ್ರಯೋಜನ ಅವಳ ಮಾತಾಗಿ ಅದು ಇರೋದಿಕ್ಕೆ ಸಾಧ್ಯವಾಗೊದಿಲ್ಲ ತಾನೆ.**

ಸಾರಾ : ಎಂಪವರ್‌ಮೆಂಟ್ ಪ್ರಶ್ನೆಯಾಗಿಯೇ ನಾನು ಹೇಳೋದು ಏನೆಂದರೆ, ಒಬ್ಬ ಮಹಿಳೆ ಈ ಹೊತ್ತು ವಿಧಾನಸಭೆಗೆ ಕಾಂಪಿಟ್ ಮಾಡಲಿಕ್ಕೆ ಸಾಧ್ಯವಿಲ್ಲ. ಮಹಿಳೆಯರ ಕೈಯಲ್ಲಿ ಹಣ ಎಲ್ಲಿರ್ತದೆ. ಎಲೆಕ್ಷನ್ ಗೆಲ್ಲಲಿಕ್ಕೆ ಅವಳ ಗಂಡನ ಹತ್ತಿರ ಕೇಳಬೇಕು; ಇಲ್ಲಾ ತಂದೆಯ ಹತ್ತಿರ ಕೇಳಬೇಕು. ಇಲ್ಲಾ ಮಕ್ಕಳ ಹತ್ತಿರ ಕೇಳಬೇಕು. ಸ್ವಂತ ದುಡಿಮೆಯಲ್ಲಿ ಎಲೆಕ್ಷನ್‌ಗೆ ನಿಂತು ಗೆಲ್ಲಲಿಕ್ಕೆ ಸಾಧ್ಯವಿಲ್ಲ. ನಮ್ಮಲ್ಲಿ ಏನಾಗಿದೆ ಅಂದರೆ ಹತ್ತು-ಹದಿನೈದು ವರ್ಷ ಮೂರ್‍ನಾಲ್ಕು ಮಕ್ಕಳನ್ನೂ ಹೆತ್ತು ಬೆಳೆಸಿಯಾದ ಮೇಲೆ ತಲಾಖ್ ಹೇಳಿದರೆ ಅವಳಿಗೇನೂ ಇಲ್ಲ. ಅವಳು ಬೆಳೆಸಿದ ಮಕ್ಕಳೂ ಅವನದೇ. ಹಗಲಿರುಳು ದುಡಿದದ್ದಕ್ಕೆ ಏನೂ ಬೆಲೆನೇ ಇಲ್ಲ. ತಾಯಂದಿರು ಯಾರಾದರೂ ನಾನು ಮಕ್ಕಳ ಸೇವೆ ಮಾಡಿದ್ದೇನೆ. ಇಷ್ಟು ಹಣ ಕೊಡು ಅಂತಾ ಯಾವ ತಾಯಂದಿರು ಕೇಳ್ತಾರೆ. ಅವಳಿಗೆ ಏನೂ ಇಲ್ಲ. ಅವಳಿಗೆ ಊಟಕ್ಕೇ ಗತಿ ಇಲ್ಲದಿರುವಾಗ...

**ಸಂ :** **ಮಾತೃತ್ವ, ವಾತ್ಸಲ್ಯ ಇತ್ಯಾದಿ ಆದರ್ಶಗಳ ಮೂಲಕ ಅವಳನ್ನು ಬಂಧಿಸಲಾಗುತ್ತದೆ ಎನ್ನುವ ಚಿಂತನೆಯನ್ನು ಸ್ತ್ರೀವಾದಿಗಳು ಹೇಳುತ್ತಾರೆ. ಕುಟುಂಬ ಕೇಂದ್ರದ ತಾಯಿ ಪಾತ್ರದಲ್ಲಿ ಹೆಣ್ಣನ್ನು ಬಂಧಿಸುವ ನೆಲೆಯಾಗಿ ಇದನ್ನು ಗ್ರಹಿಸಬಹುದಾ?**

ಸಾರಾ : ಕೌಟುಂಬಿಕವಾಗಿ ಎಷ್ಟು ನಿಯಂತ್ರಣ ಇದೆ ಅಂದ್ರೆ ಮಕ್ಕಳನ್ನು ಸರಿಯಾಗಿ ಕಲಿಸಲಿಲ್ಲ ಅಂತಾ ಗಂಡಂದಿರು ಆಗಾಗ ತಾಯಿಯನ್ನೇ ಬೈಯ್ತಾರೆ. ತಪ್ಪೆಲ್ಲವೂ ಮಹಿಳೆಯ ತಲೆಗೇ. ಜವಾಬ್ದಾರಿ ಎಲ್ಲವೂ ಅವಳದೇ. ಗಂಡಸರು ಏನೇ ತಪ್ಪು

ಮಾಡಿದರೂ ಅದರ ಶಿಕ್ಷೆ ಅನುಭವಿಸುವುದು ಹೆಣ್ಣೇ. ಇದು ಎಲ್ಲಾ ಧಾರ್ಮಿಕ ವ್ಯವಸ್ಥೆಗಳಲ್ಲೂ ಇದೆ.

ಸಂ : **ಸರ್ಕಾರಿ ಕಾರ್ಯಕ್ರಮಗಳ ಭಾಗವಾಗಿ ಮಹಿಳಾ ಸಬಲತೆಗಾಗಿ ಹಲವಾರು ಬಗೆಯ ಕಾರ್ಯಕ್ರಮಗಳು ನಡೀತಾ ಇವೆ. ಆದರೆ, ನಿಜವಾಗಿ ಮಹಿಳೆಯರನ್ನು ಸಬಲರನ್ನಾಗಿಸಲು ಏನು ಮಾಡಬೇಕಾಗಿದೆ. ಕೆಳವರ್ಗ, ದಲಿತ, ಅಲ್ಪಸಂಖ್ಯಾತ ಮುಂತಾಗಿ ಅಂಚಿನ ಎಲ್ಲಾ ಮಹಿಳಾ ಸಮುದಾಯವನ್ನು ಸಬಲವಾಗಿಸಲು ತಮ್ಮ ಸಲಹೆ ಏನು?**

ಸಾರಾ : ಸಬಲೀಕರಣ ಹೇಗೆ ಮಾಡುವುದು ಅನ್ನುವುದರ ಬಗೆಗೆ ನಾನು ಖಚಿತವಾಗಿ ಹೇಳುವುದು ಕಷ್ಟ. ಆದರೆ ಸಬಲೀಕರಣ ಆಗಬೇಕು. ಎಲ್ಲ ಹೆಣ್ಣು ಮಕ್ಕಳಿಗೆ ಆರ್ಥಿಕ ಸ್ವಾತಂತ್ರ್ಯ ಬರಬೇಕು. ಅವರು ಸ್ವಂತವಾಗಿ ತಮ್ಮ ಕಾಲಿನ ದುಡಿಮೆಯ ಮೇಲೆ ನಿಲ್ಲಬೇಕು. ತಾವು ದುಡಿದಿದ್ದನ್ನು ತಮ್ಮ ಹೆಸರಿಗೆ ತಾವೇ ಉಳಿಸಿಕೊಳ್ಳು ವಂತಹ ಒಂದು ವಾತಾವರಣ ಉಂಟಾಗಬೇಕು.

ಸಂ : **ಆರ್ಥಿಕ ಸಮಸ್ಯೆಯಷ್ಟೇ ಮುಖ್ಯವಾಗಿ ಸಾಮಾಜಿಕ ಸಮಸ್ಯೆಯೂ ಮಹಿಳೆಯರಿಗೆ ಹೆಚ್ಚಾಗಿರುತ್ತೆ. ವಿವಾಹ ಸೆಂಟರ್ ಆಗಿ ಮಹಿಳೆಯನ್ನು ನಿಲ್ಲಿಸಿದ್ದರಿಂದ ಆಯಾ ಸಾಮಾಜಿಕ ಇಕ್ಕಟ್ಟುಗಳಿಂದ ಹೊರಬರಲು ಅವಳಿಗೆ ಸಾಧ್ಯವಾಗುತ್ತಿಲ್ಲ ಎಂಬ ಮಾತಿದೆ. ಈಗ ತಾವು ಹೇಳಿದಂತೆ ಆರ್ಥಿಕ ಸಬಲತೆ ಮಾತ್ರವೇ ಸಾಕಾ.**

ಸಾರಾ : ಮಹಿಳೆಯರು ಮುಖ್ಯವಾಗಿ ಮೂಢನಂಬಿಕೆಗಳಿಂದ ಹೊರಬರಬೇಕು. ಮದುವೆ ಯಿಲ್ಲದೆ ಬೇರೆ ದಾರಿನೇ ಇಲ್ಲಾ ಅಂತಃ ಹೆಣ್ಣು ಹುಟ್ಟಿದರೆ ಅವಳು ಮದುವೆಗೇ ಇರುವುದು ಅಂತಾ ನಂಬಿಕೆ ಬೇರೂರಿ ಬಿಟ್ಟಿದೆ. ಈಗಿನ ಕಾಲದಲ್ಲಿ ನಗರಗಳಲ್ಲಿ ವಿದ್ಯಾ ಒಂದು ಕೊಟ್ಟು ಬಿಡತಾರೆ. ಅಲ್ಲಿ ಕೂಡ ನಮ್ಮ ಊರಿನಲ್ಲಿ ಏನಾಗಿದೆ ಅಂದ್ರೆ ಒಂದು ಒಳ್ಳೆಯ ಎಂಜಿನಿಯರಿಂಗ್ ಕಾಲೇಜು ಮಂಗಳೂರಿನಲ್ಲಿ ಇದೆ. ತುಂಬಾ ಹೆಣ್ಣು ಮಕ್ಕಳು ಈಗ ಎಂಜಿನಿಯರ್ ಆದರು. ನಮ್ಮ ಮುಸ್ಲಿಂ ಹೆಣ್ಣು ಮಕ್ಕಳು ಹಾಗೆ ಆದದ್ದು ಬಹಳ ಆಶ್ಚರ್ಯ. ನಮ್ಮ ಕಾಸರಗೋಡಿನಲ್ಲಿ ಒಂದು ಇಂಜಿನಿಯರಿಂಗ್ ಕಾಲೇಜು ಇದೆ. ಈ ಹೆಣ್ಣು ಮಕ್ಕಳೆಲ್ಲಾ ಮದುವೆಯಾದದ್ದು ಎಂಜಿನಿಯರ್ ಆದ ಕೂಡಲೇ ಸಾಮಾನ್ಯವಾಗಿ ಊರಿನಲ್ಲಿಯ ಬಿಜಿನೆಸ್ ಮಾಡುವಂಥವವನ್ನೊ, ಇನ್ನಾರನ್ನೊ ಮದುವೆಯಾಗಿರುವುದು. ಅವರು ಎಂಜಿನಿಯರ್ ಆದದ್ದನ್ನೂ, ಅವರ ತಂತ್ರಜ್ಞಾನವನ್ನು ಅದನ್ನು ಬೇರೆ ಕಡೆ ಪ್ರಯೋಗಿಸಿ, ಅದರಿಂದ ಆರ್ಥಿಕವಾಗಿ ಸಬಲರಾಗಬೇಕೆಂಬ ಒಂದು ಕಾಳಜಿ ಅವರಿಗಿಲ್ಲ. ಒಬ್ಬ ದೊಡ್ಡ ಐಶ್ವರ್ಯವಂತನನ್ನು ಮದುವೆಯಾದರೆ ಸಾಕು ಅವರಿಗೆ. ಈ ತರಹದ ಆಲೋಚನೆ ನಮ್ಮ ಹೆಣ್ಣು ಮಕ್ಕಳಿಗಿದೆ. ಅವರು ದುಡಿದು ತಾನು ಸಂಪಾದಿಸಬೇಕು. ತಮ್ಮ ಕಾಲ ಮೇಲೆ ತಾವು ನಿಂತುಕೊಳ್ಳಬೇಕು ಅಂತಾ ಯಾವ

ಯೋಚನೆಯೂ ಅವರಲ್ಲಿ ಬರುವುದಿಲ್ಲವಾ ಅಥವಾ ಅವರನ್ನು ಈ ಮದುವೆ ವ್ಯವಸ್ಥೆ ಕಟ್ಟಿ ಹಾಕಿದೆಯಾ ಎಂಥದೂ ಅರ್ಥವಾಗುವುದಿಲ್ಲ. ಕೆಲವು ಜನ ಹುಡುಗಿಯರನ್ನು ನಾನು ನೋಡಿದೆ. ಅವರೆಲ್ಲಾ ದೊಡ್ಡ ಐಶ್ವರ್ಯವಂತರನ್ನು ಮದುವೆಯಾಗಿ ಊರಿನಲ್ಲಿ ಸುಮ್ಮನೆ ಮನೆಯೊಳಗಿದ್ದಾರೆ.

ಸಂ : **ಕರಾವಳಿ ಜಾನಪದ ಲೋಕದಲ್ಲಿನ ಸಿರಿ, ದೈವಗಳು, ಪಾಡ್ದನಗಳು ಎಲ್ಲಾ ಕಡೆನೂ 'ಮಾತೃಪ್ರಧಾನ' ವ್ಯವಸ್ಥೆಯ ಅವಶೇಷಗಳನ್ನು ಕುರಿತು ವಿದ್ವಾಂಸರ ಮಟ್ಟದಲ್ಲಿ ಮಾತಾಡ್ತಾರೆ. ಇದಕ್ಕೆ ನೀವೇನು ಹೇಳ್ತೀರಿ.**

ಸಾರಾ : ಜಾನಪದ ಲೋಕದ ಹಿಂದುಳಿದ ಸಮಾಜದಲ್ಲಿ ಅಂದರೆ ಬ್ರಾಹ್ಮಣ ಸಮಾಜದಲ್ಲಿ ಅಲ್ಲ. ಬುಡಕಟ್ಟು ಸಮಾಜ, ಅಲೆಮಾರಿ ಸಮಾಜ ಹಾಗೂ ಹಿಂದುಳಿದ ಸಮಾಜಗಳಲ್ಲಿ ಅಲ್ಲೆಲ್ಲಾ ಹೆಣ್ಣು ಮಕ್ಕಳಿಗೆ ಒಳ್ಳೆಯ ರೀತಿಯ ಬೆಲೆ ಇದೆ. ಒಬ್ಬ ತಮಿಳುನಾಡಿನಿಂದ ಬಂದ ಒಬ್ಬ ಮಹಿಳೆಗೆ ಒಂದು ಹೆಣ್ಣು ಮಗು ಇತ್ತು. ಯಾರೊ ಒಬ್ಬರು ಕೇಳಿದರಂತೆ ಅದನ್ನು ಕೊಡ್ತೀಯಾ ಅಂತಾ ಹೇಳಿ. ಅದಕ್ಕೆ ಅವಳು ನಮ್ಮ ಕುಟುಂಬಕ್ಕೆ ಒಂದೇ ಹೆಣ್ಣು ಮಗು ಇರುವುದು ನಮಗೆ ಬೇಕು. ಬಹಳ ಜೋಪಾನ ಮಾಡ್ತಾ ಇದ್ದಳು ಅವಳು. ಹಾಗೆನೇ ಜಾನಪದ ಹಾಡುಗಳಲ್ಲಿ ನಾವು ಕೇಳ್ತೇವೆ. ಹೆಣ್ಣು ಮಕ್ಕಳ ವಿಷಯದಲ್ಲೆಲ್ಲಾ ಬಹಳ ಚೆನ್ನಾದ ಹಾಡುಗಳಿವೆ. ಬಳೆಗಾರ ಹಾಡಾಗಲೀ, ಬೇರೆ ಹಾಡಾಗಲೀ ಇಲ್ಲೆಲ್ಲಾ ಹೆಣ್ಣು ಮಕ್ಕಳನ್ನು ನಿರಾಕರಿಸುವುದು ಕಾಣುವುದಿಲ್ಲ.

ಸಂ : **ಈ ತರಹದಲ್ಲಿ ಹೆಣ್ಣಿನ ಬಗೆಗೆ ಬೆಲೆ ಇರುವ ಟ್ರೈಬ್ ಯಾವುದನ್ನಾದರೂ ಗುರುತಿಸ್ತೀರಾ?**

ಸಾರಾ : ನಾನು ಕೊರಗರಲ್ಲಿ ಕಂಡದ್ದು ಹಾಗೆ. ಅವರಲ್ಲಿನ ಹೆಣ್ಣು-ಗಂಡು ಮಕ್ಕಳಲ್ಲಿ ಅಂಥ ವ್ಯತ್ಯಾಸ ಕಾಣುವುದಿಲ್ಲ. ಅವರಲ್ಲಿ ಹೆಣ್ಣು ಮಕ್ಕಳಿಗೆ ಮದುವೆ ಮಾಡಿ ಕೊಡುವಾಗ ವರದಕ್ಷಿಣೆ ಇತ್ಯಾದಿ ಸಮಸ್ಯೆ ಅವರಿಗಿಲ್ಲ ಕಾಣಿಸ್ತದೆ. ಎಲ್ಲರನ್ನೂ ಸಮಾನವಾಗಿ ಸಾಕಿ ಕೊಳ್ತಾರೆ. ಯಾರಾದರೂ ಒಬ್ಬರಿಗೆ ಮದುವೆ ಮಾಡಿ ಕೊಡ್ತಾರೆ. ಅಂಥಾ ತಾರತಮ್ಯ ನನಗೆ ಅವರಲ್ಲಿ ಕಾಣಲಿಲ್ಲ. ಇತ್ತೀಚೆಗೆ ಕೆಲವು ಮನೆಗಳಲ್ಲಿ ಕೆಲವು ತಾಯಂದಿರು ಹೇಳ್ತಾರೆ. ಅಯ್ಯೋ ಈ ಗಂಡು ಮಗ ನನಗೆ ಬೇಡ. ಮೂರು ಹೆಣ್ಣು ಮಕ್ಕಳು ಸಾಕು. ಒಬ್ಬ ಹುಡುಗ ಹುಟ್ಟಿ ನನ್ನ ಕೊಲ್ತಾ ಇದಾನೆ. ಬೇಡವಾದ ಅಭ್ಯಾಸಗಳನ್ನ ಎಲ್ಲಾ ಕಲ್ತು ತುಂಬಾ ಗಲಾಟೆ ಮಾಡ್ತಾನೆ ಅಂತಾ ಒಬ್ಬಳು ತಾಯಿ ನನಗೆ ಹೇಳಿದಳು. ಹೆಣ್ಣು ಮಕ್ಕಳಿಗೆ ಸ್ವಲ್ಪ ಕಷ್ಟ ಬಿಟ್ಟು ಮದುವೆ ಮಾಡಿದರಾಯ್ತು. ಆದರೆ ಈ ಗಂಡು ಮಗನ ಕಾಟ ನೋಡಿ, ಕೊಂದು ಬಿಟ್ಟರೂ ನನಗೆ ಚಿಂತೆಯಿಲ್ಲ. ಇದು ಯಾಕೆ ಹುಟ್ಟಿತು ಅಂತಾ ತನ್ನ ಗೋಳು ತೋಡಿಕೊಂಡಳು. ಇದು ಇತ್ತೀಚೆಗಿನ ಗಂಡು ಮಕ್ಕಳ ಟ್ರೆಂಡ್ ಆಗಿ ಬೆಳೀತಾ ಇದೆ.

ಸಂ : ಜಾಗತೀಕರಣದಿಂದ ಮಹಿಳೆಗೆ ಆತಂಕಗಳು ಹೆಚ್ಚಾಗ್ತವೆ ಅಂತಾ ಭಾವಿಸ್ತೀರಾ ಅಥವಾ ಮಹಿಳಾ ಬದುಕಿಗೆ ಪೂರಕವಾದ ಪರಿಣಾಮಗಳು ಉಂಟಾಗಬಹುದು ಅಂತಾ ಹೇಳ್ತೀರಾ?

ಸಾರಾ : ಬಡ ಕಾರ್ಮಿಕ ಮಹಿಳೆಯರಿಗೆ ಸಾಕಷ್ಟು ತೊಂದರೆಯಾಗ್ತದೆ. ಹೆಂಚಿನ ಕಾರ್ಖಾನೆಯಲ್ಲಿ ಕೆಲಸ ಮಾಡ್ತಾ ಇದ್ರು. ಈಗ ಹೆಂಚಿನ ಕಾರ್ಖಾನೆ ಹೋಯ್ತು. ಹುರಿಹಗ್ಗ ಮಾಡ್ತಾ ಇರುವ ಜಾಗದಲ್ಲಿ ನೈಲಾನ್ ಬಂತು. ಇಲ್ಲೆಲ್ಲಾ ಕೆಲಸ ಮಾಡುವ ಹೆಣ್ಣು ಮಕ್ಕಳ ಕೆಲಸ ಹೋಯ್ತು. ಕಂಪ್ಯೂಟರ್ ಎಲ್ಲಾ ಬಂದು ಬಿಟ್ಟ ಮೇಲೆ ಐಶ್ವರ್ಯವಂತ ಮಹಿಳೆಯರು ಸೈಬರ್ ಲೋಕದಲ್ಲಿ ಒಂದು ತರಹ ಹಾಳಾಗತಾ ಇದ್ದಾರೆ. ಬೀಡಿ ಕಾರ್ಖಾನೆಯಲ್ಲಿ ಹಾಗೂ ಇತರೆ ಕಡೆ ಕೆಲಸ ಮಾಡುವ ಎಲ್ಲಾ ಕಾರ್ಮಿಕ ಮಹಿಳೆಯರ ಸ್ಥಿತಿ ತುಂಬಾ ಕಷ್ಟಕ್ಕೆ ಸಿಕ್ಕಿಕೊಂಡಿದೆ.

ಸಂ : ಮೇಡಂ. ಮಹಿಳಾ ಚಳುವಳಿಗಾರರಿಗೂ ಹಾಗೂ ಮಹಿಳಾ ಅಧ್ಯಯನದಲ್ಲಿ ತೊಡಗಿಸಿಕೊಂಡಿರುವ ಅಕಡಮಿಕ್ ಶಿಸ್ತಿನ ಅಧ್ಯಯನಕಾರರಿಗೂ ಪರಸ್ಪರ ಸಂಬಂಧಗಳು ಹೇಗಿರಬೇಕು ಅಂತಾ ಹೇಳ್ತೀರಿ. ಚಳುವಳಿ ಮಾಡುವವರು ಗ್ರಾಸ್ ರೂಟ್ ಲೆವೆಲ್‌ನಲ್ಲಿ ಕೆಲಸ ಮಾಡುವುದರಿಂದ ನಿಜವಾಗಿ ಮಹಿಳೆಯರನ್ನು ತಲುಪತೀವಿ ಅಂತಾರೆ. ಅದೇ ಅಧ್ಯಯನ ಮಾಡುವವರು ಮಹಿಳೆಯರ ಸಮಸ್ಯೆಯ ಮೂಲವನ್ನು ಶೋಧನ ಮಾಡದೆ ಅವರ ವಿಮುಕ್ತಿ ಸಾಧ್ಯವಿಲ್ಲ ಅಂತಾರೆ. ಅದಕ್ಕಾಗಿ ಇವರಿಬ್ಬರ ಸಂಬಂಧದ ಸ್ವರೂಪವನ್ನು ಕುರಿತು ಏನಾದರೂ ಹೇಳ್ತೀರಾ?

ಸಾರಾ : ನಾನು ಚಳುವಳಿ ಮಾಡಿದವಳಲ್ಲ. ನಾನೊಬ್ಬ ಬರಹಗಾರ್ತಿ. ಬರಹದ ಮೂಲಕ ನಾನು ನನ್ನ ಅಭಿಪ್ರಾಯಗಳನ್ನು ಬರೀತಾ ಬಂದವಳು. ಆದರೆ, ಒಂದೊಂದು ಸಾರಿ ಹೋಗಿದ್ದುಮ ಇದೆ. ಅನ್ಯಾಯ ನಡೆದಾಗ ಪ್ರತಿಭಟನೆ ಮಾಡಬೇಕಾದದ್ದೇನೆ. ಹೆಣ್ಣು ಮಕ್ಕಳಿಗೆ ಸಮಾನ ಕೂಲಿ ಬೇಕು ಅಂದಾಗ, ಪಾನ ನಿರೋಧದ ವಿಷಯದಲ್ಲಿ, ಗಂಡಸರಿಗೆ ಕುಡಿತ ಬಿಡಿಸುವ ಪ್ರಶ್ನೆ ಬಂದಾಗ ನಾವೆಲ್ಲಾ ಸಪೋರ್ಟ್ ಮಾಡಿದ್ದುಮ ಇದೆ. ಹಾಗೆ ನೋಡದರೆ ರೋಡು (ರಸ್ತೆ) ಬೇಡ. ಅದು-ಇದು ಯಾವುದೂ ಬೇಡ. ಈ ಎಲ್ಲಾ ಸಮಸ್ಯೆಯನ್ನು ಬಿಡಿಸಿ ಬಿಡಿ ಅಂತಾ ಹೇಳುವವಳು ನಾನು. ಕಾರ್ಮಿಕರು ದುಡಿದ ಕೂಲಿಯೆಲ್ಲಾ ಕುಡಿತಕ್ಕೆ ಹಾಕಿ ಮನೆಗೆ ಬರ್ತಾರೆ.

ಸಂ : ಒಟ್ಟು ನಿಮ್ಮ ಬರವಣಿಗೆಯಲ್ಲಿ ನೀವು ಇಷ್ಟಪಡುವ ಕೃತಿಗಳನ್ನು ಹೆಸರಿಸಿರಿ ಎಂದಾಗ ಯಾವುದನ್ನು ಹೇಳ್ತೀರಿ. ಎಲ್ಲವೂ ನೀವೇ ಇಷ್ಟ ಪಟ್ಟು ಬರೆದ ಭಿನ್ನ ಭಿನ್ನ ಅನುಭವ ಲೋಕವೇ ಸರಿ. ಆದಾಗ್ಯೂ ಕೂಡ .....

ಸಾರಾ : ನನಗೆ ಇಷ್ಟವಾದ ಕೃತಿ 'ವಜ್ರಗಳು'. ವಿಮರ್ಶಕರು ಯಾರೂ ಅದನ್ನು ಗುರುತಿಸಲಿಲ್ಲ. ಅದಕ್ಕೆ ಯಾವ ಪ್ರಶಸ್ತಿಯೂ ಬರಲಿಲ್ಲ. ಹಾಗೆ ನೋಡಿದರೆ ನನ್ನ ಹೆಚ್ಚಿನ

ಕೃತಿಗಳಿಗೆಲ್ಲಾ ಪ್ರಶಸ್ತಿ ಬಂದಿವೆ. 'ಚಂದ್ರಗಿರಿ ತೀರಿದಲ್ಲಿ' ಮಾತ್ರ ಎಲ್ಲರೂ ಹೆಸರಿಸ್ತಾರೆ, ವಿಮರ್ಶೆ ಬರೆದಿದ್ದಾರೆ. ಇದರ ಬಗ್ಗೆ ಯಾರೂ ಏನೂ ಹೇಳಿಲ್ಲ. 'ಕೆಟ್ಟದಾಗಿದೆ' ಅಂತಾದರೂ ಬರೀಬಹುದಲ್ಲ. ವಿಮರ್ಶೆಯೇ ಇಲ್ಲದೆ ಸುಮ್ಮನೆ ಕೂತುಕೊಂಡರೆ, ನಮಗೆ ಹೇಗೆ ಗೊತ್ತಾಗ್ತದೆ. ಸಹನಾ, ವಜ್ರಗಳು, ಕದನ ವಿರಾಮ ಇವೆಲ್ಲಾ ಬಂದಾಗ ಯಾರೂ ಬರೆಯಲಿಲ್ಲ. ಹಾಗೆ ನೋಡಿದರೆ ಮಹಿಳೆಯರ ಬರಹದ ಬಗ್ಗೆ ಪುರುಷಪ್ರಧಾನ ಸಮಾಜ ವ್ಯವಸ್ಥೆಯಲ್ಲಿ ಮಹಿಳೆಯರು ಬರೆದ ಕೃತಿಗಳನ್ನು ಸರಿಯಾಗಿ ಗುರುತಿಸಿ ವಿಮರ್ಶೆ ಮಾಡಿದ್ದು ಬಹಳ ಕಮ್ಮಿಯೇ ಅಂತಾ ಹೇಳಬೇಕು.

ನನ್ನ 'ಚಂದ್ರಗಿರಿಯ ತೀರದಲ್ಲಿ' ಅಷ್ಟು ಚೆನ್ನಾಗಿದ್ದ ಕಾರಣವೊ ಏನೊ ಅದರ ಅನುವಾದಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಬಹುಮಾನ ಕೊಟ್ಟಿದ್ದಾರೆ. ಮೂಲ ಕೃತಿ ಅಷ್ಟು ಚೆನ್ನಾಗಿಲ್ಲದಿದ್ದರೆ ಟ್ರಾನ್ಸ್‌ಲೇಶನ್ ಹೇಗೆ ಚೆನ್ನಾಗಿ ಬರೋಕೆ ಸಾಧ್ಯ. ಮೊದಲು ಮೂಲ ಕೃತಿಗೆ ಕೊಡಬೇಕು. ನಮ್ಮ ವ್ಯವಸ್ಥೆ ಹೇಗಿದೆ ನೋಡಿ.

**ಸಂ :** **ನಿಮ್ಮ ಲೇಖನ ವ್ಯವಸಾಯಕ್ಕೆ ಬೀರಿದ ಲೇಖಕಿಯರ ಪ್ರಭಾವಗಳ ಬಗ್ಗೆ ಏನಾದರೂ ಹೇಳ್ತೀರಾ?**

**ಸಾರಾ :** ತ್ರಿವೇಣಿಯವರು ನನಗೆ ತುಂಬಾ ಇಷ್ಟವಾದ ಲೇಖಕಿ. ಆಮೇಲೆ ಎಂ.ಕೆ. ಇಂದಿರಾ. ಅನುಪಮಾ ನಿರಂಜನ ಇವರಿಷ್ಟಲ್ಲಿ ಸ್ವಲ್ಪ ಕಡಿಮೆ. ಸ್ವತಃ ನನ್ನ ಮೇಲೆ ಪ್ರಭಾವ ಬೀರಿದ ನನ್ನ ಲೇಖನದ ಕಥೆ-ಕಾದಂಬರಿ ಬರೆವಾಗ ಇವರ ಕಥೆ-ಕಾದಂಬರಿಗಳನ್ನು ಓದಿಕೊಂಡೇ ಮುಂದುವರಿದ್ದದು ಇದೆ. ಇವರಷ್ಟೇ ಶಿವರಾಮ ಕಾರಂತರು ಕೂಡ ನನ್ನ ಮೇಲೆ ಪ್ರಭಾವ ಬೀರಿದ್ದಾರೆ.

**ಸಂ :** **ನೀವು ಹೆಚ್ಚಾಗಿ ಸಾಮಾಜಿಕ 'ಇಶ್ಯೂ'ಗಳನ್ನು ತೆಗೆದುಕೊಂಡು ಬರೆದಿದ್ದೀರಿ. ಅದಕ್ಕಿರುವ ಕಾರಣಗಳಾವುವು?**

**ಸಾರಾ :** ನನ್ನ ಸಾಹಿತ್ಯದ ಗುರಿಯೇ ಅದು. ನನ್ನ ಸಮಾಜದಲ್ಲಿ ಏನಾಗತಾ ಇದೆ. ಅದರ ಮೇಲೆ ಬೆಳಕು ಚೆಲ್ಲುವುದು. ನನ್ನ ಸಮಾಜದಲ್ಲಿ ನಡೆಯುವ ಈ ಶೋಷಣೆಯನ್ನು ಯಾರೂ ತೋರಿಸಲಿಲ್ಲ. ನಮ್ಮ ಮಹಿಳೆಯರಿಗೆ ಅದನ್ನು ಪ್ರಶ್ನೆ ಮಾಡುವುದಕ್ಕೆ ಗೊತ್ತಿಲ್ಲ. ಇದೆಲ್ಲಾ ಆಗ್ತಾ ಇರುವುದನ್ನು ನೋಡಿ, ಅದರ ಮೇಲೆ ಬೆಳಕು ಚೆಲ್ಲುವ ಕೆಲಸ ನಾನು ಮಾಡಿದೆ. ಇದಾದ ಮೇಲೆ ಅದನ್ನು ಸರಿ ಮಾಡುವ ಕೆಲಸ ಆಮೇಲೆ ಆಗಬೇಕು. ಅದನ್ನ ಮೂಲೆಗೆ ಹಾಕಿ ಮುಚ್ಚಿಟ್ಟರೆ ಹಾಗೆ ಕೊಳೆತು ವಾಸನೆ ಬರ್ತದೆ. ಅದು ಸರಿಯಾಗಬೇಕು. ಇದಷ್ಟೇ ನನ್ನ ಬರವಣಿಗೆಯ ಹಿಂದಿನ ಉದ್ದೇಶ. ನಾನು ದೊಡ್ಡ ಸಾಹಿತಿಯಾಗಬೇಕು ಅಂತೆಲ್ಲಾ ಬರೆಯಲಿಲ್ಲ.

ಸಂ : ನಿಮ್ಮ ಪರಂಪರೆಯನ್ನು ಮುಂದುವರಿಸುವ ಲೇಖಕಿಯರ ಪಡೆ ಬೃಹತ್ತಾಗಿ ಇದೆ. ಇಂತಹ ಬರಹಗಾರ್ತಿಯರಲ್ಲಿ ನೀವು ಯಾರನ್ನು ಇಷ್ಟಪಡ್ತೀರಿ?

ಸಾರಾ : ನಾನು ಇತ್ತೀಚೆಗೆ ಬರೀತಾ ಇರುವವರಲ್ಲಿ ನೇಮಿಚಂದ್ರ ಅವರನ್ನು ಇಷ್ಟಪಡ್ತೀನಿ. ಗೀತಾ ನಾಗಭೂಷಣ ಅವರ ಬರವಣಿಗೆ ಕೂಡಾ ನಾನು ಇಷ್ಟಪಡ್ತೀನಿ.

ಲೇಖನಗಳು

# ಯಶೋಧರ ಚರಿತೆ : ಸ್ತ್ರೀವಾದಿ ಓದು

ಕೆ. ಕೇಶವಶರ್ಮ

## ೧. ಸ್ತ್ರೀವಾದಿ ಓದಿನ ತೊಡಕುಗಳು

ಓದುವುದು ಅಂದರೇನು? ನಾವು ಹೇಗೆ ಓದುತ್ತೇವೆ, ಯಾಕೆ ಓದುತ್ತೇವೆ; ಓದುವುದರಿಂದ ನಮಗೇನು ಉಪಯೋಗ? ಕೃತಿಕಾರನಿಗೆ ಏನಾದರೂ ಉಪಯೋಗವಿದೆಯೋ? ಇವು ಇಂದು ಬಹುದೊಡ್ಡ ಪ್ರಶ್ನೆಗಳಾಗಿವೆ. ಕೃತಿಗಳನ್ನು ಓದದೆ ಇದ್ದವರೂ ಬದುಕಿದ್ದಾರೆ. ಆರಾಮಾಗಿ ಇರ್ತಾರೆ. ಆದುದರಿಂದ ಓದಿ ಪ್ರಯೋಜನವೇನು ಅಂತ ಕೇಳುವುದು ಮತ್ತು ಅದಕ್ಕೆ ಉತ್ತರ ಕೊಡುವುದು - ಎರಡೂ ಪ್ರಮುಖ; ಸಂಕೀರ್ಣವಾದ ವಿಚಾರಗಳ ಕಡೆಗೆ ಗಮನ ಕೊಡುತ್ತವೆ. ಓದುವುದು ಅಂದರೆ ನಮ್ಮ ಅನೇಕ ಪ್ರಮೇಯಗಳ ಮೂಲಕ ಕೃತಿಗಳ ಜೊತೆ ಅನುಸಂಧಾನ ನಡೆಸುವುದು ಮತ್ತು ಸಾಮಾಜಿಕ ಸಂಬಂಧಗಳ ಬಗ್ಗೆ ನಮಗಿರುವ ತಿಳುವಳಿಕೆಗಳನ್ನು ವಿಸ್ತರಿಸಿಕೊಳ್ಳುವುದು. ಜ್ಞಾನದ ಬಗ್ಗೆ ನಮಗಿರುವ ಮಾದರಿಗಳನ್ನು ಓದು ಬದಲಾಯಿಸುತ್ತದೆ; ರೂಪಾಂತರಗೊಳಿಸುತ್ತದೆ. ಓದುವುದು ಅಂದರೆ ಈ ದೃಷ್ಟಿಯಿಂದ ನಾವು ಕಲಿತ ಕ್ರಮಗಳ ಅನುಸಂಧಾನವಾಗಿರುತ್ತದೆ.

ನಮ್ಮ ಸದ್ಯದ ಪರಿಸ್ಥಿತಿಯೆಂದರೆ - ಎರಡು ವಿಷಯಗಳ ಕುರಿತು ನಾವು ಸಲೀಸಾಗಿ ಓದುತ್ತೇವೆ - ಒಂದು ನಾವು ನಿತ್ಯ ಓದುವ ಪತ್ರಿಕೆಗಳು. ಎರಡನೆಯದು ನಮ್ಮ ಆಸಕ್ತಿಗೆ ಸಂಬಂಧಿಸಿದ ಓದು. ಆದರೆ ಪ್ರಾಚೀನ ಕನ್ನಡ ಸಾಹಿತ್ಯ ಕೃತಿಗಳನ್ನು ನಾವು ಓದುವುದು ಕಷ್ಟ. ಪ್ರಾಚೀನ ಕನ್ನಡ ಸಾಹಿತ್ಯ ಕೃತಿಗಳನ್ನು ವಿಶೇಷ ಆಸಕ್ತಿಯಿಲ್ಲವಾದರೆ ಓದಲಾರೆವು. ಪ್ರಾಚೀನ ಕನ್ನಡ ಕೃತಿಗಳನ್ನು ಓದುವ ಕ್ರಮಕ್ಕೆ ಸಂಬಂಧಿಸಿದಂತೆ ಕೆಲವು ನಿಯಮಗಳಿವೆ. ಎಲ್ಲೆಲ್ಲಿ ಶಬ್ದಗಳನ್ನು ಒಡೆಯಬೇಕು; ಅವುಗಳನ್ನು ಹೇಗೆ ಅರ್ಥಮಾಡಿಕೊಳ್ಳಬೇಕು ಎಂದು ಸರಿಯಾದ ತರಬೇತಿಯು ಇಲ್ಲವಾದರೆ ನಮಗೆ ಕೃತಿಯನ್ನು ಗ್ರಹಿಸುವುದು ಕಷ್ಟ. ಪ್ರಾಚೀನ ಕನ್ನಡ ಕೃತಿಗಳನ್ನು ಓದಲು ಶಿಸ್ತು; ತರಬೇತಿ; ಪಾಂಡಿತ್ಯ ಎಲ್ಲವೂ ಅವಶ್ಯ. ನಾವು ಈ ಸಮಸ್ಯೆಯನ್ನು ಹೇಗೆ ಪರಿಹರಿಸಿಕೊಂಡಿದ್ದೇವೆ? ಒಂದು ನಮಗೆ ನಮ್ಮ ಹಿರಿಯರು ಪ್ರಾಚೀನ ಕನ್ನಡ ಕೃತಿಗಳನ್ನು ಓದಲು ಮತ್ತು ಓದಿ ಅರ್ಥಮಾಡಿಕೊಳ್ಳಲು ಕಲಿಸಿದರು. ಪ್ರಾಚೀನ ಸಾಹಿತ್ಯ ಕೃತಿಗಳ ಭಾಷೆಗಳಲ್ಲಿನ ಸಾಂಕೇತಿಕ ಅನುಕ್ರಮತೆಯನ್ನು ಗ್ರಹಿಸಲು ಅವರು ಸಹಾಯ

ಮಾಡಿದರು ಎಂದರೆ ಅದರ ಸಂಪೂರ್ಣ ಗ್ರಹಿಕೆಗೆ ಸಹಕರಿಸಿದರು ಎಂದರ್ಥವಲ್ಲ. ಭಾಷೆಯ ಗ್ರಹಿಕೆಯಲ್ಲಿ ರೂಪುಗೊಳ್ಳುವ ವಿಧಿ ವಿಧಾನಗಳಲ್ಲಿಯೇ ಸಾಂಕೇತಿಕ ಅನುಕ್ರಮತೆಯನ್ನು ಅದರ ನಿಯಮಗಳನ್ನು ಅವರು ಯಾವ ರೀತಿಯಲ್ಲಿ ಅರ್ಥೈಸಿಕೊಂಡರೋ ಅದನ್ನು ನಮಗೆ ಹೇಳಿಕೊಟ್ಟರು. ಪ್ರಾಚೀನ ಕನ್ನಡ ಸಾಹಿತ್ಯ ಕೃತಿಗಳ ಗ್ರಹಿಕೆಗೆ ಸಂಬಂಧಿಸಿದಂತೆ - ಅದು ನಮಗೆ ರೂಢಿಗತವಾದುದು ಸಾಂಸ್ಥಿಕ ಕಲಿಕೆಯ ಭಾಗವಾಗಿ.

ಅಂದರೆ ಶಾಲೆಗಳಲ್ಲಿ; ಕಾಲೇಜುಗಳಲ್ಲಿ ಹಳೆಗನ್ನಡ ಕಾವ್ಯಗಳನ್ನು ಬೋಧನೆಯ ಅಂಗವಾಗಿ ಕಲಿಸಲಾಯಿತು. ಅದರಲ್ಲಿ ಮುಖ್ಯವಾಗಿ ಕಾವ್ಯಗಳನ್ನು ಓದುವುದು ಹೇಗೆ? ಅದರ ಸಾರಾಂಶವೇನು? ಕಠಿಣ ಪದಗಳ ಅರ್ಥವೇನು ಎಂಬುದನ್ನು ಕಲಿಸಲಾಯಿತು. ಇದರ ಮುಖ್ಯ ಉದ್ದೇಶ - ಕಾವ್ಯದ ರಸಗ್ರಹಣ. ಈ ರಸಗ್ರಹಣದ ಭಾಗವಾಗಿ ಮಾತ್ರ ಪಾತ್ರದ ಗುಣ ಸ್ವಭಾವಗಳ ಚರ್ಚೆಯೂ ಆಯಿತು. ಆದರೆ ಕೃತಿಯ ಓದಿಗೆ ಸಂಬಂಧಿಸಿದಂತೆ - ಅದರಲ್ಲಿಯೂ ಲಿಂಗತಾರತಮ್ಯಕ್ಕೆ ಸಂಬಂಧಿಸಿದಂತೆ ಎರಡು ರೀತಿಯ ಗ್ರಹಿಕೆಗಳಿವೆ.

ಅ. ಈಗಾಗಲೇ ಪುರುಷರು ತಮ್ಮ ತಾತ್ವಿಕತೆಯೊಂದಿಗೆ ಅರ್ಥ ಮಾಡಿಕೊಂಡಿರುವ ವಿಧಾನ. ಅದನ್ನು ಸ್ತ್ರೀವಾದವು ಭಂಜಿಸಬೇಕಾದ ಅಗತ್ಯವಿದೆ.

ಆ. ಎರಡನೆಯದಾಗಿ ಅದನ್ನು ಮುರಿದು ಪಠ್ಯದೊಂದಿಗೆ ಹೆಣ್ತನದ ಧನಾತ್ಮಕ ಅಂಶಗಳ ಅನನ್ಯತೆಯನ್ನು ಪ್ರತಿಪಾದಿಸುವುದು.

ಒಂದರ್ಥದಲ್ಲಿ ಪುರುಷರು ಎಲ್ಲಾ ವಿಷಯಗಳನ್ನು ಮತ್ತು ಅರ್ಥವಂತಿಕೆಯನ್ನು ತಮಗೆ ಬೇಕಾದ ರೀತಿಯಲ್ಲಿ ನಿರ್ವಹಿಸಿದ್ದಾರೆ. ನಿರ್ವಚನ ನೀಡಿದ್ದಾರೆ. ಅದನ್ನು ಅನುಸರಿಸಿಕೊಂಡು ಸ್ತ್ರೀಯರೂ ಚರ್ಚಿಸಿದ್ದಾರೆ. ದೈಹಿಕವಾಗಿ ಸ್ತ್ರೀಯರಾಗಿದ್ದೂ ಪುರುಷರಂತೆ ಓದುವ ಮತ್ತು ಗ್ರಹಿಸುವವರೂ ಇರುತ್ತಾರೆಂಬುದು ಕೂಡಾ ಅಷ್ಟೇ ನಿಜ. ಇದಕ್ಕೆ ಕಾರಣ - ನಮ್ಮ ನಮ್ಮ ಸಂವೇದನೆ. ನಾವು ಕೃತಿಯನ್ನು ಓದುವುದು ನಮ್ಮ ಸಂವೇದನೆಯ ಭಾಗವಾಗಿ. ಆದರೆ ಈ ಸಂವೇದನೆಯನ್ನು ಯಾರು ರೂಪಿಸಿದ್ದಾರೆ ಮತ್ತು ಹೇಗೆ ರೂಪಿಸಿದ್ದಾರೆಂಬುದು ಸಮಸ್ಯೆ. ಪುರುಷಕೇಂದ್ರಿತ ಸಂವೇದನೆಯುಳ್ಳ ಸ್ತ್ರೀಗೆ ವಾಸ್ತವವಾಗಿ ತನ್ನ ನಿಜವಾದ ಸಮಸ್ಯೆಯ ಅರಿವು ಉಂಟಾಗುವುದು ಕಷ್ಟ. ಹೀಗಾಗಿಯೇ ಕೆಲವು ಸ್ತ್ರೀಯರು ಸ್ತ್ರೀತನದ ನಿಜವಾದ ಸಂವೇದನೆ ಯಿಂದ ಮಾತಾಡುವುದಿಲ್ಲ ಮತ್ತು ಬರೆಯುವುದಿಲ್ಲ. ಅವರು ದೈಹಿಕವಾಗಿ ಸ್ತ್ರೀಯರು ಮತ್ತು ಅನುಕರಣೆಯ ದೃಷ್ಟಿಯಿದ ಪುರುಷರು, ಓದಿಗೆ ಸಂಬಂಧಿಸಿದಂತೆ ಬರುವ ಮೊದಲ ಸಮಸ್ಯೆಯಿದು.

ಎರಡನೆಯದಾಗಿ ಓದಿಗೆ ಸಂಬಂಧಿಸಿದಂತೆ ಇರುವ ಮುಕ್ತತೆ. ಸಂಖ್ಯಾಶಾಸ್ತ್ರದಂತೆ; ಛಂದಸ್ಸಿನ ಗಣ ವಿಭಜನೆಯಂತೆ ಕಾವ್ಯವನ್ನು ಗ್ರಹಿಸುವುದು ಸಾಧ್ಯವಿಲ್ಲ. ಗಣಿತದಲ್ಲಿ ಎರಡು ಕೂಡಿಸು ಎರಡು ಎಂದರೆ ನಾಲ್ಕು. ಎರಡು ಗುಣಿಸು ಎರಡು ಅಂದರೂ ನಾಲ್ಕೇ. ಇದರಲ್ಲಿ ಪರಿಣಾಮ ಒಂದು. ಬೇರೊಂದು ರೀತಿಯಲ್ಲಿ ಹೇಳಬೇಕೆಂದರೆ ಅರ್ಥವೆನ್ನುವುದು ಕೂಡಾ ಒಂದೇ ಆಗಿರುತ್ತದೆ. ಅದರಲ್ಲಿ "ಬಹುತ್ವ" ಅಸಾಧ್ಯ. ಆದರೆ ಕಾವ್ಯ ಹಾಗಲ್ಲ. ಅದು

ಅನೇಕ ರೀತಿಯ ಬಾಗಿಲುಗಳನ್ನು ಹೊಂದಿರುತ್ತವೆ. ಹೀಗಾಗಿ ಅರ್ಥವಿಸಿಕೊಳ್ಳುವ ಪ್ರಕ್ರಿಯೆಗಳೂ ಬೇರೆ ಬೇರೆಯಾಗುತ್ತವೆ. ನಿರಚನ ಸಿದ್ಧಾಂತಗಳು ಪಠ್ಯದ ಕೇಂದ್ರದಿಂದ ಅರ್ಥವನ್ನು ಬಿಡಿಸಿಕೊಳ್ಳಿಯೆಂದು ಹೇಳಿದ್ದು ಈ ಕಾರಣಕ್ಕೆ. ಹೀಗಾಗಿ ಒಂದು ಕಾವ್ಯವನ್ನು ಓದುವಾಗ ಅದನ್ನು ಅರ್ಥಮಾಡಿಕೊಳ್ಳುವ ವಿಧಾನಕ್ಕೆ ಸಂಬಂಧಿಸಿದಂತೆ ಅನೇಕ ಪ್ರಮೇಯಗಳಿರುತ್ತವೆ ಮತ್ತು ಈ ಪ್ರಮೇಯಗಳಲ್ಲಿ ಸ್ತ್ರೀಪರ ದೃಷ್ಟಿಕೋನ ಮತ್ತು ಬೇರೆ ಬೇರೆ ರೀತಿಯಲ್ಲಿ ಕೆಲಸ ಮಾಡುವ ಸಾಧ್ಯತೆಯಿರುತ್ತದೆ. ಇಲ್ಲಿಗೆ ಅನ್ವಯಿಸಿ ಹೇಳುವುದಿದ್ದರೆ-ಯಶೋಧರ ಚರಿತೆಯನ್ನು ಓದುವುದು ಅಂದರೆ - ಅದನ್ನು ಪುರುಷರು ಒಂದು ರೀತಿಯಲ್ಲಿ ಓದಿರಬಹುದು. ಸ್ತ್ರೀಯರು ಮತ್ತೊಂದು ರೀತಿಯಲ್ಲಿ ಓದಿರಬಹುದು. ಆದರೆ ಓದುವ ಕ್ರಮಕ್ಕೆ ಸಂಬಂಧಿಸಿದಂತೆ ಅದಕ್ಕೆ ಅನೇಕ ರೀತಿಯ ಗಡಿರೇಖೆಗಳೂ ಇರಬಹುದು. ಇಲ್ಲಿ ಸಾಂಪ್ರದಾಯಿಕ ವಿಮರ್ಶೆಯಲ್ಲದಿದ್ದರೂ - ಒಂದು ಕವನವಾಗಿ ಎಚ್.ಎಲ್. ಪುಷ್ಪ ಅವರು ಬರೆದಿರುವ 'ಅಮೃತಮತಿಯ ಸ್ವಗತ'ವೂ ಒಂದು ಪ್ರಮುಖ ವಿಮರ್ಶಾತ್ಮಕ ಮಾದರಿಯನ್ನು ಸೂಚಿಸುತ್ತದೆ ಎನ್ನುವುದು ಗಮನಾರ್ಹ.

'ಯಶೋಧರ ಚರಿತೆ'ಗೆ - ಉಳಿದೆಲ್ಲಾ ಕಾವ್ಯಗಳ ಓದಿನಂತೆ - ಸ್ಥಿರವಾದ ಮತ್ತು ನಿರಂತರವಾದ ನಿಶ್ಚಿತಾರ್ಥ ರೂಪಕವಾದ ಅರ್ಥವೆನ್ನುವುದು ಇಲ್ಲ. ಅದನ್ನು ಪಿತೃಪ್ರಧಾನ ಸಂಸ್ಕೃತಿಯು ರೂಪಿಸಿದ ತರ್ಕದ ಹಿನ್ನೆಲೆಯಲ್ಲಿಯೂ ಗ್ರಹಿಸಲಾಗಿದೆ. ಮತ್ತು ಆ ಥರದ 'ಓದು' ಕನ್ನಡದಲ್ಲಿ ಪ್ರಮುಖ ತಾತ್ವಿಕತೆಯ ರೀತಿಯಲ್ಲಿ ಕೆಲಸ ಮಾಡಿದೆ. ಅಮೃತಮತಿಯು ಮಾಡಿದ್ದು ಸರಿಯೇ - ಅಥವಾ ತಪ್ಪೇ ಎಂದು ನಿರ್ಧರಿಸುವಾಗೆಲ್ಲ ಸಂಸ್ಕೃತಿಯ ನಿಯಮಾವಳಿ:ಸಾಮಾಜಿಕ ನಡವಳಿಕೆಯ ರೂಪದ ಹಿನ್ನೆಲೆಯಲ್ಲಿ ಚರ್ಚಿಸುವಾಗ ಅಮೃತಮತಿಯ ಸಂಬಂಧವನ್ನು ಅನೈತಿಕವೆಂದು ಕರೆಯಲಾಗಿದೆ. ಅಮೃತಮತಿಯ ನಡವಳಿಕೆಯನ್ನು ಅಸಹಜವೆಂದು ಹೇಳಲಾಗಿದೆ. ಇದರ ಅರ್ಥವಿಷ್ಟೆ : ಸಾಹಿತ್ಯ ಓದು ಒಂದು ಹಾದಿಯಲ್ಲಿ ನಡೆದಾಗ ಸಂಕೀರ್ಣವಾಗಿರುತ್ತದೆ. ಅನೇಕ ಸಂದರ್ಭದಲ್ಲಿ ಸ್ತ್ರೀಯರು ಓದುವುದು ಕೂಡಾ ಪುರುಷ ಕೇಂದ್ರಿತ ದೃಷ್ಟಿಕೋನದಿಂದ ಆದಾಗ ಸಹಜವಾಗಿಯೇ ಓದಿಗೆ ಒಂದು ಮಿತಿಯು ಬಂದು ಬಿಡುತ್ತದೆ. ಅಮೃತಮತಿಯನ್ನು ಕೇಡಿನರೂಪವಾಗಿ ಮಾತ್ರ ಕಾಣಿಸುತ್ತದೆ.

ಯಾವತ್ತೂ ಒಂದು ಮಹಾಕಾವ್ಯದೊಳಗೆ ಸ್ತ್ರೀಯರ ವಿವರಗಳು ಕೂಡಾ ಅದರ ನಾಯಕ ಕೇಂದ್ರಿತ ನಿರೂಪಣೆಗೆ ಅನುಸಾರವಾಗಿ ಬರುತ್ತವೆ. ಅದನ್ನು ಹಾಗೆಯೇ ನಾವು ಸ್ವೀಕರಿಸಿದರೆ ಅದರಿಂದ ನಮಗೆ ದೊರೆಯುವುದು ನಾಯಕನ ಪಾತ್ರಕ್ಕೆ ಅನುಸಾರವಾದ ಸ್ತ್ರೀ ಪಾತ್ರದ ವಿವರಗಳು ಮಾತ್ರ. ಹೀಗಾಗಿ ಸ್ತ್ರೀವಾದಿ ದೃಷ್ಟಿಕೋನದ ಓದು ಎಂದರೆ ಅದು ಬರಿಯ ಸಾಹಿತ್ಯ ಸಂವಹನದ ಪ್ರಶ್ನೆ ಎಂಬಂತೆ ನೋಡಬಾರದು. ಯಶೋಧರ ಚರಿತೆಯನ್ನು ಉದಾಹರಿಸಿಕೊಂಡು ಹೇಳುವುದಿದ್ದರೆ - ಮಹಿಳೆಯರು ಯಶೋಧರ ಚರಿತೆಯನ್ನು ಯಾಕೆ ಮತ್ತು ಹೇಗೆ ಓದುತ್ತಾರೆ ಎನ್ನುವುದಕ್ಕೆ ಸಾಹಿತ್ಯ ರೂಪದೊಳಗೆ ಉತ್ತರವಿಲ್ಲ. ಮಹಿಳಾ ಸಮಸ್ಯೆಯೆನ್ನುವುದು ಪಠ್ಯದೊಳಗಣ ಸಮಸ್ಯೆಯಲ್ಲ - ಪಠ್ಯದ ಹೊರಗಿನ ಸಮಸ್ಯೆ.

ಆದುದರಿಂದ ಸ್ತ್ರೀವಾದಿ ಓದು ಎನ್ನುವುದು ಸದ್ಯದ ಸಂದರ್ಭದಲ್ಲಿ ಅನೇಕ ಸಮಸ್ಯೆಗಳನ್ನು ಎದುರಿಸುತ್ತದೆ.

ಸ್ತ್ರೀವಾದಿಗಳು - ಅವರ ಓದು ಮತ್ತು ಲಿಂಗತಾರತಮ್ಯದ ಪ್ರಶ್ನೆಗಳು ಅತ್ಯಂತ ಸಂಕೀರ್ಣವಾಗಿವೆ. ಮೂರನೆಯ ಜಗತ್ತಿನ ಸ್ತ್ರೀಯರ ಸಂವೇದನೆಯೇ ಮೂಲತಃ ಅನೇಕ ಸಮಸ್ಯೆಗಳನ್ನು ಒಳಗೊಂಡಿರುವುದರಿಂದ ಅದರ ಪರಿಣಾಮವು ಓದಿನ ಮೇಲೆಯೂ ಉಂಟಾಗಿದೆ. ವಸಾಹತೀಕರಣ ಮತ್ತು ವಸಾಹತೋತ್ತರ ಸಂದರ್ಭದ ಪ್ರಥಮ ಸಮಸ್ಯೆಯೆಂದರೆ - ಸಾಹಿತ್ಯದ ಸಾಂಸ್ಥಿಕ ಗ್ರಹಿಕೆಗಳು. ಇವು ಮೂಲತಃ ಲಿಂಗತಾರತಮ್ಯ ನೀತಿಗಳಿಂದ ಪ್ರೇರಿತವಾಗಿದೆ. ಓದಿನಲ್ಲಿ ಯಾವುದು ಸರಿ ಮತ್ತು ಯಾವುದು ತಪ್ಪು ಎಂಬುದನ್ನು ನಿರ್ದೇಶಿಸುವುದು ಸಾಂಸ್ಥಿಕ ಗ್ರಹಿಕೆಗಳು. ಎರಡನೆಯದಾಗಿ ವಸಾಹತೋತ್ತರ ಸಂದರ್ಭದಲ್ಲಿ ನಮ್ಮ ಓದು ಎನ್ನುವುದು ಕೂಡಾ ನವ ಮಧ್ಯಮ ವರ್ಗದ ಒಂದು ಬೌದ್ಧಿಕವಲಯದ ಗ್ರಹಿಕೆಗಳಾಗಿವೆ. ಮೂರನೆಯದಾಗಿ ಮಹಿಳೆಯರನ್ನು ಜ್ಞಾನದ ವಾರಸುದಾರರು ಮಹಿಳೆಯರು ಎಂದು ಯಾರೂ ಗಣಿಸಿಯೇ ಇಲ್ಲ. ಸ್ತ್ರೀಯರ ದೃಷ್ಟಿಯಿಂದ ಹೇಳುವುದಿದ್ದರೆ - ಓದಿನ ಮಟ್ಟಿಗೆ ಅವರಿಗೆ ಆಯ್ಕೆಯಿದೆ. ಸ್ವಾತಂತ್ರ್ಯದಲ್ಲಿ ಆಯ್ಕೆಯಿಲ್ಲ. ಅರ್ಥವಿಸಿಕೊಳ್ಳುವ ಮಟ್ಟಿಗೆ ಕೂಡಾ ಅವರಿಗೆ ಆಯ್ಕೆಯಿಲ್ಲ. ಮಹಿಳೆಯರಿಗೆ ಇರುವುದು ಬರಹಕ್ಕಿಂತ ಹೊರತಾದ ಜ್ಞಾನ ಮತ್ತು ಅನುಭವ. ಈ ಜ್ಞಾನ ಮತ್ತು ಅನುಭವಕ್ಕೆ ನಾವು ಸಾಹಿತ್ಯದಲ್ಲಿ ಪ್ರಾಶಸ್ತ್ಯವನ್ನು ಕೊಟ್ಟಿಲ್ಲ. ಭಾರತದಲ್ಲಿ ಬಹುತೇಕ ಮಹಿಳೆಯರು ಆಧುನಿಕತೆ; ಶಿಕ್ಷಣ ಮತ್ತು ಶ್ರೀಮಂತಿಕೆ - ಮುಂತಾದವುಗಳಿಂದ ವಂಚಿತರಾಗಿದ್ದಾರೆ. ಅವರಲ್ಲಿ ಅನೇಕ ಸ್ತ್ರೀಯರು ಸಂಪ್ರದಾಯಶೀಲತೆಯನ್ನು ಹೊಂದಿದ್ದಾರೆ. ಅವರು ಬಡತನದ ರೇಖೆಯ ಕೆಳಗೆ ಬದುಕುತ್ತಿದ್ದಾರೆ. ಮಹಿಳೆಯರಲ್ಲಿಯೂ ಸಂಪ್ರದಾಯ ಮತ್ತು ಆಧುನಿಕತೆಯ ನಡುವೆ ಬಿಕ್ಕಟ್ಟುಗಳಿವೆ. ಅವರಲ್ಲಿಯೂ ಜಾತಿಯ ಬಗೆಗಿನ ಗ್ರಹಿಕೆಗಳು ಪುರುಷರಂತೆಯೇ ಇದೆ. ಈ ಎಲ್ಲಾ ಸಮಸ್ಯೆಗಳು ಮಹಿಳಾವಾದಿ ಓದಿನ ದೃಷ್ಟಿಯಿಂದ ಪರಿಣಾಮಕಾರಿಯಾಗಿವೆ. ಆದುದರಿಂದ ಸ್ತ್ರೀವಾದಿ ಓದು ಸಮಸ್ಯೆಗೆ ಸಿಲುಕಿದೆ.

ಮೇಲೆ ಹೇಳಿದ ಕಾರಣಗಳಿಂದಾಗಿ "ಸ್ತ್ರೀವಾದಿ ಓದು" ಕೂಡಾ ಓದಿನ ಒಂದು ತಂತ್ರಗಾರಿಕೆಯ ಭಾಗವಾಗಬೇಕಾದ ಅವಶ್ಯಕತೆಯಿದೆ. ವಿರುದ್ಧ ದಿಕ್ಕಿನ ಓದು ವಿರುದ್ಧ ದಿಕ್ಕಿನ ವಿಮರ್ಶೆ ಸ್ತ್ರೀವಾದದ ಅಗತ್ಯವಾಗಿದೆ. ಹೀಗೆ ಓದಿದರೆ ಅದು ಪುರುಷರಿಗೆ ಇರಿಸು-ಮುರಿಸನ್ನು ಉಂಟುಮಾಡಬಹುದು. ಪುರುಷ ಕೇಂದ್ರಿತ ಜ್ಞಾನ ಪರಂಪರೆಯನ್ನು ಒಡೆದು ಹಾಕುವುದು ಸುಲಭವಲ್ಲ. ಇದರರ್ಥ - ಸ್ತ್ರೀವಾದಿ ಓದು ಎಂದರೆ ಒಂದೇ ಮಾನದಂಡವನ್ನು ಒಳಗೊಳ್ಳಬೇಕೆಂದೇನೂ ಅಲ್ಲ. ಓದು ಎನ್ನುವುದು ಖುಷಿಗಾಗಿ ಮಾತ್ರವಲ್ಲ ಮತ್ತು ಓದಿಗೆ ನಿರ್ದಿಷ್ಟ ರಾಜಕೀಯ ಜಾಗವೆಂಬುದು ಇಲ್ಲ. ಆದುದರಿಂದ ಸ್ತ್ರೀವಾದಿ ಓದು ಅನ್ನುವುದು ಆಧುನಿಕ ಯುಗದ ಒಂದು ರಾಜಕೀಯ ಅಧಿಕಾರ ಕೇಂದ್ರವಾಗಬೇಕಾದ ಅಗತ್ಯವಿದೆ. ಈ ದೃಷ್ಟಿಯಿಂದ ಬರಹ ಹೇಗೆ ರಾಜಕೀಯ ಅಧಿಕಾರ ಆಗಿದೆಯೊ ಅದೇ ರೀತಿ ಓದು ಕೂಡಾ ರಾಜಕೀಯ ಕೇಂದ್ರದ ಮತ್ತೊಂದು ರೂಪವಾಗಬೇಕು.

## ವಿಮರ್ಶಕರ ನಿಲುವುಗಳು

ಯಶೋಧರ ಚರಿತೆಯನ್ನು ಕನ್ನಡದ ವಿವಿಧ ಪಂಥಗಳ ವಿಮರ್ಶಕರು ಬೇರೆ ಬೇರೆ ರೀತಿಯಲ್ಲಿ ಗ್ರಹಿಸಿದ್ದಾರೆ. ಅದರಲ್ಲಿ ಮೂರು ಪ್ರಧಾನ ನೆಲೆಗಳಿವೆ -

೧. ನವೋದಯ ವಿಮರ್ಶಕರ ನಿಲುವುಗಳು

೨. ನವ್ಯ ವಿಮರ್ಶಕರ ನಿಲುವುಗಳು

೩. ನವ್ಯೋತ್ತರ ಸಂದರ್ಭದ ನಿಲುವುಗಳು

ಡಿ.ಎಲ್. ನರಸಿಂಹಾಚಾರ್; ಕುವೆಂಪು ಮುಂತಾದವರು ಯಶೋಧರ ಚರಿತೆ ಕೃತಿಯನ್ನು ಒಂದು ರೀತಿಯಲ್ಲಿ ಸ್ವೀಕರಿಸಿದ್ದಾರೆ. ಅವರ ವಿಮರ್ಶೆಯಲ್ಲಿ ಎದ್ದುಕಾಣುವ ಪ್ರಮುಖ ಅಂಶಗಳಿವೆ. ಅವರ ವಿಮರ್ಶೆಯ ಹಿನ್ನೆಲೆಯಲ್ಲಿ ಕೆಲಸ ಮಾಡಿರುವ ಪ್ರಮುಖ ತಾತ್ವಿಕತೆ ಯನ್ನು ಮೊದಲು ಕ್ರೋಢೀಕರಿಸಿ ಹೇಳಬಹುದು :

೧. ವಸಾಹತು ಸಂದರ್ಭದಲ್ಲಿ ರೂಪುಗೊಂಡ ಬರಹಗಳ ಅಧಿಕಾರಸ್ಥ ರಾಜಕಾರಣದ ಮುಖಾಮುಖಿ.

೨. ಬರಹವೂ ಪರ್ಯಾಯವಾದ ಸಂಕಥನ.

೩. ಅವರ ಬರಹಗಳಲ್ಲಿ ಪ್ರಾದೇಶಿಕ ಓದು ಮತ್ತು ಪ್ರಾದೇಶಿಕ ಅನ್ವಯ ಎನ್ನುವುದು ಮುಖ್ಯ.

೪. ಸಾಕಷ್ಟು ತರಬೇತಿಗೊಂಡಿರುವ ಬುದ್ಧಿಜೀವಿ ಓದುಗರ ತೌಲನಿಕ ಅಧ್ಯಯನ ಕ್ರಮ ಪ್ರಾರಂಭವಾದ ರೀತಿ.

೫. ಓದಿನಲ್ಲಿ ನೈತಿಕ - ಅನೈತಿಕವೆಂಬ ವರ್ಗೀಕರಣ.

ನವ್ಯ ವಿಮರ್ಶಕರಾದ ಗಿರಡ್ಡಿ ಗೋವಿಂದರಾಜರು ಯಶೋಧರ ಚರಿತೆಯನ್ನು ಪ್ರಾಯೋಗಿಕ ವಿಮರ್ಶೆಯ ರೀತಿಯಲ್ಲಿ ಗ್ರಹಿಸಿದ್ದಾರೆ.

ಜಿ. ರಾಜಶೇಖರ ಅವರು ಯಶೋಧರ ಚರಿತೆಯನ್ನು ದ್ವಂದ್ವವಿನ್ಯಾಸದ ಹಿನ್ನೆಲೆಯಿಂದ ಗ್ರಹಿಸಿದ್ದಾರೆ.[೧]

## ಸ್ತ್ರೀವಾದಿ ದೃಷ್ಟಿಕೋನ ಮತ್ತು ಯಶೋಧರ ಚರಿತೆ

ಯಶೋಧರ ಚರಿತೆ ಒಂದು ಸುದೀರ್ಘ ನಿರೂಪಣೆಯ ಕಾವ್ಯ. ಈಗಿನ ಅರ್ಥದಲ್ಲಿ ನಾವು ಕಾದಂಬರಿಯೆಂದು ಯಾವುದನ್ನು ಕರೆಯುತ್ತೇವೋ ಅದೇ ಅರ್ಥದಲ್ಲಿ ಆಗಿನ ಚಂಪೂ ಕಾವ್ಯಗಳು. ಪಂಪನ 'ವಿಕ್ರಮಾರ್ಜುನ ವಿಜಯ'ವನ್ನೋ 'ಆದಿ ಪುರಾಣ'ವನ್ನೋ ನೋಡಿದರೆ ಈ ಕಾವ್ಯ ಅಷ್ಟು ಹಿರಿದಲ್ಲ. ಕೃತಿಕಾರನ ಪ್ರಕಾರ 'ಯಶೋಧರ ಚರಿತೆ'ಯೇ ಹೊರತು ಇದು ಅಮೃತಮತಿಯ ಚರಿತೆಯಲ್ಲ. ಯಶೋಧರ ಈ ಕಾವ್ಯದ ನಾಯಕ. ಅವನು ಜೀವನ ದಲ್ಲಿ ಎದುರಿಸಿದ ಬಿಕ್ಕಟ್ಟುಗಳು ಇದರಲ್ಲಿ ಪ್ರಧಾನ ಹಾಗೂ ಕಾವ್ಯವು ಹಿನ್ನೋಟ ತಂತ್ರವನ್ನು ಒಳಗೊಂಡಿದೆ. ಕಾವ್ಯವು ಒಳಗೊಳ್ಳುವ ಕಾಲವು ತುಂಬಾ ಹಿರಿದಾದುದು. ಯಶೋಧರ

ಮತ್ತು ಅವನ ತಾಯಿಯ ಏಳು ಭವಗಳ ಚಿತ್ರಣವು ಇದರಲ್ಲಿ ಮುಖ್ಯ. ಏಳುಭವವೆನ್ನುವುದಕ್ಕೆ ಜೈನರಲ್ಲಿ ವಿಶಿಷ್ಟತೆಯಿದೆ. ಒಂದು ಜನ್ಮದಲ್ಲಿ ಮುಗಿಯದ ಕತೆಯು ಏಳು ಜನ್ಮಕ್ಕೆ ಮುಗಿಯುತ್ತದೆ. ಒಂದು ಜನ್ಮದ ಕತೆಯೆನ್ನುವುದು ಈ ಕಾವ್ಯದಲ್ಲಿ ಪಾಪ ಪರಿಹಾರಕ್ಕಾಗಿ ಸಾಕಾಗುವಂಥದ್ದಲ್ಲ. ಆದುದರಿಂದ ಈ ಕಾವ್ಯಕ್ಕೆ ವಿಶಾಲ ಚೌಕಟ್ಟು ಇದೆ.

### ಯಶೋಧರ ಚರಿತೆಯು ಪರಿವರ್ತನೆಯ ಕಾಲಘಟ್ಟದಲ್ಲಿ ರೂಪುಗೊಂಡಿದೆ

ಯಶೋಧರ ಚರಿತೆಯನ್ನು ಬರೆದ ಕಾಲವನ್ನು ಕ್ರಿ.ಶ. ೧೨೦೯ ಎಂದು ಗುರುತಿಸುತ್ತಾರೆ. ಈ ಕೃತಿಯನ್ನು ಬರೆದ ಜನ್ನ ಹೊಯ್ಸಳರ ೨ನೇ ಬಲ್ಲಾಳನ ಕಾಲಘಟ್ಟಕ್ಕೆ ಸೇರಿದವನಿರಬೇಕೆಂದೂ, ಆತನದು ಕಮ್ಮೆ ವಂಶದ ಕಾಶ್ಯಪ ಗೋತ್ರವೆಂದು ವಿವರಗಳು ದೊರೆಯುತ್ತವೆ. ಜನ್ನ ಯಶೋಧರ ಚರಿತೆಯನ್ನು ಬರೆದ ಸಂದರ್ಭ ಸ್ವಲ್ಪ ವಿಶಿಷ್ಟವಾಗಿತ್ತು. ವಚನಯುಗ ಪ್ರಾರಂಭವಾಗಿತ್ತು. ಜೈನರ ಮತ್ತು ಶೈವರ ನಡುವೆ ತಿಕ್ಕಾಟವಿತ್ತು. ಹಳೆಯ ಸ್ಥಗಿತಗೊಂಡ ಆಲೋಚನೆಯು ಬದಲಾದ ಸಂದರ್ಭವೂ ಹೌದು. ಇದರಿಂದ ಯಶೋಧರ ಚರಿತೆಗೆ ಐತಿಹಾಸಿಕವಾಗಿಯೂ ಮಹತ್ವವಿದೆ.

### ಸ್ತ್ರೀವಾದ ಮತ್ತು ಯಶೋಧರ ಚರಿತೆ ಹಾಗೂ ಧಾರ್ಮಿಕತೆ

ಮಹಾಕಾವ್ಯದ ರೂಪವಿರುವ ಯಶೋಧರ ಚರಿತೆಯು ಅದರ ಸಾಹಿತ್ಯದ ರೂಪದ ಕಾರಣದಿಂದಲೇ ಚರ್ಚೆಗೆ ಒಳಗಾಗಬೇಕಾಗುತ್ತದೆ. ಯಶೋಧರ ಚರಿತೆಯು ಚಂಪೂ ಮಹಾಕಾವ್ಯದ ಮಾದರಿಯದು. ಮಹಾಕಾವ್ಯದ ಮಾದರಿಗಳಲ್ಲಿ ಕೆಲವು ಅಂಶಗಳು ಬಹಳ ಮುಖ್ಯ. ಮೂಲತಃ ಮಹಾಕಾವ್ಯಗಳು ನಾಯಕ ಕೇಂದ್ರಿತವಾದುದು. ನಾಯಕನು ಬರಿಯ ವ್ಯಕ್ತಿಪ್ರಜ್ಞೆಯನ್ನು ಮಾತ್ರ ಮುಂದಿಡುವುದಿಲ್ಲ. ನಾಯಕ ಸಾಮೂಹಿಕ ಪ್ರಜ್ಞೆಯನ್ನು ಪ್ರತಿನಿಧಿಸುತ್ತಾನೆ. ಅವನು ಕಳೆದು ಹೋಗುತ್ತಿರುವ ಮೌಲ್ಯಗಳನ್ನು ಹುಡುಕಾಡುವ ವ್ಯಕ್ತಿ. ಮಹಾಕಾವ್ಯವೂ ಕೂಡಾ ಸಾಮೂಹಿಕ ಸಮಾಜವೊಂದು ಪಲ್ಲಟಗೊಳ್ಳುತ್ತಿರುವ ಸಂದರ್ಭದಲ್ಲಿ ಹುಟ್ಟಿಕೊಳ್ಳುತ್ತವೆ. ಈ ದೃಷ್ಟಿಯಿಂದ ನಾಯಕಿಗೆ ಯಾವಾಗಲೂ ಎರಡನೆಯ ಸ್ಥಾನ. ನಾಯಕನ ಪಕ್ಕದಲ್ಲಿ ಅವನ ಯೋಗ್ಯತೆಗೆ ತಕ್ಕನಾಗಿ ಮಾತ್ರ ನಾಯಕಿಯು ಇರುತ್ತಾಳೆ. ಇದು ಮಾಮೂಲಿಯಾಗಿ ಇರುವ ಮಹಾಕಾವ್ಯದ ನಿರೂಪಣೆ. ನಾಯಕ+ನಾಯಕಿ ಮತ್ತು ಖಳನಾಯಕರ ನಡುವೆ ಸಂಘರ್ಷವಿರುತ್ತದೆ. ಚಂಪೂಕಾವ್ಯಗಳು ಕೂಡಾ ಒಂದೇ ದಿನದ ಕತೆಯನ್ನು ಹೊಂದಿರುವುದಿಲ್ಲ. ಯಶೋಧರ ಚರಿತ್ರೆಯಲ್ಲಿ ಯಶೋಧರ ನಾಯಕ ಸರಿ. ಆದರೆ ಅಮೃತಮತಿ ಖಳನಾಯಕಿಯಂತೆ ಕಾಣಿಸುತ್ತಾಳೆ. ಯಶೋಧರ ಸಾವಿಗೆ ಮತ್ತು ಅವನ ದುರಂತಕ್ಕೆ ಕಾರಣವಾಗುವವಳು ಅಮೃತಮತಿ. ಮತ್ತೊಂದು ಅರ್ಥದಲ್ಲಿ ಅದು ಅಮೃತಮತಿಯ ದುರಂತವೂ ಹೌದು. ಯಾಕೆಂದರೆ ಅವಳು ತಟ್ಟನೆ ಪಸಾಯದಾನಂ ಗೊಟ್ಟವಳು. ಎತ್ತರದಿಂದ ಕೆಳಗೆ ಬಿದ್ದವಳು. ಜೀವನದಲ್ಲಿ ಬದಗನ ಸೆರೆಗೆ ಸಿಕ್ಕಿದ ಅವಳಿಗೆ ಮತ್ತೊಂದು ಭವದಲ್ಲಿ ಹುಟ್ಟಿ ತನ್ನ ಪಾಪ ಕರ್ಮವನ್ನು ತೊಡೆಯುವ ಪುಣ್ಯದ ಅವಕಾಶವೂ ಇಲ್ಲ.

ತೊನ್ನನ ಕೂಟದಿನಾದುದು
ತೊನ್ನೀ ರೋಗಕ್ಕೆ ಬಾಡುಕಳ್ ವಿಷಮೆನೆಯುಂ
ಮನ್ನಿಸಳೆ ಮಗನ ಮಾತನಿ
ದೇಂ ನಾಯ ನರಕಮಾಕೆಗೊಚ್ಚುತಮಾಯ್ತೋ (೩-೨೪)

ತೊನ್ನಿನ ರೋಗದಿಂದ ಜೀವನದ ನರಕವನ್ನು ಅಮೃತಮತಿಯು ಕಾಣುತ್ತಾಳೆ. ತೊನ್ನನ ಕೂಟದಿಂದ ತೊನ್ನಿನ ರೋಗವನ್ನು ಬರಿಸಿಕೊಂಡು ಅನುಭವಿಸುತ್ತಾಳೆ.

ಈ ಮೊದಲು ಸೂಚಿಸಿರುವಂತೆ ಜನ್ನನದು ಕಮ್ಮೆವಂಶ. ಅವನು ಸಂಕೇತಿಸುವುದು ಜೈನ ಕಾವ್ಯವನ್ನು. ಕಾವ್ಯದಲ್ಲಿ ಸೂಚಿತವಾಗುವುದು ಜೈನ ಧರ್ಮ. ಅವನು ಜೈನ ಧರ್ಮ ಪರವಾದ ಕಾವ್ಯವನ್ನು ಬರೆದಿರುವುದು ಜೈನ ಧರ್ಮ ಇಳಿಮುಖವಾಗುತ್ತಿರುವ ಕಾಲಘಟ್ಟ ದಲ್ಲಿ. ಇತರ ಜೈನ ಕಾವ್ಯಗಳನ್ನು ಮತ್ತು ಯಶೋಧರ ಚರಿತೆಯನ್ನು ತುಲನೆ ಮಾಡಿದರೆ ಒಂದು ಅಂಶ ತಟ್ಟನೆ ಗೋಚರವಾಗುತ್ತದೆ. ಅದೆಂದರೆ, 'ಆದಿಪುರಾಣ' 'ಶಾಂತಿಪುರಾಣ' 'ಅಜಿತ ತೀರ್ಥಂಕರ ಪುರಾಣ'ಗಳು ಕೇಂದ್ರೀಕೃತ ರಚನೆಯ ಮಾದರಿಗಳಲ್ಲ. ಅವುಗಳು ಭವಾವಳಿಯ ಸುರುಳಿಯಲ್ಲಿ ಸುತ್ತಿಕೊಂಡಿವೆ ಮತ್ತು ಪ್ರತಿಯೊಂದು ಭವಗಳಲ್ಲಿಯೂ ಒಂದೊಂದು ಕಾರಣಕ್ಕೆ ಇಹಲೋಕದ ಜೀವಿಗಳು ತಪಸ್ಸಿನ ಕಡೆಗೆ ತೆರಳುವುದು ಗಮನಾರ್ಹ ವಾಗಿದೆ. ಜೈನ ಕವಿಗಳು ಅವನ್ನು ಉದ್ದೇಶಪೂರ್ವಕವಾಗಿ ತರುತ್ತಾರೆ.[೨] ಜೈನ ಕಾವ್ಯಗಳಲ್ಲಿ ಬರುವ ಅಲೌಕಿಕದ ಘಟನಾವಳಿಗಳು ಕೂಡಾ ಒಂದು ನೈತಿಕ ಚೌಕಟ್ಟಿನಲ್ಲಿ ವ್ಯವಹರಿಸುವುದು ಗಮನಾರ್ಹ. 'ಆದಿಪುರಾಣ'ದಲ್ಲಿ ಹಿಂದಿನ ಭವದ ಗಂಡ ಹೆಂಡಿರು ಮರುಭವದಲ್ಲಿಯೂ ಗಂಡ ಹೆಂಡರಾಗಿಯೇ ಹುಟ್ಟುತ್ತಾರೆ. ಅವುಗಳಲ್ಲಿ ಧಾರ್ಮಿಕ ಅನೈತಿಕತೆಯೆನ್ನುವುದು ಯುದ್ಧ ದಲ್ಲಿ ಮಾತ್ರ ವ್ಯಕ್ತವಾಗುತ್ತದೆ. ಕುಟುಂಬವು ಜೈನ ಪುರಾಣಗಳಲ್ಲಿ ಕೇಂದ್ರವಲ್ಲ ಮತ್ತು ಅನೈತಿಕ ಕಾರಣಕ್ಕೆ ಕುಟುಂಬವು ಒಡೆಯುವುದಿಲ್ಲ. ಹೆಣ್ಣು ಆ ಕಾವ್ಯಗಳಲ್ಲಿ ಕೇಂದ್ರವಲ್ಲ. ಆದರೆ ಜನ್ನನ ಕಡೆಗೆ ಬಂದರೆ ಈ ಪರಿಕಲ್ಪನೆಯು ಬದಲಾಗಿದೆ. ಜನ್ನನು ಎರಡೂ ಕೃತಿಗಳಲ್ಲಿಯೂ ಕುಟುಂಬವನ್ನು ಕೇಂದ್ರವಾಗಿರಿಸಿ ಕೊಂಡಿದ್ದಾನೆ. ಯಶೋಧರ ಚರಿತೆಯಲ್ಲಿ ಅಮೃತಮತಿಯು ಕುಟುಂಬವನ್ನು ಒಡೆಯುತ್ತಾಳೆ. ಅನಂತನಾಥ ಪುರಾಣದಲ್ಲಿ ದಾಂಪತ್ಯ ಜೀವನದ ನಡುವಿಗೆ ಚಂಡಶಾಸನನು ಪ್ರವೇಶಿಸುತ್ತಾನೆ. ಅವನು ಆಗಂತುಕನಲ್ಲ. ತನ್ನ ಸ್ನೇಹಿತನ ಹೆಂಡತಿಯನ್ನು ಕಾಮಿಸಿದವನು. ಆ ಕಾವ್ಯದಲ್ಲಿಯೂ ಕಾಮ ತಟ್ಟನೆ ಆವಿರ್ಭವಿ ಸುತ್ತದೆ. ಜನ್ನ ತನ್ನ ಕಾವ್ಯಗಳನ್ನು ಲೌಕಿಕ ಮತ್ತು ಆಗಮಿಕವೆಂದು ವರ್ಗೀಕರಿಸಿಲ್ಲ. ಲೌಕಿಕ ಮತ್ತು ಆಗಮಿಕ ಎರಡೂ ಕೂಡಾ ಜೈನ ಕವಿಗಳ ಪ್ರಮುಖ ಪರಿಕಲ್ಪನೆಯಾಗಿದ್ದು ಕನ್ನಡದ್ದೇ ಎನ್ನಬಹುದಾದ ಕಾವ್ಯಮೀಮಾಂಸೆಯನ್ನು ಮಂಡಿಸುತ್ತವೆ. ಅದು ಬೇರೆ ಪ್ರಶ್ನೆ. ಜನ್ನನಿಗಿಂತ ಹಿಂದಿನ ಜೈನ ಕವಿಗಳು ನಿರೂಪಿಸಿದ ಕಾವ್ಯ ಮಾರ್ಗಗಳು ಅವನಿಗೆ ಪಥ್ಯವಾಗಿದೆಯೆಂದಾದರೆ-ಯಶೋಧರ ಚರಿತೆಯೂ ಕೂಡಾ ಒಂದು ಲೌಕಿಕದ ಪಠ್ಯವಾಗಿದೆ. ಲೌಕಿಕ ಪಠ್ಯವಾಗಿಯೂ ಅದನ್ನು ಸ್ವೀಕರಿಸಬಹುದು ಎಂದಷ್ಟೇ ಅರ್ಥ.

'ಲೈಂಗಿಕ' ರಾಜಕಾರಣವನ್ನು ಜನ್ನನು ಯಾಕೆ ಪ್ರಸ್ತಾಪಿಸಿದ ಎನ್ನುವುದು ನಿಜವಾಗಿಯೂ ಅತ್ಯಂತ ಸಂಕೀರ್ಣವಾದ ಪ್ರಶ್ನೆ. ನಿಸ್ಸಂದೇಹವಾಗಿ ಜನ್ನ ಲೈಂಗಿಕ ಸಂಬಂಧವನ್ನು ಹೊಸ ಚೌಕಟ್ಟಿನಲ್ಲಿ ನಮ್ಮ ಮುಂದಿಟ್ಟಿದ್ದಾನೆ. ಅವನ ಕಾವ್ಯದಲ್ಲಿ ಅದಕ್ಕೆ ವಿಶೇಷ ಪ್ರಾಶಸ್ತ್ಯವಿದೆ. ಲೈಂಗಿಕ ಸಂಬಂಧಗಳನ್ನು ನೈತಿಕವಾಗಿ ನೋಡುವ ಅಥವಾ ಅದನ್ನು ತಿರಸ್ಕರಿಸಿ ನೋಡುವ ಎರಡೂ ಕ್ರಮಗಳಲ್ಲಿಯೂ ರಾಜಕೀಯ ಸಿದ್ಧಾಂತಗಳು ಬೇರೆ ಬೇರೆ ರೀತಿಯಲ್ಲಿ ಕೆಲಸವನ್ನು ನಿರ್ವಹಿಸುತ್ತವೆ. ದಾಂಪತ್ಯ ಚೌಕಟ್ಟಿನಿಂದ ಹೊರಗಿನ ಸಂಬಂಧಗಳನ್ನು 'ಪಾಪ ನಿವೇದನೆ'ಯ ಮೂಲಕ ಬಗೆಹರಿಸುವುದು ಸಾಧ್ಯವಿಲ್ಲ. ಯಶೋಧರ ಚರಿತೆಯಲ್ಲಿ ಅಮೃತಮತಿ ಮತ್ತು ಬದಗನ ಸಂಬಂಧ ದಾಂಪತ್ಯದ ಚೌಕಟ್ಟಿನಿಂದ ಹೊರಗೆ ಇದೆ. ಹೀಗಿರುವುದು ಶಿಸ್ತುಬದ್ಧ ನೈತಿಕ ನಿಯಮಾವಳಿಗಳನ್ನು ಅದು ಮುರಿಯುತ್ತದೆ. ಜನ್ನ 'ಯಶೋಧರ ಚರಿತೆ'ಯಲ್ಲಿ ಲೌಕಿಕ ಪೂರ್ತಿಯಾದ ಅನ್ವಯವನ್ನು ಮಾಡುವುದಿಲ್ಲ.

ನಾಂದಿಯಿನ ನಂತರಂ ಕವಿ
ವೃಂದಾರಕವಾಸವಂಗೆ ಕವಿಕಲ್ಪಲತಾ
ಮಂದಾರಂಗೇಂ ಪ್ರಸ್ತುತ
ಮೆಂದೊಡೆ ಬಲ್ಲಾಳದೇವನನ್ವಯಕಥನಂ ||೧-೯||

ಇಲ್ಲಿ ಕವಿ ಜನ್ನನು "ಕವಿಕಲ್ಪಲತಾ ಮಂದಾರಂಗೇಂ ಪ್ರಸ್ತುತಮೆಂದೊಡೆ ಬಲ್ಲಾಳ ದೇವನನ್ವಯ ಕಥನಂ" ಎಂದಿರುವುದು ಗಮನಾರ್ಹ. ಮುಂದೆ ತನ್ನ ಸ್ವಪ್ರವರವನ್ನು ಮಂಡಿಸುವ ಸಂದರ್ಭದಲ್ಲಿ ಹೀಗೆ ಹೇಳಿಕೊಳ್ಳುತ್ತಾನೆ.

ಜನ್ನಂ ಕಮ್ಮೆ ಕುಲದ ತೊಡವಿನರನ್ನಂ ||೧-೨೦||

ಕಮ್ಮೆ ಕುಲವೆನ್ನುವುದು ಬ್ರಾಹ್ಮಣ ಕುಲವನ್ನು ಸಂಕೇತಿಸುತ್ತದೆ. ಹೀಗಿದ್ದೂ ಅವನು ಬರೆದಿರುವುದು ಯಶೋಧರ ಚರಿತೆಯನ್ನು. ಆದುದರಿಂದ ಇಲ್ಲಿ ಎರಡು ಸಂಗತಿಗಳು ಮುಖ್ಯವಾಗಿವೆ. ಮೊದಲನೆಯದಾಗಿ - ಯಶೋಧರ ಚರಿತೆಯ ಕೇಂದ್ರ ಅರಸೊತ್ತಿಗೆಯಲ್ಲಿನ ಸೂಕ್ಷ್ಮ ಪಲ್ಲಟಗಳನ್ನು ಗುರುತಿಸುವುದು. ಎರಡನೆಯದಾಗಿ ಅದು ಉಳಿದ ಕವಿಗಳಂತೆ-ಲೌಕಿಕದ ಪೂರ್ತಿ ಮಾರ್ಗವನ್ನು ಅನ್ವಯಿಸದಿದ್ದರೂ ಯಶೋಧರನ ಉದಾತ್ತತೆಯು ಮುಖ್ಯವಾಗಿರುವುದಕ್ಕೂ-ಅರಸೊತ್ತಿಗೆಗೂ ಸಂಬಂಧ ಕಲ್ಪಿಸುವುದು ಮುಖ್ಯವಾಯಿತಿರಬೇಕು. ಇರಲಿ, ಸ್ತ್ರೀಯರ ಲೈಂಗಿಕ ಸಂಬಂಧ ನಿರ್ವಚನವು ಬರಿಯ ಕಾಮ ಸಂಬಂಧ ನಿರ್ವಚನವಾಗಿಲ್ಲ. ಅದು ಹೆಣ್ಣಿನ ಅನುಭವ ಲೋಕದ ನಿರೂಪಣೆಯೂ ಆಗಿರುವುದು ಯಶೋಧರ ಚರಿತೆಯಲ್ಲಿ ಮುಖ್ಯವಾದುದು. ಈ ಕಾವ್ಯದಲ್ಲಿ ಬರುವ ಗಂಡು ಹೆಣ್ಣಿನ ಲೈಂಗಿಕ ಸಂಬಂಧವು ಒಂದು ಬಗೆಯುವಾದರೆ ಎರಡನೆಯದಾಗಿ ಗಂಡು ಹೆಣ್ಣಿನ ಸಂಬಂಧಗಳಲ್ಲಿರುವ ಒಂದು ಸರಳ ದ್ವಂದ್ವವನ್ನು ನಾವು ಹೀಗೆ ಗುರುತಿಸಬಹುದು :

೧. ಯಶೋಧರ (ಗಂಡ) - ಅಮೃತಮತಿ (ಹೆಂಡತಿ)

ಲೈಂಗಿಕ ಸಂಬಂಧ - ಅಧಿಕೃತ

೨. ಅಮೃತಮತಿ - ಅಷ್ಟಾವಂಕ

ಅನೈತಿಕ ಸಂಬಂಧ - ಅನಧಿಕೃತ

೩. ಚಂದ್ರಮತಿ - ಯಶೋಧರ

ತಾಯಿ - ಮಗ - (ನೈತಿಕ ನಿರ್ವಹಣೆ)

೪. ಯಶೋಮತಿ - ಅಮೃಮತಿ

ತಾಯಿ - ಮಗ - (ನೈತಿಕ)

೫. ಅಭಯರುಚಿ - ಅಭಯಮತಿ

ಅಣ್ಣ - ತಂಗಿ - (ನೈತಿಕ)

೬. ಚಂಡಮಾರಿ - ಚಂಡಕರ್ಮ/ಮಾರಿದತ್ತ

ದೈವ ಮತ್ತು ಮನುಷ್ಯ ಲೋಕ

ಈ ದ್ವಂದ್ವಗಳು ಕಾವ್ಯದಲ್ಲಿ ಹಾಸುಹೊಕ್ಕಾಗಿ ರೂಪುಗೊಂಡಿವೆ.[೬] ಇವುಗಳಲ್ಲಿ ಕೆಲವು ಲೌಕಿಕ ರೂಪದವು ಮತ್ತು ಕೆಲವು ಆಗಮಿಕ ಸಂಬಂಧದ ಎಳೆಗಳನ್ನು ಸೂಚಿಸುತ್ತವೆ. ಆದುದರಿಂದ ಇವನ್ನು ನಿರಚನಗೊಳಿಸಬಹುದು. ಅಂದರೆ ವಾದವಿಷ್ಟು : ಸ್ತ್ರೀತ್ವ ಮತ್ತು ಪುರುಷತ್ವವೆನ್ನುವುದನ್ನು ಒಂದು ಸಾಮಾಜಿಕ ವ್ಯಾಖ್ಯೆಯೆಂಬಂತೆ ನಿರೂಪಿಸಲಾಗಿದೆ. ಗಂಡಾಗಿ ಹುಟ್ಟಿದ್ದಕ್ಕೆ ಪುರುಷತ್ವವೆಂದೂ ಹೆಣ್ಣಾಗಿ ಹುಟ್ಟಿರುವುದಕ್ಕೆ ಸ್ತ್ರೀತ್ವವೆಂದು ಕರೆಯುವುದಕ್ಕೆ ಒಂದು ತಾತ್ವಿಕ ಬುನಾದಿಯಿಲ್ಲ. ನಾಗರಿಕ ಸಮಾಜವು ತನ್ನ ರಾಜಕೀಯ ಉದ್ದೇಶಕ್ಕೆ ತಕ್ಕಂತೆ ಸ್ತ್ರೀತ್ವವನ್ನು ವ್ಯಾಖ್ಯಾನಿಸಿರುವ ಹಾಗೆಯೇ, ಬಂಡವಾಳವಾದವು ಸ್ತ್ರೀತ್ವವನ್ನು ತನಗೆ ಬೇಕಾದಂತೆ ವ್ಯಾಖ್ಯಾನಿಸಿದೆ. ಜಮೀನುದಾರಿ ಪದ್ಧತಿಯೂ ಸ್ತ್ರೀಯನ್ನು ವ್ಯಾಖ್ಯಾನಿಸಿದ ಬಗೆ ಬೇರೆ. ಇದನ್ನು ಇನ್ನೊಂದು ರೀತಿಯಲ್ಲಿ ಹೇಳಬೇಕೆಂದರೆ - ಪ್ರಾಚೀನ ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಸ್ತ್ರೀತ್ವದ ವ್ಯಾಖ್ಯೆಗಳು ಬೇರೆ ಬೇರೆಯಾಗಿವೆ. ಅದರಲ್ಲಿಯೂ ಅರಸೊತ್ತಿಗೆಯ ಸ್ತ್ರೀತ್ವ; ಸಾಮಾನ್ಯ ಸ್ತ್ರೀತ್ವದ ಪರಿಕಲ್ಪನೆಗಳು ಬೇರೆ ಬೇರೆಯಾಗಿವೆ. ಸ್ತ್ರೀಯು ಗಂಡಿನ ಜೊತೆ ಇರಿಸಿಕೊಳ್ಳುವ ಸಂಬಂಧ ಮತ್ತು ಅದು ಸಮಾಜದೊಂದಿಗಿರಿಸಿಕೊಳ್ಳುವ ಸಂಬಂಧದ ಹಿನ್ನೆಲೆಯಲ್ಲಿಯೂ ಅವರ ವ್ಯಾಖ್ಯೆಗಳು ಬೇರೆ ಬೇರೆಯಾಗುತ್ತವೆ. ಹಾಗೆಯೇ ತಾಯಿಯಾಗಿರುವುದು; ಹೆಂಡತಿಯಾಗಿರುವುದು; ತಂಗಿಯಾಗಿರುವುದು ಬೇರೆ. ದೇವತೆಯಾಗಿರುವುದು ಬೇರೆ.

ಮಾರಿ ದೇವತೆಯ ಬಗ್ಗೆ ಜನ್ನನು ಹೇಳುವ ವಿಷಯಗಳು ಗಮನಾರ್ಹ.

"... ... ... ...
... ... ಪಾಪಕ"
ಳಾ ಪಂಡಿತೆ ಚಂಡಮಾರಿ ದೇವತೆಯಿರ್ಪಳ್ ||೧-೩೪||

ಅನೇಕ ಜೀವ ಹತಿಗೆ ಕಾರಣವಾದವಳು. ಪಾಪಕಳಾ ಪಂಡಿತೆ, ಚಂಡಮಾರಿ ದೇವತೆಯಿದ್ದಾಳೆ. ಮಾರಿದೇವತೆಯು ಪಾಪ ಕಳಾಪಂಡಿತೆಯಾಗಿರುವುದು ಜೈನ ಧರ್ಮದ ವ್ಯಾಖ್ಯೆ. ಇಲ್ಲಿಯ ಕೆಲಸಗಳು ಬೇರೆ. ಇಲ್ಲಿ ಸ್ತ್ರೀತ್ವಕ್ಕೆ ಧಾರ್ಮಿಕವಾದ ವ್ಯಾಖ್ಯಾನವಿದ್ದರೆ ಅಮೃತಮತಿಯು ಹೆಂಡತಿಯಾಗಿರುವಾಗ ಹೇಗಿದ್ದಳು ಎಂಬುದನ್ನು ಕವಿಯು ವರ್ಣಿಸುವುದು ಬೇರೆ ರೀತಿಯಲ್ಲಿ.

ಅಮೃತಮತಿ ಗಡ ಯಶೋಧರ
ನ ಮನಃ ಪ್ರಿಯೆ ಆಕೆ ದೀವಮಾಗೆ ಪುಳಿಂದಂ
ಸುಮನೋಬಾಣಂ ತದ್‌ಭೂ
ರಮಣನನೊಲಿದಂತೆ ಗೋರಿಗೊಳಿಸುತಿರ್ಕುಂ ||೨-೯||

"ರಮಣನನೊಲಿದಂತೆ ಗೋರಿಗೊಳಿಸುತಿರ್ಕುಂ" ಎನ್ನುವುದೇ ಸ್ತ್ರೀತ್ವ ಪುರುಷತ್ವದೊಂದಿಗಿರಿಸಿಕೊಂಡಿರುವ ಸಂಬಂಧದ ವ್ಯಾಖ್ಯೆಯಾಗಿದೆ.

ಅಷ್ಟಾವಂಕನಿಗೆ ಅಮೃತಮತಿಯು ಮನವನ್ನು ಕೊಟ್ಟ ಮೇಲೆ ಆಗಿರುವ ಪರಿಣಾಮಗಳು ಬೇರೆ.

... ... ... ವಿಕಲ
ಸ್ವಾಂತೆಗೆ ನೋಡುವ ಕೂಡುವ
ಚಿಂತೆ ಕಡಲ್ವರಿದುದಂದು ಬೆಳಗಪ್ಪಿನೆಗಂ ||೨-೩೨||

ಕೂಡುವ ಪ್ರಶ್ನೆಯು ಇಲ್ಲಿ ಮುಖ್ಯ.

ಮುಂದೆ,

ಅಮೃತಮತಿಯೆಂಬ ಪಾತಕಿ
ಯ ಮಾಯೆ ಬನಮಾಯ್ತು ಚಂದ್ರಮತಿ ಮಾತೆಯ
ಮಾತೆಮಗೆ ಬಲೆಯಾಯ್ತು...
... .... ... (೩-೨೮)

ತಾಯಿಯ ಕೆಲಸ: ಹೆಂಡತಿಯ ಕೆಲಸ ಬೇರೆ. ನಲ್ಲೆಯಾಗಿರುವ ಸಂದರ್ಭದಲ್ಲಿ ಕೂಟವು ಮುಖ್ಯ. ಸಂಕಥನಗಳಲ್ಲಿರುವ ವಿಭಿನ್ನ ಮಾದರಿಗಳನ್ನು ಜನ್ನ ನಿರ್ವಹಿಸುವ ಕ್ರಮವು ಹೀಗೆ ವಿಭಿನ್ನವಾಗಿದೆ. ಲೈಂಗಿಕವಾಗಿ ಹೆಣ್ಣು ಗಂಡಿಗಿಂತ ಭಿನ್ನವಾಗಿದ್ದರೂ ಗಂಡಿನ ಜೊತೆಗೆ; ಸಮಾಜದ ಜೊತೆಗೆ ಕೆಲಸ ನಿರ್ವಹಿಸುವ ಕ್ರಮಗಳು ಬೇರೆ ಬೇರೆಯಾಗಿರುತ್ತದೆ. ಲೈಂಗಿಕ

ಸಂಬಂಧವೆಂದರೆ ನಾವು ಸಂಭೋಗವೆಂದು ಮಾತ್ರ ತಿಳಿದುಕೊಳ್ಳುತ್ತೇವೆ. ಗಂಡು ಮತ್ತು ಹೆಣ್ಣಿನ 'ಲಿಂಗ ಸಮನ್ವಯ'ಕ್ಕೇ (ಸಂಯೋಗಕ್ಕೆ) ಒಂದು ಅರ್ಥವಿರುತ್ತದೆ. ಹುಟ್ಟಿನಲ್ಲಿಯೂ ಬಸಿರು ಮತ್ತು ಹೆರುವಿಕೆಯಲ್ಲಿ ಲಿಂಗ ಸಂಬಂಧಿ ಚಟುವಟಿಕೆಗಳಿವೆ. ಯೋನಿದ್ವಾರ ಗಂಡಿನ ಹುಟ್ಟು ಮತ್ತು ಸಂಯೋಗ - ಎರಡರಲ್ಲಿಯೂ ಬಳಕೆಯಾಗುತ್ತದೆ. ಅಂದರೆ ಹೆಣ್ಣಿನ ಯೋನಿ ಮತ್ತು ಮೊಲೆಯ ಜೊತೆಗೆ ಗಂಡಿಗೆ ಎರಡು ಸಂದರ್ಭದಲ್ಲಿ ನೇರ ಸಂಬಂಧವಿರುತ್ತದೆ. ಹುಟ್ಟು ಮತ್ತು ಬಾಲ್ಯದಲ್ಲಿ ಅದು ಒಂದು ಬಗೆಯ ಸಂಬಂಧವಾದರೆ ಯೌವನದಲ್ಲಿ ಕಾಮ ಸಂಬಂಧಿ ಆಕರ್ಷಣೀಯ ಕೇಂದ್ರಗಳಾಗಿರುತ್ತವೆ. ಅಣ್ಣ ಮತ್ತು ತಂಗಿಯಾಗಿರುವಲ್ಲಿ ಲೈಂಗಿಕ ಸಂಬಂಧನ ನಿರ್ವಚನವು ಬೇರೆಯಾಗುತ್ತದೆ. ಈ ಮೂಲಕ 'ಸಂಬಂಧದ ಅನನ್ಯತೆಗಳು' ಬೇರೆ ಬೇರೆಯಾಗುತ್ತದೆ. ಅಂದರೆ ಸಂಬಂಧಗಳ ನಿರ್ವಚನಗಳಲ್ಲಿ ತಾತ್ವಿಕ ಗ್ರಹಿಕೆಗಳು ಭಿನ್ನಭಿನ್ನವಾಗಿರುತ್ತವೆ.

ಯಶೋಧರ ಒಂದು ಹಂತದಲ್ಲಿ ಹೆಂಡತಿ ಮತ್ತು ತಾಯಿ ಇಬ್ಬರನ್ನು ಮಾಯೆ ಎಂದು ಕರೆಯುತ್ತಾನೆ.[೪] ಮಾಯೆಯೆನ್ನುವುದು ಹೆಣ್ಣಿನ ಬಗೆಗೆ ಒಂದು ಧಾರ್ಮಿಕ ವ್ಯಾಖ್ಯಾನ. ಇದನ್ನು ಜೈನರು ಬಳಸಿರುವುದಕ್ಕಿಂತ ಹೆಚ್ಚಾಗಿ ವಚನಕಾರರು ಬಳಸಿದ್ದಾರೆ. ಒಂದು ಧಾರ್ಮಿಕ ಪರಿಭಾಷೆಯಾಗಿ ಇದರ ಅರ್ಥವ್ಯಾಪ್ತಿಯು ಹಿರಿದು. ಗಂಡು ಹೆಣ್ಣಿನ ಸಂಬಂಧದಲ್ಲಿರುವ ಧಾರ್ಮಿಕ ರೂಪಗಳು ಅಧ್ಯಯನಕ್ಕೆ ಯೋಗ್ಯವಾದವುಗಳು. ಧರ್ಮವೆನ್ನುವುದು ಮನುಷ್ಯನ ಹಕ್ಕಿನ ಕುರಿತು ಮಾತಾಡುವುದಿಲ್ಲ. ಧರ್ಮ ಮೂಲತಃ ಹೇಗಿರಬೇಕು ಎಂಬ ನಿಯಮವನ್ನು ಹೇಳುತ್ತದೆ. ಆದುದರಿಂದ ಹೆಂಡತಿಯ ಧರ್ಮ ಬೇರೆ. ಹೆಂಡತಿಯಾಗಿ ಅವಳು ಆಚರಿಸಬೇಕಾದ ಧರ್ಮಕ್ಕೂ ತಾಯಿಯು ಮಗುವನ್ನು ನೋಡಿಕೊಳ್ಳುವ ಧರ್ಮಕ್ಕೂ ವ್ಯತ್ಯಾಸವಿದೆ. ಮದುವೆಯಾದ ಮೇಲೆ ಹೆಂಡತಿಯು ಗಂಡನೊಂದಿಗೆ ಮಾತ್ರ ಸಂಬಂಧ ಹೊಂದುವುದು ಪಾತಿವ್ರತ್ಯದ ಧರ್ಮ. ಈ ಪಾತಿವ್ರತ್ಯದ ಧರ್ಮಕ್ಕೂ-ಸೃಷ್ಟಿಶೀಲತೆಗೂ ಒಂದು ಸಂಬಂಧ ಕಲ್ಪಿಸಿ ಈ ಮುಖಾಂತರ ಅದನ್ನು ಒಂದು ಸಂಬಂಧವಲಯವಾಗಿ ರೂಪಿಸಲಾಗಿದೆ. ಆ ಸಂಬಂಧ ವಲಯವನ್ನು ದಾಟಿರುವುದನ್ನು ಧಾರ್ಮಿಕವಾಗಿ ಅನೈತಿಕ ಮತ್ತು ಅಪವಿತ್ರವೆಂದು ಕರೆಯಲಾಗಿದೆ. ಇದು ಮೂಲತಃ ಧಾರ್ಮಿಕ ಪಠ್ಯಗಳು ರೂಪಿಸಿದ ನಿಯಮ ಸಂಹಿತೆಗಳು.[೫] ಹೆಣ್ಣಿನ ಲೈಂಗಿಕ ಪಾವಿತ್ರ್ಯಕ್ಕೆ ಹೆಚ್ಚೆಚ್ಚು ಮಹತ್ವ ಬಂದಂತೆ ದಾಂಪತ್ಯ ಧರ್ಮದಲ್ಲಿ ಒಂದು ಬಿಗಿಯು ಕಾಣಿಸಿಕೊಂಡಿತು. ಗಂಡಿನ ಲೈಂಗಿಕ ಪಾವಿತ್ರ್ಯ ಮುಖ್ಯವಲ್ಲ. ಹೆಣ್ಣಿನ ಲೈಂಗಿಕ ಪಾವಿತ್ರ್ಯ ಹೆಚ್ಚು ಮುಖ್ಯವೆಂದು ಪರಿಗಣಿತವಾಯಿತು. ಈ ತರಹದ ಪ್ರಜ್ಞಾಪೂರ್ವಕವಾದ ನೈತಿಕ ನಿಯಮಾವಳಿಯಿಂದಾಗಿ ಧಾರ್ಮಿಕ ವಲಯದಲ್ಲಿ ಗಂಡಿನ ಹಕ್ಕು ಮತ್ತು ಹೆಣ್ಣಿನ ಹಕ್ಕು ಬೇರೆ ಬೇರೆಯಾದವು. ಇಲ್ಲಿಯೇ ಇನ್ನೊಂದು ಅಂಶವನ್ನು ಗಮನಿಸಬೇಕು - ಸಾಮಾನ್ಯವಾಗಿ ನಮ್ಮ ಕನ್ನಡದ ಪ್ರಾಚೀನ ಕೃತಿಗಳಲ್ಲಿ ಒಂದು ಮುಖ್ಯ ಅಂಶವು ಪ್ರತಿಪಾದಿತವಾಗಿದೆ: ನಮ್ಮ ಪ್ರಾಚೀನ ಕೃತಿಗಳು ಹೆಣ್ಣಿಗೆ ಒಂದು ಪ್ರತ್ಯೇಕ ಧರ್ಮವಿಲ್ಲ. ಅವಳ ಧರ್ಮ ಗಂಡಿನ ಧರ್ಮದೊಂದಿಗೆ ಮಿಳಿತವಾಗಿದೆ. ಆದರೆ ಧಾರ್ಮಿಕ ವಿಷಯಕ್ಕೆ ಸಂಬಂಧಿಸಿದಂತೆ

ಯಶೋಧರ ಚರಿತೆಯು ಸಂಕೀರ್ಣವಾಗಿದೆ. ಅದು ವಿವಿಧ ಧರ್ಮಗಳ ಸಂಘಟನೆಗೆ ಸಂಬಂಧಿಸಿದ ಚಿತ್ರ. ದುರ್ಗಾಷ್ಟಮಿಯ ದಿನ ಪಶು ಬಲಿಯೆನ್ನುವುದು ಮಾರಿದೇವತೆಗೆ ಸರಿ. ಆದರೆ ಜೈನರಿಗೆ ಅದು ಸರಿಯೆಂದು ಅನಿಸಲಿಲ್ಲ.

ಶ್ರಾವಕ ಜನದುಪವಾಸಂ
ಜೀವದಯಾಷ್ಟಮಿಯೊಳಾಗೆ ಪಾರಣೆ ಕಿವಿಗ
ಳ್ಗೀ ವಸ್ತು ಕಥನದಿಂದು
ದ್ಭಾವಿಸೆ ಕವಿಬಾಳಲೋಚನಂ ವಿರಚಿಸಿದಂ (೧-೨೪)

ಶ್ರಾವಕ ಜನದ ಉಪವಾಸ ಜೀವದಯಾಷ್ಟಮಿಯ ದಿನ ಮುಕ್ತಾಯ ಹೊಂದುವಂತೆ. ಜೀವದಯಾಷ್ಟಮಿಯು ದುರ್ಗಾ ಪೂಜೆಗೆ ಸಂವಾದಿಯಾದುದು. ಜೀವದಯಾಷ್ಟಮಿ ವ್ರತ ವನ್ನು ಜೈನರು ಅಶ್ವಯುಜ ಶುದ್ಧ ಅಷ್ಟಮಿಯಂದು ಆಚರಿಸುತ್ತಾರೆ ಹಾಗೂ "ಕವಿಯು ಹೇಳುವಂತೆ ಜೀವದಯಾಷ್ಟಮಿಯೆಂಬ ನೋಂಪಿಯನ್ನು ಆಚರಿಸುವ ಜನರು ಈ ಯಶೋಧರ ಚರಿತೆಯನ್ನು ಕೇಳುವುದರಿಂದ ಅವರ ಪಾಪಗಳು ಪರಿಹಾರವಾಗುವುವು. ಅವರ ಮನಸ್ಸು ಸಾತ್ವಿಕ ಭಾವದಿಂದ ತುಂಬಿ ಅವರ ಜೈನ ಧರ್ಮ ಶ್ರದ್ಧೆ ಹೆಚ್ಚುವುದು" (೧-೨೯). ಇದು ಜೈನರು ಹೇಗೆ ಪರ್ಯಾಯ ಧರ್ಮದ ಪರಿಕಲ್ಪನೆಯನ್ನು ರೂಪಿಸಲು ಯತ್ನಿಸಿದರು ಎಂಬುದನ್ನು ಸೂಚಿಸುತ್ತದೆ.[೬] ಯಶೋಧರ ಚರಿತೆಯನ್ನು ಧಾರ್ಮಿಕ ಪುರಾಣವೆಂಬಂತೆ ಜನ್ನ ಕರೆದರೂ - ಯಶೋಧರನ ಧರ್ಮ ಚಂದ್ರಮತಿಯದು ಅಲ್ಲ. ಯಾಕೆಂದರೆ ಅವಳು ಹಿಟ್ಟಿನ ಹುಂಜವನ್ನು ಬಲಿಕೊಡುತ್ತಾಳೆ. ಯಶೋಮತಿಗೂ ಯಶೋಧರನಿಗೂ ವ್ಯತ್ಯಾಸವಿದೆ. ಅವರನ್ನು ಮಾರಿದತ್ತ ಅನುಕರಿಸುವುದಿಲ್ಲ. ಅಂದರೆ ಈ ಕಾವ್ಯವು ಧಾರ್ಮಿಕವಾಗಿ ಸಂಕೀರ್ಣತೆ ಯನ್ನು ಒಳಗೊಂಡಿದೆ. ವಸಾಹತುಕಾಲದ ನಮ್ಮ ಓದಿನ ಕ್ರಮವನ್ನು ಪ್ರಾಚೀನ ಕೃತಿಗಳಿಗೆ ಅನ್ವಯಿಸಿದರೆ ಒದಗುವ ಕಷ್ಟವಿದು. ಒಂದು ಪಠ್ಯವು ಒಂದೇ ಅರ್ಥವನ್ನು ಹೇಳುತ್ತದೆ ಮತ್ತು ಪ್ರಾಚೀನ ಕನ್ನಡದಲ್ಲಿ ದೊರೆಯುವ ಧಾರ್ಮಿಕ ರೂಪಗಳು ಒಂದು ಎನ್ನುವುದು ಅಪಕಲ್ಪನೆಯಾಗಿದೆ.

ಧಾರ್ಮಿಕ ವ್ಯಾಖ್ಯಾನದೊಳಗೆ ಹೆಣ್ಣು ನಿರ್ವಹಿಸುವ ಕೆಲಸಗಳು ಕೂಡಾ ಬೇರೆ ಬೇರೆಯೆಂದು ಕರೆದಿರುವುದು ಈ ಕಾರಣಕ್ಕೆ. ಆದರೆ ಧರ್ಮದ ಪ್ರಶ್ನೆಯು ನಮ್ಮಲ್ಲಿನ ಕಲೋನಿಯಲ್ ಗ್ರಹಿಕೆಯ ಥರವಿಲ್ಲ. ಧರ್ಮದ ಪ್ರಕಾರ ಹೆಣ್ಣಿನ ಕರ್ತವ್ಯವು ಯಾವ ಬಗೆಯದು? ಧರ್ಮದ ದೃಷ್ಟಿಯಿಂದ ಲೈಂಗಿಕ ಭಿನ್ನತೆಗೆ ಯಾವ ಅರ್ಥವಿದೆ? ಧರ್ಮದ ದೃಷ್ಟಿಯಲ್ಲಿ ಹೆಣ್ಣಿನ ಯಾವ ಕೆಲಸ ಧಾರ್ಮಿಕ, ಯಾವುದು ಅಧಾರ್ಮಿಕ? ಧರ್ಮಕ್ಕೂ ಲೈಂಗಿಕ ಪಾತ್ರ ನಿರ್ವಹಣೆಗೂ ಯಾವ ಸಂಬಂಧವಿದೆ? ಇದು ಸೂಕ್ಷ್ಮವಾಗಿದೆ. ಭಾರತದಲ್ಲಿ ಜೈನಧರ್ಮ; ವೈದಿಕ ಧರ್ಮ; ವೀರಶೈವ ಧರ್ಮಗಳು ಬೇರೆ ಬೇರೆ ವ್ಯಾಖ್ಯೆಗಳನ್ನು ನೀಡಿವೆ. ಪುರುಷನನ್ನು ಅನುಕರಿಸುವುದು ಮಾತ್ರವೇ ಹೆಣ್ಣಿನ ಧರ್ಮವಲ್ಲ. ಜಂಗಮ ಸೇವೆಯು ವೀರಶೈವ ಹೆಣ್ಣಿನ ಕರ್ತವ್ಯಗಳಲ್ಲಿ ಒಂದು. ಭವಿಯನ್ನು ದಾಟುವುದು ಧಾರ್ಮಿಕ. ಅಭವನನ್ನು

ಸೇರುವುದು ಧಾರ್ಮಿಕ ಕಾಯಕವು ಪ್ರಧಾನ. ಇದರಲ್ಲಿ ಗಂಡು - ಹೆಣ್ಣಿನ ವ್ಯತ್ಯಾಸವಿಲ್ಲ. ಬ್ರಾಹ್ಮಣ ಪಠ್ಯಗಳ ಪ್ರಕಾರ ಗಂಡಿನ ಸೇವೆಯು ಧಾರ್ಮಿಕ. ಗಂಡನೊಂದು ಧರ್ಮ, ಹೆಂಡತಿಯೊಂದು ಧರ್ಮವೆನ್ನುವುದಕ್ಕೆ ಬ್ರಾಹ್ಮಣ ಪಠ್ಯಗಳಲ್ಲಿ ಮಾನ್ಯತೆಯಿಲ್ಲ. ವೈದಿಕ ಧರ್ಮವನ್ನು ಎಲ್ಲರೂ ಅನುಕರಿಸಿದರು ಎಂದರ್ಥವಲ್ಲ. ಜಾತಿ ಧರ್ಮವನ್ನು ಮೀರಿ ಲೈಂಗಿಕ ಸಂಬಂಧ ವಿರಿಸಿಕೊಂಡ ಸ್ತ್ರೀಯರಲ್ಲಿ ಹುಟ್ಟುವ ಮಕ್ಕಳದೂ ಒಂದೊಂದು ಜಾತಿಯಾಗಿರುತ್ತದೆ. ವೀರಶೈವ ಧರ್ಮದಲ್ಲಿ ಸ್ತ್ರೀಯರೂ ಲಿಂಗದೀಕ್ಷೆ ಪಡೆದುಕೊಳ್ಳುವ ಅವಕಾಶವಿದೆ. ಅಂದರೆ ಧಾರ್ಮಿಕ ವ್ಯವಹಾರದಲ್ಲಿ ಹೆಣ್ಣಿಗೂ ಸ್ವತಂತ್ರವಾದ - ಸರಿಸಮಾನವಾದ ಹಕ್ಕು ಇದೆ. ಭವಿಗಳ ನಡುವೆ ಭಕ್ತರ ನಡುವೆ ವ್ಯತ್ಯಾಸವಿದೆ. ಭವಿಗಳು ಧರ್ಮದ ದೃಷ್ಟಿಯಿಂದ ಅನ್ಯೆತಿಕರು. ದೇವರು ಮತ್ತು ಧರ್ಮದ ದೃಷ್ಟಿಯಲ್ಲಿ ಹೆಣ್ಣಿನ ಜ್ಞಾನ ಕಡಿಮೆಯದಲ್ಲ. ವೈದಿಕ ಪಠ್ಯಗಳಲ್ಲಿ ಹೆಣ್ಣು ಧರ್ಮದ ಜೊತೆಗೆ ನೇರ ಸಂಬಂಧವಿಟ್ಟುಕೊಳ್ಳುವುದು ಸಾಧ್ಯವಿಲ್ಲ. ಇವುಗಳನ್ನು ಹಿನ್ನೆಲೆಯಾಗಿಟ್ಟುಕೊಂಡು ಯಶೋಧರ ಚರಿತೆಯನ್ನು ಗಮನಿಸಬೇಕು : ಯಶೋಧರ ಚರಿತೆಯಲ್ಲಿ ಗಂಡನದು ಒಂದು ಧಾರ್ಮಿಕ ವೃತ್ತಿ. ಹೆಂಡತಿಯದು ಒಂದು, ತಾಯಿಯದು ಮತ್ತೊಂದು. ಯಶೋಧರನು ತಾಯಿಯ ಹತ್ತಿರ ಬಂದು ಕೆಟ್ಟ ಕನಸು ಬಿದ್ದ ವಿಷಯವನ್ನು ತಿಳಿಸುವನು. ಆಗ ಅವನ ತಾಯಿ ಚಂದ್ರಮತಿಯು 'ರಾಜನೆ, ಇದು ವಿಶೇಷವಾಗಿ ಕೆಡುಕುಂಟು ಮಾಡುವ ಕನಸು. ಇದರ ದೋಷವನ್ನು ಕಳೆದುಕೊಳ್ಳಲು ನಿನ್ನ ಕತ್ತಿಯಿಂದ ಕುರಿಯೊಂದನ್ನು ದೇವಿಗೆ ಬಲಿ ಕೊಟ್ಟರೆ ದೇವಿ ನಿನಗುಂಟುಮಾಡುವ ಕೇಡನ್ನು ಪರಿಹರಿಸುವಳು' ಎಂದು ಹೇಳುತ್ತಾಳೆ (೩-೧೩).ಯಶೋಧರನು ಅದನ್ನು ಒಪ್ಪದಿದ್ದಾಗ; ಧರ್ಮದ ವಿಷಯದಲ್ಲಿ ಶಾಂತಿಯ ಮಾತು ಬಂದಾಗ ರಾಜರು ಅನುಕರಿಸುವುದಿಲ್ಲವೇ' ಎಂದು ಕೇಳುತ್ತಾಳೆ (೩-೧೯).

ಆದೊಡೆ ಪಿಟ್ಟನ ಕೋಳಿಯ
ನಾದರದಿಂದೊಂದನಿಕ್ಕ ವೇಮಿದು ಮಿಕ್ಕಂ
ದಾ ದೇವಿಗೆನ್ನನಿಕ್ಕಿಯು
ಮೀದುರಿತಮನಿಂದು ಮಗನೆ ಪರಿಹರಿಸದಿರೆಂ ||೩-೨೦||

"ನಿನಗೆ ಕುರಿಯನ್ನು ಬಲಿ ಕೊಡಲು ಮನಸ್ಸಿಲ್ಲದಿದ್ದರೆ, ಒಂದು ಹಿಟ್ಟಿನ ಕೋಳಿಯನ್ನಾದರೂ ಆದರದಿಂದ ಈ ಸಮಯದಲ್ಲಿ ಬಲಿ ಕೊಡಲೇಬೇಕು. ಹಾಗೆ ನನ್ನ ಮಾತನ್ನು ಮೀರಿದ ಪಕ್ಷದಲ್ಲಿ ದೇವಿಗೆ ನನ್ನನ್ನೇ ಬಲಿಕೊಟ್ಟುಕೊಂಡು ನಿನಗೊದಗುವ ಈ ಸ್ವಪ್ನದಿಂದ ಉಂಟಾಗುವ ಕೇಡನ್ನು ಪರಿಹರಿಸದಿರುವುದಿಲ್ಲ" ಎಂದೂ ಚಂದ್ರಮತಿ ಹೇಳುತ್ತಾಳೆ. ಧಾರ್ಮಿಕ ಭಾಗವಹಿಸುವಿಕೆಯಲ್ಲಿ ಸ್ತ್ರೀಯರ ಪಾತ್ರದ ಕುರಿತು ಈ ಮಾತುಗಳು ವಿವರವೊದಗಿಸುತ್ತದೆ. ಜೈನಧರ್ಮವು ಹೇಳುವುದು ಅಹಿಂಸೆಯೆಂಬುದನ್ನು ಎಂದು ಯಶೋಧರ ಚರಿತೆ ಹೇಳಿದರೆ, ಅವನ ತಾಯಿ ಚಂದ್ರಮತಿಯು ಹಿಂಸೆಯು ಅಡ್ಡಿಯಿಲ್ಲ ಎಂದು ಹೇಳುತ್ತಾಳೆ. ಇದು ಒಂದು ಘಟನೆಯಾದರೆ ಮತ್ತೊಂದು ಘಟನೆಯು ತಿಥಿಕರ್ಮಕ್ಕೆ ಸಂಬಂಧಿಸಿದೆ.

"ಮಾಂಸ ಪಚನಮಾಡುವಲ್ಲಿ ನಾಯಿ ಮುಟ್ಟಿದ ದೋಷ ಆಡಿನ ಧೂಳಿನಿಂದ ಶುದ್ಧವಾಗು ವುದೆಂಬುದು ವೇದದಲ್ಲಿ ಪ್ರಸಿದ್ಧವಾದ ವಿಷಯವೆಂದು ಹೇಳಲು, ದೊರೆಯ ಪುರೋಹಿತರ ಮಾತನ್ನು ನಂಬಿ, ಚೆನ್ನಾಗಿ ಬೆಳೆದಿದ್ದ ಹೊಲಗೇರಿಯ ಹೋತವನ್ನು ತರಿಸಿ ಕೋಣನ ಮಾಂಸವನ್ನು ಶುದ್ಧಿಮಾಡಿ ಅದನ್ನೇ ಬ್ರಾಹ್ಮಣರಿಗೆ ಉಣಬಡಿಸಲಾಗಿ, ಅದನ್ನು ತಣಿಯುಂಡು ಎದ್ದ ಬ್ರಾಹ್ಮಣರು 'ಯಶೋಧರ ಚಂದ್ರಮತಿಗಳು ಸ್ವರ್ಗ ಸುಖವನ್ನು ಅನುಭವಿಸುತ್ತಿರುವರೆ? ಎಂದು ಕೇಳಿದ ಯಶೋಮತಿಯ ಮಾತಿಗೆ ಓಹೋ ಎಂದರು. ಬ್ರಾಹ್ಮಣರ ಮಾತಿನಿಂದ ಯಶೋಧರನಿಗೆ ಜಾತಿ ಸ್ಮರತ್ವ ಉಂಟಾಯಿತು' (೩-೬೦, ೬೧) ಯಶೋಮತಿಯು 'ತಿಥಿಕರ್ಮ'ಕ್ಕೆ ಆಯ್ಕೆ ಮಾಡಿಕೊಂಡದ್ದು ಬ್ರಾಹ್ಮಣರನ್ನು. ಬ್ರಾಹ್ಮಣರೂ ಮಾಂಸಾಹಾರಿಗಳು. ಅವರು ತಿನ್ನುವ ಮಾಂಸ ಮತ್ತು ಉಲ್ಲೇಖಿಸುವ ವೇದದ ಪಠ್ಯಗಳು - ಯಶೋಧರ ಚರಿತೆಯಲ್ಲಿ ಧಾರ್ಮಿಕ ಸಂಕರ ಸ್ಥಿತಿಯನ್ನು ವಿವರಿಸುತ್ತವೆ. ಆದರೆ ಇದನ್ನು - ಅಂದರೆ ಧಾರ್ಮಿಕ ಸಂಕರತೆಯನ್ನು ನಾವು ವಸಾಹತೋತ್ತರ ಸಂದರ್ಭದ ಮತ್ತು ವಸಾಹತುಶಾಹಿ ಅನುಭವದ 'ಒಂದು ಧರ್ಮ: ಒಂದು ಆಚರಣೆ'ಯೆಂಬ ಪರಿಕಲ್ಪನೆಯಲ್ಲಿ ವಿವರಿಸುವಂತಿಲ್ಲ. ಯುರೋಪಿಯನ್ನರಿಗೆ ಇಡಿಯ ಭಾರತದ ಸಾಮಾಜಿಕ ಪರಿಸ್ಥಿತಿಯನ್ನು ಅರ್ಥಮಾಡಿಕೊಳ್ಳುವಲ್ಲಿ ಉಂಟಾದ ಸಮಸ್ಯೆಯು ಒಂದಾದರೆ, ಅವರಿಗೆ ಗೊತ್ತಿದ್ದ ಧಾರ್ಮಿಕ ವ್ಯಾಖ್ಯೆಗಳಿಗೂ ಭಾರತೀಯ ಧಾರ್ಮಿಕ ವ್ಯಾಖ್ಯೆಗಳಿಗೂ ಅಜಗಜಾಂತರ ವ್ಯತ್ಯಾಸವಿತ್ತು. ಅದು ಕೂಡಾ ನಮಗೆ ತೊಡಕಿನ ಸಮಸ್ಯೆಯಾಯಿತು. ವಸಾಹತುಪೂರ್ವದ ಪಠ್ಯವನ್ನು ಗ್ರಹಿಸುವಾಗ ಉಂಟಾದ ತೊಡಕಿದು. ಧರ್ಮವು ಹೆಣ್ಣನ್ನು ಸಂಪೂರ್ಣವಾಗಿ ಹೊರಗೆ ಇಟ್ಟಿಲ್ಲ. ಜೈನಧರ್ಮದ ಪ್ರಕಾರ ಪಾಪಕ್ಕೆ ಭವಾವಳಿಯ ಹುಟ್ಟುಗಳಿಂದ ಪರಿಹಾರ ಸಾಧ್ಯ. ವೈದಿಕ ಧರ್ಮದ ಪ್ರಕಾರ ಪಾಪಕ್ಕೆ ಇಹದಲ್ಲಿ ಪರಿಹಾರವಿಲ್ಲ. ಅದು ಮರುಹುಟ್ಟಿನಿಂದ ಪರಿಹಾರವಾಗುವಂಥದ್ದೂ ಅಲ್ಲ. ಪಾಪಿಯು ನರಕಕ್ಕೆ ಹೋಗುತ್ತಾನೆ. ಪುಣ್ಯವಂತನು ಸ್ವರ್ಗಕ್ಕೆ ಹೋಗುತ್ತಾನೆ. ಇದರಿಂದಾಗಿ ಲೌಕಿಕದ ಜೀವನದ ಕಾರ್ಯಗಳನ್ನು ನಿಯಂತ್ರಿಸುವುದು ಧರ್ಮ. ಜೈನ ಕಾವ್ಯಗಳಲ್ಲಿಯೂ ಇದು ಬೇರೆಯಾಗುವುದಿಲ್ಲ. ಯಶೋಧರನೊಂದಿಗೆ 'ಪ್ರಾಯಶ್ಚಿತ್ತ' ಅನುಭವಿಸುವವಳಲ್ಲಿ ಚಂದ್ರಮತಿಯೂ ಇದ್ದಾಳೆ. ಇದರಿಂದಾಗಿ ಇದಕ್ಕೊಂದು ಆಯಾಮವು ಕಾವ್ಯದಲ್ಲಿ ದೊರೆಯುತ್ತದೆ. ಅಮೃತಮತಿಯು ತನ್ನ ಪಾಪಕ್ಕೆ ಪ್ರಾಯಶ್ಚಿತ್ತವನ್ನು ಲೌಕಿಕದಲ್ಲಿ ಅನುಭವಿಸುತ್ತಾಳೆ. ಚಂದ್ರಮತಿಗೆ ಮಾತ್ರ ಅನೇಕ ಹುಟ್ಟುಬೇಕಾಗುತ್ತದೆ. ಈ ಮಾತುಗಳ ಸಾರಾಂಶವಿಷ್ಟೇ : ಕ್ರಿಶ್ಚಿಯನ್ನರ : ವೈದಿಕರ: ಕೆಳ ಜಾತಿಗಳ ನೈತಿಕ ವಿವರಣೆಗಳು ಬೇರೆ. ವೀರಶೈವರಿಗೆ ದೇವರ ಹತ್ತಿರ ಹೋಗಲು ಒಬ್ಬ ಮಧ್ಯವರ್ತಿ ಬೇಕಿಲ್ಲ. ಜೈನರಿಗೂ ಬೇಕಿಲ್ಲ. ಆದರೂ ಜನ್ನ ಅಮೃತಮತಿಯನ್ನು ವಿವರಿಸುವುದು ಒಂದು ನೈತಿಕ ವಿವರಣೆಯಲ್ಲಿ. ಅದನ್ನು ಮರೆಯಬಾರದು. ಅವನಿಗೆ ಅಮೃತಮತಿಯ ಬಗ್ಗೆ ಸಹಾನುಭೂತಿಯೂ ಕೂಡಾ ಇಲ್ಲ.

ಲೈಂಗಿಕ ಸುಖ; ಲೈಂಗಿಕತೆ ಮತ್ತು ಸ್ತ್ರೀವಾದ ಹಾಗೂ ಯಶೋಧರ ಚರಿತೆ :

ಭರದಿಂದವರ್ಗಗಳ ಬೇಂಟಮ
ನಿರುಳಿಂದು ಪಗಲ್ ವಸಂತನಿರುಳುಂ ಪಗಲುಂ
ಸುರಭಿಶರನಂಗ ಜಾತಂ
ಗರಟಿಗೆ ಮೆಯ್ಗೊಪು ಮೆಳೆಯೆ ಬಿಡದೋಲಗಿಪರ್ ||೧-೪||

(ಚಂದ್ರಮತಿ ಯಶೌಘರ ಪ್ರಣಯದ ಕುರಿತು ಕವಿಯು ವರ್ಣಿಸಿದ್ದಾನೆ. ಭರದಿಂದ ಸಾಗುವ ಅವರ ಬೇಂಟವನ್ನು ಇರುಳು ಚಂದ್ರನು; ಹಗಲು ವಸಂತ, ಹಗಲಿರುಳು ಸುರಭಿಶರ (ಮನ್ಮಥ) - ಇವರೆಲ್ಲರೂ ಅವರು ಗಸ್ತಿನಿಂದ ಅಂಗರಕ್ಷಕರಂತೆ ಮೆಯ್ಗೊಪು ನೀಡಿ ಅವನನ್ನು ಓಲೈಸುತ್ತಿದ್ದರು).

ಯಶೋಧರನ ಕುರಿತು ಬರೆಯುವಾಗ ಜನ್ನ, 'ಕೂಡುವ ತೋಳ್ಗಳ ಪುಣ್ಯ' ಎಂದು ಹೇಳುತ್ತಾನೆ (೨-೬).

ಅಮೃತಮತಿ ಗಡ ಯಶೋಧರ
ನ ಮನಃ ಪ್ರಿಯೆ ಆಕೆದೀವ ಆಗೆ ಪುಳಿಂದಂ
ಸುಮನೋಬಾಣಂ ತದ್ ಭೂ
ರಮಣನನೊಲಿದಂತೆ ಗೋರಿಗೊಳಿಸುತಿರ್ಕುಂ (೨೯).

(ಅಮೃತಮತಿಯು ಯಶೋಧರನ ಮನಃ ಪ್ರಿಯೆ, ಸುಮನೋಬಾಣನಾದ ಮನ್ಮಥನು ಆಕೆಯನ್ನು ಬೇಟೆಯನ್ನು ಹಿಡಿಯಲು ಸೆಳೆಯಾಗಿ ಉಪಯೋಗಿಸುವ ಪ್ರಾಣಿಯನ್ನಾಗಿ ಮಾಡಿ, ತನ್ನ ಮನಬಂದಂತೆ ಯಶೋಧರನನ್ನು ಆಕರ್ಷಿಸುತ್ತಿದ್ದನು).

ಗಂಡ ಹೆಂಡಿರ ಲೈಂಗಿಕ ಸಂಪರ್ಕ ಕುರಿತು ಜನ್ನನು ವರ್ಣಿಸುವ ಪರಿಯು ಈ ಬಗೆಯದು. ಗಂಡ ಹೆಂಡಿರು ಪರಸ್ಪರ ಪಡೆದುಕೊಳ್ಳುವ ಲೈಂಗಿಕ ಸುಖವು ಮನ್ಮಥನ ಲೀಲೆಯಂತೆ ಕವಿಗೆ ಕಾಣಿಸುತ್ತದೆ. ಅದನ್ನು ಕವಿಯು ಅಲಂಕಾರಪೂರ್ವಕವಾಗಿಯೂ ವಿವರಿಸುತ್ತಾನೆ. ಯಶೌಘ ಮತ್ತು ಚಂದ್ರಮತಿಯರ 'ಪ್ರಣಯ ಸುಖ'ವನ್ನು ಕವಿಯು ಹೇಳುವಾಗ ಇರುಳು ಮತ್ತು ಹಗಲು ನಡೆಯುತ್ತಿತ್ತು.[೭] ಗಂಡನು ಹೆಂಡತಿಯಿಂದ ಲೈಂಗಿಕ ಸುಖ ಪಡೆಯುವುದು ಸಹಜ ಹಾಗೂ ನೈಸರ್ಗಿಕ. ಯಶೋಧರ ಮತ್ತು ಅಮೃತಮತಿಯರದು ಕೂಡಾ ಸಮ ಎರಕವಾದ ದಾಂಪತ್ಯ ಜೀವನವೆನ್ನುವುದು ಕವಿಯ ನಿಲುವು. ಈ ಮಾತುಗಳು ಮುಂದಿನ ಪದ್ಯಗಳಿಗೆ ಪೂರಕವಾಗಿದೆ.

ಅಮೃತಿಮತಿಯು ದೀವದಂತೆ ಆಕರ್ಷಿಸಿದಳು ಎಂದು ಹೇಳುವ ಮೂಲಕ ಅವಳನ್ನು ಒಂದು ಬಲಿಯೆಂಬಂತೆ ಕವಿಯು ಬರೆಯುತ್ತಾನೆ. ಆದರೆ ಯಶೌಘ ಮತ್ತು ಚಂದ್ರಮತಿಯರ ಕುರಿತು ಬರೆಯುವಾಗ ಕವಿಯು ಆ ರೀತಿಯ ಮಾತುಗಳನ್ನು ಬರೆಯುವುದಿಲ್ಲ. ಯಶೌಘನು ತನ್ನ ಪಟ್ಟಕ್ಕೆ ಮಗನನ್ನು ಏರಿಸಿದ ಮೇಲೆಯೂ ಪ್ರಣಯ ಸುಖವನ್ನು ಅನುಭವಿಸಿದನು ಎಂದು ಕವಿಯು ವಿವರಿಸುತ್ತಾನೆ. ಅಂದರೆ ಲೈಂಗಿಕ ಸುಖಕ್ಕೆ ಸಂಬಂಧಿಸಿದಂತೆ ದಾಂಪತ್ಯ

ಜೀವನದ ಚೌಕಟ್ಟಿನಲ್ಲಿ ಒಂದು ನಿರ್ದಿಷ್ಟ ಕಾರ್ಯವಿದೆ. ಲೈಂಗಿಕ ಸುಖವು ಆನುಷಂಗಿಕ. ಪುತ್ರರನ್ನು ಪಡೆಯುವುದು ಪ್ರಧಾನವೆನ್ನುವ ನಿಲುವು ಸರ್ವೇಸಾಮಾನ್ಯವಾಗಿ ರೂಪುಗೊಂಡಿದ್ದ ಸಂದರ್ಭದಲ್ಲಿ ಈ ರೀತಿಯ ವಿವರಣೆಗಳು ಸಹಜವೆಂಬಂತೆ ಬಂದಿವೆ. ಲೈಂಗಿಕ ಸುಖವನ್ನು ದಾಂಪತ್ಯ ಜೀವನವೆನ್ನುವುದು ಕ್ರಮಬದ್ಧವಾದುದು. ಅದಕ್ಕೆ ನೈತಿಕ ವಿವರಣೆಗಳು ಸಾಧ್ಯ. ಹೆಣ್ಣು ಲೈಂಗಿಕ ಸುಖ ಪಡುವುದೆಂದರೆ ಅದು ತಾನು ಮದುವೆಯಾದ ಗಂಡನಿಂದ ಮಾತ್ರ. ಅದು ಧಾರ್ಮಿಕವಾಗಿಯೂ ಸರಿ. ಆ ರೀತಿಯ ಸಂಬಂಧವನ್ನು ನಾವು ಕೂಡಾ ತುಂಬಾ ಗೌರವಾನ್ವಿತವೆಂದೂ, ಅದಕ್ಕೆ ಸಾಮಾಜಿಕ ಸ್ಥಾನಮಾನವಿದೆಯೆಂದು ಹೇಳುತ್ತೇವೆ. ಗಂಡಿನ ದಾಂಪತ್ಯ ಜೀವನದ ಸ್ಥಾನಮಾನದ ದೃಷ್ಟಿಯಿಂದ ಕೀಳೆಂದು ಪರಿಗಣಿತವಾಗಿಲ್ಲ. ಯಶೋಧರ ಚರಿತೆಯು ಲೈಂಗಿಕ ಸಂಬಂಧಗಳ ನಿರ್ವಹಣೆಯನ್ನು ಧರ್ಮದ ಆಧಾರದ ಮೇಲೆ ವಿವರಿಸುತ್ತದೆ. ಯಶೋಧರ ಚರಿತೆಯಲ್ಲಿ ಬರುವ ಲೈಂಗಿಕ ಸುಖಕ್ಕೆ ಸಂಬಂಧಿಸಿದಂತೆ ಬರುವ ವಿವರಣೆಗಳು ಈ ರೀತಿಯಲ್ಲಿದೆ :

೧. ದಾಂಪತ್ಯ ಜೀವನದ ಕರ್ಮದ ಭಾಗವಾಗಿ ಲೈಂಗಿಕ ಸುಖ. ಯಶೌಘ - ಚಂದ್ರಮತಿ ಮತ್ತು ಯಶೋಧರ - ಅಮೃತಮತಿ. ಇದರಲ್ಲಿ ಗಂಡು ಹೆಣ್ಣು ಪಡೆಯುವ ಸುಖಕ್ಕೆ ಬೇರೆ ವಿವರಣೆಗಳು ಬೇಕಿಲ್ಲ. ಅದು ಒಪ್ಪಿತವಾಗಿರುವಂಥದ್ದು. ಅದರ ಲೈಂಗಿಕ ರಾಜಕಾರಣವು ಧಾರ್ಮಿಕ ನಿಯಮಾವಳಿಯಿಂದ ಬಂಧಿತವಾಗಿರುವಂಥದ್ದು.

ಇನ್ನೊಂದು ದಾಂಪತ್ಯ ಜೀವನವನ್ನು ಒಡೆದು ಪಡೆಯುವ ಲೈಂಗಿಕ ಸುಖ. ಇದು ದಾಂಪತ್ಯ ಧರ್ಮವನ್ನು ಒಡೆಯುತ್ತದೆ. ಸಾಮಾಜಿಕ ಧರ್ಮವನ್ನು ಒಡೆಯುತ್ತದೆ. ಅಮೃತಮತಿಗೆ ಲೈಂಗಿಕ ಸುಖವೇ ಪ್ರಧಾನ. ಹೀಗಾಗಿ ಎರಡೂ ಪ್ರೀತಿಯ ಲೈಂಗಿಕ ಸುಖಗಳ ವಿವರಣೆಗಳಿಗೆ ಕೃತಿಯಲ್ಲಿ ನಿರ್ದಿಷ್ಟ ಆವರಣಗಳಿವೆ. ಮೊದಲನೆಯ ರೀತಿಯ ಸಂಬಂಧವು ನೈತಿಕವಾಗಿ ಸರಿಯೆಂದು ಕವಿಯು ಪ್ರತಿಪಾದಿಸುತ್ತಾನೆ. ಧಾರ್ಮಿಕವಾಗಿ ಅದು ಸರಿಯೆಂಬಂತೆ ಕವಿಯು ವರ್ಣಿಸಿರುವುದು ಧರ್ಮದ ಹಿನ್ನೆಲೆಯಲ್ಲಿ ಪೂರಕವಾಗಿದೆ. ಆದರೆ ಹೆಣ್ಣಿನ ಲೈಂಗಿಕ ಸುಖವೆನ್ನುವುದು ಧರ್ಮದ ಹಿನ್ನೆಲೆಯಲ್ಲಿ ಪೂರಕವಾಗಿದೆ. ಆದರೆ ಹೆಣ್ಣಿನ ಲೈಂಗಿಕ ಸುಖವೆನ್ನುವುದು ಅಲ್ಲಿ ನಗಣ್ಯವಾಗಿದೆ. ಎರಡನೆಯ ರೀತಿಯ ಸಂಬಂಧದಲ್ಲಿ ಕವಿಯ ಧೋರಣೆಯು ಋಣಾತ್ಮಕವಾಗಿದೆ. ಎರಡೂ ರೀತಿಯ ಸಂಬಂಧಗಳಿಗೆ ಕೃತಿಯಲ್ಲಿ ಲೈಂಗಿಕ ರಾಜಕಾರಣದ ರೂಪಗಳಿವೆ.

ಅಮೃತಮತಿಗೆ ಲೈಂಗಿಕ ಸುಖ ಮುಖ್ಯ. ಅವಳು ಮೊದಲು ಒಲಿದಿರುವುದು ಹಾಡಿಗೆ. ಎರಡನೆಯ ಹಂತದಲ್ಲಿ ಅವಳು ಒಲಿಯುವುದು ಮತ್ತು ಹಂಬಲಿಸುವುದು ದೇಹ ಸುಖವನ್ನು. ಅಮೃತಮತಿಯ ಲೈಂಗಿಕ ಸುಖದ ಅಭೀಪ್ಸೆ - ಅದರ ಹಿಂದಿರುವ ಕಾರಣಗಳಿಗೆ ಮತ್ತು ಅವಳ ವೈಯಕ್ತಿಕತೆಗೆ ಸಂಬಂಧವಿದೆ. ಅಷ್ಟಾವಂಕ ಮತ್ತು ಅವಳ ಲೈಂಗಿಕ ಸಂಬಂಧವು 'ಖಾಸಗಿ'ಯಾದರೂ ಅದರ ಪರಿಣಾಮ ಮಾತ್ರ ಸಾರ್ವಜನಿಕವಾದುದು. ಅದನ್ನು ಕವಿಯು ಸೂಕ್ಷ್ಮವಾಗಿ ಚಿತ್ರಿಸುತ್ತಾನೆ. ದಾಂಪತ್ಯ ಜೀವನದ ಚೌಕಟ್ಟಿನೊಳಗೆ ಅನುಭವಿಸುವ ಲೈಂಗಿಕ

ಸುಖ; ಹೆಣ್ತನದ ಬಗ್ಗೆ ಕವಿಯು ಪರವಾಗಿದ್ದಾನೆ. ಹಾಗೆ ಅವನು ಪರವಾಗಿರುವುದಕ್ಕೂ ಪಿತೃ ಸಂಸ್ಕೃತಿಗೂ ಒಂದು ಸಂಬಂಧವಿದೆ. ಯಶೋಧರ ಚರಿತ್ರೆಯಲ್ಲಿ ಲೈಂಗಿಕ ಸುಖ; ಹೆಣ್ತನಕ್ಕೆ ಸಂಬಂಧಿಸಿದಂತೆ ರಾಜಕೀಯ ಸಂಗತಿಗಳು ಮುಖ್ಯ. ಅದು ಕುಟುಂಬ ರಾಜಕಾರಣಕ್ಕೆ ಸಂಬಂಧಿಸಿದ್ದು.

೧. ಮದುವೆಯ ಅನಂತರದ ಸಂಬಂಧ ಅಧಿಕೃತ.
೨. ಲೈಂಗಿಕ ಸಂಬಂಧಗಳ ತಾತ್ವಿಕತೆಯು ಅದರಿಂದ ಹುಟ್ಟಿದೆ.
೩. ಹೆಣ್ಣಿನ ಮದುವೆಯಾಚೆಗಿನ ಲೈಂಗಿಕ ಸಂಬಂಧ - ಅರಾಜಕತೆಗೆ ಕಾರಣವಾಗುತ್ತದೆ.
೪. ಲೈಂಗಿಕ ಸುಖಕ್ಕೂ ಪಿತೃ ಸಂಸ್ಕೃತಿಗೂ ಸಂಬಂಧವಿದೆ.
೫. ಹೆಣ್ಣಿನ ದಾಂಪತ್ಯೇತರ ಲೈಂಗಿಕ ಸುಖದ ಪರಿಣಾಮಗಳು ದೊಡ್ಡವು.
೬. ದಾಂಪತ್ಯೇತರ ಸಂಬಂಧಗಳಲ್ಲಿ ಒಬ್ಬ ಗಂಡು ಹೆಣ್ಣಿನಿಂದ ಸುಖ ಪಡುತ್ತಾನೆ. ಅಲ್ಲಿಯೂ ಅಧಿಕಾರ ಮುಖ್ಯ. ಇನ್ನೊಬ್ಬ ಗಂಡಸು ಕರುಣೆಗೆ ಅರ್ಹನಾಗುತ್ತಾನೆ. (ಉದಾ: ಯಶೋಧರನ ಬಗ್ಗೆ ಜನ್ನನಿಗೆ ಕರುಣೆಯಿಂದೆ. ಅಷ್ಟಾವಂಕ ಲೈಂಗಿಕ ಅಧಿಕಾರ ಮತ್ತು ದಬ್ಬಾಳಿಕೆಯನ್ನು ನಡೆಸುತ್ತಾನೆ).

**ಅಧಿಕಾರದ ರೂಪಕಗಳು ಮತ್ತು ಲೈಂಗಿಕತೆ**

ಎನ್‌ಲೈಟನ್‌ಮೆಂಟ್‌ನ ಯುಗದವರೆಗೆ ಹೆಣ್ಣಿನ ಪ್ರಶ್ನೆಯನ್ನು ಯಾವುದೇ ಮೌಲ್ಯವಿಲ್ಲ ವಂತೆ ನೋಡಲಾಗಿತ್ತು ಎಂದು, ಯಾವಾಗ ಮಹಿಳಾ ವಿಮೋಚನೆಯ ಅರಿವು ಹುಟ್ಟಿತೋ ಅಲ್ಲಿಂದ ಹೆಣ್ಣಿನ ಪ್ರಶ್ನೆಯನ್ನು ಒಂದು ಲಿಂಗ ತಾರತಮ್ಯದ ಪ್ರಶ್ನೆಯೆಂಬಂತೆ ನೋಡ ಲಾಯಿತೋ ಅಲ್ಲಿಂದ ಅದರ ಪರಿಕಲ್ಪನೆಗಳು ಬೇರೆಯಾದವು. ಗಂಡನ್ನು ಮತ್ತು ಹೆಣ್ಣನ್ನು ಬೇರೆ ಬೇರೆ ರೀತಿಯಲ್ಲಿ ನೋಡುವಾಗ ಅದಕ್ಕೊಂದು ಪೂರ್ವ ಪ್ರಮೇಯಗಳು ಸಿದ್ಧವಾದವು. ಹಾಗೆ ನೋಡುವುದಿದ್ದರೆ ಲೈಂಗಿಕ ತಾರತಮ್ಯವೆನ್ನುವುದು ಹೊಟ್ಟೆ ಮತ್ತು ಬಟ್ಟೆಯ ಪ್ರಶ್ನೆಯಲ್ಲ. ಸ್ತ್ರೀಯಾಗಿರುವಿಕೆಯ ಮತ್ತು ಪುರುಷರಾಗುವಿಕೆಯಲ್ಲಿ ಮುಖ್ಯ ಪಾತ್ರವಹಿ ಸುವುದು ಮನಸ್ಸಿನ ಸಮಸ್ಯೆಯನ್ನು ಆಳಿಸಿಕೊಂಡಿದ್ದರಿಂದ. ಹೆಣ್ಣಿನ ದೇಹದ ರಚನೆಯು ಹಾಗಿದೆ; ಆಳುವುದರಿಂದ ಗಂಡಿನ ರಚನೆಯು ಹಾಗಿದೆಯೆಂದು ವಿವರಿಸುವಂತಿಲ್ಲ. ಸ್ತ್ರೀಯರ ಜೀವನದ ಅನುಭವಗಳು ಬೇರೆ. ಅವರ ವಾಸ್ತವದ ಪರಿಸ್ಥಿತಿಯು ಬೇರೆ ಹಾಗೂ ಬೇರೆ ಬೇರೆ ಚಾರಿತ್ರಿಕ ಮತ್ತು ಸಾಮಾಜಿಕ ಪರಿವರ್ತನೆಯ ಸಂದರ್ಭದಲ್ಲಿ ಸ್ತ್ರೀ ಅನುಭವಲೋಕ ಬದಲಾಗಿದೆ. ಈ ದೃಷ್ಟಿಯಿಂದ ಕೆಳಗಿನ ಕೆಲವು ಸಂಗತಿಗಳು ಅಧಿಕಾರ ರಚನೆಯ ಮೇಲೆ ಪ್ರಭಾವ ಬೀರುತ್ತವೆ :

೧. ಭೌತಿಕ ಜೀವನ ಕ್ರಮ (Material Life) - **ಸಾಮಾಜಿಕ ಜೀವನ.**
೨. ಯಜಮಾನಿಕತೆಯ ರೂಪ (System of Domination) - **ಗಂಡನಲ್ಲ ಇತ್ಯಾದಿ.**
೩. ಆಳುವ ವರ್ಗಗಳ ದರ್ಶನಗಳು (Vision of Ruling) - **ಅಧಿಕಾರ ಕೇಂದ್ರ.**
೪. ಸಾಮಾಜಿಕ ಸಂಬಂಧದ ಸ್ವರೂಪಗಳು (Social Relationship) - **ಲೈಂಗಿಕ ಸಂಬಂಧ.**

ಭೌತಿಕ ಜೀವನ ಕ್ರಮ ಹಾಗೂ ಲೈಂಗಿಕ ರಾಜಕಾರಣದ ರೂಪಗಳಿಗೆ ಒಂದು ನಿರ್ದಿಷ್ಟ ಸಂವಿಧಾನವೆನ್ನುವುದು ಇಲ್ಲ. ಗಂಡು ಹೆಣ್ಣಿನ ಸಂಬಂಧದ ರೂಪಗಳು ಭೌತಿಕ ಜೀವನ ಕ್ರಮದ ಮೇಲೆ ಪ್ರಭಾವ ಬೀರುವ ಹಾಗೆಯೇ ಭೌತಿಕ ಜೀವನ ಕ್ರಮದ ಅಗತ್ಯಗಳು ಈ ಸಂಬಂಧದ ನಿರ್ವಹಣೆಯ ಮೇಲೆ ಪ್ರಭಾವ ಬೀರುತ್ತದೆ. ಭೌತಿಕ ಕ್ರಮಗಳು ಅಗತ್ಯವನ್ನು ಪ್ರತಿಪಾದಿಸುತ್ತವೆ. ಇವುಗಳ ನಡುವೆ ದ್ವಂದ್ವಾತ್ಮಕ ಸಂಬಂಧವಿರುತ್ತದೆ. ಸಾಮಾಜಿಕ ನಿಯಮಗಳು ಬೇರೆ ಬೇರೆಯಾಗುತ್ತಾ ಹೋದಂತೆ ಅಧಿಕಾರದ ರೂಪಗಳು ಮತ್ತು ಅದರ ಕೇಂದ್ರಗಳು ಬದಲಾಗುತ್ತವೆ ಮತ್ತು ಧಾರ್ಮಿಕ ಕ್ರಿಯೆಯಲ್ಲಿ ಭಾಗವಹಿಸುವುದು ಕೂಡಾ ಇದರ ಒಂದು ಭಾಗವೇ.

'ಯಶೋಧರ ಚರಿತೆ'ಯಲ್ಲಿ ಅಧಿಕಾರ ನಿರ್ವಹಣೆಗೆ ಸಂಬಂಧಿಸಿದಂತೆ ಈ ಕೆಳಗಿನ ಪ್ರಕ್ರಿಯೆಗಳು ಜರುಗುತ್ತವೆ.

೧. ಮಾರಿದೇವತೆಯ ಎದುರಿನಲ್ಲಿ ರಾಜನು ತಲೆಬಾಗುವುದು - ಹೆಣ್ಣುದೇವತೆಯ ಪ್ರಭುತ್ವವನ್ನು ಸೂಚಿಸುತ್ತದೆ. ಮಾರಿದೇವತೆಯು ಶಿಷ್ಟ ದೇವತೆಯಲ್ಲ ಮತ್ತು ಮಾರಿದೇವತೆಯ ಆರಾಧನೆಯು ಅವೈದಿಕ ಪರಂಪರೆಯ ಮಾತೃದೇವತೆಗೆ, ಅವಳಿಗೆ ಊರಿನ ರಕ್ಷಣೆಯ ಹೊಣೆಯಿದೆ. ಇದು ಲೈಂಗಿಕ ಪಾತ್ರ ನಿರ್ವಹಣೆಯ ಸಂಕೇತ.[೮]

೨. ತಾಯಿ ಚಂದ್ರಮತಿಯ ಮಾತನ್ನು ಯಶೋಧರನು (ತನ್ನ ಧಾರ್ಮಿಕ ನಂಬಿಕೆಗಳನ್ನು ಮೀರಿ) ಒಪ್ಪಿಕೊಳ್ಳುವುದು ಕೂಡಾ ಅಧಿಕಾರ ಪ್ರಕ್ರಿಯೆಯ ಒಂದು ಭಾಗ.[೯]

೩. ಅಮೃತಮತಿಯು ಗಂಡನ ಅಧಿಕಾರವನ್ನು ತನ್ನ ಕ್ರಿಯೆಯ ಮೂಲಕ ಪ್ರಶ್ನಿಸುತ್ತಾಳೆ. ಬದಗನ ಲೈಂಗಿಕ ಅಧಿಕಾರವನ್ನು ಅವಳು ಒಪ್ಪಿಕೊಳ್ಳುತ್ತಾಳೆ. ಪಾತಿವ್ರತ್ಯವನ್ನು ಅವಳು ಪ್ರಶ್ನಿಸಿದಂತಾಗಿದೆ.[೧೦]

ಈ ಮೂರು ಪ್ರಕ್ರಿಯೆಗಳು ಈ ಕಾವ್ಯದಲ್ಲಿ ಜರುಗುವ ಮೂಲಕ ಅದಕ್ಕೊಂದು ವಿನ್ಯಾಸವನ್ನು ಜನ್ನನು ಕೊಡುತ್ತಾನೆ.

ಒಟ್ಟಿನಲ್ಲಿ ಸ್ತ್ರೀವಾದಿ ದೃಷ್ಟಿಕೋನದಿಂದ ಜನ್ನನ ಯಶೋಧರ ಚರಿತೆಯನ್ನು ನೋಡಿದಾಗ ಆದ ಹೊಸ ವ್ಯಾಖ್ಯಾನಗಳೊಳಗೊಂಡಿರುತ್ತದೆ. ಮತ್ತೊಂದು ಅದು ಹೊಸ ರೀತಿಯ ಸಂವಾದವನ್ನು ಅದರ ಮುಕ್ತತೆಯ ಕಾರಣದಿಂದ ತೆರೆಯುತ್ತದೆ.

**ಟಿಪ್ಪಣಿಗಳು**

೧. 'ಪ್ರಣಯಕತೆಯೇ ಯಶೋಧರ ಚರಿತೆಯ ತಿರುಳು'

'ಪ್ರಣಯ ದುರಂತಕ್ಕೆ ವಿಧಿಯ ಮುಸಕವೇ ಕಾರಣ' ಎಂದು ತೀ.ನಂ.ಶ್ರೀ.ಯವರು ಹೇಳುತ್ತಾರೆ. 'ಅಮೃತಮತಿಯ ಪ್ರಣಯ ಒಂದು ವಿಪರೀತ ಮನೋವಿಕಾರ'ವೆಂದು ಕುವೆಂಪು ಹೇಳಿದರೆ; ಯಶೋಧರ ಚರಿತ್ರೆಯಲ್ಲಿ ಚಿತ್ರಿತವಾಗಿರುವ ಪಾತ್ರಗಳಲ್ಲಿ ಅಮೃತಮತಿಯ ಪಾತ್ರವು ಬಹುಮುಖ್ಯವಾದುದು. ಅಮೃತಮತಿಯು ಸ್ವಭಾವದಿಂದ ದುಷ್ಟಳೂ, ನೀಚಳೂ ಆಗಿರಬಹುದು ಎಂದು ಡಿ.ಎಲ್. ನರಸಿಂಹಾಚಾರ್ ಅವರು ತಿಳಿಸುತ್ತಾರೆ. ಗಿರಡ್ಡಿಯವರಿಗೆ

ಕಾವ್ಯಶಿಲ್ಪ ಪ್ರಧಾನವಾಗಿದೆ. 'ಕಾವ್ಯದ ಒಟ್ಟು ಶಿಲ್ಪದಲ್ಲಿ ಬೆಂತರದ ಕೂಗಿಗೂ, ಭವಾವಳಿಯ ಚಿತ್ರಣಕ್ಕೂ ಮಾರಿದೇವತೆಯ ಮನಃಪರಿವರ್ತನೆಗೂ ನಿರ್ದಿಷ್ಟವಾದ, ಅನಿವಾರ್ಯವಾದ ಉದ್ದೇಶವಿರುವಂತೆ ಅಮೃತಮತಿಯ ಪ್ರಣಯ ಪ್ರಸಂಗಕ್ಕೂ ಒಂದು ನಿರ್ದಿಷ್ಟವಾದ ಉದ್ದೇಶವಿದೆಯೆಂದು ಗಿರಡ್ಡಿಯವರ ಪ್ರತಿಪಾದನೆಯಾಗಿದೆ.

೨. ಪಂಪ ತನ್ನ 'ಆದಿಪುರಾಣ'ವನ್ನು 'ಪುರಾಣ'ವೆಂದು ಕರೆಯುತ್ತಾನೆ. ಪೊನ್ನನದು 'ಶಾಂತಿ ಪುರಾಣ' ರನ್ನನದು 'ಅಜಿತ ತೀರ್ಥಂಕರ ಪುರಾಣ ತಿಲಕಂ', ಎಲ್ಲರೂ 'ಪುರಾಣ'ವೆಂದು ಕರೆದಿರುವಾಗ ಜನ್ನ ಮಾತ್ರ 'ಯಶೋಧರ ಚರಿತೆ'ಯೆಂದು ಕರೆಯುತ್ತಾನೆ. ಇದು ಆಕಸ್ಮಿಕ ವಲ್ಲ. 'ಪುರಾಣ' ಮತ್ತು 'ಚರಿತ'ಕ್ಕೆ ಪ್ರಕಾರಾತ್ಮಕವಾಗಿಯೂ ವ್ಯತ್ಯಾಸವಿದೆಯೆಂದು ತೋರುತ್ತದೆ. ಜನ್ನನು ಮತ್ತೊಂದು ಕೃತಿಯನ್ನು ಅನಂಥನಾಥ ಪುರಾಣವೆಂದು ಕರೆದಿದ್ದಾನೆ. ಜನ್ನ ಯಶೋಧರ ಚರಿತೆಯನ್ನು ಇತಿಹಾಸವೆನ್ನುತ್ತಾನೆ.

೩. ಯಶೋಧರ ಮತ್ತು ಅಮೃತಮತಿಯರು ಮರಮರಳಿ ಪುನರ್ ಜನ್ಮವೆತ್ತುವಾಗಲೂ ಗಂಡು-ಹೆಣ್ಣಾಗಿ-ವಿವಿಧ ಪ್ರಾಣಿಗಳಾಗಿ ಹುಟ್ಟುತ್ತಾರೆ. ಕೊನೆಯ ಭವದಲ್ಲಿ ತಾಯಿಯು-ತಂಗಿಯಾಗಿ ಹುಟ್ಟುತ್ತಾಳೆ. ನಿಷೇಧಿತ ಸಂಬಂಧಗಳು ರೂಪುಗೊಳ್ಳುವುದು ಹೀಗೆ.

೪. ತಾಯಿ ಮತ್ತು ಹೆಂಡತಿ - ಇಬ್ಬರನ್ನು ಮಾಯೆಯೆಂದು ಹೇಳುವುದು ಮತ್ತು ವಚನಕಾರರು ಹೆಣ್ಣನ್ನು ಮಾಯೆಯೆಂದೇ ಕರೆಯುವುದಕ್ಕಿರುವ ಸಂಬಂಧಗಳನ್ನು ಗಮನಿಸಬಹುದು.

೫. ಮಾತೃಮೂಲೀಯ ಸಂಸ್ಕೃತಿಯಂದ ಪಿತೃಮೂಲೀಯ ಸಂಸ್ಕೃತಿಯ ಕಡೆಗೆ ಬಂದಾಗ ಹೆಣ್ಣಿನ ಲೈಂಗಿಕ ಪಾವಿತ್ರ್ಯಕ್ಕೆ ಹೆಚ್ಚು ಅರ್ಥ ಬಂತು. ಮಹಾಭಾರತದಲ್ಲಿ ಬರುವ ಶ್ವೇತಕೇತು ಉಪಾಖ್ಯಾನ ಮತ್ತು ಪುರೂರವ ಊರ್ವಶಿಯರ ಪ್ರಸಂಗಗಳು ಬೇರೆ ವಿವರಗಳನ್ನು ನೀಡುತ್ತವೆ.

೬. ಪುರಾಣ ಶ್ರವಣದಿಂದ ಪಾಪವು ಹರಿಯುತ್ತದೆ ಎಂಬುದು ಕೇವಲ ಜೈನ ಪರಿಕಲ್ಪನೆಯಲ್ಲ. ಅದು ವೈದಿಕರಲ್ಲಿಯೂ ಚಾಲ್ತಿಯಲ್ಲಿದ್ದ ಪರಿಕಲ್ಪನೆಯಾಗಿದೆ.

೭. ವೈದಿಕ ಪಠ್ಯಗಳ ಪ್ರಕಾರ ಹಗಲು ಮೈಥುನ ನಿಷಿದ್ಧ. ಕುಮಾರವ್ಯಾಸನಲ್ಲಿಯೂ ಹಗಲು ಮೈಥುನ ನಿಷಿದ್ಧವೆನ್ನುವ ಕಾರಣಕ್ಕೆ ಕಿಂದಮನುಂ ಜಿಂಕೆಯ ರೂಪದಲ್ಲಿ ಹೆಂಡತಿಯನ್ನು ಕೂಡುತ್ತಾನೆ.

೮. ಯಶೋಧರ ಚರಿತೆಯ ಮೊದಲ ಅಧ್ಯಾಯದಲ್ಲಿ ಬರುವ ವಿವರಗಳು ಹೀಗಿವೆ.

೯. ಯಶೋಧರ - ಚಂದ್ರಮತಿಯರ ಮಾತುಕತೆಯನ್ನು ಗಮನಿಸಬಹುದು.

೧೦. ಅರಸನನ್ನು, ತನ್ನ ಗಂಡನನ್ನು ಅಮೃತಮತಿ ಪಾತಕಿ ಎಂದು ಕರೆಯುತ್ತಾಳೆ.

# ಅಕ್ಕನ ಹುಡುಕಾಟದಲ್ಲಿ

ಮೀನಾಕ್ಷಿ ಬಾಳಿ

೧೨ನೇ ಶತಮಾನದ ವಚನ ಚಳುವಳಿ ಸಂದರ್ಭದಲ್ಲಿ ಚಾರಿತ್ರಿಕ ವ್ಯಕ್ತಿಯಾಗಿದ್ದ 'ಅಕ್ಕ' ತದನಂತರ ಸಾಂಸ್ಕೃತಿಕ ವಲಯಕ್ಕೆ ಮತ್ತೆ ಮತ್ತೆ ಚರ್ಚೆಗೊಳಗಾಗಬೇಕಾದ ಪ್ರಮೇಯವಾಗಿ ಕಾಣಿಸಿಕೊಳ್ಳುತ್ತಿರುವುದಕ್ಕೆ ತುಂಬಾ ಸಂಕೀರ್ಣವಾದ ಕಾರಣಗಳಿವೆ. ಅವುಗಳಲ್ಲಿ ಪ್ರಧಾನವಾದ ಕಾರಣವೆಂದರೇ ಅಕ್ಕ ಸ್ತ್ರೀತ್ವ ಮತ್ತು ಸ್ತ್ರೀವಾದದ ಪ್ರಮೇಯಕ್ಕೆ ಆಕೃತಿಯಾಗಿ ಒದಗಿ ಬರುತ್ತಿರುವುದೆ ಆಗಿದೆ. ಎಂತಲೇ ವಚನೋತ್ತರ ಕಾಲದ ಪ್ರತಿಯುಗವೂ ತನ್ನ ಸಮಕಾಲೀನ ಜೀವನ ವಿಧಾನ ಮತ್ತು ಕಾಣ್ಕೆಗಳನ್ನು ಅನುಸರಿಸಿ ಅಕ್ಕನನ್ನು ಅರ್ಥೈಸಿಕೊಳ್ಳಬೇಕೆಂಬ ಹಟಕ್ಕೆ ಒಳಗಾದಂತೆ ತೋರುತ್ತದೆ. ಈ ಕಾರಣವಾಗಿಯೇ ಇಂದು ನಮ್ಮ ಎದುರು ಹಲವು ಅಕ್ಕಗಳ ಪ್ರತಿಬಿಂಬಗಳು ಕಾಣಿಸತೊಡಗಿವೆ.

ವಚನಗಳ ಮೂಲಕ ತನ್ನನ್ನು ತಾನು ಸಾದರಪಡಿಸಿಕೊಳ್ಳುತ್ತಿರುವ ಚಾರಿತ್ರಿಕ ಅಕ್ಕ ಒಬ್ಬಳಾದರೆ, ನಂತರದ ಹರಿಹರ ಚಾಮರಸಾದಿಗಳ ಪುರಾಣ ಕಾವ್ಯ ಪರಂಪರೆಯ ಪೌರಾಣಿಕ ಅಕ್ಕ ಮಗದೊಬ್ಬಳು. ೧೫, ೧೬ನೇ ಶತಮಾನದ ಶೂನ್ಯಸಂಪಾದನೆಗಳ ತಾತ್ವಿಕ ಭಿತ್ತಿಯ ಆಧ್ಯಾತ್ಮ ಪ್ರತಿಮಾರೂಪ ಮತ್ತೊಬ್ಬಳು. ಇವುಗಳಿಂದ ತೀರ ಭಿನ್ನವಾದ ಅನೌಪಚಾರಿಕ ಮೌಖಿಕ ಪರಂಪರೆಯ ಭಾವುಕ ಭಕ್ತರ ಮನೋಮಂದಿರದಲ್ಲಿ ಸ್ಥಾಪ್ಯಳಾದ ಅಕ್ಕನ ಬಳಗಗಳ ವೀರ ವೈರಾಗ್ಯನಿಧಿ ಅಕ್ಕ ಇನ್ನೋರ್ವಳು. ಇವುಗಳಲ್ಲದೆ ಆಧುನಿಕ, ಆಧುನಿಕೋತ್ತರ ಕಾಲದ ಹೊಸ ಓದಿನ ಮಹಿಳಾ ಜಗತ್ತಿನ ಸಾಮಾಜಿಕ ಎಚ್ಚರದ ಹುಡುಕಾಟದಲ್ಲಿ ಅಕ್ಕ ಮಗದೋರ್ವಳು. ಹೀಗೆ ಅಕ್ಕಗಳ ಪ್ರತಿಮಾ ಬಿಂಬಗಳು ಆಯಾ ಯುಗಮಾನದ ಸಂದರ್ಭಕ್ಕೆ ಸ್ಫೃತಿಗೊಳ್ಳುತ್ತಲೇ; ಒಂದರ್ಥದಲ್ಲಿ ಪುನರ್ ಹುಟ್ಟು ಪಡೆದುಕೊಳ್ಳುತ್ತಲೇ ಇವೆ. ಅಕ್ಕನ ವ್ಯಕ್ತಿತ್ವದ ಸಾಧ್ಯತೆಯೇ ಈ ತೆರನ ಪುನರ್‌ಸೃಷ್ಟಿಯಲ್ಲಿ ಹರಳುಗಟ್ಟಿಕೊಳ್ಳುತ್ತದೆ. ಆ ಅಂದಿನ ಚಾರಿತ್ರಿಕ ಅಕ್ಕನಿಂದ ಹಿಡಿದು ಇಂದಿನ ಸ್ತ್ರೀವಾದಿ ಹಿನ್ನೆಲೆಯ ಅಕ್ಕನನ್ನು ಹಲವು ಅಧ್ಯಯನ ಶಿಸ್ತುಗಳ ಅಡಿಯಲ್ಲಿ ಅಧ್ಯಯನಿಸಬೇಕಾದ ತುರ್ತು ನಮ್ಮೆದುರು ಇದೆ. ಈ ಎಲ್ಲ ಅಕ್ಕ ಬಿಂಬಗಳ ಅಧ್ಯಯನವು ಒಟ್ಟು ಕನ್ನಡ ಮನಸ್ಸುಗಳ ಸಾಂಸ್ಕೃತಿಕ ಲೋಕಾನ್ವೇಷಣೆಯಾಗಬಹುದು. ಅಷ್ಟೇ ಅಲ್ಲ ಸ್ತ್ರೀಲೋಕದ ಅಧಿಕೃತ ಚರಿತ್ರೆಯ ಅನಾವರಣವೂ ಆಗಬಲ್ಲದು.

ಶೂನ್ಯಸಂಪಾದನೆಗಳ ಭಿನ್ನ ಭಿನ್ನ ಕೃತಿಗಳಲ್ಲಿ ಕಂಡರಿಸಲ್ಪಟ್ಟ ಅಕ್ಕನ ಪ್ರಸಂಗವನ್ನು ಸೂಕ್ಷ್ಮವಾಗಿ ಗಮನಿಸಿದರೂ ಸಾಕು ಈ ಮಾತಿಗೆ ಪುಷ್ಟಿ ದೊರೆತೀತು. ನಾಲ್ಕು ಸಂಪಾದನೆಗಳಲ್ಲಿ ಅಕ್ಕನ ಪ್ರಸಂಗ ಕುರಿತಂತೆ ಬರುವ ಅಲ್ಪ ಸ್ವಲ್ಪ ಬದಲಾವಣೆಗಳು, ವಿವರಣೆಗಳಲ್ಲಿನ ವ್ಯತ್ಯಾಸಗಳು, ವಚನಗಳ ಹೆಣಿಕೆ ವಿನ್ಯಾಸದಲ್ಲಿರುವ ವೈವಿಧ್ಯತೆ ಇವೆಲ್ಲವೂ ಕಾಲಕಾಲಕ್ಕೆ ಸ್ತ್ರೀಯರನ್ನು ಕಂಡ ಲೋಕದೃಷ್ಟಿಯ ಪರಿಚಯ ಮಾಡಿಕೊಡುತ್ತವೆ.

ಪ್ರಥಮ ಸಂಪಾದನಕಾರ ಶಿವಗಣ ಪ್ರಸಾದಿ ಮಹಾದೇವ ಅಕ್ಕನನ್ನು ಒಬ್ಬ ಅನುಭಾವಿಯಾಗಿ, ಶರಣೆ, ಅದ್ಭುತ ಸಾಧಕಿಯಾಗಿ ಚಿತ್ರಿಸುವಲ್ಲಿ ನಿರತನಾದರೆ, ತದನಂತರದ ಹಲಗೆಯಾರ್ಯನಿಗೆ ಅವಳ ಹೆಣ್ತನ ತುಸು ಹೆಚ್ಚೇ ಚಿಂತೆಗೇಡು ಮಾಡಿದಂತಿದೆ. ಅವಳು ಒಬ್ಬ ಹೆಣ್ಣಾಗಿ ಅದರಲ್ಲೂ ಪುರುಷನನ್ನು ಲೌಕಿಕ ಪತಿಯಾಗಿ ಸ್ವೀಕರಿಸಿದ ಹೆಣ್ಣಾಗಿ ಕಾಣಿಸುತ್ತಾಳೆ. ಕಾಣಿಸುತ್ತಾಳೆ ಎಂಬುದಕ್ಕಿಂತ ಕಾಡುತ್ತಾಳೆ ಎಂಬ ಪದವು ಹೆಚ್ಚು ಸೂಕ್ತ ಮತ್ತು ಸಮರ್ಥನೀಯವೇನೋ? ಆ ಕಾಲದ ಮೌಲ್ಯಗಳಲ್ಲಿ ಹೆಣ್ಣಿನ ರಾಷ್ಟ್ರೀಯ ಉತ್ಪಾದನೆ ಮತ್ತು ಅವಳ ಆಂತರ್ಯದಲ್ಲಿನ ಕೌಶಲ್ಯ ಬಳಕೆಯು ಮುಖ್ಯವಾಗಿಲ್ಲದೇ ಇರುವ ಕಾರಣ ಅವಳ ಸಾಧನೆಗಿಂತ ಹೆಣ್ತನ ಮುಖ್ಯವಾಗುತ್ತದೆ. ಆದುದರಿಂದಲೇ ಕಿನ್ನರಿ ಬೊಮ್ಮಯ್ಯ ಅಕ್ಕನನ್ನು ಶಿವಗಣ ಪ್ರಸಾದಿ ಮಹಾದೇವಯ್ಯನಲ್ಲಿಗಿಂತ ಹಲಗೆಯಾರ್ಯನಲ್ಲಿ ಅಷ್ಟು ಕಠಿಣವಾಗಿ ಮತ್ತು ದಾರುಣವಾಗಿ ಪರೀಕ್ಷಿಸುತ್ತಾನೆ. ಶಿವಗಣ ಪ್ರಸಾದಿಗಳಲ್ಲಿ ಬೊಮ್ಮಯ್ಯ ಅಕ್ಕನನ್ನು ಕಾಣುವ ವೇಳೆಗಾಗಲೇ ಅವಳು ಚೆನ್ನಮಲ್ಲಿಕಾರ್ಜುನನ ವಿಕಳಾವಸ್ಥೆಯಲ್ಲಿ ತನ್ನನ್ನು ಮರೆತ್ತಿದ್ದಳು. ಇಂಥ ಅಕ್ಕನನ್ನು ಕಿನ್ನರಿ ಬೊಮ್ಮಿ ತಂದೆಗಳು ಪರುಷಿಸಿ (ಸ್ಪರ್ಶಿಸಿ, ಪರೀಕ್ಷಿಸಿ) ನೋಡಲು ಅವಳು ಅಂತರಂಗದ ಜ್ಞಾನಾಗ್ನಿಯೊಳು ಕಾಮನಂ ಸುಟ್ಟು ಭಸ್ಮಮಂ ಮಾಡಿರುತ್ತಾಳೆ. ಆದರೆ ಈ ಪರೀಕ್ಷೆ ಹಲಗೆಯಾರ್ಯನಲ್ಲಿ ತೀರ ಅತಿರೇಕಕ್ಕೆ ಹೋದದ್ದು ಇದೆ. ಹಲಗೆಯಾರ್ಯನ ಬೊಮ್ಮಯ್ಯ ಅಕ್ಕನ "ಸರ್ವಾಂಗ ಸ್ಥಾನಮಾನಂಗಳಂ ಪರುಷಿಸಿ (ಪರೀಕ್ಷಿಸಿ) ನೋಡುತ್ತಾನೆ. ಅಲ್ಲಿ ದೇಹಾಭಿಮಾನಗಳಿಲ್ಲದಿರಲಾತಂ ಯೋನಿಯೊಳಂಗುಲಿ ಪ್ರವೇಶವಂ ಮಾಡಲು ಅಲ್ಲಿ ಚಿದ್ಭಸ್ಮ ಉದುರುವದೆಂದು" ಕಾಣಿಸಲಾಗಿದೆ.

ಹೀಗೆ ಅವಳ ಪ್ರತಿಯೊಂದು ಅಂಗವನ್ನು ಸ್ಪರ್ಶ ಪರೀಕ್ಷೆಗೆ ಒಳಪಡಿಸುವ ಮತ್ತು ಪರೀಕ್ಷೆಗೊಳಪಡಿಸಲು ಹಚ್ಚುವ ಮನೋಧರ್ಮ ಇದೆಯಲ್ಲ. ಇದು ಪರಂಪರಾಗತ ವ್ಯವಸ್ಥೆಯ ಪ್ರತಿನಿಧಿತ್ವ ಸೂಚಿಸುತ್ತದೆ. ಹೆಣ್ಣನ್ನ ಮಾಂಸದ ಮುದ್ದೆಯಂತೆ ಭಾವಿಸಿದ ಪುರುಷ ಅವಳು ಭಾವನೆಗಳಿಲ್ಲದ ವಸ್ತು, ಒಡವೆ ಎಂಬ ಪರಿಗಣನೆಯ ಚೌಕಟ್ಟಿಗೆ ತುರುಕಿದ್ದೇ ಇದಕ್ಕೆ ಕಾರಣವಾಗಿದೆ. ಬಹುಶಃ ಶೂನ್ಯಸಂಪಾದನೆಗಳ ಕಾಲಕ್ಕೆ ಇಂತಹ ಪರೀಕ್ಷಾ ವಿಧಾನಗಳು ಸ್ವೀಕೃತವಾಗಿದ್ದವೇನೊ? ಅಥವಾ ಆ ಮೂಲಕ ಅಕ್ಕನನ್ನು ಬಿಚ್ಚಿಡುವ ಆಕಾಂಕ್ಷೆಯ ಒತ್ತಡವೂ ಇಲ್ಲಿ ಕೆಲಸ ಮಾಡಿರಬಹುದು. ತದನಂತರದ ಸಿದ್ಧಲಿಂಗಯತಿ ಸಂಪಾದನೆಯಲ್ಲಿ ಈ ಪ್ರಸಂಗ ತನ್ನ ರೂಕ್ಷತೆಯನ್ನು ಹಿಂದೆ ಸರಿಸಿ ಇನ್ನೊಂದು ಹೊಸ ಹಾದಿ ಹುಡುಕಿಕೊಳ್ಳುತ್ತದೆ. ಇಲ್ಲಿ ಕಿನ್ನರಿ ಬೊಮ್ಮಯ್ಯ ಅಕ್ಕನನ್ನು ಬಂದು ಕಂಡದ್ದು ಅಲ್ಲಮ

ಕಳುಹಿಸಿದ್ದರಿಂದ. ಅಲ್ಲಮನಿಗಾದರೋ ಮಹಾದೇವಿ ಕಾಮಸಂಹಾರಿ ಎಂದು ಪ್ರತ್ಯಕ್ಷವಾಗಿ ತೋರಿಸಬೇಕಾದ ಜರೂರಿ ಕಾಣಿಸಿಕೊಂಡಿದೆ. ಆದ್ದರಿಂದ ಇಲ್ಲಿಯ ಕಿನ್ನರಯ್ಯ ತುಂಬ ಭಕ್ತಿ ಭಾವದಿಂದ ಅಕ್ಕನನ್ನು ಪರೀಕ್ಷಿಸಿ ನೋಡಲು ಅಕ್ಕ ಅಂತರಂಗದ ಜ್ಞಾನಾಗ್ನಿಯೊಳು ಕಾಮನಂ ಸುಟ್ಟು ಭಸ್ಮ ಮಾಡಿರುತ್ತಾಳೆ. ಮುಂದಿನ ಶೂನ್ಯಸಂಪಾದನಕಾರ ಸಿದ್ಧವೀರಣ್ಣೊಡೆಯರು ಈ ಪ್ರಸಂಗದಲ್ಲಿ ಎರಡು ವಚನಗಳು ಹೆಚ್ಚಾಗಿ ಸೇರಿಸಿ ಸಿದ್ಧಲಿಂಗಯತಿಯನ್ನು ಅನುಸರಿಸಿಕೊಂಡು ಹೋಗುತ್ತಾರೆ. ಈ ರೀತಿಯ ವ್ಯತ್ಯಾಸಗಳು ತಮ್ಮಷ್ಟಕ್ಕೆ ಸ್ತ್ರೀತ್ವ ಮತ್ತು ಸ್ತ್ರೀಯರನ್ನು ಕಾಣುವ ಧೋರಣೆಯಲ್ಲಿರುವ ದ್ವಂದ್ವಗಳನ್ನು ಎತ್ತಿ ತೋರಿಸುತ್ತವೆ. ಹೆಚ್ಚು ಕಡಿಮೆ ಅಕ್ಕನನ್ನು ವೈಭವೀಕರಿಸುವ ಮೂಲಕ ಆಕೆಯ ವ್ಯಕ್ತಿತ್ವವನ್ನು ಎತ್ತಿ ಹಿಡಿಯುವ ಆಶಯವೇ ಪ್ರಮುಖವಾಗಿದ್ದರೂ ಅಲ್ಲಿರುವ ವಿವರಗಳಲ್ಲಿನ ವ್ಯತ್ಯಾಸಗಳು ಸಮುದಾಯ ಮನೋಧರ್ಮದ ವೈರುಧ್ಯ ಮತ್ತು ಸ್ಥಾಪಿತ ಮೌಲ್ಯಗಳ ತಾಕಲಾಟವನ್ನು ಕಾಣಿಸುತ್ತವೆ.

ಒಂದು ಹೆಣ್ಣು ಪುರುಷನ ಸಂಪರ್ಕವಿಲ್ಲದೆ ಬಾಳಬಹುದೇ? ಎಂಬುದು ಸಾಮಾಜಿಕವಾಗಿ ಪ್ರಶ್ನೆಗೊಳಗಾಗುವುದು ಮುಖ್ಯವಲ್ಲ. ಸಮಾಜದ ಕಟ್ಟುಕಟ್ಟಳೆ ವಿಧಿ ನಿಯಮಗಳಿಗಿಂತ ಬದುಕು ಭಿನ್ನವೇ ಆಗಿರುತ್ತದೆ. ಮೇಲುನೋಟಕ್ಕೆ ಸಮಾಜದ ವಿಧಿನಿಯಮಗಳಿಗನುಗುಣವಾಗಿ ನಡೆದುಕೊಳ್ಳುವ ಮನುಷ್ಯ ಮನೋಭಾವಗಳು ಒಳಗಡೆಯಲ್ಲೋ ಅವನ್ನು ಸಕಾರಾತ್ಮಕವಾಗಿಯೋ, ಇಲ್ಲವೇ ನಕಾರಾತ್ಮಕವಾಗಿಯೋ ಮೀರುವ ತಹತಹವನ್ನು ಅನುಭವಿಸುತ್ತಿರುತ್ತವೆ. ಆದ್ದರಿಂದ ಇಲ್ಲಿ ಬೊಮ್ಮಯ್ಯ ಹೆಣ್ಣೊಬ್ಬಳು ಸಾಮಾಜಿಕವಲ್ಲದ ವಲಯದಲ್ಲಿ ಮಾನಸಿಕವಾಗಿ, ದೈಹಿಕವಾಗಿ, ಭಾವನಾತ್ಮಕವಾಗಿ ಪುರುಷನಿಲ್ಲದೆ ಬಾಳಬಲ್ಲಳೇ ಎಂಬ ಪ್ರಶ್ನೆಗೆ ಉತ್ತರ ಹುಡುಕುವ ಪ್ರಯತ್ನಕ್ಕಿಳಿಯುತ್ತಾನೆ. ಈ ಪ್ರಶ್ನೆಯ ಮೂಲಕ ಅವನಲ್ಲಿ ಹುಟ್ಟುವ ದುಗುಡವು ಅವನನ್ನು ಸೃಷ್ಟಿ ಸಹಜವಾದ ನಿಸರ್ಗದತ್ತ ಅಪ್ಪಟ ಬದುಕನ್ನು ವಿಮರ್ಶಿಸುವ ಮನಃಶಾಸ್ತ್ರಜ್ಞನಾಗಿ ಕಾಣಿಸುತ್ತದೆ. ಬೊಮ್ಮಯ್ಯ ಅಂತಹ ಪರೀಕ್ಷಾ ವಿಧಾನಗಳ ಮೊರೆ ಹೊಕ್ಕದ್ದು ಪುರುಷ ಪ್ರಧಾನ ವ್ಯವಸ್ಥೆಯ ಸ್ವಾರ್ಥ ಕೇಂದ್ರಿತ ಧೋರಣೆ ಎಂದೆಲ್ಲ ಹೇಳಿದರೆ ಸಮಸ್ಯೆಯನ್ನು ಅಷ್ಟರಮಟ್ಟಿಗೆ ಸರಳೀಕರಿಸಿದಂತಾದೀತು. ಇಲ್ಲಿ ಸಂಪಾದನಕಾರರ ವೈವಿಧ್ಯಮಯ ಮನಃಸ್ಥಿತಿ ಪುರುಷ ಕೇಂದ್ರಿತ ನೆಲೆಯಿಂದ ರೂಪಿತವಾದದ್ದು ಎಂಬುದು ಎಷ್ಟು ಮುಖ್ಯವೋ ಮನುಷ್ಯ ಸ್ವಭಾವದ ಮೂಲರೂಪದ್ದು ಎಂಬುದು ಕೂಡಾ ಅಷ್ಟೇ ಮುಖ್ಯವಾಗುತ್ತದೆ.

ಬೊಮ್ಮಯ್ಯನ ಪ್ರಶ್ನೆಗಳನ್ನು, ಪ್ರಶ್ನಿಸುವ ವಿಧಾನಗಳನ್ನು ಮಾನವೀಯ ಸಂವೇದನೆಗಳ ತಾಕಲಾಟದ ಚೌಕಟ್ಟಿನಲ್ಲಿ ಗ್ರಹಿಸುವಾಗ ಅಕ್ಕನನ್ನು ಆತ ಇಡೀ ಸ್ತ್ರೀ ಸಮೂಹದ ಪ್ರತಿನಿಧಿಯಾಗಿ ಗ್ರಹಿಸುತ್ತಾನೆ ಹೊರತು ಅಪವಾದವೆಂದಾಗಿ ಅಲ್ಲ. ಅಂತಲೇ ಅವಳನ್ನು ಆತ ಸಾಮಾನ್ಯ ಸ್ತ್ರೀಯೊಬ್ಬಳು ಇಷ್ಟೆಲ್ಲ ನೈಸರ್ಗಿಕ ಕಾಮನೆಗಳ ನಡುವೆಯೂ ಅವುಗಳನ್ನು ಮೀರಿ ನಿಂತಹಳಲ್ಲ. ಅದು ಹೇಗೆ ಸಾಧ್ಯವಾಯಿತು ಎಂಬ ಗುಮಾನಿ ಕಾಡಿದಂತಿದೆ. ನಾಗರಿಕ ಸಮಾಜಕ್ಕೆ ತೀರ ಅಸಹ್ಯ ಮತ್ತು ಅಶ್ಲೀಲವೆನಿಸಬಹುದಾದ ಯೋನಿ ಪ್ರಸಂಗದ ಬಗ್ಗೆ

ಹಲಗೆಯಾರ್ಯನಿಗೆ ಪರಿಕಲ್ಪನೆ ಇರಲಿಲ್ಲವೆ? ಎಂದೆನಿಸುವುದು ಸಹಜ. ಆದರೆ ತೀರ ತಾತ್ವಿಕ ಮತ್ತು ನಿಸರ್ಗ ಬದುಕಿನ ರೂಕ್ಷತೆ ಶ್ಲೀಲ ಅಶ್ಲೀಲಗಳ ನಡುವಿನ ಗೆರೆಯನ್ನು ಅಳಿಸಿ ಹಾಕುತ್ತದೆ. ಅಂತಹ ನಿಲುವು ಮನುಷ್ಯ ಮತ್ತು ಅವರ ಅದಮ್ಯ ಭಾವನಾ ಪ್ರಪಂಚ, ಸ್ವಭಾವ ಸಹಜ ಮೂಲ ಪ್ರವೃತ್ತಿ ಇವುಗಳನ್ನು ಮಾತ್ರ ಗಮನದಲ್ಲಿಟ್ಟುಕೊಂಡು ತಾತ್ವಿಕ ಚರ್ಚೆಗೆ ಹೊರಡುತ್ತದೆ.

ಸಂಪಾದನಕಾರರಿಗೆ ಮಹಾದೇವಿಯಕ್ಕ ನಿಜವಾದ ಅರ್ಥದಲ್ಲಿ ಭಾವನೆಗಳನ್ನು ಮೀರಿ ನಿಂತಳಲ್ಲ ಅದು ಸಾಧ್ಯವೆ? ನಿಸರ್ಗ ಸಹಜ ಬದುಕನ್ನು ಅದಿರುವ ಸ್ಥಿತಿಯಲ್ಲಿ ಮುಟ್ಟಿಯೂ, ಮುಟ್ಟದಂತೆ ಮೀರಿ ಬೆಳೆಯಬಹುದೆ? ಹಾಗಾದರೆ ನಿಸರ್ಗದತ್ತ ಇಂದ್ರಿಯಾನುಭವಗಳ ಮೂಲಕ ಬದುಕುವುದು ಹೆಚ್ಚು ಶ್ರೇಷ್ಠವೋ? ನಿಸರ್ಗಾತೀತ ಇಂದ್ರಿಯಾತೀತವಾಗಿ ಬದುಕುವುದು ಹೆಚ್ಚು ಶ್ರೇಷ್ಠವೊ? ಎಂಬ ಪ್ರಶ್ನೆಗಳು ಎದುರಾಗಿರಲಿಕ್ಕೂ ಸಾಕು. ಇಂಥ ಮೂಲಭೂತ ಸಮಸ್ಯೆಗಳು ಎದುರಾದಾಗಲೆಲ್ಲ ವಚನ ಸಿದ್ಧಾಂತದಂಥ ಜೀವಪರ ದರ್ಶನ ಗಳು ಹೊರತುಪಡಿಸಿ ಭಾರತೀಯ ದರ್ಶನದ ಎಲ್ಲ 'ತಾತ್ವಿಕ ಶಾಖೆಗಳು ಇಂದ್ರಿಯಾತೀತವಾಗಿ ಬದುಕುವುದೇ ಹೆಚ್ಚು ಶ್ರೇಷ್ಠವೆಂಬ ಸುಲಭ ಸಾಧ್ಯವಲ್ಲದ ಜೀವನ ವಿಧಾನವೊಂದರತ್ತ ವಾಲುವ ಹುಷಾರಿತನ ತೋರಿಸಿ ಬಿಡುತ್ತವೆ.

ವಚನ ಚಳುವಳಿಯ ಬಂಡಾಯದ ಪ್ರಖರತೆಯನ್ನು ಮಸುಕಾಗಿಸಿದ ಹಂತದಲ್ಲಿ ಶೂನ್ಯ ಸಂಪಾದನಕಾರರು, ಪುರಾಣಕಾರರಿಗೆ ಅಕ್ಕನ ಪಾವಿತ್ರ್ಯತೆಯನ್ನು ಸಾಬೀತು ಪಡಿಸುವ ಜರೂರಿ ಕಂಡು ಬಂದಂತಿದೆ. ಇದನ್ನು ಮನಗಂಡೇ ಹಲಗೆಯಾರ್ಯ ಶಿವಗಣ ಪ್ರಸಾದಿಯ ಸಂಪಾದನೆ ಯಲ್ಲಿ ಇಲ್ಲದ ಪ್ರಸಂಗವನ್ನು ಸೃಷ್ಟಿಸಿಕೊಳ್ಳುತ್ತಾನೆ. ಈ ಘಟನೆಯ ಹೆಚ್ಚು ಪ್ರಖರತೆಗೆ ಅಲ್ಲಮಪ್ರಭುವಿನ ಪ್ರಶ್ನೆರೂಪದ ವಚನಗಳ ಹೆಣಿಕೆ ಮತ್ತು ಆಯ್ಕೆಯಲ್ಲಿ ಅವನ ಧೋರಣೆ ಯನ್ನು ಗುರುತಿಸಬಹುದು. ಈ ಸಂದರ್ಭದಲ್ಲಿ ಕಿನ್ನರಯ್ಯನಿಗಿಂತ ಒಂದು ಹೆಜ್ಜೆ ಮುಂದಾಗಿ ಮಾತಿನ ರೂಪದಲ್ಲಿ ಅಲ್ಲಮ ಅಕ್ಕನನ್ನು ಇರಿಯುತ್ತಾನೆ. ಪ್ರತಿಯೊಂದು ಅಂಗಕ್ಕೂ ಅಲ್ಲಮನ ದೃಷ್ಟಿ ಮಾತುಗಳ ಚಾಟಿಯೇಟು ಅವನು ಎಂತಹ ನಿರ್ದಯಿ ಎಂಬಂತೆ ಭ್ರಮಿಸುವ ಸಾಧ್ಯತೆಗಳಿವೆ. ಆದರೆ ಕೇಳುವವನ ಮನಸ್ಸಿನಾಳದ ಮಿಡಿತ ಒರತೆಯೇ ಅವನು ನಿರ್ದಯಿಯೂ ಅಲ್ಲ. ಪುರಾಣಕಾರರಂತೆ ಅವಳ ಪಾವಿತ್ರತೆಯನ್ನು ಜಗಜ್ಜಾಹೀರು ಮಾಡುವ ಉದ್ದೇಶವೂ ಅವನಿಗೆ ಇರಲಿಕ್ಕಿಲ್ಲ ಎನಿಸುತ್ತದೆ. ಅಕ್ಕನನ್ನು ಅರ್ಥೈಸಿಕೊಳ್ಳಬೇಕೆಂಬ ಪ್ರಭುವಿನ ಹಟವಿದೆಯಲ್ಲ. ಅದು ಜೀವಪರ ಮತ್ತು ಸಂವಾದದ ಮೂಲಕ ಸ್ಪಷ್ಟತೆಗೆ ಸಮೀಪವಾಗಬಲ್ಲ ಜೀವನ ನಿಲುವುಗಳ ವ್ಯಾಖ್ಯಾನವೆನಿಸುತ್ತದೆ. ಅದೇ ಕಾಲಕ್ಕೆ ಪ್ರಭುವಿಗೆ ಅಕ್ಕನನ್ನು ತನ್ನ ಸ್ಥಿತಿಗೆ ಹೋಲಿಸಿಕೊಂಡು ನೋಡಿಕೊಳ್ಳುವಂತೆ ಪ್ರೇರೇಪಿಸಿದಂತೆ ಕಾಣುತ್ತದೆ. ಏಕೆಂದರೆ ಪ್ರಭು ಕೂಡಾ ಕಾಮಲತೆಯನ್ನು ಕಳೆದುಕೊಂಡು ಬಂದವನಲ್ಲವೆ?

ಅಕ್ಕ ಕೌಶಿಕನನ್ನು ತ್ಯಜಿಸಿ ಬಂದಿರಬಹುದಾದ ಕಾರಣ ಏನಿರಬಹುದು ಎಂಬುದಕ್ಕೆ ಉತ್ತರ ಅಷ್ಟು ಸರಳ ಮತ್ತು ಸುಲಭವಾಗಿಲ್ಲ. ಯಶೋಧರನನ್ನು ತಿರಸ್ಕರಿಸಿದ ಅಮೃತಮತಿಯ ಸಂದರ್ಭಕ್ಕೆ ಹೊಳೆಯುವ ಸರಳ ಉತ್ತರ ಅಕ್ಕನ ಸಂದರ್ಭಕ್ಕೆ

ಹೊಳೆಯುವುದಿಲ್ಲ. ಲೋಕದ ಗಂಡಂದಿರನ್ನು ಇಷ್ಟಪಡದೇ ಇರುವುದಕ್ಕಾಗಿ ಚೆನ್ನಮಲ್ಲಿಕಾರ್ಜುನ ಪ್ರಿಯವಾದನೆ? ಅಥವಾ ಚೆನ್ನಮಲ್ಲಿಕಾರ್ಜುನ ಪ್ರಿಯವಾದುದಕ್ಕಾಗಿ ಲೋಕದ ಗಂಡಂದಿರು ತ್ಯಾಜ್ಯವಾದರೆ? ಇದರಲ್ಲಿ ಯಾವುದು ಮೊದಲು ಎಂಬ ಪ್ರಶ್ನೆ ಹಲವು ಸಾಧ್ಯತೆಗಳಿಗೆ ದಾರಿ ಮಾಡಿಕೊಡುತ್ತದೆ. ಈ ಪ್ರಶ್ನೆಯೇ ಪ್ರಭು ಆದಿಯಾಗಿ ಎಲ್ಲರಿಗೂ ಕಾಡಿದ್ದು ಮತ್ತು ಕಾಡುತ್ತಿರುವದು ಮುಂದೆಯೂ ಕಾಡಬಹುದಾದದ್ದು. ಅಕ್ಕನಿಗೆ ಲೋಕದ ಗಂಡನಲ್ಲಿ ಆಸಕ್ತಿ ಬೆಳೆಯಲಿಲ್ಲವಾದರೆ ಏಕೆ ಬೆಳೆಯಲಿಲ್ಲ. ಮಹಾರಾಜ ಸ್ಫುರದ್ರೂಪಿ ಎಲ್ಲಕ್ಕಿಂತ ಹೆಚ್ಚಾಗಿ ಅಪ್ಪಟ ಪ್ರೇಮಿಯಾಗಿದ್ದ ಅವನಲ್ಲಿ ಎಷ್ಟು ಮಾತ್ರಕ್ಕೂ ಪ್ರೀತಿ ಹುಟ್ಟದೇ ಇರುವುದು. ಅವಳ ಅಂದಿನ ಮಾನಸಿಕ ಸ್ಥಿತಿ ಅಂಥದೊಂದು ಸ್ಥಿತಿಗೆ ಕಾರಣವಾಗಿರಬಹುದಾದ ಚಾರಿತ್ರಿಕ, ಸಾಮಾಜಿಕ ಸಂದರ್ಭಗಳು ಅವಳ ಕೌಟುಂಬಿಕ ಪರಿಸರ, ಸಾಂಸ್ಕೃತಿಕ ಸಂಘರ್ಷ ಇತ್ಯಾದಿಗಳಿಗೆಲ್ಲ ಉತ್ತರ ಸ್ಪಷ್ಟವಾಗಬೇಕಾದರೆ ಅಕ್ಕನನ್ನು ಕೇವಲ ಮನುಷ್ಯಳನ್ನಾಗಿ ನೋಡುವ ನಮ್ಮ ಮನೋಭಾವ ಗಟ್ಟಿಯಾಗಬೇಕಾಗುತ್ತದೆ. ಆ ದಿಸೆಯಲ್ಲಿ ನಮ್ಮ ಆಲೋಚನೆ, ಅನ್ವೇಷಣೆಗಳು ಅಪ್ಪಟ ಜೀವನ ಪ್ರೀತಿಯನ್ನು ಹಿನ್ನೆಲೆಯಾಗಿಟ್ಟು ಕೊಂಡು ಹೊರಡಬೇಕಾಗುತ್ತದೆ.

ಅಕ್ಕ ಪುರುಷನಿಲ್ಲದೆ ಬಾಳಬೇಕೆಂಬುದು ಮೊದಮೊದಲೇ ತನ್ನನ್ನು ತಾನು ಸಿದ್ಧಮಾಡಿ ಕೊಂಡಿರಲಿಕ್ಕಿಲ್ಲ. ಯೌವ್ವನ ಸಹಜವಾದ ಬಯಕೆಗಳು ಅರಳುವ ಪೂರ್ವದಲ್ಲೇ ಅವುಗಳನ್ನು ನೇರ್ಪುಗೊಳಿಸಿ ಒಂದು ಅವಾಸ್ತವ ಬದುಕಿನ ರೀತಿಗೆ ಬದ್ಧ ಮಾಡಿಕೊಂಡಿರಲಿಕ್ಕಿಲ್ಲ. ಅಲ್ಲದೆ ಇಡೀ ಸ್ತ್ರೀಕುಲಕ್ಕೆ ಮಾದರಿಯಾಗಬೇಕೆಂಬ ಹುಚ್ಚು ಹುರುಪು ಅವಳಿಗಿದ್ದಿರಲಿಕ್ಕಿಲ್ಲ. (ಪುರಾಣ, ಸಂಪಾದನಾಕಾರರು ಅವಳನ್ನು ಚಿತ್ರಿಸುವಲ್ಲಿ ಮಾಡಿದ ದುರಂತವೇ ಇದು.) ಮಲ್ಲಿಕಾರ್ಜುನನ್ನು ಕುರಿತು ಅವಳ ವಚನಗಳಲ್ಲಿ ವ್ಯಕ್ತವಾಗುವ ಭಾವತೀವ್ರತೆ, ಭಾವೋತ್ಕಟತೆ, ನಲ್ಲನನ್ನು ಕುರಿತ ಸರಸ ಭಾವಗಳನ್ನು ನೋಡಿದರೆ ತನ್ನ ಬದುಕನ್ನು ಪ್ರಯೋಗಕ್ಕೆ ಗುರಿ ಮಾಡಿಕೊಳ್ಳಬೇಕೆಂಬ ಇರಾದೆ ಅವಳಿಗೆ ಖಂಡಿತ ಇರಲಿಲ್ಲ ಎಂಬುದು ವಿಧಿತವಾಗುತ್ತದೆ. ಜಗತ್ತಿನ ಎಲ್ಲ ಸಿದ್ಧಾಂತ ಮತ್ತು ಅನ್ವೇಷಣೆಗಳು ಕಾಮ ಮತ್ತು ಸಾವನ್ನು ಕುರಿತು ಒಂದಲ್ಲ ಒಂದು ಹಂತದಲ್ಲಿ ಮುಖಾಮುಖಿಯಾಗುತ್ತಿರುವುದರಿಂದ ಈ ಮಾತುಗಳು ಗಮನಾರ್ಹ ಎನಿಸಲು ಸಾಕು. ಅಕ್ಕ ಕೌಶಿಕನನ್ನು ತ್ಯಜಿಸುವಲ್ಲಿ ವಿವಾಹ ಸಂಸ್ಥೆ ರೂಪಿತ "ಗಂಡ, ನಿಸರ್ಗ ಬಯಕೆಯ ಗಂಡಸು" ಪ್ರಭುತ್ವ ರೂಪಿತ "ಮಹಾರಾಜ" ಹೀಗೆ ಮೂರು ನೆಲೆಯ ನಿರಾಕರಣೆಗಳಿವೆ. ಹೀಗೆ ಗಂಡ, ಗಂಡಸು ಮಹಾರಾಜ ಮೂವರನ್ನು ಏಕಕಾಲಕ್ಕೆ ನಿವಾರಿಸಿಕೊಳ್ಳುವ ಅಕ್ಕನ ಬದುಕೇ ಹಲವು ಆಶ್ಚರ್ಯ ಮತ್ತು ಅದ್ಭುತಗಳ ಮೊತ್ತವಾಗಿ ಮುಂದಿನವರಿಗೆ ಕಂಡು ಬಂದಿದೆ. ಈ ಹಿನ್ನೆಲೆಯಲ್ಲಿ ಅವಳನ್ನು ನಮಗೆ ಗೊತ್ತಿರುವ ಅಥವಾ ನಮ್ಮ ಅನುಭವಕ್ಕೆ ಬಂದಿರುವ ಒಂದು ಸ್ಥಿತಿಯಿಂದಲೇ ಅರ್ಥಮಾಡಿಕೊಳ್ಳಬೇಕೆಂಬ ಹಟ ಮುಖ್ಯವಾದಾಗ ಹಲಗೆಯಾರ್ಯ, ಚಾಮರಸ ಇಂಥವರ ಕಥಾನಕಗಳು ಸಿದ್ಧವಾಗುತ್ತವೆ. ಆದರೆ ಹಲಗೆಯಾರ್ಯನಂಥವರಿಗೆ ಅಕ್ಕನ ಅದ್ಭುತ ವ್ಯಕ್ತಿತ್ವ ಕಂಡು ಅವಾಕ್ಕಾಗಿ ಬಿಡುವ ಅವಸ್ಥೆ ಬಿಟ್ಟರೆ ಪ್ರಭುವಿನಂತೆ ಸ್ವಾನುಭಾವದ ನೆಲೆಯಲ್ಲಿ ಪ್ರಶ್ನಿಸುವ ಧೈರ್ಯವಾಗುವುದಿಲ್ಲ.

ಈ ವಾದವನ್ನು ಜನಜನಿತ ನೆಲೆಯಲ್ಲಿಯೂ ಇನ್ನೊಂದು ಬಗೆಯಾಗಿ ಹರಿಸಬಹುದೆಂದು ತೋರುತ್ತದೆ. ಪರುಷನಿಲ್ಲದೆ ಸ್ತ್ರೀಯು ನೈಸರ್ಗಿಕವಾಗಿ, ಮಾನಸಿಕವಾಗಿ ಭಾವನಾತ್ಮಕವಾಗಿ (ಸಾಮಾಜಿಕವಾಗಿ ಅಲ್ಲ) ಬಾಳಬಹುದೆ ಎಂಬ ಅಂಶ ದಿಗ್ಭ್ರಮೆ ಹುಟ್ಟಿಸುವಷ್ಟು ಸ್ತ್ರೀಯಿಲ್ಲದೆ ಪುರುಷ ಬದುಕಬಲ್ಲನೆ ಎಂಬ ಪ್ರಶ್ನೆ ಹುಟ್ಟಿಸುವುದಿಲ್ಲ. ಅಕ್ಕನಿಗೆ ಎದುರಾಗುವ ಸಮಸ್ಯೆಗಳು ಸಿದ್ಧರಾಮ, ಪ್ರಭು, ಮುಂತಾದವರಿಗೆ ಎದುರಾಗುವುದಿಲ್ಲ. ನಿಸರ್ಗಕ್ಕೆ ಲಿಂಗಭೇದದ ಪ್ರಶ್ನೆ ಇಲ್ಲ. ನಿಸರ್ಗದೊಳಗೆ ತಮ್ಮದೆ ಲೋಕವೊಂದನ್ನು ಕಟ್ಟಿಕೊಂಡಿರುವ ಮನುಷ್ಯರಿಗೆ ಲಿಂಗಭೇದಗಳು ಕಾಡುವ ಪರಿ ಇದೆಯಲ್ಲ ಇದು ಪ್ರಶ್ನಾರ್ಹವಾಗುತ್ತದೆ. ಇಲ್ಲಿ ಪ್ರಭು, ಸಿದ್ಧರಾಮನಂತಹವರನೇಕರು ಪ್ರಶ್ನಾತೀತರಾದ್ದದ್ದೇಕೆ? ಎಂಬುದಕ್ಕೆ ಉತ್ತರ ಹೀಗೆ ಕಂಡುಕೊಳ್ಳಬಹುದೇನೋ? ಕನಸು, ಭಾವನೆಗಳು ಒತ್ತಿ ಒತ್ತಿ ಹಿಡಿದು ಹರಳುಗಳನ್ನಾಗಿಸಿದ ಭಾರತೀಯ ಸಾಮಾಜಿಕ ಸಂದರ್ಭದಲ್ಲಿ ಹೆಣ್ಣು ವೈಯಕ್ತಿಕವಾಗಿ ಅಲ್ಲದೆ ಸಾಮಾಜಿಕವಾಗಿ ಒಪ್ಪಿತವಾಗಬೇಕಾದ ಅನಿವಾರ್ಯತೆ ಇರುವುದರಿಂದ ಅಕ್ಕನಂತಹವರು ಮತ್ತೆ ಮತ್ತೆ ಪ್ರಶ್ನೆಗಳ ಚೂಪು ಮೊನೆಗಳ ಮೇಲೆ ನಡೆಯುತ್ತಲೆ ಇರಬೇಕಾಗುತ್ತದೆ.

ಶಿವಗಣ ಪ್ರಸಾದಿ ಮಹಾದೇವಯ್ಯಗಳ ಶೂನ್ಯಸಂಪಾದನೆಯಲ್ಲಿ ಬರುವ ಪ್ರಭು ಕಾಮಲತೆಯರ ಪ್ರಸಂಗ ಅವನ ಒಟ್ಟು ವ್ಯಕ್ತಿತ್ವಕ್ಕೆ ಹೊಸದೊಂದು ಗಟ್ಟಿ ಆಯಾಮ ನೀಡುತ್ತದೆ. ಕಾಮಲತೆ ಪ್ರಸಂಗದ ನಿರ್ದಿಷ್ಟತೆಯನ್ನು ಮುಂದೆ ಬಂದ ಹಲಗೆಯಾರ್ಯ, ಚಾಮರಸ ಮುಂತಾದವರಿಗೆ ಒಪ್ಪಿತವಾಗುವುದಿಲ್ಲ ಎಂಬುದಕ್ಕೆ ಬೇರೆ ಕಾರಣಗಳಿವೆ. ಪುರಾಣ, ಕಾವ್ಯಕಾರರ ಮತೀಯ ವ್ಯಾಮೋಹವನ್ನು ಅರ್ಥಮಾಡಿಕೊಳ್ಳದಷ್ಟು ಮುಗ್ಧರಾಗಿ ಇಂದು ಜನತೆ ಉಳಿದಿಲ್ಲ ಎಂಬುದು ಆರೋಗ್ಯಪೂರ್ಣವೆ. ಪ್ರಭು ಕಾಮಲತೆಯರ ಪ್ರಸಂಗ, ಅಕ್ಕ ಕೌಶಿಕರ ಪ್ರಸಂಗ ಎರಡೂ ಭಿನ್ನ ಭಿನ್ನ ಕೋನಗಳಲ್ಲಿಯೆ ಗ್ರಹಿಕೆಗೆ ಬರುತ್ತವೆ. ಕಾಮಲತೆ ಪ್ರಭುವಿನಿಂದ ದೂರವಾದ ಪ್ರಸಂಗಕ್ಕೂ, ಕೌಶಿಕನನ್ನು ಅಕ್ಕ ಧಿಕ್ಕರಿಸುವುದಕ್ಕೂ ಪರಸ್ಪರ ತೀರ ವ್ಯತಿರಿಕ್ತವಾದ ಭಾವನೆಗಳ ಮುಖಾಮುಖಿಯಿದೆ. ಎಲ್ಲೊ ಒಂದು ಕಡೆ ಪ್ರಭು ನಿಸರ್ಗ ಸಹಜವೆನಿಸುವಂತೆ ಅಕ್ಕ ಕಾಣುವುದಿಲ್ಲ ಎಂಬ ಗುಮಾನಿ ಪ್ರಜ್ಞಾವಂತರಿಗೆ ಕಾಡುವದುಂಟು. ಆದರೆ ಬದುಕಿನಲ್ಲಿ ಬರುವ ಎಲ್ಲ ನಿರ್ಲಿಪ್ತತೆಗಳು ಜಿಗುಪ್ಸೆ ಭ್ರಮನಿರಸನದಿಂದಲೆ ಬರಬೇಕೆ? ಯಾವೊಂದು ಧನಾತ್ಮಕ ಅಂಶದಿಂದಲೂ ಅದು ಬರುವ ಸಾಧ್ಯತೆ ಇಲ್ಲವೆ? ಬಾಹ್ಯ ಕಾರಣಗಳ ಗೊಡವೆ ಇಲ್ಲದೆ ತನ್ನೊಳಗೆ ಏಳುವ ವಿಚಿತ್ರ ತಾಕಲಾಟದಲ್ಲಿ ಅದು ಎದುರಾಗುವ ಮನಸ್ಸಿನ ನಿಗೂಢತೆಯನ್ನು ವ್ಯಾಖ್ಯಾನಿಸುವುದು ಕಷ್ಟಸಾಧ್ಯವಲ್ಲವೆ?

ಅಕ್ಕನ ವಚನಗಳಲ್ಲಿ ಕಾಣುವ ಸಾಂಸಾರಿಕ ಬದುಕಿನ ಅದಮ್ಯ ಪ್ರೀತಿ, ತನ್ನ ಅಮೂರ್ತ ಪ್ರಿಯಕರನಿಗಾಗಿ ಹಂಬಲಿಸುವ ಉತ್ಕಟತೆ, "ಎರೆಯಂತೆ ಕರಕರಗಿ, ಮಳಲಂತೆ ಜರಿಜರಿದು", ಪುರುಷ ಬಾರಾ ಪುರುಷ ರತ್ನವೆ ಬಾರಾ, ಅಪ್ಪಿದಡೆ ಅಸ್ತಿಗಳು ನುಗ್ಗುನುಸಿಯಾಗಬೇಕು" ಎನ್ನುವ ವಚನ ಮಾತುಗಳು ಮತ್ತು ಅವುಗಳ ಮೂಲಕ ಹೊರಡುವ ನಲ್ಲನ ಬಯಕೆ, ಅದು ಎಲ್ಲಿಯೂ ವಿಕ್ಷಿಪ್ತತೆಯಾಗದೆ ಉಳಿದ ಪಕ್ವತೆ ಮುಖ್ಯವಾಗುತ್ತವೆ. ಇವುಗಳ

ಭಾವನಾತ್ಮಕ ಆಧಾರದಲ್ಲಿ ಬದುಕಿನ ಯಾವ ಘಟ್ಟದಲ್ಲಿಯೂ ಅಭಾವ ಕಾಣದ ಮನಸ್ಸು ಅಧ್ಯಯನ ಯೋಗ್ಯವಾಗುತ್ತದೆ. ಲೋಕವಿದೂರನಾದ ಪತಿ ಬಯಕೆ ಮತ್ತು ನೆಲಕ್ಕೆ ಅಂಟಿಕೊಂಡ ಸಾಂಸಾರಿಕ ಒಲವು. ಸಮಾಜ ನಿರ್ಮಿತ ಚೌಕಟ್ಟಿನೊಳಗಡೆಯೂ ಅಪ್ಯಾಯಮಾನವೆನಿಸುವ ಮನುಷ್ಯ ಸಂಬಂಧಗಳ ಹುಡುಕಾಟ ಈ ವೈರುಧ್ಯಗಳನ್ನು ನೋಡಿದಾಗ ಅಕ್ಕನನ್ನು ಅರ್ಥಮಾಡಿಕೊಳ್ಳಲು ಹಲವು ಆಯಾಮಗಳ ಅವಶ್ಯಕತೆಯಿರುವುದನ್ನು ಕಾಣಬಹುದು. ಪ್ರಶ್ನೆಗೊಳಗಾಗಬಹುದಾದ ದಾರಿಯಲ್ಲಿ ನಡೆಯುತ್ತಿರುವ ತಿಳುವಳಿಕೆಯಿದ್ದು ಅದರಿಂದ ವಿಚಲಿತಳಾಗದೆ ನಡೆಯುವ ಅಕ್ಕನ ಸ್ಥೈರ್ಯವೇ ಅವಳನ್ನು ಹೇಗಾದರೂ ಮಾಡಿ ಅರ್ಥಮಾಡಿಕೊಳ್ಳಬೇಕೆಂಬ ಹಟ ಹುಟ್ಟಿಸುತ್ತದೆ. ಅದಕ್ಕಾಗಿಯೇ ತದನಂತರದ ಎಲ್ಲ ಕೃತಿಕಾರರಿಗೆ ಅವಳ ಬದುಕನ್ನು ಕುರಿತು ಏನೇ ಬರೆಯುವುದು ಒಂದು ಸವಾಲಾಗಿರುವಂತೆ ತೋರುತ್ತದೆ. ವೀರಶೈವ ಧಾರ್ಮಿಕ ಧಾರೆಯಲ್ಲಿ ಬರೆಯುವ ಕವಿಗಳಿಗೆ ಅಕ್ಕನನ್ನು ದೈವೀಕರಿಸಿ ಬಿಡುವಲ್ಲಿ ದೊಡ್ಡ ಬಿಡುಗಡೆ ಕಂಡಂತಾಗಿದೆಯಾದರೂ ಅಕ್ಕನನ್ನು ಅಪ್ಪಟ ಮನುಷ್ಯ ನೆಲೆಯಲ್ಲಿ ಕಂಡುಕೊಳ್ಳುವ ಜರೂರಿಯನ್ನು ಖಂಡಿತ ಅನುಭವಿಸಿರಲು ಸಾಕು. ವೈಜ್ಞಾನಿಕ ವೈಚಾರಿಕ ಯುಗದಲ್ಲಿರುವ ನಮಗೆ ಅಕ್ಕನನ್ನು ದೈವೀಕರಿಸುವ ಜರೂರಿ ಇಲ್ಲವಾದರೂ ನಮ್ಮ ಇಂದಿನ ವಾಸ್ತವದ ಸವಾಲುಗಳೊಂದಿಗೆ ಮುಖಾಮುಖಿಯಾಗಿಸಬೇಕಾದ ಅನಿವಾರ್ಯತೆ ಇದೆ. ಸ್ತ್ರೀವಾದದ ಪ್ರಖರ ನೆಲೆಯೇ ಮಾರಕವೆಂಬಂತೆ ಹಬ್ಬುತ್ತಿರುವ ಜಾಗತೀಕರಣದ ಈ ಹೊತ್ತಿನಲ್ಲಿ ಜಾಗತಿಕ ಮಾರುಕಟ್ಟೆಗೆ ವ್ಯಾಪಕ ಸರಕಾಗುತ್ತಿರುವ ಗ್ಲಾಮರಸ್ ಲೋಕ ಅಕ್ಕನ ಅಸ್ಮಿತತೆಯನ್ನು ಪುನಃ ಕಟ್ಟಿಕೊಳ್ಳಬೇಕು. ಪ್ರಾಯಶಃ ಅಕ್ಕನ ಬದುಕಿನ ಅನುಸಂಧಾನವೇ ಸ್ತ್ರೀಲೋಕದ ಇಂದಿನ ಬಿಕ್ಕಟ್ಟುಗಳಿಗೆ ಪರಿಹಾರೋಪಾಯವಾಗಬಹುದು.

# ಮಹಿಳೆಯರ ಬದುಕು : ಬದಲಾದ ದಿಕ್ಕು

ಬಿ.ಆರ್. ಕವಿತಾ ರೈ

## ೧. ಸ್ಥಿತ್ಯಂತರ ಸಾಂಸ್ಕೃತಿಕ ನೆಲೆ

ಇಂಡಿಯಾದ ವಸಾಹತೋತ್ತರ ಸಮಾಜವು ಊಳಿಗಮಾನ್ಯ ವ್ಯವಸ್ಥೆಯಿಂದ ಬಂಡವಾಳ ಶಾಹಿ ಸಮಾಜವಾಗಿ ಮಾರ್ಪಟ್ಟಿದೆ. ಊಳಿಗಮಾನ್ಯ ಸಮಾಜವು ಬಂಡವಾಳಶಾಹಿ ಸಮಾಜ ವಾಗಿ ಮಾರ್ಪಡುವ ಆರಂಭಿಕ ಹಂತದಲ್ಲಿ ಬಂಡವಾಳ ಸಂಚಯನ (ಕ್ರೋಢೀಕರಣ)ದಿಂದಾಗಿ ಸಣ್ಣ ಉತ್ಪಾದನೆಯು ನಿರ್ನಾಮಗೊಂಡಿದೆ. ಪರಿಣಾಮವಾಗಿ ಬಂಡವಾಳಶಾಹಿ ಖಾಸಗಿ ಆಸ್ತಿ ಅಸ್ತಿತ್ವಕ್ಕೆ ಬಂದು, ಉತ್ಪಾದನಾ ಸಾಧನಗಳನ್ನು ಕೇಂದ್ರೀಕರಿಸಲು ಮತ್ತು ದೊಡ್ಡ ಮಟ್ಟದಲ್ಲಿ ಉತ್ಪಾದನೆ ನಡೆಸಲು ಬಂಡವಾಳಶಾಹಿ ವ್ಯವಸ್ಥೆಗೆ ಸಾಧ್ಯವಾಗಿದೆ. ಇದರಿಂದಾಗಿ ಒಂದು ಹಂತದಲ್ಲಿ (ನೆಹರೂ ಆಡಳಿತಾವಧಿಯಲ್ಲಿ) ಉತ್ಪಾದನಾ ಶಕ್ತಿಗಳ ಬೆಳವಣಿಗೆಗೆ ಅನುಕೂಲಕರವಾದ ಪರಿಸ್ಥಿತಿ ಸೃಷ್ಟಿಯಾದದ್ದು 'ಸಾಂದರ್ಭಿಕ ವಾಸ್ತವ'ವಾಗಿದೆ. ಇದು ಉತ್ಪಾದಿಸುವ ಲಾಭ ಹಾಗೂ ಕೂಲಿ ಶ್ರಮದ ನಡುವೆ ದೊಡ್ಡ ಅಂತರವನ್ನು ನಿರ್ಮಿಸಿದೆ. ಹೀಗಾಗಿ ಬಂಡವಾಳವಾದವು ಕೂಲಿ ಶ್ರಮದ ಶೋಷಣೆಯನ್ನಾಧರಿಸಿದ ಒಂದು ಉತ್ಪಾದನಾ ವಿಧಾನ, ಒಂದು ಸಮಾಜ ವ್ಯವಸ್ಥೆಯಾಗಿದೆ. ಸ್ಥಿತ್ಯಂತರ ಸಾಂಸ್ಕೃತಿಕ ಸಂದರ್ಭ ಎನ್ನುವುದು ಇಂಡಿಯಾದ ಊಳಿಗಮಾನ್ಯ ಮತ್ತು ಬಂಡವಾಳಶಾಹಿ ವ್ಯವಸ್ಥೆಯ ಒಡಲೊಳಗೆ ಕಾಣಿಸಿ ಕೊಳ್ಳುತ್ತದೆ.

> "ತಮ್ಮ ದೇಶದ ಊಳಿಗಮಾನ್ಯತೆಯ ವಿರುದ್ಧ ಪ್ರಗತಿಪರ ಹೋರಾಟವನ್ನು ನಡೆಸಿದ್ದಂತಹ ಬ್ರಿಟಿಷ್ ವಸಾಹತುಶಾಹಿ ಬಂಡವಾಳಿಗರು ಭಾರತದಲ್ಲಿ ಮಾತ್ರ ಊಳಿಗಮಾನ್ಯ ಶಕ್ತಿಗಳನ್ನೇ ಆಧರಿಸಿ ನೆಲೆ ನಿಂತರು. ವಸಾಹತುಶಾಹಿ ಲೂಟಿಗೆ ಅಗ್ಗದ ದರದಲ್ಲಿ ಕಚ್ಚಾವಸ್ತುಗಳು ಮತ್ತು ಅಗ್ಗದ ಶ್ರಮವೂ ಅಗತ್ಯವಾಗಿದ್ದವು. ನಮ್ಮ ದೇಶದ ಊಳಿಗಮಾನ್ಯ ರಚನೆಯು ಇವೆರಡನ್ನೂ ವಸಾಹತುಶಾಹಿಗಳಿಗೆ ಒದಗಿಸಿತು." (ವಸಂತ ಬನ್ನಾಡಿ; ೧೯೯೫;೪೮)

ವಸಾಹತುಶಾಹಿ ವ್ಯವಸ್ಥೆ ಅದರ ಹಿತಾಸಕ್ತಿಗೆ ಅನುಗುಣವಾಗಿ ಒಂದು ಕಡೆ ಪುರುಷಾಧಿಪತ್ಯವನ್ನು ಒಳಗೊಂಡ ಊಳಿಗಮಾನ್ಯ ವ್ಯವಸ್ಥೆಯನ್ನು ಸದೃಢಗೊಳಿಸಿದೆ. ಮತ್ತೊಂದು ಕಡೆಯಿಂದ ಇಂಡಿಯಾದ ಗ್ರಾಮೀಣ ಪ್ರದೇಶಗಳಲ್ಲಿ ಊಳಿಗಮಾನ್ಯತೆ ಮತ್ತು ಬಂಡವಾಳಶಾಹಿ ಈ ಎರಡೂ ಬಗೆಯ ಸಮ್ಮಿಶ್ರ ವ್ಯವಸ್ಥೆಯನ್ನು ಹುಟ್ಟುಹಾಕಿದೆ. ಈ ಎರಡೂ ಬಗೆಯ ಶೋಷಣೆಯ ವ್ಯವಸ್ಥೆಯಲ್ಲಿ ಹೆಚ್ಚು ನಿರ್ಗತಿಕರಾದವರೆಂದರೆ ಸ್ತ್ರೀಯರು. ಅಗ್ಗದ ಶ್ರಮಶಕ್ತಿಯ ಮೂಲವಾಗಿ ಬಂಡವಾಳಶಾಹಿ ಕೈಗಾರಿಕೆಗಳಿಗೆ ಒಳಗಾಗಿ, ಊಳಿಗಮಾನ್ಯ ಜೀತದಾಳುಗಳಾಗಿ ಮಹಿಳೆಯರು ಆರ್ಥಿಕವಾಗಿಯೂ, ಸಾಂಸ್ಕೃತಿಕವಾಗಿಯೂ ಗುಲಾಮರಾದರು. ಇಂಡಿಯಾದ ಸ್ವಾತಂತ್ರ್ಯೋತ್ತರ ಸಾಂಸ್ಕೃತಿಕ ಸಂದರ್ಭವು ಊಳಿಗಮಾನ್ಯತೆ ಮತ್ತು ಪುರುಷಾಧಿಪತ್ಯದ ಬಂಡವಾಳಶಾಹಿ ಹಿತಾಸಕ್ತಿಗೆ ಅನುಗುಣವಾಗಿ ರೂಪಿತಗೊಂಡಿದೆ.

ಸ್ವಾತಂತ್ರ್ಯೋತ್ತರ ಸಾಂಸ್ಕೃತಿ ನೆಲೆಯನ್ನು ೧೯೫೦ ರ ಕಾಲಘಟ್ಟದ ನಂತರದಿಂದ ನಿರ್ದಿಷ್ಟಗೊಳಿಸಿಕೊಳ್ಳಬಹುದು. ಸ್ವತಂತ್ರ ಭಾರತದ ಪ್ರಜಾಪ್ರಭುತ್ವ-ಜಾತ್ಯತೀತ-ಗಣರಾಜ್ಯ ರಾಜಕೀಯ ವ್ಯವಸ್ಥೆಯು ಕಾನೂನಿನ ಚೌಕಟ್ಟಿನಲ್ಲಿ ದೇಶದ ಎಲ್ಲಾ ಪ್ರಜೆಗಳಿಗೂ ಸ್ವಾತಂತ್ರ್ಯ-ಸಮಾನತೆಯ ಹಕ್ಕನ್ನು ಕಲ್ಪಿಸಿದೆ. ಪರಿಣಾಮವಾಗಿ ಜನರ ಜೀವನ ವಿಧಾನಗಳಲ್ಲಿ ಮಹತ್ವದ ಮಾರ್ಪಾಡುಗಳು ಪ್ರಕಟಗೊಂಡಿವೆ. ಸ್ವಾತಂತ್ರ್ಯೋತ್ತರ ಸಾಂಸ್ಕೃತಿಕ ನೆಲೆಯು ಈ ಅರ್ಥದಲ್ಲಿ ಉದಾರವಾದಿ ಸಾಂಸ್ಕೃತಿಕ ನೆಲೆಯ ಭ್ರಮನಿರಸನಗಳಿಂದ ರೂಪಿತಗೊಂಡಿದೆ. ಎಂದರೆ, ಸುಧಾರಣಾ ಚಳವಳಿಗಳು, ಪ್ರಾರಂಭದ ಸಾಮಾಜಿಕ, ರಾಜಕೀಯ, ಧಾರ್ಮಿಕ, ಆರ್ಥಿಕ ತುರ್ತುಗಳನ್ನು ಮಾತ್ರ ಗಂಭೀರನೆಂದು ಪರಿಗಣಿಸಿ ಸಂದರ್ಭ ಸ್ಪಂದಿಗಳಾಗಿ ಮಾತ್ರ ಕಾಣಿಸಿಕೊಂಡವು. ಅವುಗಳಿಗೆ ದೀರ್ಘಕಾಲ ತಮ್ಮ ಪ್ರಣಾಳಿಕೆಗಳ ತಾತ್ತ್ವಿಕತೆಯ ಭಿತ್ತಿಗಳನ್ನು ಜೀವಂತವಾಗಿಟ್ಟುಕೊಳ್ಳುವುದು ಸಾಧ್ಯವಾಗಿರಲಿಲ್ಲ ಮತ್ತು ಅವು ಸಮಾಜದ ಮೇಲುವರ್ಗದ ಆಶೋತ್ತರಗಳಿಗೆ ಮಾತ್ರ ಬದ್ಧವಾಗಿದ್ದವು. ಉಳಿದ ಬಹುಸಂಖ್ಯಾತ ಜನವರ್ಗವಾಗಿರಲೇ ಇಲ್ಲ. ಅಲ್ಲದೆ ಸ್ವತಂತ್ರ ಇಂಡಿಯಾದ ನೆಹರು ಸರ್ಕಾರದ ರಾಜಕೀಯ ಆಡಳಿತವು ಉದಾರವಾದಿ ಸಾಂಸ್ಕೃತಿಕ ನೆಲೆಯ ಆದರ್ಶಗಳನ್ನು ಹುಸಿಗೊಳಿಸಿದವು. ಪರಿಣಾಮವಾಗಿ ಕನ್ನಡ ಸಂದರ್ಭದಲ್ಲಿ ಸ್ವಾತಂತ್ರ್ಯೋತ್ತರ ಸಾಂಸ್ಕೃತಿಕ ನೆಲೆಯು ನೆಹರೂ ವಾದಕ್ಕಿಂತ ಪ್ರತ್ಯೇಕವಾಗಿ, ಪೂರ್ವದ ಮಾನವತಾವಾದಕ್ಕಿಂತ ಭಿನ್ನವಾಗಿ ಗಾಂಧಿವಾದ, ಅಂಬೇಡ್ಕರ್‌ವಾದ, ಲೋಹಿಯಾವಾದ ಮತ್ತು ಮಾರ್ಕ್ಸ್‌ವಾದಗಳ ಪ್ರೇರಣೆ ಮತ್ತು ಪ್ರಭಾವಗಳಿಂದ ರೂಪಿತವಾಗಿದೆ. ಈ ಮನೋಭೂಮಿಕೆಯು ಮಹಿಳೆಯರ ಜೀವನ ವಿಧಾನಗಳನ್ನು ಗಮನಾರ್ಹ ರೀತಿಗಳಲ್ಲಿ ಮಾರ್ಪಾಡುಗೊಳಿಸಿದೆ.

ಸಮಾಜದ ಮೂಲಭೂತ ಸನ್ನಿವೇಶಗಳು, ಸದಾ ಪರಿವರ್ತನಶೀಲ, ಪರಿಸ್ಥಿತಿಗಳಲ್ಲಿನ ಬದಲಾವಣೆಗಳಿಂದ ಒಟ್ಟು ವ್ಯವಸ್ಥೆಯಲ್ಲಿಯೂ ಬದಲಾವಣೆಗಳು ಉಂಟಾಗುತ್ತವೆ. ಏಕೆಂದರೆ ಪರಿಸ್ಥಿತಿ ಮತ್ತು ವ್ಯವಸ್ಥೆಯ ನಿಲುವು ಅಥವಾ ಧೋರಣೆಗಳು ಒಂದನ್ನೊಂದು ಸದಾ ಅನುಸರಿಸುವಂತಹವಾಗಿರುತ್ತವೆ. ಸಿದ್ಧಾಂತಗಳು ಎಷ್ಟರಮಟ್ಟಿಗೆ ಸಾರ್ಥಕವಾಗಿವೆ

ಎಂಬುದು ಅವುಗಳು ಕಾರ್ಯರೂಪದಲ್ಲಿ ಅನುಷ್ಠಾನಗೊಂಡಾಗ ಮಾತ್ರವೇ ಅರ್ಥೈಸಲು ಸಾಧ್ಯವಾಗುತ್ತದೆ. ಇಂಡಿಯಾದಲ್ಲಿ ಅಧಿಕಾರವನ್ನು ವಹಿಸಿಕೊಂಡ ಕಾಂಗ್ರೆಸ್ ಸರ್ಕಾರ ಗಾಂಧಿವಾದವನ್ನು ತಾತ್ವಿಕವಾಗಿ ಅಂಗೀಕರಿಸುವ ಪ್ರಯತ್ನ ನಡೆಸಿತೇ ವಿನಾ ಆಚರಣೆಯ ನೆಲೆಯಲ್ಲಿ ವಿಫಲತೆಯನ್ನು ಕಂಡಿತು. ಸತ್ಯ ಮತ್ತು ಅಹಿಂಸೆ ಹಾಗೂ ನ್ಯಾಯದ ಬಗೆಗಿನ ಪರಂಪರಾಗತವಾದ ನಿಲುವು ಅಥವಾ ಧೋರಣೆಗಳನ್ನು ಮುಖ್ಯವಾದುವೆಂದು ಭಾವಿಸುವ ಮತ್ತು ಅವನ್ನು ಶಾಶ್ವತವಾಗಿ ಉಳಿಸಿಕೊಂಡು ಬರುವ ಕಾಂಗ್ರೆಸ್ಸಿನ ಸರಳ ಸಮೀಕರಣದ ಗಾಂಧಿವಾದದ ಪ್ರಕ್ರಿಯೆಯು ಆಂತರಿಕವಾಗಿ ಹೆಚ್ಚು ಶಿಥಿಲೀಕರಣಕ್ಕೆ ಒಳಗಾಯಿತು. ಸಿದ್ಧಾಂತಗಳು ಮತ್ತು ಭೌತಿಕ ಹೋರಾಟಗಳ ಪರಸ್ಪರ ಚಲನೆಗಳು ಸಮಾಜದಲ್ಲಿ ವಾಸ್ತವತೆಯನ್ನು ಒರೆಗಲ್ಲಿಗೆ ಹಚ್ಚಲು ವಿಫಲವಾದವು. ಹೀಗಿದ್ದರೂ ಆಂತರಿಕವಾಗಿ ಇಂಡಿಯಾದ ಮಹಿಳೆಯರ ಪ್ರಗತಿಯ ಮೇಲೆ ಗಾಂಧಿವಾದವನ್ನು ಒಳಗೊಂಡಂತೆ, ಮಹತ್ವ ಪೂರ್ಣ ದೇಸಿ ಚಿಂತನೆಗಳ ಪ್ರಭಾವವನ್ನು ಸ್ಪಷ್ಟವಾಗಿ ಗುರುತಿಸುವುದು ಸಾಧ್ಯವಾಗುತ್ತದೆ.

**೧.೧. ಸ್ಥಿತ್ಯಂತರ ಸಾಂಸ್ಕೃತಿಕ ನೆಲೆ ಗಾಂಧಿವಾದ**

ಸತ್ಯ ಮತ್ತು ಅಹಿಂಸೆಯನ್ನು ಆಧ್ಯಾತ್ಮಿಕ ದೃಷ್ಟಿಕೋನದಿಂದ ರಾಜಕೀಯ ಸಾವಯವ ಶಕ್ತಿಯಾಗಿ ನಿರೂಪಿಸುವ ಗಾಂಧಿ 'ವ್ಯಕ್ತಿಯ' ಹಾಗೂ 'ಸಮಾಜದ' ಪ್ರಗತಿಗೆ ಸಾಮೂಹಿಕ ಪ್ರಯತ್ನ ಮತ್ತು ಪರಸ್ಪರ ಸಹಕಾರ ಅನಿವಾರ್ಯ ಎಂಬ ತತ್ತ್ವವನ್ನು ನಿರೂಪಿಸಿದವರು. ಪರಸ್ಪರ ಸಹಕಾರದಿಂದ ವ್ಯಕ್ತಿಗಳ ಮತ್ತು ಸಮಾಜದ ಅಗತ್ಯಗಳು ಪೂರೈಕೆಯಾಗುತ್ತವೆ. ವ್ಯಕ್ತಿಗಳ ನಡುವೆ ಸಹಕಾರ ಏರ್ಪಟ್ಟಾಗ, ಒಂದಲ್ಲ ಒಂದು ಬಗೆಯ ಸಂಬಂಧಗಳೂ ರೂಪುಗೊಳ್ಳುತ್ತವೆ. ವ್ಯಕ್ತಿಗಳ ನಡುವಣ ಪರಸ್ಪರ ಸಂಬಂಧಗಳು ಸಹಬಾಳ್ವೆಯ ಮಾರ್ಗಕ್ಕೆ ಅಥವಾ ಪರಸ್ಪರ ಅಗತ್ಯಗಳನ್ನು ಪೂರೈಸಿಕೊಳ್ಳುವ ಮಾರ್ಗೋಪಾಯಗಳಿಗೆ ಪ್ರತಿಬಂಧಕ ಗಳಾಗಿ ಪರಿಣಮಿಸತೊಡಗಿದಾಗ ಅಸತ್ಯ, ದ್ವೇಷ, ಜಗಳ ಮತ್ತು ಹಿಂಸೆಗಳು ಉದ್ಭವಿಸುತ್ತವೆ. ವ್ಯಕ್ತಿಗಳ ನಡುವೆ ಪಾರಸ್ಪರಿಕ ಸಂಬಂಧಗಳೇ ಇಲ್ಲದೆ ಹೋಗಿದ್ದರೆ ಅವರ ನಡುವೆ ದ್ವೇಷ ಮತ್ತು ಹಿಂಸೆಗಳಿಗೆ ಅವಕಾಶಗಳು ನಿರ್ಮಾಣವಾಗುತ್ತಿರಲಿಲ್ಲ. ಆದರೆ, ಭೌತಿಕ ಅಗತ್ಯಗಳೇ ಇಲ್ಲದಿರುವಂಥ ವ್ಯಕ್ತಿಗಳನ್ನು ಕಲ್ಪಿಸಿಕೊಳ್ಳುವುದು ಅಸಾಧ್ಯ. ಭೌತಿಕ ಅಗತ್ಯಗಳ ಪೂರೈಕೆ ಯಾಗದೆ ವ್ಯಕ್ತಿಗಳು ಜೀವಂತವಾಗಿರಲಾರರು. ಈ ಅರ್ಥದಲ್ಲಿ ಗಾಂಧಿವಾದ ಭೌತಿಕ ಹೋರಾಟವೆನಿಸುತ್ತದೆ. ಗಾಂಧಿವಾದ ಭೌತಿಕ ಹೋರಾಟವಾಗಿ ಅಥವಾ ಪ್ರಾಪಂಚಿಕ ವಸ್ತುಗಳನ್ನು ಪಡೆದುಕೊಳ್ಳುವ ಪ್ರಯತ್ನದಲ್ಲಿ ಅಸತ್ಯಕ್ಕೆ ಅಥವಾ ಹಿಂಸೆಗೆ ಅವಕಾಶವಿರಲೇ ಬಾರದು ಎಂಬುದಾಗಿ ಪ್ರಬಲವಾಗಿ ಪ್ರತಿಪಾದಿಸುತ್ತದೆ. ಸಮಾಜದಲ್ಲಿ ಭೌತಿಕ ಹೋರಾಟಕ್ಕೆ ದೊರೆಯುವ ಯಶಸ್ಸಿನೊಂದಿಗೇ ವ್ಯಕ್ತಿಗಳಲ್ಲಿ ಹಾಗೂ ಸಮಾಜದಲ್ಲಿ ನೈತಿಕತೆಯ ಮತ್ತು ನ್ಯಾಯದ ಬಗೆಗಿನ ಭಾವನೆಗಳು ವಿಕಾಸಗೊಳ್ಳುತ್ತ ಹೋಗುತ್ತವೆ. ಯಾವ ಸಮಾಜದ ಭೌತಿಕ ಸಾಧನಗಳು ವಿಕಸಿತಗೊಂಡಿರುವುದಿಲ್ಲವೋ ಅಂತಹ ಸಂದರ್ಭಗಳಲ್ಲಿ ಸಾಮೂಹಿಕ ಪ್ರಯತ್ನ, ಸಾಮೂಹಿಕ ಕರ್ತವ್ಯ, ನೈತಿಕತೆ ಮತ್ತು ನ್ಯಾಯದ ಬಗೆಗಿನ ಮನೋಭಾವನೆಗಳು ತೀರಾ

ಸಂಕುಚಿತಗೊಂಡಿರುತ್ತವೆ. ಇಂಥ ಸಮಾಜಗಳಲ್ಲಿನ ವ್ಯಕ್ತಿಗಳ ಚಿಂತನೆಗಳು ಮತ್ತು ವರ್ತನೆಗಳು ವೈಯಕ್ತಿಕ ಮಟ್ಟದಲ್ಲಿ ಕುಟುಂಬದ ಸ್ವಾರ್ಥ ಸಾಧನೆಗೆ ಸೀಮಿತಗೊಳ್ಳುತ್ತವೆ. ಎಂದರೆ, ವ್ಯಕ್ತಿಗಳಲ್ಲಿ ವ್ಯಾಪಕವಾದ ಸಾಮಾಜಿಕ, ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ನ್ಯಾಯದ ಭಾವನೆಗಳು ಇರಲು ಸಾಧ್ಯವಿಲ್ಲ ಎಂಬುದನ್ನು ಗಾಂಧಿವಾದ ವಾಸ್ತವದಲ್ಲಿ ಒಪ್ಪಿಕೊಂಡರೂ, ಭೌತಿಕ ಹೋರಾಟದ ಪರಿಣಾಮವಾಗಿ ಹಿಂಸೆಯನ್ನು ಪರಿಭಾವಿಸುತ್ತದೆ. ಈ ಪರಿಣಾಮವಾಗಿ ಗಾಂಧಿವಾದದಲ್ಲಿ ಹಿಂಸೆ ಮತ್ತು ಅಹಿಂಸೆಯ ಬಗೆಗಿನ ಭೌತಿಕ ದೃಷ್ಟಿಕೋನಕ್ಕಿಂತ ಹೆಚ್ಚಾಗಿ ಆಧ್ಯಾತ್ಮಿಕ ದೃಷ್ಟಿಕೋನವೇ ವ್ಯಾಪಕವಾಗಿ ಪ್ರಕಟಗೊಳ್ಳುತ್ತದೆ.

> "ಶೂದ್ರರು, ಗುಲಾಮರು, ಸೇವಕರು ಮತ್ತು ಕಾರ್ಮಿಕರನ್ನು ಸ್ತುತಿಸಲು ಗಾಂಧೀವಾದ ಸಿದ್ಧವಾಗಿದೆ; ಅದಕ್ಕಿರುವ ಒಂದೇ ಒಂದು ಷರತ್ತೆಂದರೆ ಒಡೆಯರಾಗುವ ಅಪೇಕ್ಷೆಯನ್ನು ಅವರೆಂದೂ ವ್ಯಕ್ತಪಡಿಸಕೂಡದು. ಶೂದ್ರರು ಸ್ವತಃ ಒಪ್ಪಿಕೊಂಡಿರುವ ಈ ದಾಸ್ಯವೇ ಒಡೆಯರ ಹಕ್ಕುಗಳಿಗೆ ಲಭಿಸಿರುವ ಮಹತ್ತರವಾದ ರಕ್ಷಣೆಯಾಗಿದೆ. ಭದ್ರತೆಯಾಗಿದೆ."
> (ಯಶಪಾಲ್; ೧೯೯೮:೮೩)

ತ್ಯಾಗದ ಮೂಲಕ ಅಹಿಂಸೆ ಸಾಧ್ಯವೆಂಬುದನ್ನು ಗಾಂಧಿವಾದ ಅಧ್ಯಾತ್ಮದ ಚೌಕಟ್ಟಿಗೆ ಸೀಮಿತಗೊಳಿಸಿ ಪ್ರತಿಪಾದಿಸುತ್ತದೆ. ಇಲ್ಲಿ ಸತ್ಯಾಗ್ರಹದ ಸೈದ್ಧಾಂತಿಕ ದೃಷ್ಟಿಕೋನವೂ ಕೂಡಾ ಆಧ್ಯಾತ್ಮಿಕ ತಳಹದಿಗೆ ಬದ್ಧವಾಗಿದೆ ಎಂಬುದು ಬಹಳ ಮುಖ್ಯ. ಈ ಕಾರಣದಿಂದಾಗಿ ಸತ್ಯಾಗ್ರಹದ ಕ್ರಿಯಾತ್ಮಕ ಮುಖ ರಾಜಕೀಯವಾಗಿ ಹೆಚ್ಚು ಅಂತರ್ವಿರೋಧಗಳಿಂದ ಪ್ರಕಟಗೊಳ್ಳುತ್ತದೆ. ಆದರೆ, ಸಾಂಸ್ಕೃತಿಕವಾಗಿ ಗಾಂಧಿವಾದ ಪ್ರತಿಪಾದಿಸುವ ಸತ್ಯ, ಅಹಿಂಸೆ, ತ್ಯಾಗ, ಸತ್ಯಾಗ್ರಹ, ಅಸಹಕಾರಕ್ಕೆ ಅಪರಿಮಿತ ಶಕ್ತಿ ಸಂವೇದನೆಗಳು ಕೂಡ ಅದೇ ಸಂದರ್ಭದ ಒಳಗೆ ಪ್ರಕಟಗೊಂಡಿವೆ. ಗಾಂಧಿ ಇದನ್ನು ಸ್ತ್ರೀಯರಿಗೆ ಸಂಬಂಧಿಸಿದಂತೆ ಒಂದು ಯೋಗ, ಮಂತ್ರ, ತಪಸ್ಚರ್ಯೆಯಾಗಿ ಪರಿಭಾವಿಸುವುದು ವ್ಯಕ್ತವಾಗುತ್ತದೆ.

> "ಹೆಂಗಸು ಅಹಿಂಸೆಯ ಅವತಾರ ಎಂಬುದನ್ನು ನಾನು ಪತ್ರಿಕೆಯ ಕಲಮುಗಳಲ್ಲಿ ಶ್ರುತಪಡಿಸಿದ್ದೇನೆ. ಅಹಿಂಸೆ ಅಂದರೆ ಅನಂತವಾದ ಪ್ರೇಮ. ಅನಂತ ಪ್ರೇಮವೆಂದರೆ ನಿಸ್ಸೀಮವಾದ ಸಹನಾ ಸಾಮರ್ಥ್ಯ. ಮಾನವ ಜನನಿಯಾದ ಸ್ತ್ರೀ ಹೊರತು ಮತ್ತಾರು ಇಷ್ಟೊಂದು ಅಧಿಕ ಪ್ರಮಾಣದಲ್ಲಿ ಈ ಗುಣವನ್ನು ತೋರಬಲ್ಲರು? ಒಂಬತ್ತು ತಿಂಗಳು ಮಗುವನ್ನು ಉದರದಲ್ಲಿ ಹೊತ್ತು ಸಲಹಿ ಸಜ್ಜನಿತ ದುಃಖದಲ್ಲೇ ಸಂತೋಷವನ್ನು ಕಾಣುವುದರಲ್ಲಿ ಆಕೆ ಅದನ್ನು ದ್ಯೋತಿಸುತ್ತಾಳೆ. ಪ್ರಸವವೇದನೆಗಿಂತ ಹೆಚ್ಚು ಸಂಕಟಕರವಾದುದು ಮತ್ತಾವುದಿದೆ? ಆದರೆ ಈ ಸೃಷ್ಟಿಕರ್ಮ ಕೊಡುವ ಸಂತೋಷದಲ್ಲಿ ಆಕೆ ಅದನ್ನು ಮರೆಯುತ್ತಾಳೆ. ತನ್ನ ಮಗು ದಿನದಿನಕ್ಕೆ ಬೆಳೆದು ಮೈತುಂಬಿಕೊಳ್ಳಲೆಂದು ಆಕೆಯ ಹಾಗೆ ಮತ್ತಾರು

ಪ್ರತಿದಿನವೂ ಕಷ್ಟಪಡುತ್ತಾರೆ?. ಆಕೆ ಆ ಪ್ರೇಮವನ್ನು ಜಗತ್ತಿಗೆ ಅನ್ವಯಿಸಲಿ. ತಾನು ಗಂಡಿಸಿನ ಕಾಮೋಪಭೋಗಕ್ಕೆ ಆದವಳೆಂಬುದನ್ನೂ, ಆಗಿರುವಳೆಂಬುದನ್ನೂ ಆಕೆ ಮರೆಯಲಿ, ಆಗ ಆಕೆ ಪುರುಷರ ಸಮಕ್ಕೆ ನಿಂತು ಅದರರೆಡೆಯಲ್ಲಿ ಅವರ ತಾಯಂತೆ, ನಿರ್ಮಾತಳಂತೆ ಯಾವ ಮಾತನ್ನು ಆಡದೆಯೇ ದಾರಿ ತೋರುವವಳಂತೆ ಗೌರವ ಸ್ಥಾನವನ್ನು ಪಡೆಯುವವಳಾಗುತ್ತಾಳೆ. ಅಮೃತಪಾನಕ್ಕೆ ಆಸೆ ಪಡುತ್ತಿರುವ ಈ ಜಗಳಗಂಟಿ ಜಗತ್ತಿಗೆ ಶಾಂತಿಯಿಂದ ಬಾಳುವ ಕಲೆಯನ್ನು ಕಲಿಸುವ ಕೆಲಸ ಆಕೆಯ ಪಾಲಿಗೆ ಬಂದದ್ದು. ಆಕೆ ಸತ್ಯಾಗ್ರಹದಲ್ಲಿ ಮುಂದಾಳಾಗಬಹುದು; ಸತ್ಯಾಗ್ರಹಕ್ಕೆ ಪುಸ್ತಕಗಳ ಓದು ಬೇಕಾಗಿಲ್ಲ; ತಾಳ್ಮೆ ಮತ್ತು ಶ್ರದ್ಧೆಗಳಿಂದ ಪ್ರಾಪ್ತವಾಗುವ ಕಲ್ಲೆದೆ ಬೇಕು." (ತಿಪ್ಪೇರುದ್ರಸ್ವಾಮಿ ಎಚ್ (ಅನು) : ೧೯೭೦;೧೭೮)

ಸ್ತ್ರೀ ಮತ್ತು ಪುರುಷರನ್ನು ಸಮಾನರೆಂದು ಭಾವಿಸುವ ಗಾಂಧಿವಾದ ಸಾಮಾಜಿಕ ವ್ಯವಹಾರ ಗಳಲ್ಲಿ ಇಬ್ಬರ ಸಹಭಾಗಿತ್ವ ಅನಿವಾರ್ಯವೆಂಬುದನ್ನು ಹೇಳುತ್ತದೆ.

"ಸ್ತ್ರೀಯರ ಹಕ್ಕು ಬಾಧ್ಯತೆಗಳ ವಿಷಯದಲ್ಲಿ ನಾನು ಯಾವ ದಾಕ್ಷಿಣ್ಯಕ್ಕೂ ಒಳಗಾಗುವುದಿಲ್ಲ. ಗಂಡಸರಿಗೆ ಅನ್ವಯಿಸದ ಯಾವ ವಿಧಿ ನಿಯಮವೂ ಆಕೆಯನ್ನು ಕಾಡಬಾರದು. ಇದು ನನ್ನ ಅಭಿಪ್ರಾಯ. ಗಂಡು ಮಕ್ಕಳನ್ನೂ, ಹೆಣ್ಣು ಮಕ್ಕಳನ್ನೂ ಯಾವ ಹೆಚ್ಚು ಕಡಿಮೆ ಇಲ್ಲದಂತೆ ಎಲ್ಲ ವಿಧದಲ್ಲೂ ಸರಿಸಮಾನವಾಗಿ ನಾವು ನೋಡಿಕೊಳ್ಳಬೇಕು. ಹೆಂಗಸನ್ನು ಅಬಲೆಯೆಂದು ಕರೆಯುವುದೊಂದು ಬೈಗುಳ; ಗಂಡಸು ಹೆಂಗಸಿಗೆ ಮಾಡಿದ ಅನ್ಯಾಯವಿದು. ಬಲ ಎಂದರೆ ಪಶುಬಲ ಎನ್ನುವುದಾದರೆ ಹೆಂಗಸು ಗಂಡಸಿಗಿಂತ ದುರ್ಬಲಳು ನಿಜ. ಆದರೆ ಬಲ ಎಂದರೆ ನೈತಿಕ ಬಲವೆಂದು ಅರ್ಥೈಸಿದರೆ, ಆಗ ಹೆಂಗಸು ಗಂಡಸಿಗಿಂತ ಅತ್ಯಧಿಕಳು. ಹುಟ್ಟಿನ ಅರಿವು ಅವನಿಗಿಂತ ಆಕೆಗೆ ಅಧಿಕವಾಗಿಲ್ಲವೆ? ಅವಳು ಹೆಚ್ಚು ಧೈರ್ಯಶಾಲಿನಿ ಯಲ್ಲವೆ? ಆಕೆಯಿಲ್ಲದೆ ಮನುಷ್ಯನಿಗೆ ಇರಲು ಅಸಾಧ್ಯ. ಅಹಿಂಸೆ ನಮ್ಮ ಜೀವಿತ ನಿಯಮವಾಗಿದ್ದರೆ, ಭವಿಷ್ಯ ಹೆಂಗಸರ ಕಡೆಗಿದೆ." (ತಿಪ್ಪೇರುದ್ರ ಸ್ವಾಮಿ ಎಚ್ (ಅನು) : ೧೯೭೦;೧೭೫)

ಗಾಂಧಿವಾದ ಈ ನೆಲೆಯಿಂದ ಸ್ತ್ರೀಯರ ಸ್ಥಾನವನ್ನು ಸಾಮಾಜಿಕವಾಗಿ ಪರಿಕಲ್ಪಿಸುತ್ತದೆ. ಅಲ್ಲದೆ, ಈ ಸಾಮಾಜಿಕ ಸ್ಥಾನಮಾನಕ್ಕೆ 'ರಾಷ್ಟ್ರೀಯ'ವಾಗಿ ಏಕರೂಪದ ಸಮಗ್ರತೆಯನ್ನು ಒಳಗೊಂಡ ಸ್ಥಳ ನಿರ್ಮಾಣವನ್ನು ಸ್ತ್ರೀಯರಿಗೆ ಒದಗಿಸಿದೆ.

"ತಾವು ಅಬಲಾ ವರ್ಗಕ್ಕೆ ಸೇರಿದವರೆಂಬುದನ್ನು ಹೆಂಗಸರು ಮರೆಯು ವುದಾದರೆ, ಯುದ್ಧ ವಿರುದ್ಧವಾಗಿ ಅವರು ಗಂಡಸರಿಗಿಂತ ಎಷ್ಟೋ

ಹೆಚ್ಚಾಗಿ ಕೆಲಸ ಮಾಡಬಲ್ಲರು." (ತಿಪ್ಪೇರುದ್ರಸ್ವಾಮಿ ಎಚ್ (ಅನು) : ೧೯೭೦;೧೭೬)

ಈ ಹಿನ್ನೆಲೆಯಲ್ಲಿ ಸ್ತ್ರೀಯರಿಗೆ ಗಾಂಧಿಯ ಸ್ಫೂರ್ತಿದಾಯಕ ನಾಯಕತ್ವ, ಆದರದ ರಕ್ಷಣೆ, ಗುರಿಯಷ್ಟೇ ಮುಖ್ಯವಾದ ಮಾರ್ಗದರ್ಶನ ಇವುಗಳಿಂದಾಗಿ, ಸ್ತ್ರೀಯರು ಸ್ವಾತಂತ್ರ್ಯದ ಹೋರಾಟದಲ್ಲಿ ಗಣನೀಯವಾದ ಪಾತ್ರವಹಿಸುವುದು ಸಾಧ್ಯವಾಗಿದೆ. ವಿದ್ಯಾವಂತರು, ಅವಿದ್ಯಾವಂತರು, ನಾಗರಿಕರಾದ ಸ್ತ್ರೀಯರು ಹಾಗೂ ಗ್ರಾಮೀಣ ಸ್ತ್ರೀಯರು, ಒಟ್ಟಾಗಿ ಸಮಾಜದ ಬಹುವರ್ಗದ ಸ್ತ್ರೀಯರು ಮನೆ, ಕುಟುಂಬದ ಆವರಣದಿಂದ ಹೊರಗೆ ಬರಲು ಸಾಧ್ಯವಾಗಿದೆ. ನಿಷ್ಠಾವಂತ ಮನೆತನಗಳ ಹೆಂಗಸರೂ ಸಹ ಸ್ವಾತಂತ್ರ್ಯ ಹೋರಾಟಕ್ಕೆ ಧುಮುಕಿದ ಪರಿಣಾಮದಲ್ಲಿ ಇದು ವ್ಯಕ್ತವಾಗುತ್ತದೆ. ವ್ಯಕ್ತಿಗಳಲ್ಲಿನ ಅಪರಿಮಿತ ಶಕ್ತಿ, ಸಾಮರ್ಥ್ಯದ ಮೇಲೆ ವಿಶ್ವಾಸವಿರುವ ಗಾಂಧೀವಾದ ಪುರುಷರಾಗಲಿ, ಸ್ತ್ರೀಯರಾಗಲಿ ಅವರವರಲ್ಲಿ ಅವರದ್ದೇ ಆದ ಸಾಮಾಜಿಕ ಮತ್ತು ರಾಜಕೀಯವಾದ ಬೀಜರೂಪದ ತಿಳುವಳಿಕೆ ಇರುತ್ತದೆ ಎಂಬುದಾಗಿ ಭಾವಿಸುತ್ತದೆ. ಒಪ್ಪಂದವಾಗಿ ಇದನ್ನು ಪರಿಭಾವಿಸುವುದಾದರೆ, ಪ್ರೀತಿ ಶುಭಚಂದ್ರ ಅವರ ಮಾತು ಮುಖ್ಯವಾಗುತ್ತದೆ.

> "ಗಾಂಧಿವಾದವನ್ನು ಎರಡು ನೆಲೆಗಳಲ್ಲಿ ಕೆಲಸ ಮಾಡುವ ಒಂದು ಪ್ರಕ್ರಿಯೆಯಾಗಿ ನಾವು ಅರ್ಥಮಾಡಿಕೊಳ್ಳಬೇಕು. ಗಾಂಧಿಯವರ ಸಾಮಾಜಿಕ ಹಾಗೂ ರಾಜಕೀಯ ಚಿಂತನೆಗಳಿಗೆ ಸಂಬಂಧಿಸಿದಂತೆ ಎರಡು ಸ್ತರಗಳ ಸಂರಚನೆಯನ್ನು ಕಾಣಬಹುದು. ಮೊದಲನೆಯದು - ಅತೀತವಾಗುಳಿಯದ ಆತ್ಯಂತಿಕ ಆದರ್ಶಪರತೆ. ಎರಡನೆಯದು - ಈ ಅತೀತದ ಸಾಮೀಪ್ಯಕ್ಕೆ ಕ್ರಮೇಣ ಕೊಂಡೊಯ್ಯಬಲ್ಲ ಕ್ರಿಯಾಚರಣೆ. (Approximation to the altimate ideal) ಅಹಿಂಸೆ, ಸತ್ಯ, ಸ್ವಾತಂತ್ರ್ಯ, ಸಮಾನತೆ, ತ್ಯಾಗ ಮೊದಲಾದ ಪರಮ ಮೌಲ್ಯಗಳ ಪರಿಪೂರ್ಣ ಅನುಷ್ಠಾನವನ್ನು ಸ್ವಕೇಂದ್ರದ ನೆಲೆಯಲ್ಲಿ ಮೊದಲನೆಯದ ಸ್ತರದ ಚಿಂತನೆ ನಿಲ್ಲಿಸುತ್ತದೆ. ಈ ಚಿಂತನೆ ಯಾವುದೇ ರಾಜಕೀಯ ಅಧಿಕಾರ ವ್ಯವಸ್ಥೆಯನ್ನು ಅವಲಂಬಿಸದ ಶುದ್ಧ ಅರಾಜಕೀಯ ಆಧ್ಯಾತ್ಮಿಕ ಸ್ವರೂಪವುಳ್ಳದ್ದು. ಎರಡನೆಯ ಸ್ತರವು ಸ್ವಲ್ಪಮಟ್ಟಿಗೆ ಸಮಾಜವಾದೀ ಪ್ರಜಾಪ್ರಭುತ್ವ (Democratic Socialism)ದ ಸ್ವರೂಪವನ್ನು ಹೊಂದಿದ್ದು ಆದರ್ಶಗಳ ಅನುಷ್ಠಾನದ ವಿಷಯದಲ್ಲಿ ಸಾಪೇಕ್ಷವಾದ ಆದರೆ ಮೂರ್ತವಾದ ಕಾರ್ಯಚಟುವಟಿಕೆಗಳನ್ನುಳ್ಳದ್ದು. ಇವೆರಡೂ ಸ್ತರಗಳ ನಡುವಣ ದ್ವಂದ್ವಾತ್ಮಕ ಪ್ರಕ್ರಿಯೆಯನ್ನು ನಾವು ಗಾಂಧಿವಾದದಲ್ಲಿ ಗುರುತಿಸಬಹುದು." (ಶ್ರೀಮತಿ ಎಚ್.ಎಸ್. (ಸಂ): ಮಹಿಳಾ ಅಧ್ಯಯನ; ೧೯೯೯:೨)

ಸ್ತ್ರೀಯರಿಗೆ ಸಾಮಾಜಿಕ ಬದ್ಧತೆಯನ್ನು ಸಾಧಿತಗೊಳಿಸಿಕೊಳ್ಳುವಲ್ಲಿ ಗಾಂಧಿವಾದ ಸಾಕಷ್ಟು ಶ್ರಮಿಸಿದೆ. ಆದರೆ, ಕುಟುಂಬದ ಆವರಣದಲ್ಲಿ ಸ್ತ್ರೀಯರ ಬಗೆಗಿನ ಗಾಂಧಿವಾದದ ದೃಷ್ಟಿಕೋನ ಸಾಕಷ್ಟು ಪ್ರಗತಿಪರ ಎಂದೆನಿಸುವುದಿಲ್ಲ. ಸ್ತ್ರೀ ಶಿಕ್ಷಣ, ವಿಧವಾ ಸಮಸ್ಯೆ, ವೇಶ್ಯಾ ಸಮಸ್ಯೆ, ಸ್ತ್ರೀಯರ ರಾಜಕೀಯ ಪ್ರವೇಶದ ಬಗ್ಗೆ ಗಾಂಧಿ ವಿಚಾರಧಾರೆಗಳು ಹೆಚ್ಚು ಸಂಪ್ರದಾಯ ನಿಷ್ಠವಾಗಿ ಪ್ರಕಟಗೊಳ್ಳುತ್ತವೆ.

ಗಾಂಧಿವಾದದ ಮುಕ್ತ ವಿಶ್ಲೇಷಣೆಯು ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯಲ್ಲಿ ಕಾಣಿಸಿಕೊಂಡಿದೆ. ಗಾಂಧಿವಾದದ ಪರ - ವಿರೋಧ ಪ್ರತಿಕ್ರಿಯೆಗಳ ಛಾಯೆ ಮತ್ತು ಭ್ರಮ ನಿರಸನದ ಧ್ವನಿಗಳು ಸ್ಥಿತ್ಯಂತರ ಸಾಂಸ್ಕೃತಿಕ ಚೌಕಟ್ಟನ್ನು ವಿಸ್ತರಿಸಿದೆ. ಈ ಅರ್ಥದಲ್ಲಿ, ಅತ್ಯಂತ ಪ್ರಖರವಾದ ದೇಶೀಯ ಚಿಂತನೆಯೊಂದು ಅತಿ ದೀರ್ಘಕಾಲ ತನ್ನ ಕಾವನ್ನು ಉಳಿಸಿಕೊಳ್ಳದೆ ಸೊರಗಿದ ಲಕ್ಷಣಗಳನ್ನು ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯಲ್ಲಿ ಗ್ರಹಿಸಬಹುದು. ಜನರ ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ ನಿಲುವುಗಳಲ್ಲಿ ಈ ವೈರುಧ್ಯವನ್ನು ಸ್ಪಷ್ಟವಾಗಿ ಗುರುತಿಸಬಹುದು.

### ೧.೨. ಸ್ಥಿತ್ಯಂತರ ಸಾಂಸ್ಕೃತಿಕ ನೆಲೆ - ಅಂಬೇಡ್ಕರ್‌ವಾದ

ಇಂಡಿಯಾದಲ್ಲಿ ಬ್ರಿಟಿಷ್ ಶಿಕ್ಷಣ ಕೊಡಮಾಡಿದ ಪ್ರಧಾನ ಕೊಡುಗೆಗಳಲ್ಲಿ ಸಾರ್ವತ್ರಿಕ ಶಿಕ್ಷಣ ಅತ್ಯಂತ ಮಹತ್ವದ್ದು. ಇದರ ಪರಿಣಾಮವಾಗಿ ಜ್ಯೋತಿಭಾ ಫುಲೆ, ಅಂಬೇಡ್ಕರ್ ಅವರಂತಹ ಚಿಂತಕರು ಹುಟ್ಟಿಕೊಳ್ಳುವುದು ಸಾಧ್ಯವಾಗಿದೆ. ಭಾರತ ಸಂವಿಧಾನದ ಕರಡು ರಚನಾ ಸಮಿತಿಯ ಅಧ್ಯಕ್ಷರಾಗಿ ಅಂಬೇಡ್ಕರ್ ನಿರೂಪಿಸಿದ ಅವಕಾಶಗಳು ಶೂದ್ರ, ದಲಿತ ಹಾಗೂ ಮಹಿಳೆಯರಿಗೆ ಸಾಮಾಜಿಕ ಹಾಗೂ ರಾಜಕೀಯ ನೆಲೆಯಲ್ಲಿ ವ್ಯಾಪಕವಾದ ಚೌಕಟ್ಟು ನಿರ್ಮಿಸಿವೆ ಅಲ್ಲದೆ, ಪ್ರಜಾಪ್ರಭುತ್ವ ವ್ಯವಸ್ಥೆಗೆ ನೈಜ ಅರ್ಥವನ್ನು ಕಲ್ಪಿಸಿಕೊಟ್ಟಿದೆ. ಅಸ್ಪೃಶ್ಯತೆ ಮತ್ತು ಗುಲಾಮಗಿರಿಯನ್ನು ವಾಸ್ತವ ನೆಲೆಯಿಂದ ನಿರೂಪಿಸುವ ಅಂಬೇಡ್ಕರ್‌ವಾದದಲ್ಲಿ ಶೂದ್ರ, ದಲಿತ, ಬುಡಕಟ್ಟು ಜನಾಂಗ, ಹಿಂದುಳಿದ ವರ್ಗದವರಿಗೆ, ವಿಶೇಷವಾದ ಸ್ಥಾನ ಪ್ರಾಪ್ತವಾಗಿದೆ. ಒಟ್ಟು ಇಂಡಿಯಾದ ಸಂಸ್ಕೃತಿಯ ಸಂದರ್ಭದಲ್ಲಿ ನಿಂತು ಮಹಿಳೆಯರ ಬಗೆಗೆ ಅಂಬೇಡ್ಕರ್ ಅವರು ಚಿಂತಿಸುವ ಹೆಚ್ಚಿನ ಸಂದರ್ಭಗಳಲ್ಲಿ ಅವರ ವಿಚಾರಧಾರೆಯ ಹಿಂದೆ ಎರಡು ಕಾಲಘಟ್ಟಗಳ ಸತ್ಯ ಸಂಗತಿಗಳು ಕೆಲಸ ಮಾಡುತ್ತಿರುವಂತೆ ಗೋಚರವಾಗುತ್ತದೆ. ಅವುಗಳೆಂದರೆ;

೧. ಮನುಮೂಲದ ಮನವಾದಿ ಚಿಂತನೆಯಲ್ಲಿ ಸ್ತ್ರೀಯರ ಸ್ಥಾನಮಾನ.
೨. ಬ್ರಿಟಿಷ್ ಸರಕಾರ ಸ್ತ್ರೀಯರ ಬಗೆಗೆ ಅನುಸರಿಸಿದ ಹಾಗೂ ಆ ಕುರಿತು ಪಾಶ್ಚಾತ್ಯರು ಪ್ರಪಂಚಕ್ಕೆ ನೀಡಿದ ಮಹಿಳಾ ಸಮಾನತೆ ಮತ್ತು ಸಂಪೂರ್ಣ ಸ್ವಾತಂತ್ರ್ಯದ ಪರಿಕಲ್ಪನೆ.

ಇವೆರಡು ಆಲೋಚನಾ ಧೋರಣೆಗಳಿಗಿಂತ ವಿಭಿನ್ನವಾಗಿ ಅಂಬೇಡ್ಕರ್ ಪ್ರತಿಕ್ರಿಯಿಸುವುದು ವ್ಯಕ್ತವಾಗುತ್ತದೆ. ಮಹಿಳೆಯ ಹಕ್ಕು, ಸಮಾನತೆ ಮತ್ತು ಸ್ವಾತಂತ್ರ್ಯಗಳನ್ನು ಕುರಿತು ಕೇವಲ ಸಂವಿಧಾನದ ಧಾಟಿಯಲ್ಲಿ ಅಥವಾ ಸಾಂವಿಧಾನಿಕ ಪರಿಭಾಷೆಯಲ್ಲಿ ಮಾತ್ರ

ಮಾತನಾಡುವುದನ್ನು ಅಥವಾ ಬರೆಯುವುದನ್ನು ಅವರಲ್ಲಿ ಕಾಣಬಹುದಾಗಿದೆ. ಭಾರತೀಯ ಸ್ತ್ರೀಯರ ಕುರಿತು ಅವರ ಚಿಂತನೆಯ ಹಿಂದೆ ಮಹಾತ್ಮ ಜ್ಯೋತಿಭಾಪುಲೆ ಅವರ ಜೀವನ ದರ್ಶನಗಳು, ಹೋರಾಟದ ಮಜಲುಗಳು ಮತ್ತು ಬರವಣಿಗೆಗಳು ಪ್ರೇರಕವಾದದ್ದು ಸ್ಪಷ್ಟವಾಗಿಯೇ ಇದೆ.

ಇಂಡಿಯಾದ ಸ್ತ್ರೀಯರ ಬಗೆಗೆ ಏನೆಲ್ಲ ಸಾಧನೆ, ಪರಿವರ್ತನೆಗಳು ಸಾಧ್ಯವಾಗಿದೆಯೋ ಅವೆಲ್ಲಕ್ಕೂ ಸಂವಿಧಾನದ ಹಲವಾರು ಅನುಚ್ಛೇದಗಳು ಮೂಲಕಾರಣವೂ ಪ್ರೇರಣವೂ ಆಗಿವೆ. ಉದಾಹರಣೆಗೆ ಸಂವಿಧಾನದ ಅನುಚ್ಛೇದ ೧೪ ರಲ್ಲಿ ಭಾರತದ ಭೌಗೋಳಿಕ ಪ್ರದೇಶದಲ್ಲಿ ವಾಸವಿರುವ ಪ್ರತಿಯೊಬ್ಬ ಪ್ರಜೆಯೂ ಕಾನೂನಿನ ಮುಂದೆ ಸಮಾನರು ಸಮಾನ ಸಂರಕ್ಷಣೆಯನ್ನು ಘೋಷಿಸಲಾಗಿದೆ. ಅನುಚ್ಛೇದ ೧೫ ಪ್ರಕಾರ ಸರಕಾರವು ಯಾವುದೇ ಪ್ರಜೆಯನ್ನು ಮತ, ಜಾತಿ, ಕುಲ, ಲಿಂಗ ಮತ್ತು ಹುಟ್ಟಿನ ಆಧಾರದ ಮೇಲೆ ತಾರತಮ್ಯ ಮಾಡುವಂಥದ್ದಲ್ಲ ಎಂಬುದಾಗಿ ಆದೇಶಿಸುತ್ತದೆ. ಅನುಚ್ಛೇದ ೧೬ರ ಪ್ರಕಾರ ಸರಕಾರದ ಯಾವುದೇ ಕಛೇರಿಯ ಉದ್ಯೋಗಾವಕಾಶದ ವಿಷಯದಲ್ಲಿ ಸರ್ವರಿಗೂ ಸಮಾನ ಅವಕಾಶವಿರಬೇಕು ಎಂಬುದಾಗಿ ನಿರ್ದೇಶಿಸುತ್ತದೆ. ಅನುಚ್ಛೇದ ೩೮ರ ಪ್ರಕಾರ ಸ್ತ್ರೀ ಮತ್ತು ಪುರುಷರಿಗೆ ಸರಿಸಮಾನವಾದ ಜೀವನಾವಕಾಶಗಳನ್ನು ಒದಗಿಸತಕ್ಕದ್ದು ಎಂಬುದಾಗಿ ಅನುಚ್ಛೇದ ೩೯ (ಡಿ) ನಿರ್ದೇಶಿಸುತ್ತದ. ಅನುಚ್ಛೇದ ೪೨ರ ಪ್ರಕಾರ ಸ್ತ್ರೀಯ ಸೇವೆಗೆ ಅತ್ಯಗತ್ಯವಾದ ನ್ಯಾಯೋಚಿತ ಹಾಗೂ ಮಾನವೀಯ ವಾತಾವರಣವನ್ನು ಕಲ್ಪಿಸಬೇಕಾದುದು ಮತ್ತು ಸ್ತ್ರೀಯರಿಗೆ ಪ್ರಸೂತಿ ಅಥವಾ ಹೆರಿಗೆ ಪರಿಹಾರಗಳನ್ನು ಒದಗಿಸಬೇಕಾದುದು ಸರ್ಕಾರದ ಕರ್ತವ್ಯವಾಗಿದೆ ಎಂಬುದಾಗಿ ಆದೇಶಿಸುತ್ತದೆ.

ಅಂಬೇಡ್ಕರ್ ಪಾರ್ಲಿಮೆಂಟಿನಲ್ಲಿ ಎರಡು ಸದನಗಳಿಂದ ಪಾಸು ಮಾಡಿಸಿದ ಮಹತ್ವದ ನಾಲ್ಕು ಮಸೂದೆಗಳೆಂದರೆ :

ಅ. ಹಿಂದೂ ವಿವಾಹ ಕಾನೂನು (೧೯೫೫)

ಆ. ಹಿಂದೂ ಉತ್ತರಾಧಿಕಾರ ಕಾನೂನು (೧೯೫೬)

ಇ. ಹಿಂದೂ ಅಪ್ರಾಪ್ತತೆ ಮತ್ತು ಪೋಷಕತ್ವ ಕಾನೂನು (೧೯೫೬)

ಈ. ಹಿಂದೂ ದತ್ತಕ ಮತ್ತು ಜೀವನಾಂಶ ಕಾನೂನು (೧೯೫೬)

ಈ ನಾಲ್ಕು ಕಾನೂನುಗಳು ಸಂವಿಧಾನಾತ್ಮಕವಾಗಿ ಹಾಗೂ ಸಾಮಾಜಿಕವಾಗಿ ಸ್ತ್ರೀಯರಿಗೆ ಗಮನಾರ್ಹವಾದ ವ್ಯಕ್ತಿತ್ವವೊಂದನ್ನು ನಿರ್ಮಾಣ ಮಾಡಲು ಅವಕಾಶ ಕಲ್ಪಿಸಿಕೊಟ್ಟವು. ಇಂಡಿಯಾದ ಸಂಸ್ಕೃತಿಯ ಸಂದರ್ಭದಲ್ಲಿ ಸ್ತ್ರೀಯರಿಗೆ ಪ್ರಪ್ರಥಮ ಬಾರಿಗೆ ಸಾಮಾಜಿಕ ವ್ಯಕ್ತಿತ್ವವನ್ನು ಪಡೆಯಲು ಅಂಬೇಡ್ಕರರ ಹೋರಾಟದಿಂದ ಸಾಧ್ಯವಾಗಿದೆ. ಅಂಬೇಡ್ಕರ್ ಕಲ್ಪಿಸಿದ ಈ ಸ್ಥಳಾವಕಾಶವನ್ನು ನಂತರದಲ್ಲಿ ಸಂವಿಧಾನ ತಿದ್ದುಪಡಿಯ ಮೂಲಕ ಹೆಚ್ಚು ನಿಖರಗೊಳಿಸಿರುವುದು ಕಾಲಾನುಕ್ರಮದ ಬೆಳವಣಿಗೆಯಾಗಿದೆ.

> “೧೯೭೬ರಲ್ಲಿ ತಿದ್ದುಪಡಿಗೆ ಒಳಗಾದ ೧೮೫೫ರ ‘ಹಿಂದೂ ವಿವಾಹ ಕಾನೂನಿ’ನ ಪರಿಚ್ಛೇದ ೨೬ರ ಪ್ರಕಾರ ದ್ವಿಪತ್ನಿತ್ವವನ್ನು ಶಿಕ್ಷಾರ್ಹ

ಅಪರಾಧವೆಂದು ಘೋಷಿಸಲಾಯಿತು. ಹಾಗೆಯೇ ೧೯೫೬ ರ ಹಿಂದೂ ಉತ್ತರಾಧಿಕಾರದ ಕಾನೂನಿನ ಪ್ರಕಾರ ವಿಧವೆಯಾದ ಮಹಿಳೆಗೆ ಮಗನ ನ್ನಾಗಲಿ ಮಗಳನ್ನಾಗಲಿ ದತ್ತು ಸ್ವೀಕರಿಸುವ ಅಧಿಕಾರವಿದೆ ಎಂದು ನಮೂದಿಸಲಾಯಿತು. ಅಂದರೆ, ಈ ಸ್ವಾತಂತ್ರ್ಯ ಆ ಹಿಂದಿನ ಹಿಂದೂ ಕಾನೂನಿನಲ್ಲಿ ಇರಲಿಲ್ಲವೆಂಬುದನ್ನು ಪ್ರತ್ಯೇಕವಾಗಿ ವಿಚಾರ ಮಾಡ ಬೇಕಾಗಿದೆ. ಅಲ್ಲದೆ ಅದೇ ಕಾನೂನಿನ ಪರಿಚ್ಛೇದ ೧೪ರ ಪ್ರಕಾರ, ಮಹಿಳೆಗೆ ತನ್ನಿಚ್ಛೆಯಂತೆ ಸ್ವತಂತ್ರವಾಗಿರುವುದು ಮಾತ್ರವಲ್ಲದೆ, ಉಯಿಲು ಬರೆಯುವ ಮುಖಾಂತರ ತನ್ನ ಆಸ್ತಿಯನ್ನು ಪರಭಾರೆ ಮಾಡುವ ಅಧಿಕಾರ ವನ್ನು ಕೂಡ ನೀಡಲಾಯಿತು." (ಜವರಯ್ಯ ಮ.ನ.; ೧೯೯೫;೩೮೦)

ಸಮಾನತೆಯ ನೆಲೆಯಲ್ಲಿ ಸ್ತ್ರೀ ಪುರುಷರನ್ನು ಏಕರೂಪದಲ್ಲಿ ಗ್ರಹಿಸುವುದು ಅಂಬೇಡ್ಕರ್ ಚಿಂತನೆಯ ಪ್ರಧಾನ ನಿಲುವು. ಇದು ಅವರ ಮಾತುಗಳಿಂದಲೇ ಸ್ಪಷ್ಟವಾಗುತ್ತದೆ.

" Unity is meaningless wihtout the accompniment of Woman. Education is fruitles without educated Women. and agitaton is incomplete without the strength of Women." (Ambedkar B.R. : 1973; 39)

ಸ್ತ್ರೀಯರ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿ ಸುಧಾರಿಸದೆ ಯಾವುದೇ ದೇಶದ ಸರ್ವಾಂಗೀಣ ಪ್ರಗತಿ ಸಾಧ್ಯವಿಲ್ಲ ಎಂದು ಅಂಬೇಡ್ಕರ್ ನಂಬಿದ್ದರು. ಅವರಿಗೆ ಸ್ತ್ರೀ ಸಂಘಟನೆಯ ಬಗ್ಗೆ ಹೆಚ್ಚಿನ ಭರವಸೆ ಇತ್ತು. ಅವರು ಈ ಅಭಿಪ್ರಾಯವನ್ನು ಹೀಗೆ ವಿಶದಪಡಿಸುತ್ತಾರೆ. :

"ಮಹಿಳಾ ಸಂಘಟನೆ ಬಗೆಗೆ ನನಗೆ ಅತೀವವಾದ ವಿಶ್ವಾಸವಿದೆ. ಮಹಿಳೆಯ ರಲ್ಲಿ ನಂಬಿಕೆ ಮೂಡಿಸುವುದಾದರೆ ಸಮಾಜದ ಸ್ಥಿತಿಗತಿ ಉತ್ತಮಪಡಿಸಲು ನೆರವಾಗುತ್ತಾರವರು ಎಂದು ನನಗೆ ಗೊತ್ತು. ಸಾಮಾಜಿಕ ಪಾಪಗಳನ್ನು ನಿರ್ಮೂಲನ ಮಾಡುವಲ್ಲಿ ಮಹಿಳೆಯರ ಕೊಡುಗೆ ಮಹತ್ವದಾಗಿ ರುತ್ತದೆ.... ಸಮುದಾಯವೊಂದರ ಪ್ರಗತಿಯನ್ನು ಅದರ ಮಹಿಳಾ ಪ್ರಗತಿ ಮೂಲಕ ನಾನು ಅಂದಾಜಿಸುತ್ತೇನೆ.... ನಾನು ಹೇಳುವ ಕೆಲವು ಅಂಶ ಗಳನ್ನು ಮನಸ್ಸಿನಲ್ಲಿಟ್ಟು ಕೊಳ್ಳಬೇಕು. ಸ್ವಚ್ಛತೆಯನ್ನು ಕಲಿಯಿರಿ ಮತ್ತು ಎಲ್ಲಾ ಕೆಟ್ಟ ಗುಣಗಳಿಂದ ದೂರವಿರಿ. ನಿಮ್ಮ ಮಕ್ಕಳಿಗೆ ಶಿಕ್ಷಣ ನೀಡಿರಿ. ಅವರಲ್ಲಿ ಮಹತ್ವಾಕಾಂಕ್ಷೆಯನ್ನು ಮೂಡಿಸಿ. ಅವರು ಮಹತ್ವದವ ರಾಗುತ್ತಾರೆ ಎಂಬ ಭಾವನೆಯನ್ನು ಅವರ ಮನಸ್ಸಿನಲ್ಲಿ ಮೂಡಿಸಿರಿ. ಅವರ ಮನಸ್ಸಿನಿಂದ ಎಲ್ಲಾ ಬಗೆಯ ಕೀಳರಿಮೆಗಳನ್ನೂ ತೊಡೆದು ಹಾಕಿರಿ. ವಿವಾಹವಾಗಲು ಆತುರರಾಗಬೇಡಿ. ವಿವಾಹವು ಬಲು ಖರ್ಚಿನ ಬಾಬ್ತು.

ನಿಮ್ಮ ಮಕ್ಕಳ ಮೇಲೆ ನೀವು ಅದನ್ನು ಹೇರಬಾರದು. ಏಕೆಂದರೆ, ಮದುವೆಯ ಬಾಬ್ತುಗಳನ್ನು ಹಣಕಾಸು ದೃಷ್ಟಿಯಿಂದ ಎದುರಿಸಲು ಅವರು ಸಮರ್ಥರಾಗಬೇಕು. ವಿವಾಹವಾಗುವವರು ಹೆಚ್ಚು ಹೆಚ್ಚು ಮಕ್ಕಳನ್ನು ಹಡೆಯುವುದು ಅಪರಾಧ ಎಂಬ ಅಂಶವನ್ನು ಮನಸ್ಸಿನಲ್ಲಿರಿಸಿಕೊಳ್ಳಬೇಕು. ತಮಗಿಂತ ಉತ್ತಮವಾಗಿ ಜೀವನವನ್ನು ಆರಂಭಿಸುವಂತೆ ಮಕ್ಕಳನ್ನು ಬೆಳೆಸುವುದು ಎಲ್ಲಾ ತಂದೆ ತಾಯಿಗಳ ಕರ್ತವ್ಯವಾಗುತ್ತದೆ. ಎಲ್ಲಕ್ಕಿಂತ ಮಿಗಿಲಾಗಿ ವಿವಾಹವಾಗುವ ಪ್ರತಿ ಹೆಂಗಳೆಯೂ ತನ್ನ ಗಂಡನ ಸ್ನೇಹಿತನಂತೆ ಸಮಾನ ಹಕ್ಕುಳ್ಳವಳಾಗಬೇಕು ಮತ್ತು ಆತನ ಗುಲಾಮಳಾಗಲು ಧಿಕ್ಕರಿಸಬೇಕು." (ಒಡೆಯರ್ ಡಿ. ಹೆಗ್ಗಡೆ : ೧೯೮೬; ೧೫೫)

ಮೇಲಿನ ಎಲ್ಲ ವಿವರಗಳಿಂದ ಸ್ತ್ರೀಯರ ಕುರಿತ ಅಂಬೇಡ್ಕರ್ ಚಿಂತನೆಯ ಸ್ವರೂಪವನ್ನು ಈ ಕೆಳಕಂಡಂತೆ ಗುರುತಿಸಬಹುದು.

೧. ಶಿಕ್ಷಣದ ಮೂಲಕವೇ ಸ್ತ್ರೀಯರ ಮತ್ತು ದಲಿತರ ಜನಾಂಗದ ಏಳಿಗೆ ಸಾಧ್ಯ.
೨. ವಿವಾಹವಾಗಲು ಆರ್ಥಿಕ ಸಾಮರ್ಥ್ಯ ಮತ್ತು ಸ್ವಾತಂತ್ರ್ಯವಿರಬೇಕು. ಈ ಸಾಮರ್ಥ್ಯ ವಿಲ್ಲದವರು ವಿವಾಹವಾಗಬಾರದು.
೩. ಪ್ರತಿ ವಿವಾಹಿತರೂ ಅವರ ಕುಟುಂಬದ ಜನನ ಪ್ರಮಾಣವನ್ನು ನಿಯಂತ್ರಿಸಬೇಕು.
೪. ಸ್ತ್ರೀಯರು ಪುರುಷರ ದಾಸ್ಯವನ್ನು ತೊರೆಯುವ ಮೂಲಕವೇ ಅವರ ಏಳಿಗೆಗಾಗಿ ವಿಧಿವಿಧಾನಗಳನ್ನು ರೂಪಿಸಬಹುದು. ಅಂದರೆ, ಸ್ತ್ರೀಯರು ಕುಟುಂಬದ ವ್ಯವಸ್ಥೆಯನ್ನು ಧಿಕ್ಕರಿಸಿ ಸಮಾನತೆಗಾಗಿ ಹೋರಾಡುವುದು ಆರೋಗ್ಯಪೂರ್ಣವಲ್ಲ. ಬದಲಿಗೆ ಸ್ತ್ರೀಯರು ಕುಟುಂಬದ ಒಳಗಿದ್ದೇ ಸಮಾನತೆಯನ್ನು ಸಾಧಿಸುವ ಪ್ರಯತ್ನಮಾಡಬೇಕು. ಅಂಬೇಡ್ಕರ್ ಅವರ ಪ್ರಗತಿಪರ ದೃಷ್ಟಿಕೋನ ದಲಿತರಲ್ಲಿ, ಸ್ತ್ರೀಯರಲ್ಲಿ ಜಾಗೃತಿಯನ್ನು ಉಂಟುಮಾಡಿರುವ ಸನ್ನಿವೇಶಗಳು ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯಲ್ಲಿ ಕಂಡುಬರುತ್ತವೆ.

### ೧.೩. ಸ್ಥಿತ್ಯಂತರ ಸಾಂಸ್ಕೃತಿಕ ನೆಲೆ - ಲೋಹಿಯಾವಾದ

ಲೋಹಿಯಾವಾದವನ್ನು ಎರಡು ಆಯಾಮಗಳಲ್ಲಿ ಕಾರ್ಯಪ್ರವೃತ್ತಗೊಳ್ಳುವ ಒಂದು ಅಖಂಡ ಪ್ರಕ್ರಿಯೆಯಾಗಿ ಸ್ಥಿತ್ಯಂತರ ಸಾಂಸ್ಕೃತಿಕ ಸಂದರ್ಭದ ಒಳಗೆ ಅರ್ಥೈಸಿಕೊಳ್ಳ ಬೇಕಾಗುತ್ತದೆ. ಲೋಹಿಯಾ ಅವರ ಸಾಮಾಜಿಕ ಹಾಗೂ ರಾಜಕೀಯ ಚಿಂತನೆಗಳಿಗೆ ಸಂಬಂಧಿಸಿದಂತೆ ಎರಡು ಸ್ತರಗಳ ಸಂರಚನೆಯನ್ನು ಕಾಣಬಹುದು.

ಮೊದಲನೆಯದು - ಗಾಂಧಿ ಮತ್ತು ಅಂಬೇಡ್ಕರ್‌ಗಿಂತ ಭಿನ್ನವಾದ ದೇಶಿ ಸಮಾಜವಾದದ ಒಂದು ನಿರ್ದಿಷ್ಟ ಸಿದ್ಧಾಂತ.

ಎರಡನೆಯದು - ಈ ಸಿದ್ಧಾಂತದ ಸಾಮೀಪ್ಯಕ್ಕೆ ಕ್ರಮೇಣ ಕೊಂಡೊಯ್ಯಬಲ್ಲ ಕ್ರಿಯಾಚರಣೆ. (Approximation to the altimate ideal)

'ಅಧಿಕಾರ' ಅಥವಾ 'ಪ್ರಭುತ್ವ-' ಇರುವಲ್ಲಿ 'ಅಧೀನತೆ' ಅಥವಾ 'ಭಯ' ಇರುತ್ತದೆ. ಈ ಅಧೀನತೆ ಅಥವಾ ಭಯವೇ ವ್ಯಕ್ತಿಗಳ ಎಲ್ಲ ವಿಕೃತಿಗಳಿಗೂ ಮೂಲ ಕಾರಣ. ಆದುದರಿಂದ ಅಧೀನತೆಯ, ಭಯದ ಛಾಯೆ ಇರದ 'ಪ್ರಭುತ್ವ'ವನ್ನು ಸ್ಥಾಪಿಸುವುದೇ ಲೋಹಿಯಾ ಅವರ ಸಿದ್ಧಾಂತ ಮತ್ತು ಹೋರಾಟಗಳ ಮೂಲ ಪ್ರೇರಣೆಯಾಗಿದೆ.

ಇಂಡಿಯಾದ ಸಂದರ್ಭವನ್ನು ಗಾಂಧಿ ಮತ್ತು ಅಂಬೇಡ್ಕರ್‌ಗಿಂತ ರಚನಾತ್ಮಕವಾಗಿ, ಅಖಂಡವಾಗಿ ಪರಿಭಾವಿಸುವ ಲೋಹಿಯಾ, ಜಾತಿ, ಲಿಂಗಭೇದ ಸಮಸ್ಯೆಯನ್ನು ಏಕಾತ್ಮಕವಾಗಿ ಪರಸ್ಪರ ಪೂರಕವಾಗಿ ಪರಿಭಾವಿಸುತ್ತಾರೆ. ಜಾತಿ ಮತ್ತು ಲಿಂಗಕ್ಕೆ ಸಂಬಂಧಿಸಿದಂತೆ (ಎಂದರೆ, ಒಂದರ್ಥದಲ್ಲಿ ಗಾಂಧಿ ಮತ್ತು ಅಂಬೇಡ್ಕರ್ ಅವರ ಆಲೋಚನೆಗಳನ್ನು ಅಂತರ್ಗತವಾಗಿಸಿಕೊಂಡು ಆತ್ಯಂತಿಕವಾದ) ಇರುವ ಗೊಂದಲಗಳು, ಭೇದಭಾವಗಳು ಪರಸ್ಪರ ಸಂಬಂಧ ಹೊಂದಿದ್ದು ಒಂದು ಮತ್ತೊಂದನ್ನು ಬಲಪಡಿಸುತ್ತ ಹೋಗುತ್ತವೆ. ಜಾತಿ ಹಾಗೂ ಸ್ತ್ರೀಯರನ್ನು ಕುರಿತ ಪ್ರತ್ಯೇಕತಾವಾದೀ ಮನೋಭಾವವೇ ಇಂಡಿಯಾದ ಅಧೋಗತಿಗೆ ಮೂಲ ಕಾರಣ. ಆದ್ದರಿಂದ ಈ ಎರಡೂ ಬಗೆಯ ಪ್ರತ್ಯೇಕತೆಗಳ ವಿರುದ್ಧ ಏಕಕಾಲಕ್ಕೆ ಪ್ರಜ್ಞಾಪೂರ್ವಕವಾದ ಹಾಗೂ ನಿರಂತರವಾದ ಹೋರಾಟ ಅತ್ಯಗತ್ಯ ಎಂಬುದಾಗಿ ಲೋಹಿಯಾ ಭಾವಿಸುತ್ತಾರೆ. ರಾಜಕೀಯವನ್ನು ವ್ಯಕ್ತಿಗಳ ಚಟುವಟಿಕೆಗಳ ಬಹಿರಂಗ ಮುಖವಾಗಿ ಲೋಹಿಯಾ ಪರಿಭಾವಿಸುತ್ತಾರೆ. ಆದುದರಿಂದಲೆ;

> "ಈ ದೇಶದಲ್ಲಿ ಕಮ್ಯೂನಿಸ್ಟ್, ಕಾಂಗ್ರೆಸ್ ಹಾಗೂ ಸಮಾಜವಾದಿ ರಾಜಕಾರಣದಿಂದ ಹಿಡಿದು ಎಲ್ಲ ಬಗೆಯ ರಾಜಕಾರಣದಲ್ಲೂ ಉದ್ದೇಶ ಪೂರ್ವಕವಾಗಿಯೇ ಅಥವಾ ರೂಢಿಗತವಾಗಿಯೇ ಒಂದು ವಿಷಯದ ಕುರಿತು ಮಾತ್ರ ರಾಷ್ಟ್ರೀಯ ಸಹಮತವಿದೆ. ಅದೇನೆಂದರೆ, ಇಡೀ ಜನಸಂಖ್ಯೆಯ ಮುಕ್ಕಾಲು ಭಾಗದಷ್ಟಿರುವ ಶೂದ್ರರನ್ನೂ, ಸ್ತ್ರೀಯರನ್ನೂ ತುಳಿಯುವುದು ಹಾಗೂ ಅವರನ್ನು ರಾಜಕೀಯಿಂದ ದೂರ ಇಡುವುದು. ಭಾರತೀಯ ಹೆಣ್ಣಿನ ಸ್ಥಿತಿಯಂತೂ ಅತ್ಯಂತ ಶೋಚನೀಯವಾಗಿದೆ. ಅವಳು ಅಡಿಗೆಮನೆಯ ಗುಲಾಮಗಿರಿಯ ಜೊತೆಗಿರುವವಳು, ಅವಳು ಬಳಸುವ ಒಲೆಯ ಉಸಿರು ಕಟ್ಟಿಸುವ ಹೊಗೆಯೂ ಸೇರಿಕೊಂಡು ಪರಿಸ್ಥಿತಿ ಇನ್ನಷ್ಟು ಕರುಣಾಜನಕವಾಗಿ ಬಿಟ್ಟಿದೆ. ಅವಳಿಗೂ ಅಡಿಗೆ, ಊಟಕ್ಕೆ ನಿಗದಿಯಾದ ವೇಳಾಪಟ್ಟಿಯೊಂದಿರಬೇಕು. ಅಡಿಗೆಮನೆಯಲ್ಲಿ ಹೊಗೆ ಸಲೀಸಾಗಿ ಹೋಗುವ ಚಿಮಣಿಯಿರಬೇಕು. ಅರೆಹೊಟ್ಟೆ, ನಿರುದ್ಯೋಗ ಹಾಗೂ ಅನ್ಯಾಯಗಳ ವಿರುದ್ಧದ ಹೋರಾಟದಲ್ಲಿ ಅವಳೂ ಪಾಲ್ಗೊಳ್ಳಬೇಕು." (ನಟರಾಜ್ ಹುಳಿಯಾರ್ : ೨೦೦೦; ೭)

ಎಂದು ನಿರ್ದಿಷ್ಟವಾಗಿ ಪ್ರತಿಕ್ರಿಯಿಸಿರುವುದು ವ್ಯಕ್ತವಾಗುತ್ತದೆ. ಪ್ರತಿಯೊಂದು ಯುಗ ಹಾಗೂ ಪ್ರತಿಯೊಬ್ಬ ವ್ಯಕ್ತಿಯು ತಮ್ಮದೇ ಆದ ನಿರ್ದಿಷ್ಟ ನೈತಿಕತೆಯನ್ನು ಹುಡುಕಿಕೊಳ್ಳಬೇಕು

ಎಂದು ಲೋಹಿಯಾ ವಿವೇಚಿಸುತ್ತಾರೆ. (ಇದು 'ನೈತಿಕತೆ ಸಾಪೇಕ್ಷವಾದದ್ದು' ಎಂಬ ಎಲ್ಲೆಯೊಳಗಿನಿಂದಲೇ ಆಗಿದೆ). ಬ್ರಹ್ಮಚರ್ಯ ಹಾಗೂ ಕನ್ಯತ್ವಗಳನ್ನು ಸೆರೆಮನೆ ಎಂದೂ, ಈ ಸೆರೆಮನೆಯೊಳಗೆ ಸಿಕ್ಕಿ ತಮ್ಮ ವಿಮೋಚಕರಿಗಾಗಿ ಕಾಯುವ ಲಕ್ಷಾಂತರ ಯುವಜನತೆಯ ಕುರಿತು;

> "ಲೈಂಗಿಕ ನೀತಿ ಸಂಹಿತೆಯಲ್ಲಿ ಎರಡೇ ಎರಡು ಅಕ್ಷಮ್ಯ ಅಪರಾಧಗಳಿವೆ ಎಂಬುದು ಮಾತ್ರ ಅವರಿಗೆ ನೆನಪಿರಲಿ : ಒಂದು ಅತ್ಯಾಚಾರ, ಎರಡು, ಸುಳ್ಳು ಹೇಳುವುದು ಅಥವಾ ಕೊಟ್ಟ ಮಾತಿಗೆ ತಪ್ಪುವುದು. ಮೂರನೆಯ ಅಪರಾಧವೂ ಒಂದಿದೆ. ಅದೆಂದರೆ ಇನ್ನೊಬ್ಬರಿಗೆ ನೋವುಂಟು ಮಾಡುವುದು ಈ ಕುರಿತು ಸಾಧ್ಯವಾದಷ್ಟು ಅವರು ಎಚ್ಚರವಹಿಸಬೇಕು."
> (ನಟರಾಜ್ ಹುಳಿಯಾರ್ : ೨೦೦೦; ೯)

ಎಂದು ಹೇಳುವುದರಲ್ಲಿ ಗಂಡು ಹೆಣ್ಣಿನ ಸಂಬಂಧಗಳ ಸ್ಪಷ್ಟ ಜಿಜ್ಞಾಸೆ ವ್ಯಕ್ತವಾಗುತ್ತದೆ. ಜಾತಿಪದ್ಧತಿಯನ್ನು ಸ್ತ್ರೀಯರು, ಆದಿವಾಸಿಗಳ, ಶೂದ್ರರ, ಹರಿಜನರ ಹಾಗೂ ಮುಸಲ್ಮಾನರೊಳಗಿನ ಹಿಂದುಳಿದ ವರ್ಗಗಳ ಶೋಷಣೆಗೆ ಮೂಲಕಾರಣವೆಂದು ಲೋಹಿಯಾ ಪರಿಭಾವಿಸುತ್ತಾರೆ. ಆದ್ದರಿಂದ ಜಾತಿಪದ್ಧತಿ ಸಂಪೂರ್ಣವಾಗಿ ನಿರ್ಮೂಲನವಾದರೆ, ಉಳಿದ ಸಮಸ್ಯೆಗಳು ಸಹಜವಾಗಿ ಪರಿಹಾರ ಕಾಣುತ್ತವೆ ಎಂಬುದನ್ನು ಬಲವಾಗಿ ಪ್ರತಿಪಾದಿಸುವುದು ಅವರ ಸಿದ್ಧಾಂತಕ್ಕೆ ಸಾಧ್ಯವಾಗಿದೆ. ಪರಿಣಾಮವಾಗಿ ಲೋಹಿಯಾವಾದದ ಜಾತಿ ವಿನಾಶ ಕಲ್ಪನೆ ಎಲ್ಲ ಬಗೆಯ ಅಸಮಾನತೆಯನ್ನು ಗುರಿಯಾಗಿಸಿಕೊಂಡದ್ದು. ಮೈಬಣ್ಣ ಹಾಗೂ ಜಾತಿ ಮೂಲದ ಕೀಳರಿಮೆಗಳಿಗೂ ಜಾಗತಿಕ ಮಟ್ಟದಲ್ಲಿ ದಕ್ಷಿಣ ಆಫ್ರಿಕಾದ ಕಪ್ಪು ಜನರ ದಮನಕ್ಕೂ ಇರುವ ಸಂಬಂಧವನ್ನು ಲೋಹಿಯಾ ಈ ನೆಲೆಯಿಂದಲೇ ಗುರುತಿಸುವುದು ಸ್ಪಷ್ಟವಾಗುತ್ತದೆ. ಆದ್ದರಿಂದಲೇ ಮೈಬಣ್ಣ ಕುರಿತ ಲೋಹಿಯಾರ ಹೊಸ ಸೌಂದರ್ಯ ಮೀಮಾಂಸೆ ಅಸಮಾನತೆಯ ಆಧಾರದ ಮೇಲೆ ನಿಂತ ಪರಂಪರಾಗತ ಸೌಂದರ್ಯ ಮೀಮಾಂಸೆಯನ್ನು ತಲೆಕೆಳಗು ಮಾಡಿದೆ. ಜಾತಿಪದ್ಧತಿಯ ಆಧಾರದಿಂದ ಹುಟ್ಟಿದ ಶ್ರೇಷ್ಠತೆಯ ಕಲ್ಪನೆ ಹಾಗೂ ಮೈ ಬಣ್ಣವನ್ನಾಧರಿಸಿದ ಸೌಂದರ್ಯದ ಕಲ್ಪನೆಗಳೆರಡೂ ಒಂದೇ ಮಾನಸಿಕ ಸ್ಥಿತಿಯಿಂದ ಮೂಡಿಬರುವಂಥವು ಎಂಬ ಅಂಶ ಲೋಹಿಯಾ ಅವರ ವಿಶ್ಲೇಷಣೆಯ ತಾತ್ವಿಕ ತಳಹದಿಯಾಗಿದೆ.

> "ಸತ್ಯ, ಸಮತೆ ಮತ್ತು ಸೌಂದರ್ಯ - ಈ ಮೂರು ಕಾಳಜಿಗಳೂ ಏಕೀಭವಿಸಿಕೊಂಡ ಹೊಸ ನಾಗರಿಕತೆಯ ನಿರ್ಮಾಣದ ನೇತೃತ್ವವನ್ನು ಭಾರತ ವಹಿಸಬಹುದಾಗಿದೆ ಎಂಬುದು ಲೋಹಿಯಾ ಅವರ ನಂಬಿಕೆಯಾಗಿತ್ತು. ಏಕೆಂದರೆ ಇಂತಹ ನಾಗರಿಕತೆಯೊಂದರ ಹೊಳಹು ನೀಡಿದ್ದ ಗಾಂಧೀಜಿ ಎಂಬ ಘನ ವ್ಯಕ್ತಿತ್ವವನ್ನು ಭಾರತ ಜಗತ್ತಿಗೆ ನೀಡಿತ್ತು. ಹೀಗಾಗಿ ತಮ್ಮ ತಾತ್ವಿಕ ದರ್ಶನದ ಅನುಷ್ಠಾನಕ್ಕಾಗಿ ಕಾರ್ಯಕ್ರಮಗಳನ್ನು

ರೂಪಿಸುವಲ್ಲಿ ಲೋಹಿಯಾ ಬಳಸುವುದು ಗಾಂಧೀಜಿಯ ಒಳತೋಟಿಗಳನ್ನೇ. ಗಾಂಧೀಜಿಯ ಗುರಿ ಎನ್ನುವುದು ತಲುಪುವುದಲ್ಲ, ಆಗುವುದು ಎಂಬ ನಂಬಿಕೆಯಲ್ಲಿನ ಸತ್ಯ ನಿಷ್ಠುರತೆಯನ್ನೂ, ಮೇಲ್ಜಾತಿಯವನಾಗಿ ಹುಟ್ಟಿದುದರ ಪಾಪ ತೊಳೆದುಕೊಳ್ಳಲು ಅಸ್ಪೃಶ್ಯನಾಗಿ ಪುನರ್ಜನ್ಮ ಪಡೆಯುವ ಇಚ್ಛೆಯಲ್ಲಿನ ಸಮತೆಯ ಹಂಬಲವನ್ನೂ, ಯಂತ್ರ ಮನುಷ್ಯನನ್ನು ಹೃದಯ ಹೀನನನ್ನಾಗಿ ಮಾಡುವುದು ಎಂಬ ಕಾಣ್ಕೆಯಲ್ಲಿನ ಸೌಂದರ್ಯ ದೃಷ್ಟಿಯನ್ನೂ, ಲೋಹಿಯಾ ಗುರುತಿಸಿದ್ದರು. ಈ ಒಳನೋಟಗಳೇ ಮುಂದೆ ಲೋಹಿಯಾ ಪ್ರತಿಪಾದಿಸಿದ ಭಾರತೀಯ ಸಮಾಜವಾದದ ಮೂರು ಮುಖ್ಯ ಅಡಿಗಲ್ಲುಗಳಾದ ನಿರಂತರ ನಾಗರಿಕ ಅಸಹಕಾರ, ಸತ್ಯಾಗ್ರಹ ಆಂದೋಲನ, ಜಾತಿ ವಿನಾಶ ಆಂದೋಲನ ಹಾಗೂ ಸಣ್ಣ ಘಟಕ ತಂತ್ರಜ್ಞಾನ (Small unit Technology) ಆಂದೋಲನಗಳಿಗೆ ಪ್ರೇರಣೆ ಒದಗಿಸಿದ್ದು." (ನಾಗಭೂಷಣ ಡಿ.ಎಸ್. : ೧೯೯೦;೧೨೯)

ಸಮಕಾಲೀನ ರಾಜಕೀಯ ಸಂದರ್ಭದಲ್ಲಿ 'ರಾಜಕೀಯ' ಎನ್ನಲಾಗುವ ದೈನಂದಿನ ವಿದ್ಯಮಾನಗಳನ್ನಷ್ಟೇ ಚರ್ಚಿಸದ ಲೋಹಿಯಾ ಇಂಡಿಯಾದ ಯಾವ 'ವೃತ್ತಿ ರಾಜಕಾರಣಿ'ಯೂ ಗ್ರಹಿಸದ ಖಾಸಗಿ ದುರಂತಗಳನ್ನು ಗ್ರಹಿಸಲೆತ್ನಿಸಿದ್ದರು. ವಿವಾಹವನ್ನು ಹೊರತುಪಡಿಸಿ ಒಂಟಿಯಾಗಿ ಅಥವಾ ತನಗೆ ಬೇಕಾದ ಸಂಗಾತಿಯ ಜೊತೆ ಇರಬಯಸುವ ಹೆಣ್ಣಿನ ಬಗ್ಗೆ ಭಾರತೀಯ ಸಮಾಜ ತೋರುವ ಅಸಹನೆ, ಹಾಗೂ ಹುಡುಗಿಯೊಬ್ಬಳು ಕೆಳಜಾತಿಯ ಹುಡುಗನೊಬ್ಬನನ್ನು ಪ್ರೀತಿಸಿದ ಪ್ರಕರಣವನ್ನು ವಿಚಾರಣೆಗೆತ್ತಿಕೊಂಡ ಮೇಲುಜಾತಿಯ ನ್ಯಾಯಾಧೀಶನೊಬ್ಬ ನೀಡಿದ ಠೇಂಕಾರದ ತೀರ್ಪು, ಇದರಿಂದ ಹಿಡಿದು ಬನಾರಸ್ ವಿಶ್ವವಿದ್ಯಾನಿಲಯದ ಲೈಂಗಿಕ ವರ್ತನೆ ಕುರಿತು ತನಿಖೆ ಮಾಡುವ ಅಧಿಕಾರಿಗಳು ಹಾಗೂ ಪೋಲೀಸ್ ಇಲಾಖೆ ಪೋಲೀಸ್ ಪೇದೆಗಳ ಮೇಲೆ ಹೇರುವ 'ವಿಧೇಯತೆ' ಎಂಬ ಕಲ್ಪನೆಯವರೆಗೂ ಹಬ್ಬಿರುವ ಭಾರತೀಯ 'ಫ್ಯೂಡಲ್ ಮನಸ್ಥಿತಿಯ' ಹಲವು ಮುಖಗಳನ್ನು ಕುರಿತು ಲೋಹಿಯಾ ತಾಳುವ ನಿಲುವುಗಳು ಸೂಕ್ಷ್ಮವಾದವು. ಎಳೆಯರಿಬ್ಬರ ಪ್ರೇಮದಲ್ಲಿ ಮೂಗು ತೂರಿಸಿದ ನ್ಯಾಯಾಧೀಶನಿಗೆ ಶಿಕ್ಷೆಯಾಗಬೇಕು ಎಂದು ವಾದಿಸುವಾಗ ತಳೆವ ನಿಲುವನ್ನೇ ಹರೆಯದ ಹುಡುಗರ ಲೈಂಗಿಕ ವರ್ತನೆಯ ಬಗ್ಗೆ ಬೊಬ್ಬೆ ಹಾಕುವ ಕಾಶಿಯ ಮರ್ಯಾದಸ್ಥರ ಬಗೆಗೂ ಲೋಹಿಯಾ ತಳೆಯಬಲ್ಲವರಾಗಿದ್ದರು. ಈ ಎಲ್ಲ ಪ್ರಕರಣಗಳಲ್ಲೂ ಸಾರ್ವಜನಿಕ ನೈತಿಕತೆ ಹಾಗೂ ವೈಯಕ್ತಿಕ ನೈತಿಕತೆ ಕುರಿತು ಸಾಮಾನ್ಯವಾಗಿ ಭಾರತೀಯರು ತಳೆಯುವ ಬೂಟಾಟಿಕೆಯ ನಿಲುವುಗಳನ್ನು ಲೋಹಿಯಾ ಸ್ಫೋಟಿಸುವುದು ವ್ಯಕ್ತವಾಗುತ್ತದೆ. ಚಳುವಳಿ ಹಾಗೂ ಸಂಘಟನೆಗಳ ಸ್ವರೂಪದ ವಿಶ್ಲೇಷಣೆ, ಚಳುವಳಿಗಾರರಿಗೆ

ಕರೆ, ವಿಮರ್ಶೆ, ಸಲಹೆ, ಬುದ್ಧಿವಾದ ಈ ಎಲ್ಲ ಸಂದರ್ಭಗಳಲ್ಲಿಯೂ ಲೋಹಿಯಾ ಹೊರಗೆ ನಿಂತು ಪ್ರತಿಕ್ರಿಯಿಸುವುದನ್ನಾಗಲಿ, ವಸ್ತುನಿಷ್ಠ ವಿಶ್ಲೇಷಣೆಯ ಗುಪ್ತ ಅಹಂಕಾರದಲ್ಲಿ ಬರೆಯುವುದಾಗಲಿ ಮಾಡುವುದಿಲ್ಲ. ಚಳುವಳಿಗಾರರು, ಸುಧಾರಣಾವಾದಿಗಳು ಕಾಲಕಾಲಕ್ಕೆ ದೊಡ್ಡ ದೊಡ್ಡ ಪ್ರಶ್ನೆಗಳನ್ನೆತ್ತಿದರೂ ಭಾರತ ಯಾಕೆ ಜಡವಾಗಿಯೇ ಉಳಿದಿದೆ ಎಂಬುದಕ್ಕೆ ಲೋಹಿಯಾ ಕಂಡುಕೊಳ್ಳುವ ಉತ್ತರ ಇದು :

> "…..ಭಾರತ ಎಂಥ ದೊಡ್ಡ ಹೊಂಡವೆಂದರೆ ಇಲ್ಲಿ ಏನೇ ನಡೆದರೂ ಅದು ಒಂದೆರಡು ಸುಳಿಗಳನ್ನೋ ಪುಟ್ಟ ಅಲೆಗಳನ್ನೋ ಎಬ್ಬಿಸಿ ಏನೂ ನಡೆದಿಲ್ಲವೆಂಬಂತೆ ಮಾಯವಾಗಿ ಬಿಡುತ್ತದೆ." (ನಟರಾಜ್ ಹುಳಿಯಾರ್: ೨೦೦೦; ೩೪೫)

ಇಂಡಿಯಾದ ಚಳುವಳಿ ರಾಜಕಾರಣಿಗಳ ಮನೋಸಾಮಾಜಿಕ, ಮನೋಸಾಂಸ್ಕೃತಿಕ ಅಂಶಗಳನ್ನು ಲೋಹಿಯಾ ಅವರಷ್ಟು ಆಳವಾಗಿ ಗ್ರಹಿಸಿದ ಚಿಂತಕರು ಕಡಿಮೆ. ಅವರ ವಾದದ ಸೂಕ್ಷ್ಮತೆ, ಶ್ರಮ ನಿಷ್ಠುರತೆ ಹಾಗೂ ಬದ್ಧತೆಗಳು ನಂತರದ ಬರಹಗಾರರು, ಚಿಂತಕರು ಹಾಗೂ ರಾಜಕೀಯ - ಸಾಮಾಜಿಕ ಕಾರ್ಯಕರ್ತರನ್ನು ಏಕಕಾಲಕ್ಕೆ ತಟ್ಟಿದೆ. ಇದು ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಗೆ ಭದ್ರ ಬುನಾದಿಯನ್ನು ಹಾಕಿಕೊಟ್ಟಿದೆ.

### ೧.೪. ಸ್ಥಿತ್ಯಂತರ ಸಾಂಸ್ಕೃತಿಕ ನೆಲೆ ಮಾರ್ಕ್ಸ್‌ವಾದ

"ಇಲ್ಲಿಯವರೆಗಿನ ಚರಿತ್ರೆಯೆಂದರೆ ವರ್ಗ ಹೋರಾಟದ ಚರಿತ್ರೆಯೇ ಆಗಿದೆ. ಮನುಷ್ಯ ತನ್ನ ಜೀವನದ ಸೌಖ್ಯಕ್ಕಾಗಿ ನಡೆಸಿದ ಎಲ್ಲ ಚಟುವಟಿಕೆಗಳ ದಾಖಲೆಯೇ ಇತಿಹಾಸವಾಗಿದೆ (ಬಾಪು ಹೆದ್ದೂರ ಶೆಟ್ಟಿ : ೧೯೯೯; ೫೫)" ಎಂಬುದು ಮಾರ್ಕ್ಸ್ ಮತ್ತು ಎಂಗೆಲ್ಸರ ಅಭಿಪ್ರಾಯ.

ಇತಿಹಾಸವನ್ನು ಉತ್ಪಾದನೆಯ ವಿಧಾನ ಮತ್ತು ಜನರೊಡನೆ ಅವುಗಳ ಸಂಬಂಧದ ಏಳು ಬೀಳುಗಳ ಕಾಲಕ್ರಮದ ಪ್ರಾತಿನಿಧಿಕ ದಾಖಲೆಯಾಗಿ ನೋಡುವ ಮಾರ್ಕ್ಸ್‌ವಾದದ ಭೌತವಾದಿ ದೃಷ್ಟಿಕೋನವು, 'ಸ್ವಾತಂತ್ರ್ಯ' ಮಾನವ ಜನಾಂಗದ ಅತಿ ಶ್ರೇಷ್ಠವಾದ ಬಯಕೆ ಎಂಬುದನ್ನು ನಿರೂಪಿಸುತ್ತದೆ. ವ್ಯಕ್ತಿಗಳ ತಿಳುವಳಿಕೆ, ಕಲ್ಪನೆ, ವಿಚಾರ ಮತ್ತು ನಂಬಿಕೆಗಳು ವಾಸ್ತವವಲ್ಲ ಇವು ವ್ಯಕ್ತಿಗಳ ಜೀವನದ ಭೌತ ಪರಿಸ್ಥಿತಿಗಳ ಪರಿಣಾಮಗಳಾಗಿವೆ. ಭೌತಿಕ ಪರಿಸ್ಥಿತಿಗಳು ರಾಜಕೀಯ ಮತ್ತು ಧಾರ್ಮಿಕ ಸಿದ್ಧಾಂತಗಳನ್ನು ರೂಪಿಸುತ್ತವೆ ಎಂದು ಮಾರ್ಕ್ಸ್‌ವಾದ ಪರಿಭಾವಿಸುತ್ತದೆ. 'ಸಮಾನತೆ' ಮತ್ತು 'ಸ್ವಾತಂತ್ರ್ಯ'ವನ್ನು ಬಂಡವಾಳಶಾಹಿ ವ್ಯವಸ್ಥೆಯ ಮೂಲದಿಂದಲೇ ಮಾರ್ಕ್ಸ್‌ವಾದ ಬಯಸುತ್ತದೆ. ಆಸ್ತಿಯ ಖಾಸಗಿ ಒಡೆತನದ ರದ್ಧತಿಯನ್ನೇ ಕಮ್ಯೂನಿಸಂ ಎಂದು ಮಾರ್ಕ್ಸ್‌ನ ಸಮರ್ಥನೆಯನ್ನು ಬಂಡವಾಳಶಾಹಿ ರಾಷ್ಟ್ರಗಳ, ಪ್ರಜಾಶಕ್ತಿ ಅಂತರ್ಗತವಾಗಿ ಒಪ್ಪಿಕೊಂಡಿದೆ ಹಾಗೂ ವಿಶ್ವದ ಬಹು ದೇಶಗಳಲ್ಲಿ ಕಮ್ಯೂನಿಸ್ಟ್ 'ಕ್ರಾಂತಿ'ಯ ನೆಲೆಯಲ್ಲಿ ಕಾಣಿಸಿಕೊಂಡಿದೆ. ಇದು ಮಾರ್ಕ್ಸ್ ನಂತರದ ೧೦೦ ವರ್ಷಗಳ ಬೆಳವಣಿಗೆಯಾಗಿದೆ. ಇಲ್ಲಿ ಮುಖ್ಯವಾಗುವ ಅಂಶವೆಂದರೆ,

"ಮಾರ್ಕ್ಸ್‌ವಾದ ಒಂದು ಏಕರೂಪಿ ದರ್ಶನವಲ್ಲ. ಮಾರ್ಕ್ಸ್‌ನಿಂದ ಮಾರ್ಕ್ಸ್‌ವಾದದವರೆಗೆ ಹಲವು ಬೆಳವಣಿಗೆಯ ಸ್ತರಗಳಿವೆ. ಮಾರ್ಕ್ಸ್‌ವಾದ ಬಹಳಷ್ಟು ಸಲ ಪರಿಷ್ಕರಣಗೊಂಡಿದೆ. ಭಾರತೀಯ ಸಂದರ್ಭದಲ್ಲಿ ಸಮಾಜವಾದಿ ಸಂಘಟನೆಯಾಗಿ ಕಾಣಿಸಿಕೊಳ್ಳುವ ಮಾರ್ಕ್ಸ್‌ವಾದಕ್ಕೆ ಅದರದೇ ಆದ ಮಿತಿಗಳಿದ್ದರೂ ವರ್ಗ ಹೋರಾಟದ ಕೇಂದ್ರೀಯ ಸೈದ್ಧಾಂತಿಕ ಚೌಕಟ್ಟಾಗಿ ಮಾರ್ಕ್ಸ್‌ವಾದ ಕಾಣಿಸಿಕೊಂಡಿದೆ. ಮಾರ್ಕ್ಸ್‌ವಾದದ ಪಾರಿಭಾಷಿಕ ಶಬ್ದ 'ಉತ್ಪಾದನೆ' ಎಂಬುದು ಕೇವಲ ಅರ್ಥಶಾಸ್ತ್ರ ನಿರ್ವಚಿಸುವ 'ಉತ್ಪಾದನೆ' ಮಾತ್ರ ಅಲ್ಲ." (ಆನಂದ ಕೋಡಿಂಬಳ : ೨೦೦೨; ೨೯೦)

ಇಂಡಿಯಾದ ಸಂದರ್ಭದಲಿ ಉತ್ಪಾದನೆಯೆಂದರೆ ಒಂದು ಸಂಸ್ಕೃತಿ ಅದರ ಒಟ್ಟು ಇರುವಿಕೆ ಹಾಗೂ ಅದರ ಬಗೆಗಿನ ತಿಳುವಳಿಕೆಯನ್ನು ಹುಟ್ಟು ಹಾಕಿಕೊಳ್ಳುವ ಒಟ್ಟು ಪ್ರಕ್ರಿಯೆ ಎಂದು ಹೇಳಬಹುದು. ಅಂದರೆ ಒಂದು ಸಂಸ್ಕೃತಿ ತನ್ನ ಅಸ್ತಿತ್ವವನ್ನು ಮುಂದುವರಿಸಿಕೊಳ್ಳಲು ಕೈಗೊಳ್ಳುವ ಉತ್ಪಾದನೆ - ಪ್ರತ್ಯುತ್ಪಾದನೆ ಕ್ರಿಯೆಗಳಲ್ಲಿ ಅರ್ಥಶಾಸ್ತ್ರೀಯ ಉತ್ಪಾದನೆ (ಉದಾ: ವ್ಯವಸಾಯ, ಕೈಗಾರಿಕೋದ್ಯಮ) ಎಷ್ಟೇ ಮುಖ್ಯ ಹಾಗೂ ಮೂಲಭೂತವಾದುದಾದರೂ ಅದೇ ಸರ್ವಸ್ವ ಎಂದು ಮಾರ್ಕ್ಸ್ ಎಂದೂ ಹೇಳಿಲ್ಲ. ಭೌತಿಕ ಉತ್ಪಾದನೆಗಳಾದ ವ್ಯವಸಾಯ ಹಾಗೂ ಕೈಗಾರಿಕೋದ್ಯಮ ಇತರ ಉತ್ಪಾದನೆಗಳನ್ನೂ (ಉದಾ: ಬೌದ್ಧಿಕ ಉತ್ಪಾದನೆಗಳು: ಜಿಜ್ಞಾಸೆ, ಸಾಹಿತ್ಯ, ನ್ಯಾಯ ಸಂಹಿತೆ ಇತ್ಯಾದಿ.) ನಿರ್ಧರಿಸುತ್ತವೆ ಎಂದು ಮಾರ್ಕ್ಸ್ ಮತ್ತು ಎಂಗೆಲ್ಸ್‌ರು ಹೇಳಿರುವುದು ಇದೆ. ಆದರೆ ಈ ನಿರ್ಧಾರ ಪ್ರಕ್ರಿಯೆ ಸರಳವಾದ ಕಾರ್ಯಕಾರಣ ಸಂಬಂಧ ಹೊಂದಿರುವಂಥದು ಎಂದು ಭಾವಿಸಲು ಸಾಧ್ಯವಾಗುವುದಿಲ್ಲ. ಭೌತಿಕ ಮತ್ತು ಬೌದ್ಧಿಕ ಉತ್ಪಾದನೆ, ಪ್ರತ್ಯುತ್ಪಾದನೆ ಪ್ರಕ್ರಿಯೆಗಳು ತಮ್ಮನ್ನು ಪರಸ್ಪರ ನಿರ್ಧರಿಸಿಕೊಳ್ಳುತ್ತವೆ ಎಂಬುದು ಮಾರ್ಕ್ಸ್‌ವಾದದ ಮೂಲ ನಿಲುವು. ಸ್ತ್ರೀಯರಿಗೆ ಸಂಬಂಧಿಸಿದಂತೆ ಮಾರ್ಕ್ಸ್‌ವಾದದ ನಿಲುವು ಕೂಡ ಭೌತವಾದಕ್ಕೆ ತಳಕು ಹಾಕಿಕೊಂಡದ್ದು. ಸ್ತ್ರೀಯರಿಗೆ ಅವರ ಸ್ತ್ರೀತ್ವದ ಕುರಿತಾದ ಪ್ರಜ್ಞೆಯು ಮಾನವ ಇತಿಹಾಸದ ಒಂದು ಘಟ್ಟದಲ್ಲಿ ನಿರ್ದಿಷ್ಟ ಸಮಾಜ ವಿಧಿಸಿದ ಆರ್ಥಿಕ ವ್ಯವಸ್ಥೆಯಿಂದ ರೂಪಿತಗೊಂಡದ್ದಾಗಿದೆ. ಇದನ್ನು ಎಂಗೆಲ್ಸ್ 'The origin of the family, Private Property, and the state' ಎಂಬ ಕೃತಿಯಲಿ ದೀರ್ಘವಾಗಿ ಚರ್ಚಿಸುತ್ತಾನೆ. ರಾಷ್ಟ್ರ, ವೈಯಕ್ತಿಕ ಸಂಪತ್ತು ಮತ್ತು ಕುಟುಂಬ ಇವುಗಳಲ್ಲಿನ ಪರಸ್ಪರ ಅಂತರ್‌ಸಂಬಂಧವನ್ನು ಕೂಲಂಕುಷವಾಗಿ ಶಿಲಾಯುಗದಿಂದ ತೊಡಗಿ ಔದ್ಯೋಗಿಕರಣ ಕಾಲದವರೆಗಿನ ಬೆಳವಣಿಗೆಯ ನೆಲೆಯಲ್ಲಿ ಈ ಕೃತಿಯಲ್ಲಿ ಗಮನಿಸಲಾಗಿದೆ.

"ಎಂಗೆಲ್ಸ್ ಹೇಳುವುದೇನೆಂದರೆ, ಉತ್ಪಾದನೆಯ ಕ್ಷೇತ್ರದಲ್ಲಿ ಸ್ತ್ರೀಯೂ ಪುರುಷನಿಗೆ ಸಮಾನವಾಗಿ ತನ್ನನ್ನು ತೊಡಗಿಸಿಕೊಂಡಾಗಲೇ ಅವಳಿಗೆ ತನ್ನ ದಾಸ್ಯದಿಂದ ಬಿಡುಗಡೆ." (ರಾಮಚಂದ್ರನ್ ಸಿ.ಎನ್. : ೧೯೯೫; ೧೦೬)

ಇಲ್ಲಿ ಹೆಚ್ಚು ಪ್ರಧಾನವಾಗುವ ಅಂಶವೆಂದರೆ, ಬಂಡವಾಳಶಾಹಿ ವ್ಯವಸ್ಥೆಯ ರಾಜಕೀಯಕ್ಕೆ, ಆರ್ಥಿಕ ಕ್ರಿಯಾಚರಣೆಗೆ ಹಾಗೂ ಇವುಗಳನ್ನು ಪ್ರತ್ಯಕ್ಷ-ಪ್ರರೋಕ್ಷವಾಗಿ ಆಶ್ರಯಿಸುವ ಮತ್ತು ಪ್ರತಿಯಾಗಿ ಪೋಷಿಸುವ ಸಾಮಾಜಿಕ ಸಾಂಸ್ಕೃತಿಕ ಚಿಂತನೆಗಳಿಗೆ ಪ್ರತಿಭಟನೆಯಾಗಿ ಬೆಳೆದ ಸಿದ್ಧಾಂತ ಮಾರ್ಕ್ಸ್‌ವಾದ ಎಂಬುದು. ರಾಜಕೀಯ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಮುಂತಾದ ಅಂಶಗಳನ್ನು ಒಂದು ಪೂರ್ಣರೂಪದಲ್ಲಿ ಉದ್ದೇಶಿಸುವ ವೈಚಾರಿಕ ನಿಲುವು ಮಾರ್ಕ್ಸವಾದದಲ್ಲಿದೆ. ಭಾರತೀಯ ಸಂದರ್ಭದಲ್ಲಿ ೧೯೫೦ರ ನಂತರದಿಂದ ಮಾರ್ಕ್ಸ್‌ವಾದ ಒಂದು ಗಂಭೀರ ಸಿದ್ಧಾಂತವಾಗಿ ಕಾಣಿಸಿಕೊಂಡಿದೆ. ಲೋಹಿಯಾ, ಜಯಪ್ರಕಾಶ್ ನಾರಾಯಣ, ಅಶೋಕ ಮೆಹತಾ, ಎನ್.ಜಿ. ಗೋರೆ, ಮಿನೂ ಮಸಾನಿ, ಎಂ.ಎಲ್. ದಾಂತವಾಲ, ಆಚಾರ್ಯ ನರೇದ್ರ ದೇವ, ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯ ಮೊದಲಾದ ಹಲವಾರು ಧುರೀಣರ ಮೇಲೆ ಮಾರ್ಕ್ಸ್‌ವಾದದ ಪ್ರಭಾವ ಪ್ರೇರಣೆಗಳು ನಿಚ್ಚಳವಾಗಿವೆ. ಕರ್ನಾಟಕದ ಸಂದರ್ಭದಲ್ಲಿ ಕಾಂಗ್ರೆಸ್ ಸಮಾಜವಾದಿ ಪಕ್ಷದ ಗೋಪಾಲ ಗೌಡ, ನಿಜಲಿಂಗಪ್ಪ, ಜೆ.ಎಚ್. ಪಟೇಲ್ ಮುಂತಾದ ಮುಖಂಡರ ರಾಜಕೀಯ ನಿಲುವುಗಳಲ್ಲಿ ಲೋಹಿಯಾವಾದಿ ಸಮಾಜವಾದದ ಪ್ರಭಾವ ಕಂಡು ಬರುತ್ತದೆ.

### ೧.೫. ಸ್ಥಿತ್ಯಂತರ ಸಾಂಸ್ಕೃತಿಕ ನೆಲೆ ಸ್ತ್ರೀಯರ ಸ್ಥಿತಿಗತಿ

ಸಾಂಸ್ಕೃತಿಕ ನೆಲೆಯ ಒಟ್ಟು ನಿರ್ಮಿತಿಯ ಒಳಗೆ ಸಮಾಜವಾದ, ದೇಶಿ ಚಿಂತನೆಗಳ ಆತ್ಯಂತಿಕ ಪ್ರಭಾವ ಮೇಲು ಸ್ತರದ್ದಾಗಿದೆ. ಸಾಹಿತ್ಯದ ಪ್ರಗತಿಶೀಲ, ನವ್ಯ-ನವ್ಯೋತ್ತರ ಸಂದರ್ಭಗಳಿಂದಲೂ ಕೂಡ ಮಹಿಳೆಯರ ಬರವಣಿಗೆಗಳ ಮಾದರಿಗಳು ವಿಶೇಷವಾದ ಪಲ್ಲಟಗಳಿಗೆ ಒಳಗಾಗಲೇ ಇಲ್ಲವೆಂದು ಹೇಳಬೇಕಾಗುತ್ತದೆ. ಹೀಗಾಗಿ ಸಾಮಾಜಿಕ ನೆಲೆಯಿಂದಲೇ ಮಹಿಳೆಯರ ಬದುಕನ್ನು ನಿರ್ವಚಿಸಬೇಕಾಗುತ್ತದೆ. ಇದರಲ್ಲಿ ಬಂಡವಾಳಶಾಹಿ ಆರ್ಥಿಕತೆಯಡಿಯಲ್ಲಿ ಮಹಿಳೆಯರು ಅತ್ಯಂತ ಅಗ್ಗದ ಕೂಲಿಗಳಾಗಿ ಮಾರ್ಪಟ್ಟ ಪಲ್ಲಟವನ್ನು ನಿಖರವಾಗಿ ಗುರುತಿಸಬಹುದು. ಮಹಿಳೆಯರು ಕೆಲಸಗಳಲ್ಲಿ ಪುನರಾವರ್ತನೆ ಯಾಗುವ, ಪರಿಣಿತರಲ್ಲದ ಎರಡನೆಯ ದರ್ಜೆಯ ಕಾರ್ಮಿಕರಾಗಿ ದುಡಿಯುವ ವಾತಾವರಣ ಏರ್ಪಟ್ಟು, ಸುಲಭವಾಗಿ ನಿಯಂತ್ರಿಸಬಹುದಾದ ಮತ್ತು ಬೇಕಾದಂತೆ ಬಳಸಿಕೊಳ್ಳಬಹುದಾದ ಶ್ರಮಶಕ್ತಿಗಳಾಗಿ ರೂಪಿತಗೊಂಡರು. ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ಬಂಡವಾಳ ಶಾಹಿ ಆರ್ಥಿಕತೆಯು ಮಾರಾಟಕ್ಕಾಗಿಯೇ ಉತ್ಪಾದನೆ ಮಾಡುವಂಥ ಆರ್ಥಿಕತೆಯಾಗಿದೆ. ಇದು ಮಾರುಕಟ್ಟೆಯ ಹಿತಾಸಕ್ತಿಗಳಿಗಾಗಿ ಎಲ್ಲಾ ಮೌಲ್ಯಗಳನ್ನು, ಎಲ್ಲ ಸಂಬಂಧಗಳನ್ನು, ಎಲ್ಲಾ ಜನರನ್ನು ವಕ್ರೀಕರಿಸಿ, ವ್ಯಾಪಾರೀಕರಿಸಿ, ಅವರ ಸಾಮರ್ಥ್ಯವನ್ನು ಹೊಸಕಿ ಹಾಕುತ್ತದೆ. ಪುರುಷಾಧಿಪತ್ಯದ ರಚನೆಯಲ್ಲಿ ಮಹಿಳೆಯರೇ ಅದರ ತಕ್ಷಣದ ಹಾಗೂ ಸುಲಭದ ಪರಿಣಾಮ ಅನುಭವಿಗಳಾಗುವುದು ಎದ್ದು ಕಾಣುವ ಸ್ಥಿತಿಯಾಗಿದೆ. ಆದ್ದರಿಂದಲೇ ಬಂಡವಾಳಶಾಹಿ ಪುರುಷಾಧಿಪತ್ಯ ಸಂಸ್ಕೃತಿಯು ಪ್ರಾಥಮಿಕವಾಗಿ ಸ್ತ್ರೀಯರನ್ನು ಮಾರಾಟಕ್ಕಿ ರುವ ಸರಕಾಗಿಯೂ, ಮೂರುಕಟ್ಟೆಯಲ್ಲಿ ಗ್ರಾಹಕ ವಸ್ತುಗಳ ಮಾರಾಟವನ್ನು ಹೆಚ್ಚಿಸಲು

ನಗ್ನ-ಅರೆನಗ್ನವಾಗಿ ಪ್ರದರ್ಶಿಸಬಹುದಾದ ದೇಹಗಳನ್ನಾಗಿಯೂ ನೋಡುತ್ತದೆ. ಈ ವಿಷಯವು ಬಂಡವಾಳಶಾಹಿ ಸಮೂಹ ಮಾಧ್ಯಮಗಳ ಜಾಹೀರಾತು, ಕಲೆ, ಸಾಹಿತ್ಯ ಮತ್ತು ಸಿನಿಮಾಗಳ ಮೂಲಕ ಪ್ರಚಾರವಾಗುತ್ತದೆ. ಸಾಮ್ರಾಜ್ಯವಾದದ ಹುಟ್ಟಿನೊಂದಿಗೆ ವೇಶ್ಯಾ ವಾಟಿಕೆ ಮತ್ತು ಅಶ್ಲೀಲ ಸಾಹಿತ್ಯಗಳು ಜಾಗತಿಕ ಮಟ್ಟದ ಉದ್ಯಮಗಳಾಗಿ ಸಂಘಟಿತಗೊಂಡಿವೆ. ಲೈಂಗಿಕತೆಯೂ ಸಹ ಒಂದು ವ್ಯಾಪಾರವಾಗಿದೆ. ಅದೊಂದು ಗಾಢವಾದ ಭಾವನಾತ್ಮಕ ಸಂತುಷ್ಟಿಯಿಲ್ಲದ, ಪರಸ್ಪರ ಆಸಕ್ತಿ-ಹಂಬಲ, ಗೌರವ, ಪ್ರೀತಿ, ಇವೆಲ್ಲವು ಗಳಿಂದ ದೂರವಾದ ಕೇವಲ ದೈಹಿಕ ಭಾವೋದ್ರೇಕ ಎಂಬಂತೆ ನೋಡಲಾಗುತ್ತಿದೆ.

ಸ್ಥಿತ್ಯಂತರ ಸಾಂಸ್ಕೃತಿಕ ಸಂದರ್ಭದೊಳಗೆ ಸ್ತ್ರೀಯರ ಉದ್ಧಾರಕನೆಂಬಂತೆ ತೋರಿಸಿ ಕೊಳ್ಳುವ ಬಂಡವಾಳಶಾಹಿ ವ್ಯವಸ್ಥೆ ವಾಸ್ತವದ ನೆಲೆಗಟ್ಟಿನಲ್ಲಿ ಮನೆಗೆಲಸವನ್ನು (ಜಾಹೀರಾತು, ಪ್ರಚಾರಗಳ ನೆಲೆಯಲ್ಲಿ) ಸಾಮಾಜೀಕರಿಸಬಹುದಾಗಿದ್ದು, ಇದರ ಸಾಧ್ಯತೆಯು ಬಂಡವಾಳಶಾಹಿಗೆ ಪೂರಕವಾಗಿಯೇ ಮಾರ್ಪಡಬಹುದಾಗಿದೆ. ಆದರೆ ಅದರ ಬದಲಿಗೆ, ಅದು ಮಾರುಕಟ್ಟೆಯಲ್ಲಿ ಗೃಹಬಳಕೆ ವಸ್ತುಗಳ ಮಹಾಪೂರವನ್ನೇ ಹರಿಸುತ್ತಾ ಲಾಭವನ್ನಷ್ಟೇ ದೋಚುತ್ತಿರುವುದು ಕಂಡು ಬರುತ್ತದೆ. ಹೀಗಿದ್ದರೂ ಅದು ಸ್ತ್ರೀಯರೆ ಮನೆಗೆಲಸದ ಹೊರೆಗಳನ್ನು ಕಡಿಮೆ ಮಾಡುವುದೇ ಅದರ ಏಕೈಕ ಉದ್ದೇಶವೆಂಬಂತೆ ಸಮರ್ಥಿಸಿಕೊಳ್ಳುತ್ತದೆ. ವಾಸ್ತವದಲ್ಲಿ ಬಂಡವಾಳಶಾಹಿ ವ್ಯವಸ್ಥೆಯ ಒಳಗೆ ದುಡಿವ ವರ್ಗದ ಕುಟುಂಬಗಳ ಮೇಲಿನ ಆರ್ಥಿಕ ಹೊರೆ ಹೆಚ್ಚಾಗುತ್ತದೆ. ಅನೇಕ ಕಾರ್ಮಿಕ ವರ್ಗದ ಮಹಿಳೆಯರು ಇವುಗಳನ್ನು ಕೊಳ್ಳಲು ಅಥವಾ ಅದಕ್ಕಾಗಿ ಹಣ ಕಟ್ಟಲು ಹೆಚ್ಚು ಹೆಚ್ಚಾಗಿ ಕೊನೆಯರಿಯದ ಕೂಲಿ ದುಡಿಮೆಗಳಲ್ಲಿ ಅವರನ್ನು ತೊಡಗಿಸಿಕೊಳ್ಳಬೇಕಾಗುತ್ತದೆ. ಕೊಳ್ಳುಬಾಕ ಸಂಸ್ಕೃತಿಯು ಬಂಡವಾಳಶಾಹಿ ವ್ಯವಸ್ಥೆಯೊಳಗೆ ಹುಟ್ಟನ್ನು ಪಡೆದು ಇಂಡಿಯಾದ ಮಧ್ಯಮ ವರ್ಗದ ಮಹಿಳೆಯರ ಸಂಘರ್ಷಾತ್ಮಕ ಬದುಕಿಗೆ ನಾಂದಿಯಾಗಿದೆ.

ಬಂಡವಾಳಶಾಹಿ ವ್ಯವಸ್ಥೆಯು (ಶೋಷಣೆಯ ಮೂಲರೂಪದಲ್ಲಿ) ಆರ್ಥಿಕತೆಯ ಉಳಿವಿಗಾಗಿ ಅಗಾಧ ಪ್ರಮಾಣದಲ್ಲಿ ಸ್ತ್ರೀಯರನ್ನು 'ಕಾರ್ಮಿಕತೆ'ಯ ಚಲನಾತ್ಮಕ ಘಟ್ಟಕ್ಕೆ ಎಳೆದು ತಂದಿದ್ದರೂ ಕೂಡ ಪ್ರಾಥಮಿಕ ಸ್ಥಿತಿಯಲ್ಲಿ 'ತಾಯ್ತನ'ದ 'ಕುಟುಂಬ'ದ ಊಳಿಗಮಾನ್ಯ ವ್ಯವಸ್ಥೆಯ 'ಜೀತಕಲ್ಪನೆ'ಯನ್ನು ಎಲ್ಲೂ ಒಡೆಯದಂತೆ ಕಾಪಾಡಿಕೊಂಡು ಬಂದಿದೆ. ಇದರಿಂದಾಗಿ ಸ್ತ್ರೀಯರು ಅಗ್ಗದ ಕೂಲಿಗಳಾಗಿ ಮನೆಯಿಂದ ಹೊರಗೆ ದುಡಿಯುವುದಲ್ಲದೆ, ಅದೇ ದಿನದ ಅವಧಿಯಲ್ಲಿ ಮನೆಯೊಳಗೂ ಕೂಡ ಹೆಂಡತಿಯಾಗಿ, ತಾಯಿಯಾಗಿ ಅವರ ಎಂದೂ ಮುಗಿಯದ ಹೊರೆಯನ್ನು ಪ್ರತಿರೋಧ ವ್ಯಕ್ತಪಡಿಸದೆ ನಿಭಾಯಿಸಬೇಕಾಗುತ್ತದೆ.

ಸ್ಥಿತ್ಯಂತರ ಸಾಂಸ್ಕೃತಿಕ ಸಂದರ್ಭವೆನ್ನುವ ಬಂಡವಾಳಶಾಹಿ ಪುರುಷಾಧಿಪತ್ಯ ಸಂಸ್ಕೃತಿ ಯಲ್ಲಿ 'ವಿವಾಹ' ಪುರುಷರಿಗೆ ಲಾಭದಾಯಕವಾಗುವ ಒಂದು ವಾಣಿಜ್ಯ ವ್ಯವಹಾರ ಹಾಗೂ ಒಪ್ಪಂದವಾಗಿ ಮಾರ್ಪಟ್ಟಿರುವುದು ಸ್ಪಷ್ಟವಾಗುತ್ತದೆ. ಬಂಡವಾಳಶಾಹಿ 'ಮದುವೆ' ಮಾರುಕಟ್ಟೆ 'ವರದಕ್ಷಿಣೆ'ಯ ಪದ್ಧತಿಯನ್ನು ಸಾರ್ವತ್ರಿಕ ಆಯಾಮಕ್ಕೆ ಕೊಂಡೊಯ್ಯುವ

ಮೂಲಕ ದುಬಾರಿಯಾಗಿ ರೂಪಾಂತರಗೊಂಡಿದೆ. ಉದಾರವಾದಿ ಸಾಂಸ್ಕೃತಿಕ ನೆಲೆಯಲ್ಲಿ ಮೇಲುಜಾತಿಗಳಲ್ಲಿ ವಿದ್ಯಾವಂತ ಸರಕಾರಿ ಉದ್ಯೋಗದ ಯುವಕರು ಮಾತ್ರ ಪಡೆದುಕೊಳ್ಳುತ್ತಿದ್ದ 'ವರದಕ್ಷಿಣೆ' ಸ್ಥಿತ್ಯಂತರ ಸಾಂಸ್ಕೃತಿಕ ಸನ್ನಿವೇಶದಲ್ಲಿ ಎಲ್ಲ ಜಾತಿಯೊಳಗೂ, ಎಲ್ಲ ಸಮಾಜಗಳಲ್ಲೂ ಹೆಚ್ಚು ಕಡಿಮೆ ಜಾರಿಗೊಂಡಿದೆ. ವರದಕ್ಷಿಣೆಯು ಬಂಡವಾಳಶಾಹಿ ಆರ್ಥಿಕತೆಯು ಅದರ ಅನುಕೂಲಕ್ಕಾಗಿ ಪೋಷಿಸುತ್ತಿರುವ ಊಳಿಗಮಾನ್ಯ ವ್ಯವಸ್ಥೆಯ ಒಳಗೆ ಅತಿಶಕ್ತವಾಗಿ ರೂಢಿಗತಗೊಂಡಿದೆ. ಇದರೊಳಗೆ ಸ್ತ್ರೀಯರನ್ನು ಅತ್ಯಂತ ಕೀಳಾಗಿ ನಡೆಸಿಕೊಳ್ಳುತ್ತಿದ್ದು, ವರದಕ್ಷಿಣೆ ಪದ್ಧತಿಗೆ ಅದು ನೇರವಾಗಿ ಪ್ರಚೋದನೆ ನೀಡುತ್ತದೆ.

ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯಲ್ಲಿ ಮಹಿಳಾ ಕಾರ್ಮಿಕತೆ ಹಲವಾರು ಕಾರಣಗಳಿಂದಾಗಿ ಶಕ್ತವಾಗಿ ಬೆಳವಣಿಗೆ ಸಾಧಿಸುತ್ತಿದೆ. ಇದಕ್ಕೆ ಕಾರಣಗಳನ್ನು ಕೆಳಗಿನಂತೆ ಗುರುತಿಸಬಹುದು.

೧. ಬಂಡವಾಳಶಾಹಿ ವ್ಯವಸ್ಥೆ ಹುಟ್ಟು ಹಾಕಿದ ಮಧ್ಯಮ ವರ್ಗದ ಕುಟುಂಬಗಳ ಆರ್ಥಿಕ ಅಗತ್ಯಗಳಿಗಾಗಿ.
೨. ಸ್ತ್ರೀಯರು ಅವರ ಸ್ವಂತ ದುಡಿಮೆಯ ವರಮಾನದಿಂದ ಕುಟುಂಬದಲ್ಲಿ ಒಂದು ಸ್ಥಾನ ಪಡೆಯಬಹುದು ಎನ್ನುವುದಕ್ಕಾಗಿ.
೩. ಮದುವೆ ಮಾರುಕಟ್ಟೆಯಲ್ಲಿ ಹೆಚ್ಚಿನ ಮೌಲ್ಯಗಳಿಸಿಕೊಳ್ಳುವ ಸಲುವಾಗಿ.
೪. ಸ್ತ್ರೀಯರು 'ತಮ್ಮ ಕಾಲ ಮೇಲೆ ತಾವು ನಿಲ್ಲಬೇಕು' ಎನ್ನುವ ಕಾರಣಗಳನ್ನು ಬಂಡವಾಳಶಾಹಿ ವ್ಯವಸ್ಥೆ ಅತಿಶಕ್ತವಾಗಿ ನಗದೀಕರಣಗೊಳಿಸಿದೆ. ಇದರಲ್ಲಿ,

> "ಮಹಿಳೆಯರು ಎರಡು ರೀತಿಯ ಉತ್ಪಾದಕರಾಗಿರುತ್ತಾರೆ. ಒಂದು ತಾವು ಬಳಸುವ ಆರ್ಥಿಕ ವಸ್ತುಗಳ ಬಳಕೆದಾರರಾಗಿರುವುದಷ್ಟೇ ಅಲ್ಲದೆ, ಭವಿಷ್ಯದ ಶ್ರಮ ಶಕ್ತಿಯ ಉತ್ಪಾದಕರೂ ಆಗಿರುತ್ತಾರೆ. ಆದ್ದರಿಂದ ಭವಿಷ್ಯದ ಶ್ರಮಶಕ್ತಿಯನ್ನು ಉತ್ಪಾದಿಸುವ ಮಹಿಳೆಯರ ಕ್ರಿಯಾಶಕ್ತಿಗೆ ಗುಣಾತ್ಮಕವಾದ ಬೆಲೆ ಕೊಡಲೇಬೇಕಾಗುತ್ತದೆ. ಆದರೆ ವಾಸ್ತವದಲ್ಲಿ ಈ ಕ್ರಿಯಾಶಕ್ತಿಗೆ ಕಿಂಚಿತ್ತೂ ಬೆಲೆಯಿಲ್ಲವೆಂಬುದನ್ನು ಯಾರಾದರೂ ಕಾಣಬಹುದಾಗಿದೆ. 'ಮಾತೃತ್ವವು ಪವಿತ್ರವಾದದ್ದು ಮತ್ತು ಸ್ತ್ರೀಯ ಸಾರ್ಥಕತೆಯಿರುವುದು ಮಾತೃತ್ವದಲ್ಲೇ' ಎನ್ನುವುದು ನಮ್ಮ ಸಂಸ್ಕೃತಿಯ ಪರಮ ಮೌಲ್ಯವಾದರೂ ವಾಸ್ತವದಲ್ಲಿ ದುಡಿಯುವ ಮಾತೆಯರ ಬಗ್ಗೆ ಮತ್ತು ಅವರ ಅಗತ್ಯಗಳ ಬಗ್ಗೆ ಅಂಥ ಗೌರವವಿಲ್ಲ. ಸರಿಯಾದ ಕ್ರೆಷ್ ವ್ಯವಸ್ಥೆ ಇಲ್ಲದಿದ್ದರೆ ದುಡಿಯುವ ಮಹಿಳೆಯರು ನೆಮ್ಮದಿಯಿಂದ ಕೆಲಸ ಮಾಡುವುದು ಕಷ್ಟವಾಗುತ್ತದೆ. ಹೆರಿಗೆ ರಜೆ, ಹೆರಿಗೆ ಭತ್ಯೆಯನ್ನು ಸಂಘಟಿತ ಮಹಿಳೆಯರು ಪಡೆಯುವರಾದರೂ, ಅಸಂಘಟಿತ ಕಾರ್ಯಕ್ಷೇತ್ರಗಳಲ್ಲಿ ಈ ಸೌಲಭ್ಯಗಳನ್ನು ದುಡಿಯುವ ಹೆಂಗಸರು ಪಡೆಯುವುದೇ ಇಲ್ಲ. ಔಷಧಿ ತಯಾರಿಕೆಯ ಕಂಪೆನಿಗಳಲ್ಲಿ ದುಡಿಯುವ ಮಹಿಳೆಯರು ತಮ್ಮ ವಿವಾಹದ ಆಹ್ವಾನ ಪತ್ರದೊಂದಿಗೆ ರಾಜೀನಾಮೆ ಪತ್ರವನ್ನು ಇಡಬೇಕಾಗುತ್ತದೆ.

ಗಗನ ಸಖಿಯರು ಹಾಗೂ ಸಿವಿಲ್ ಸರ್ವೀಸ್ ಹುದ್ದೆಯಲ್ಲಿರುವವರಿಗೆ ಮದುವೆ, ತಾಯ್ತನಗಳು ದುಬಾರಿ ಅಥವಾ ಕೆಲವೊಮ್ಮೆ ಆತಂಕಕಾರಿ ಸಂಗತಿಗಳಾಗುತ್ತವೆ. ಕೆಲವು ಖಾಸಗಿ ಕಂಪೆನಿಗಳಲ್ಲಂತೂ ಹೆರಿಗೆ ಸೌಕರ್ಯ ಗಳನ್ನು ನೀಡಬೇಕೆಂಬ ಕಾರಣಕ್ಕಾಗಿಯೇ ಮಹಿಳೆಯರನ್ನು ಕೆಲಸದಿಂದ ತೆಗೆದುಹಾಕುವ ಪದ್ಧತಿ ಇದೆ. ೧೯೬೭ ರಲ್ಲಿ ಕಲ್ಲಿದ್ದಲು ಮತ್ತು ಗಣಿಗಳಲ್ಲಿ ದುಡಿಯುವ ಮಹಿಳೆಯರ ಸ್ಥಿತಿಗತಿಗಳ ಬಗೆಗೆ ನಡೆಸಿದ ಸಮೀಕ್ಷೆಯ ವರದಿಯು 'ದುಡಿಯುವ ಮಹಿಳೆಯರ ಸಂಖ್ಯೆಯನ್ನು ಕಡಿಮೆ ಮಾಡುವ ಮಾಲೀಕರ ಧೋರಣೆಗೆ ಮುಖ್ಯ ಕಾರಣ ಮಹಿಳೆಯರಿಗೆ ಹೆರಿಗೆ ಸೌಕರ್ಯಗಳನ್ನು ಮತ್ತು ಕ್ರೆಷ್ ವ್ಯವಸ್ಥೆಯನ್ನು ನೀಡಬೇಕೆಂಬುದೇ ಆಗಿದೆ' ಎಂದಿದೆ." (ಗಾಯತ್ರಿ ಎನ್ : ೧೯೯೬; ೧೩೪, ೧೩೫)

ಬಂಡವಾಳಶಾಹಿ ಆರ್ಥಿಕತೆ ಮತ್ತು ಬಂಡವಾಳಶಾಹಿ ಪುರುಷಾಧಿಪತ್ಯ ಸಂಸ್ಕೃತಿಗಳೆರಡೂ ಸಹ ಸ್ತ್ರೀಯರ ಪುನರುತ್ಪತ್ತಿ ಮತ್ತು ದೈಹಿಕತೆಯ ಮೇಲೆ ಹಿಡಿತವನ್ನು ಇಟ್ಟುಕೊಳ್ಳ ಬಯಸುತ್ತವೆ. ಸ್ತ್ರೀಯರಿಗೆ, ಅವರ 'ಫಲಶಕ್ತಿ'ಯೂ ಸೇರಿದಂತೆ ಅವರ ದೇಹದ ಮೇಲಿನ ಯಾವುದೇ ರೀತಿಯ ಹಕ್ಕುಗಳನ್ನು ನಿರಾಕರಿಸಲಾಗಿದೆ. ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯಲ್ಲಿ ಶಿಶು ಜನನವನ್ನು ತಡೆಯಲು ಹಲವಾರು ಗರ್ಭ ನಿರೋಧಕಗಳನ್ನು ಬಿಡುಗಡೆ ಮಾಡ ಲಾಗಿದ್ದು, ಇದು ಉತ್ತಮ ಮತ್ತು ವಿನಾಶಕಾರಿ ಪರಿಣಾಮಗಳಿಗೆ ಕಾರಣವಾಗಿದೆ. ಗರ್ಭಪಾತದ ಸಂದರ್ಭಗಳಲ್ಲಿ ಸ್ತ್ರೀಯರ ದೈಹಿಕ ಮತ್ತು ಮಾನಸಿಕ ಆರೋಗ್ಯಕ್ಕೆ ಯಾವುದೇ ರೀತಿಯ ಲಕ್ಷ್ಯ, ಬೆಲೆ ಇರುವುದಿಲ್ಲ. ಇದಕ್ಕೆ ಬಂಡವಾಳಶಾಹಿ ಪುರಾಷಾಧಿಪತ್ಯ ವ್ಯವಸ್ಥೆಯೇ ಕಾರಣವಾಗಿದೆ. ಬಂಡವಾಳಶಾಹಿ ಪುರುಷಾಧಿಪತ್ಯ ಸಂಸ್ಕೃತಿಯು ಸ್ತ್ರೀಯರ ದೇಹ, ಮನಸ್ಸು, ಭಾವನೆ ಕೊನೆಗೆ ಕನಸುಗಳನ್ನೂ ಕೂಡ ಅದರ ಪ್ರಧಾನ ಅಗತ್ಯಗಳಿಗೆ ಪೂರಕವಾಗಿ ರೂಪಿಸುವುದನ್ನು ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯ ಬರವಣಿಗೆಗಳು ಬಯಲುಗೊಳಿಸುತ್ತವೆ.

ಬಂಡವಾಳಶಾಹಿ ಪುರುಷ ಪ್ರಧಾನ ಕುಟುಂಬ ವ್ಯವಸ್ಥೆಯು ಸ್ತ್ರೀಯರ ಬದುಕಿನ ಗುರಿಗಳೇನಿರಬೇಕೆಂಬುದನ್ನು ಪುರುಷರ ಹಿತಾಸಕ್ತಿಗೆ ತಕ್ಕಂತೆ ರೂಪಿಸುತ್ತದೆ. ಈ ಗುರಿಗಳು ಸಂಕುಚಿತವೂ, ಸೀಮಿತವೂ ಆಗಿರುತ್ತವೆ. ಹಾಗೂ ಬೇರೆ ಬೇರೆ ಸ್ತ್ರೀಯರ ನಡುವೆ ಅವರವರ ಸಾಮಾಜಿಕ, ಆರ್ಥಿಕ ಹಿನ್ನೆಲೆಗೆ ಅನುಗುಣವಾಗಿ ಪ್ರಮಾಣಬದ್ಧವಾಗಿ ಬೇರೆ ಬೇರೆಯಾಗಿ ರುತ್ತವೆ. ಅದೇನೇ ಇದ್ದರೂ ಪಿತೃಪ್ರಧಾನ ವ್ಯವಸ್ಥೆಯೊಳಗೆ ಕುಟುಂಬದಲ್ಲಿ ಎಲ್ಲಾ ಸ್ತ್ರೀಯರಿಗೂ ವಿವಾಹವೇ ಕಡ್ಡಾಯವಾದ ಕೇಂದ್ರ ವಿಷಯವಾಗಿರುತ್ತದೆ. ಇದರಿಂದಾಗಿ ಸ್ಥಿತ್ಯಂತರ ಸಾಂಸ್ಕೃತಿಕ ನೆಲೆಯಲ್ಲಿ ಬರೆವಣಿಗೆಯಲ್ಲಿ ತೊಡಗಿರುವ ಮಹಿಳೆಯರ ಹೆಚ್ಚಿನ ಬರಹಗಳು ಕುಟುಂಬ, ವಿವಾಹದ ಚೌಕಟ್ಟನ್ನು ಸಿದ್ಧ ಮಾದರಿಗಳೆಂಬಂತೆ ಪರಿಭಾವಿಸುವುದು ವ್ಯಕ್ತವಾಗುತ್ತದೆ. ಅವು ವಿವಾಹ - ಕುಟುಂಬದ ಪಲ್ಲಟಗಳನ್ನು ಬಿಂಬಿಸುವ ಮೂಲಕವಾಗಿ ಒಟ್ಟು ಇಂಡಿಯಾದ ಸ್ತ್ರೀಯರ ಬದುಕನ್ನು ವಿಶ್ಲೇಷಿಸುವ ರಚನೆಗಳಾಗಿ ಮುಖ್ಯವಾಗುತ್ತವೆ.

## ಪರಾಮರ್ಶನ ಗ್ರಂಥಗಳು


೧. ಆನಂದ ಕೋಡಿಂಬಳ, ೨೦೦೨, 'ಮಾರ್ಕ್ಸ್‌ವಾದ ಮತ್ತು ಕನ್ನಡ ವಿಮರ್ಶೆ', ಮಂಗಳೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ (ಅಪ್ರಕಟಿತ).

೨. ಒಡಿಯರ್ ಡಿ. ಹೆಗ್ಗಡೆ, ೧೯೮೬, 'ಅಂಬೇಡ್ಕರ್ ಅವರ ಸಮಗ್ರ ಚಿಂತನೆ', ಮಂಗಳ ಗಂಗೋತ್ರಿ, ಮಂಗಳೂರು.

೩. ಗಾಯತ್ರಿ ಎಸ್., ೧೯೯೬, 'ಮಹಿಳೆ : ಬಿಡುಗಡೆಯ ಹಾದಿಯಲ್ಲಿ', ನವಕರ್ನಾಟಕ ಪ್ರಕಾಶನ, ಬೆಂಗಳೂರು.

೪. ಜವರಯ್ಯ ಮ.ಸ., ೧೯೯೫, 'ಅಂಬೇಡ್ಕರ್ ಮತ್ತು ಸಾಮಾಜಿಕ ನ್ಯಾಯ', ಸಿದ್ಧಾರ್ಥ ಗ್ರಂಥಮಾಲೆ, ಮೈಸೂರು.

೫. ತಿಪ್ಪೇರುದ್ರಸ್ವಾಮಿ (ಸಂ.), ೧೯೯೪, 'ಗಾಂಧಿ ವಿಚಾರ ಮಾರ್ಗ', ಗಾಂಧೀ ಭವನ, ಮೈಸೂರು.

೬. ತಿಪ್ಪೇರುದ್ರಸ್ವಾಮಿ ಎಚ್., (ಅನು.), ೧೯೭೦, 'ಮಹಾತ್ಮಾಗಾಂಧಿ ೧೦೦ ವರ್ಷಗಳು', ಗಾಂಧೀಭವನ, ಮಾನಸ ಗಂಗೋತ್ರಿ, ಮೈಸೂರು.

೭. ನಾಗಭೂಷಣ ಡಿ.ಎಸ್., ೧೯೯೦, 'ಗಮನ', ಸಂವಾದ ಪ್ರಕಾಶನ, ಮಲ್ಲಾಡಿಹಳ್ಳಿ.

೮. ನಟರಾಜ ಹುಳಿಯಾರ್ (ಸಂ.), ೨೦೦೦, 'ಕಣ್ಣೆದುರಿನ ಪ್ರಶ್ನೆಗಳು', (ರಾಮ ಮನೋಹರ ಲೋಹಿಯಾ ಬರಹಗಳು ಸಂಪುಟ ನಾಲ್ಕು), ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೯. ನಟರಾಜ್ ಹುಳಿಯಾರ್ (ಸಂ.), ೨೦೦೦, 'ಮಾನವ ಕುಲದ ಏಕತೆ' (ರಾಮ ಮನೋಹರ ಲೋಹಿಯಾ ಬರಹಗಳು ಸಂಪುಟ ನಾಲ್ಕು), ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೧೦. ಬಾಪು ಹೆದ್ದೂರ ಶೆಟ್ಟಿ, ೧೯೮೯, 'ಮಾರ್ಕ್ಸ್‌ವಾದ', ನವಕರ್ನಾಟಕ ಪ್ರಕಾಶನ, ಬೆಂಗಳೂರು.

೧೧. ಯಶಪಾಲ್, ೧೯೯೪, 'ಗಾಂಧಿವಾದದ ಶವ ಪರೀಕ್ಷೆ', ಡಿ.ವಿ.ಕೆ. ಮೂರ್ತಿ, ಮೈಸೂರು.

೧೨. ರಾಮಚಂದ್ರನ್ ಸಿ.ಎನ್. ೧೯೯೫, 'ಆಶಯ-ಆಕೃತಿ', ಅಭಿನವ ಪ್ರಕಾಶನ, ಬೆಂಗಳೂರು.

೧೩. ವಸಂತ ಬನ್ನಾಡಿ, ೧೯೯೫, 'ಸಂಸ್ಕೃತಿ ಚಿಂತನೆ', ಅರಿವು ಬರಹ ಪ್ರಕಾಶನ, ಮಂಗಳ ಗಂಗೋತ್ರಿ, ಮಂಗಳೂರು.

೧೪. ಶ್ರೀಮತಿ ಎಚ್.ಎಸ್. (ಸಂ.), ೧೯೯೯, 'ಮಹಿಳಾ ಅಧ್ಯಯನ', ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬.

೧೫. Ambedkar B.R., 1973, Poona Paet Vol-1, Bhagawan Das (Ed); Bombay Press Group, Bombay.

# ಕನ್ನಡ ಸಾಹಿತ್ಯ ಪರಂಪರೆ ಮತ್ತು ಮಹಿಳಾ ಸಾಹಿತ್ಯ

ಎಸ್.ವಿ. ಪ್ರಭಾವತಿ

"ಹಿಂದಣ ಹೆಜ್ಜೆಯನರಿತಲ್ಲದೇ ನಿಂದ ಹೆಜ್ಜೆಯನರಿಯಬಾರದು" ಎನ್ನುತ್ತಾನೆ ಅಲ್ಲಮ ಪ್ರಭು. ಅಂದರೆ ಇಂದು ನಾವಿರುವ ಸ್ಥಿತಿ ತಿಳಿಯಬೇಕಾದರೆ ಹಿಂದೆ ನಾವಿದ್ದ ಸ್ಥಿತಿಯ ಅರಿವು ಅಗತ್ಯ, ಅಂದರೆ ಪರಂಪರೆಯ ಅರಿವು ಅಗತ್ಯ. ಕನ್ನಡ ಸಾಹಿತ್ಯದ ಪರಂಪರೆಯನ್ನು ನಾವು ಜನಪದ ಸಾಹಿತ್ಯಕ್ಕೆ ಕೊಂಡೊಯ್ಯಬೇಕು. ಹೆಸರಿಲ್ಲದ, ಹೆಸರೊಲ್ಲದ ಈ ಮಹಿಳೆಯರು ರಾಗಿ ಬೀಸುವಾಗ, ಭತ್ತ ಕುಟ್ಟುವಾಗ, ತೊಟ್ಟಿಲು ತೂಗುವಾಗ, ಕೆಲಸದ ಏಕತಾನತೆಯನ್ನು ಹೋಗಲಾಡಿಸುವುದಕ್ಕಾಗಿ ಹಾಕಿದ ತ್ರಿಪದಿಗಳೆ ಕನ್ನಡದ ಮೊದಲ ಅಲಿಖಿತ ಸಾಹಿತ್ಯ. ಇದು ಮಾತೃಪ್ರಧಾನ ಕುಟುಂಬ ವ್ಯವಸ್ಥೆಯದು. ಐದು ಸಾವಿರ ವರ್ಷಗಳ ಪ್ರಾಚೀನ ಇತಿಹಾಸವನ್ನು ಹೊಂದಿರುವ ಈ ದೇಶದ ಮೊಟ್ಟಮೊದಲ ಲಿಖಿತ ಸಾಹಿತ್ಯವಾದ ವೇದಗಳ ಕಾಲಕ್ಕೇ ಸ್ತ್ರೀಯರಿಗೆ ಪ್ರಾಶಸ್ತ್ಯವಿತ್ತು. ಅನೇಕ ವೇದ ಮಂತ್ರಗಳನ್ನು ಸ್ತ್ರೀಯರೇ ರಚಿಸಿದ ದಾಖಲೆಗಳಿವೆ. ಆದರೆ ಉಪನಿಷತ್ತು ರಾಮಾಯಣ ಮಹಾಭಾರತಗಳ ಕಾಲ ಮುಗಿದು ಸ್ಮೃತಿಗಳ ಕಾಲ ಪ್ರಾರಂಭವಾಗುವ ವೇಳೆಗೆ ಗ್ರೀಕರು, ಹೂಣರು, ಕುಶಾನರು ಮೊದಲಾದ ಪರಕೀಯರ ಧಾಳಿಯಿಂದ ನಮ್ಮ ಸಂಸ್ಕೃತಿಯನ್ನು ಕಾಪಾಡಿಕೊಳ್ಳುವ ಸಲುವಾಗಿ ಸ್ಮೃತಿ ಗ್ರಂಥಗಳು ಇಡೀ ಸಮಾಜದ ಮೇಲೆ ಅನೇಕ ನಿರ್ಬಂಧಗಳನ್ನು ಹಾಕಿದವು. ಹೀಗೆ ಹಾಕಿದವರು ಪುರುಷರಾದುದರಿಂದ ಅವರು ಸಹಜವಾಗಿಯೇ ಈ ನಿರ್ಬಂಧಗಳನ್ನು ಸ್ತ್ರೀಯರ ಮೇಲೆ ಹೇರಿದರು. ಇಲ್ಲಿಂದ ಮುಂದೆ ಹೆಣ್ಣಿನ ಧ್ವನಿ ಕ್ಷೀಣವಾದುದನ್ನು ನಾವು ಕಾಣುತ್ತೇವೆ.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ರನ್ನನನ್ನು ಕನ್ನಡದ ಮೊಟ್ಟ ಮೊದಲ ಸ್ತ್ರೀವಾದಿ ಎನ್ನಬಹುದು. ಅವನು ತನಗೆ ಆಶ್ರಯ ಕೊಟ್ಟ ಅತ್ತಿಮಬ್ಬೆಯನ್ನು ದಾನ ಚಿಂತಾಮಣಿ ಎಂದು ಕರೆದು ತನ್ನ "ಅಜಿತಪುರಾಣ"ದಲ್ಲಿ ಸುಮಾರು ಅರವತ್ತಾರು ಪದ್ಯಗಳಲ್ಲಿ ಮನದುಂಬಿ ವರ್ಣಿಸಿದ್ದಾನೆ. ಕನ್ನಡದ ಮೊಟ್ಟಮೊದಲ ಕವಯಿತ್ರಿಯಾದ ಅಕ್ಕಮಹಾದೇವಿಯು ತನ್ನ ವೈಯಕ್ತಿಕ ಬದುಕಿಗೆ, ತನ್ನ ಮತ್ತು ಮಲ್ಲಿಕಾರ್ಜುನನ ಸಂಬಂಧಕ್ಕೆ ಕೊಟ್ಟ ಪ್ರಾಶಸ್ತ್ಯವನ್ನು ಇಡೀ ಸ್ತ್ರೀ ಸಮುದಾಯಕ್ಕೆ ನೀಡಿದ್ದೇ ಆಗಿದ್ದ ಪಕ್ಷದಲ್ಲಿ ಅವಳೇ ಕನ್ನಡದ ಮೊದಲು ಸ್ತ್ರೀವಾದಿಯಾಗುತ್ತಿದ್ದಳು. ಅವಳ ಸಮಕಾಲೀನರಾಗಿ ಮೂವತ್ತು ಮೂರು ಶಿವಶರಣೆಯರು

ಬಂದರೂ ಗೊಗ್ಗವ್ವೆ, ಸೂಳೆ ಸಂಕವ್ವ, ಮುಕ್ತಾಯಕ್ಕ ನಂತರ ಒಬ್ಬಬ್ಬರನ್ನು ಹೊರತು ಪಡಿಸಿದರೆ ಉಳಿದವರಿಗೆ ವಿಶೇಷವಾದ ಭಾವ ಸಂಪತ್ತಿಯಾಗಲೀ ಶಬ್ದ ಸಂಪತ್ತಿಯಾಗಲೀ ಇಲ್ಲ. ಮತ್ತೆ ಹೆಚ್ಚಿನ ಧ್ವನಿ ಕೇಳಲು ನಾವು ಐನೂರು ವರ್ಷ ಕಾಯಬೇಕು. ಹರಪನಹಳ್ಳಿ ಭೀಮವ್ವನಂತಹ ಹರಿದಾಸ ಪರಂಪರೆಯ ಕೆಲವು ಹೆಸರನ್ನು ಬಿಟ್ಟರೆ ಎದ್ದು ಕಾಣುವಂತಹ ಮಹಿಳಾ ಸಾಹಿತ್ಯ ಈ ಅವಧಿಯಲ್ಲಿ ಏಕೆ ಬರಲಿಲ್ಲವೋ ತಿಳಿಯದು. ಹದಿನೇಳನೇ ಶತಮಾನದ ಚಿಕ್ಕದೇವರಾಜ ಒಡೆಯರ ಆಸ್ಥಾನದಲ್ಲಿದ್ದ ಸಂಚಿ ಹೊನ್ನಮ್ಮನ "ಪೆಣ್ಣಲ್ಲವೇ ನಮ್ಮನೆಲ್ಲಾ ಪಡೆದ ತಾಯಿ" ಎಂಬ ಪ್ರಸಿದ್ಧವಾದ ಒಂದು ಪದ್ಯದಿಂದ ಅವಳ ಹದಿಬದೆಯ ಧರ್ಮವನ್ನು ಅಳೆಯದೇ ಉಳಿದ ಪದ್ಯಗಳಲ್ಲಿ ಅವಳು ಹೆಣ್ಣಿಗೆ ವಿಧಿಸಿರುವ ನಿರ್ಬಂಧಗಳನ್ನು ಗಮನಿಸಬೇಕು. ಕೀರ್ತನ ಸಾಹಿತ್ಯವನ್ನು ಸಮೃದ್ಧಿಗೊಳಿಸಿದ ಅವಳ ಸಮಕಾಲೀನರಾದ ಚೆಲುವಾಂಬೆ, ಹೆಳವನಕಟ್ಟೆ ಗಿರಿಯಮ್ಮ ಮೊದಲಾದವರೂ ಸಂಪ್ರದಾಯದ ಭಾರದಡಿಯಲ್ಲಿ ನಲುಗಿದವರೇ.

ಈ ಹಿನ್ನೆಲೆಯಿಂದ ಕನ್ನಡ ಸಾಹಿತ್ಯಕ್ಕೆ ಬಂದರೆ ನವೋದಯದ ಹಂತದಲ್ಲಿಯೇ ಒಟ್ಟು ಹನ್ನೊಂದು ಮಂದಿ ಲೇಖಕಿಯರಿರುವುದು ನನ್ನ ಗಮನಕ್ಕೆ ಬಂದಿದೆ. ಆದರೆ ಯಾವ ಪ್ರಾತಿನಿಧಿಕ ಸಾಹಿತ್ಯ ಚರಿತ್ರೆಯಲ್ಲಿಯೂ ಇವರ ಪ್ರಸ್ತಾಪವಾಗದಿರುವುದರಿಂದ ಇವರ ಬಗ್ಗೆ ಮಾಹಿತಿ ಬಯಸಿ ಸಾಹಿತ್ಯ ಚರಿತ್ರೆ ಓದುವವರಿಗೆ ನಿರಾಶೆಯೇ ಕಾದಿದೆ. ಹೀಗಾದರೆ ಮಹಿಳಾ ಸಾಹಿತ್ಯ ಚರಿತ್ರೆಯನ್ನೂ ಮಹಿಳೆಯರೇ ಬರೆಯಬೇಕೇನೋ! ಹೀಗೆ ಬರುವ ಆಧುನಿಕ ಸಾಹಿತ್ಯದ ಮೊದಲ ತಲೆಮಾರಿನ ಮೊದಲ ಲೇಖಕಿ ನಂಜನಗೂಡು ತಿರುಮಲಾಂಬಾ, ಎಂಟನೇ ವರ್ಷಕ್ಕೆ ಮದುವೆಯಾಗಿ ಹನ್ನೆರಡಕ್ಕೆ ವಿದವೆಯಾದ ತಿರುಮಲಾಂಬ ತಂದೆಯ ಪ್ರೋತ್ಸಾಹದಿಂದ ಮುಂದಕ್ಕೆ ಓದಿ 'ಸತೀ ಹಿತೈಷಿಣಿ' ಎಂಬ ಗ್ರಂಥ ಮಾಲೆಯಲ್ಲಿ "ಸನ್ಮಾರ್ಗ ದರ್ಶಿನಿ' 'ಕರ್ನಾಟಕ ನಂದಿನಿ' ಎಂಬ ಪತ್ರಿಕೆಗಳನ್ನು ನಡೆಸಿದರು. ನಭಾ, ಸುಶೀಲೆ, ವಿರಾಗಿಣಿ, ಗಿರಿಜಾಬಾಯಿ ಮೊದಲಾದ ಹನ್ನೆರಡು ಕಾದಂಬರಿಗಳನ್ನೂ ವಿವೇಕೋದಯ, ಚಂದ್ರವದನ ಮೊದಲಾದ ನಾಟಕಗಳನ್ನೂ ಭಕ್ತಿಗೀತೆಗಳನ್ನೂ ಬರೆದರು. ಆಗಿನ ಬಂಗಾಳಿ ಕಾದಂಬರಿಗಳ (ಅನುವಾದಗಳ) ಪ್ರಭಾವಕ್ಕೊಳಗಾಗಿದ್ದ ತಿರುಮಲಾಂಬಾ ವಿಧವಾ ವಿವಾಹದ ಪ್ರಸ್ತಾಪ ಮಾಡಿದರೂ ಕೊನೆಗೆ ಹೆಣ್ಣಿಗೆ ಮರುಮದುವೆ ಬೇಡ ಎಂದು ಬಿಡುತ್ತಾರೆ. ಕಾಡು ಹರಟೆ ಸಲ್ಲದು, ಹೆಣ್ಣಿಗೆ ವಿದ್ಯೆ ಬೇಕು ಎನ್ನುವ ಅವರು ಪತಿಯೇ ಪರದೈವ ಎಂದೂ ಹೇಳುತ್ತಾರೆ. ಸಂಪ್ರದಾಯ ಕ್ರಾಂತಿ ಎರಡೂ ಒಟ್ಟೊಟ್ಟಿಗೇ ಸ್ಫೋಟಗೊಳ್ಳುವುದೇ ಇವರ ವಿಶೇಷ. ತಮ್ಮ ಜೀವಿತ ಕಾಲದಲ್ಲಿಯೇ ಮಾಸ್ತಿಯವರ 'ಜೀವನ' ಪತ್ರಿಕೆಯಲ್ಲಿ ತಮ್ಮ ಕೃತಿಗಳ ಕಟು ವಿಮರ್ಶೆಗೆ ಗುರಿಯಾದ ಇವರು ಮುಂದಿನ ಲೇಖಕಿಯರಿಗೆ ಒಳ್ಳೆಯ ಮಾರ್ಗದರ್ಶನವನ್ನೇ ಹಾಕಿ ಕೊಟ್ಟರು.

ಹೆಚ್.ವಿ. ಸಾವಿತ್ರಮ್ಮನವರು ತಮ್ಮ "ರಾಮ ಸೀತೆ ರಾವಣ" ಕಾದಂಬರಿಯ ಸ್ತ್ರೀಪರ ನಿಲುವಿಗಾಗಿ 'ವಿಮುಕ್ತೆ' ಕಾದಂಬರಿಯ ಸೀತೆಯ ಅಂತ್ಯಕ್ಕಾಗಿ ವಿಮರ್ಶಕರ ಮನ್ನಣೆಗೆ

ಗುರಿಯಾದ ಮೊದಲ ಅನುಪಮಾ ಪ್ರಶಸ್ತಿ ವಿಜೇತೆ. ಅನೇಕ ಅನುವಾದಗಳನ್ನು ಮಾಡಿದವರು. ತಮ್ಮ ಒಂದು ಪ್ರಬಂಧದಲ್ಲಿ "ಒಂದು ಹೆಣ್ಣು ಮದುವೆಯಿಲ್ಲದೇ ಒಂದು ಮಗುವನ್ನು ಪಡೆದು ಸಾಕಿ ಸಲಹಿದಾಗ ಮಾತ್ರ ಈ ಸಮಾಜದಲ್ಲಿ ಹೆಣ್ಣನ್ನು ನೋಡುವ ದೃಷ್ಟಿ ಬದಲಾಗುತ್ತದೆ" ಎಂಬ ಮಾತನ್ನು "ಸ್ತ್ರೀವಾದ" ಎಂಬ ಪದವನ್ನೇ ಕನ್ನಡ ಸಾಹಿತ್ಯದಲ್ಲಿ ಕೇಳರಿಯದಿದ್ದ ದಿನಗಳಲ್ಲಿ ಹೇಳಿದವರು.

ಭಾರತಿ ಎಂಬ ಕಾವ್ಯನಾಮದಿಂದ ಬರೆಯುತ್ತಿದ್ದ ಸೀತಾಶರ್ಮರ ಪತ್ನಿ ತಿರುಮಲೆ ರಾಜಮ್ಮ ವೀಣೆ ನುಡಿಸುವುದರಲ್ಲೂ ಪ್ರವೀಣೆ. ಭಾರತಿ, ವೀಣಾ ಭಾರತಿ ಎಂದೇ ಹೆಸರಾದ ಇವರು ನಾಟಕಗಳಲ್ಲೂ ಅಭಿನಯಿಸುತ್ತಿದ್ದರು. ಆ ಕಾಲಕ್ಕೇ ತಮ್ಮ ನಾಟಕಗಳಲ್ಲಿ ಸರಳ ರಗಳೆಯ ಪ್ರಯೋಗ ನಡೆಸಿದವರು, ಕಪಟ ನಾಟಕ, ಅಹಲ್ಯಾ, ತಪಸ್ವಿನಿ, ಮಹಾಸತಿ, ವಾತ್ಸಲ್ಯ ತರಂಗಲೀಲಾ, ಉನ್ನತ ಭಾಮಿನಿ, ಸ್ವರ್ಗ ವಿರಸನ ಎಂಬ ಏಕಾಂಕ ನಾಟಕಗಳನ್ನು, ರಾಷ್ಟ್ರಭಕ್ತಿ, ರಾಷ್ಟ್ರಶಕ್ತಿ ಎಂಬ ಕವನ ಸಂಕಲನಗಳನ್ನೂ ಆರ್ಯ ಕೈಲಾಸಂ, ವೀಣೆ ಶೇಷಣ್ಣ ಎಂಬ ಜೀವನ ಚರಿತ್ರೆಗಳನ್ನೂ ಬರೆದಿದ್ದಾರೆ.

'ಗಂಗರಸ ದುರ್ವಿನೀತ' ಎಂಬ ಮೊಟ್ಟಮೊದಲ ಮಹಿಳೆ ಬರೆದ ಐತಿಹಾಸಿಕ ಕಾದಂಬರಿ ಎಂಬ ಅಗ್ಗಳಿಕೆಯನ್ನು ತಮ್ಮದಾಗಿಸಿಕೊಂಡ ಸಿ.ಎನ್. ಜಯಲಕ್ಷ್ಮೀ ದೇವಿಯವರೂ ಅನೇಕ ನಾಟಕಗಳನ್ನು ಬರೆದಿದ್ದಾರೆ.

ಮಕ್ಕಳ ಕೂಟದ ಸಂಸ್ಥಾಪಕಿ ಆದ ಕಲ್ಯಾಣಮ್ಮನವರು ಬಾಲ ವಿಧವೆ. ಸ್ವತಃ ಓದಿ ಮುಂದೆ ಬಂದು "ಸರಸ್ವತಿ" ಎಂಬ ಪತ್ರಿಕೆ ನಡೆಸಿದವರು. ತಿರುಮಲಾಂಬಾಗಿಂತ ಪ್ರಗತಿಪರ ಲೇಖಕಿ ಎನ್ನಿಸಿಕೊಂಡ ಇವರು "ನಿರ್ಭಾಗ್ಯ ವನಿತೆ" ಎಂಬ ಕತೆಯಲ್ಲಿ ವಿಧವೆಗೆ ಮದುವೆ ಮಾಡಿಸಿಯೇ ಬಿಡುತ್ತಾರೆ. ಅಂದಿನ ಕಾಲದಲ್ಲಿ ವಿಧವಾ ವಿವಾಹವನ್ನು ಪ್ರೋತ್ಸಾಹಿಸಿದವರ ಹೆಸರು, ಅದಕ್ಕೆ ಸಂಬಂಧಿಸಿದ ಕಾನೂನು ಈ ಎಲ್ಲದರ ಅರಿವು ಅವರಿಗಿತ್ತು. ಕಥಾನಾಯಕನೊಂದಿಗೆ ಒಂದು ಚರ್ಚೆಯನ್ನೇ ಅವರೊಂದಿಗೆ ಏರ್ಪಡಿಸುತ್ತಾರೆ.

'ಗಿರಿಬಾಲೆ' ಎಂಬ ಕಾವ್ಯನಾಮದಿಂದ ಬರೆದ ಸರಸ್ವತಿಬಾಯಿ ರಾಜವಾಡೆ ಅವರು 'ಸುಪ್ರಭಾತ' ಎಂಬ ಪತ್ರಿಕೆ ನಡೆಸುತ್ತಿದ್ದರು. ಆಹುತಿ ಮತ್ತು ಇತರ ಕತೆಗಳು ಇವರ ಸಂಕಲನ.

ಶ್ಯಾಮಲಾದೇವಿಯವರು "ಜಯ ಕರ್ನಾಟಕ"ದ ಮಹಿಳಾ ವಿಭಾಗವನ್ನು ನೋಡಿಕೊಳ್ಳುತ್ತಿದ್ದವರು. 'ಹೂಬಿಸಿಲು', 'ಹೊಂಬಿಸಿಲು' ಅವರ ಎರಡು ಕಥಾ ಸಂಕಲನಗಳು.

ಶ್ರೀಮತಿ ಬಿ.ಟಿ. ಕೃಷ್ಣ ಎಂದೇ ಹೆಸರಾದ ಕೊಡಗಿನ ಗೌರಮ್ಮ 'ಕಣ್ಣೀರು ಮತ್ತು 'ಚಿಗುರು' ಎಂಬ ಎರಡು ಕಥಾಸಂಕಲನ ನೀಡಿ ಚಿಕ್ಕ ವಯಸ್ಸಿಗೇ ಅಕಾಲ ಮೃತ್ಯುವಿಗೆ ತುತ್ತಾದವರು. ಇದೀಗ ಸಂಸ್ಕೃತಿ ಇಲಾಖೆ ಅವರ ಎಲ್ಲ ಕಥೆಗಳನ್ನೂ ಸಂಪಾದಿಸಿ ಪ್ರಕಟಿಸಿದೆ.

ತಮ್ಮ 'ಚಂಡ ಶಾಸನ' ಎಂಬ ಪದ್ಯದ ಸ್ತ್ರೀವಾದಿ ನಿಲುವಿನಿಂದ ಖ್ಯಾತರಾದ ಬೆಳಗೆರೆ ಜಾನಕಮ್ಮ ಕೇವಲ ಗೃಹಿಣಿಯಾಗಿದ್ದುಕೊಂಡೇ ಕವಿತೆ ಬರೆದವರು. ನಾಗರಿಕ ಜಗತ್ತಿನ ಸಂಪರ್ಕವಿಲ್ಲದಿದ್ದ ಇವರದು ಉತ್‌ಸ್ಫೂರ್ತಿ ರಚನೆಗಳು. ಬೇಂದ್ರೆ, ಮಾಸ್ತಿ ಅವರ ಮನೆಗೆ ಬಂದು ಚರ್ಚಿಸುತ್ತಿದ್ದರಂತೆ.

ಮೂಕಾಂಬಿಕಮ್ಮ ಮತ್ತು ಪಡುಕೋಣೆ ಸೀತಾದೇವಿಯವರು ಅನುವಾದ ಮತ್ತು ನಾಟಕ ರಚನೆ ಮಾಡಿದವರು.

ಇಷ್ಟು ಪ್ರಗತಿಪರ ಆಲೋಚನೆಗಳುಳ್ಳ ನವೋದಯ ಹಂತದ ಈ ಲೇಖಕಿಯರು ಸಾಹಿತ್ಯ ಚರಿತ್ರೆಕಾರರ ಮತ್ತು ವಿಮರ್ಶಕರ ನಿರ್ಲಕ್ಷ್ಯಕ್ಕೆ ಒಟ್ಟಿಗೇ ಒಳಗಾದವರು. ಸ್ತ್ರೀವಾದಿ ಚಳುವಳಿಯ ಮುಂಚೂಣಿಯಲ್ಲಿದ್ದ ಕೆಲವು ಲೇಖಕಿಯರ ಸತತ ಪ್ರಯತ್ನದಿಂದಾಗಿ ಇವರೆಲ್ಲರ ಬಗ್ಗೆ ಪ್ರತ್ಯೇಕವಾದ ಗ್ರಂಥಗಳೇ ಈಗ ಪ್ರಕಟವಾಗಿವೆ. ಡಾ. ವಿಜಯಾ ದಬ್ಬೆ ಯವರ "ಒತ್ತೈಷಿಣಿಯ ಹೆಜ್ಜೆಗಳು" ಮತ್ತು "ಶ್ಯಾಮಲಾ ಸಂಚಯ", ನೇಮಿಚಂದ್ರ ಅವರ "ಬೆಳಗೆರೆ ಜಾನಕಮ್ಮ ಬದುಕು-ಬರಹ", ಎಚ್.ಎಸ್. ಬೀಳಗಿ ಅವರ "ಮೂಕಾಂಬಿಕಮ್ಮ", ಎಚ್.ಎಸ್. ಪಾರ್ವತಿ ಅವರ "ಭಾರತಿ", ಡಾ. ಚಂದ್ರಮತಿ ಸೋಂದಾ ಅವರ "ಸಿ.ಎನ್. ಜಯಲಕ್ಷ್ಮೀದೇವಿ ವ್ಯಕ್ತಿ-ಅಭಿವ್ಯಕ್ತಿ", ಡಾ. ಸುಮಿತ್ರಾಬಾಯಿ ಮತ್ತು ಎನ್. ಗಾಯಿತ್ರಿ ಯವರ "ವಿಮುಕ್ತಿಯ ಹಾದಿಯಲ್ಲಿ", ಸುಮಿತ್ರಾಬಾಯಿಯವರ "ಕಲ್ಯಾಣ ಸರಸ್ವತಿ" ಇವಿಷ್ಟೂ ಗ್ರಂಥಗಳು ಈಗ ನಮ್ಮ ಕಣ್ಣೆದುರು ಇರುವುದರಿಂದ ಮುಂದಿನ ಸಾಹಿತ್ಯ ಚರಿತ್ರೆಕಾರರು ಇವರನ್ನು ಅಲಕ್ಷಿಸುವಂತೆ ಇಲ್ಲ. ಇವರ ಸಾಧನೆಗಳು ಗುಟ್ಟಾಗಿಯೂ ಉಳಿದಿಲ್ಲ. ಮೇಲುನೋಟಕ್ಕೆ ಇವರು ಸಾಂಪ್ರದಾಯಿಕ ಮನೋಭಾವದವರಂತೆ ತೋರಿದರೂ ಅಂದಂದಿನ ಕಾಲಕ್ಕೆ ಅವರದು ಪ್ರಗತಿಪರ ಮನೋಭಾವನೆ ಆಗಿತ್ತು ಎಂಬುದನ್ನು ಇಂದಿನ ವಿಮರ್ಶೆಯ ಮಾನದಂಡದಿಂದ ಅವರನ್ನು ಅಳೆಯುವ ನಾವು ಗುರುತಿಸಲಾಗುತ್ತಿಲ್ಲ. ಅಂದಿನ ಸುಧಾರಣಾವಾದಿಗಳಾದ ವೆಂಕಟ ರಂಗೋ ಕಟ್ಟಿ, ಆಲೂರು ವೆಂಕಟರಾಯರು, ಕರ್ಕಿ ವೆಂಕಟರಮಣಶಾಸ್ತ್ರಿ, ಕೆರೂರು ವಾಸುದೇವಾಚಾರ್ಯ - ಇಂಥವರನ್ನು ಇವರು ಮಾದರಿ ಯಾಗಿಟ್ಟುಕೊಂಡರೇ ಹೊರತು ರಮ್ಯ ಸಂಪ್ರದಾಯದ ಕುವೆಂಪು ಮಾಸ್ತಿ ಅವರನ್ನಾಗಲೀ, ಜನಪ್ರಿಯತೆಗಾಗಿ ಬರೆಯುತ್ತಿದ್ದ ಅನಕೃ, ತರಾಸು, ನಿರಂಜನ ಅವರನ್ನಾಗಲೀ ಮಾದರಿ ಯಾಗಿಟ್ಟುಕೊಳ್ಳಲಿಲ್ಲ ಎಂಬುದು ಮಹತ್ವದ ಅಂಶ. ಅಂದ ಮಾತ್ರಕ್ಕೆ ಅವರು ಬರೆದುದೆಲ್ಲಾ ಪ್ರಗತಿಪರ ಎಂದಾಗಲೀ ಅವರು ಕಲಾತ್ಮಕವಾಗಿ ಬರೆದರು, ಜಾಗೃತಿ ಮೂಡಿಸಿದರು ಎಂದಾಗಲೀ ಹೇಳಲಾಗುವುದಿಲ್ಲ. ಹೊಸ ಗಾಳಿಗೆ ಬೆನ್ನು ತಿರುಗಿಸಲೂ ಆಗದ, ಹಳೆಯ ಕಂದಾಚಾರಗಳನ್ನು ಬಿಡಲೂ ಆಗದ ದ್ವಂದ್ವ ಮನೋಭಾವವನ್ನು ಅವರಲ್ಲಿ ಕಾಣಬಹುದು.

ದುರದೃಷ್ಟವಶಾತ್ ಇವರ ನಂತರ ಬಂದ ಎರಡನೇ ತಲೆಮಾರಿನ ಲೇಖಕಿಯರು ತಮ್ಮ ಅಕ್ಕಂದಿರನ್ನು ಅನುಸರಿಸದೇ ರಂಜನೀಯವಾಗಿ ಬರೆಯುತ್ತಿದ್ದ ಲೇಖಕರನ್ನು ಅನುಸರಿಸಿ, ಪುರುಷ ನಿರ್ಮಿತ ಮಾದರಿಯಲ್ಲೇ ಬರೆದುದರಿಂದ, ಮನರಂಜನೆಗಾಗಿ ಸಾಹಿತ್ಯ ಎಂಬ ಆದರ್ಶವನ್ನಿಟ್ಟುಕೊಂಡುದರಿಂದ, ಇಂದು ವಿಮರ್ಶಕರು "ಮಹಿಳೆಯರು ಬರೆಯು ವುದರಲ್ಲೇನಿದೆ ಮಹಾ ಬರೀ ಬಂಗಲೆ ಕಾರು ಒಡವೆ ಪ್ರಣಯ ಪ್ರೀತಿ" "ಅಡಿಗೆ ಮನೆ ನಾಲ್ಕು ಗೋಡೆಗಳಾಚೆ ಅವರಿಗೇನೂ ಗೊತ್ತಿಲ್ಲ" ಎಂದು ಉದಾಸೀನದಿಂದ ಕಾಣು ವಂತಾಯಿತು. ವೇದಿಕೆಯ ಮೇಲಿನ ಭಾಷಣಗಳಲ್ಲಿ ಒಬ್ಬ ಮಹಿಳೆಯನ್ನೂ ಹೆಸರಿಸದೇ

ಜಾರಿಕೊಳ್ಳುವಂತಾಯಿತು. "ನೀವು ಲೇಖಕಿಯರಲ್ಲಿ ಒಬ್ಬ ಶಿವರಾಮ ಕಾರಂತ ಬರಲಿಲ್ಲ ಏಕೆ?" ಎಂದು ಕೇಳುವಂತಾಯಿತು. ನೇಮಿಚಂದ್ರ, ವೈದೇಹಿ, ನಾಗವೇಣಿ ಬರೆಯ ತೊಡಗಿದ ಮೇಲೂ ಹೀಗೇ ಕೇಳುತ್ತಿರುವುದು ಎಷ್ಟರಮಟ್ಟಿಗೆ ಸರಿ. ಇಂದು ನಮ್ಮೊಂದಿಗೆ ಕುವೆಂಪು, ಕಾರಂತ ಇಬ್ಬರನ್ನೂ ಒಟ್ಟಿಗೇ ನೆನಪಿಸುವ ನಾಗವೇಣಿಯಿದ್ದಾಳೆ. ಗಂಡು ಭಾಷೆಯ ಗೀತಾ ನಾಗಭೂಷಣ ಇದ್ದಾರೆ. ಪ್ರಾದೇಶಿಕತೆಯ ಎಂ.ಎಸ್. ವೇದಾ ಇದ್ದಾರೆ. ಈಗ ನಾವು, "ನೀವು ಲೇಖಕರಲ್ಲಿ ಒಬ್ಬ ಎಂ.ಕೆ. ಇಂದಿರಾ ಬರಲಿಲ್ಲ ಏಕೆ? ಒಬ್ಬ ವೈದೇಹಿ ಬರಲಿಲ್ಲ ಏಕೆ?" ಎಂದು ಕೇಳುವಂತಾಗಿದ್ದೇವೆ.

ಎರಡನೇ ತಲೆಮಾರಿನ ಲೇಖಕಿಯರ ಪಟ್ಟಿಯನ್ನು ತ್ರಿವೇಣಿಯವರಿಂದ ಪ್ರಾರಂಭಿಸಬಹುದಾದರೂ ಅವರು ಅಷ್ಟೂ ಮಂದಿಯ ಹೆಸರನ್ನು ಹೇಳಿ ಮುಗಿಸುವುದಾಗಲೀ ಅವರ ಅಷ್ಟೂ ಕೃತಿಗಳ ಪಟ್ಟಿ ಮಾಡುವುದಾಗಲೀ ಈ ಪ್ರಬಂಧದ ಉದ್ದೇಶವಲ್ಲ. ಈ ಕೆಲಸವನ್ನು ಎನ್.ಎಂ.ಕೆ.ಆರ್.ವಿ. ಕಾಲೇಜಿನ ಸಮನ್ವಿತಾ ಸಂಸ್ಥೆ ಮತ್ತು ಅತ್ತಿಮಬ್ಬೆ ಟ್ರಸ್ಟಿನ ಮನೋಹರಿ ಪಾರ್ಥಸಾರಥಿ ಮಾಡಿದ್ದಾರೆ. ಕುಲಶೇಖರಿಯರ "ಈ ಶತಮಾನದ ಕವಯತ್ರಿಯರು" ಎಂಬ ಗ್ರಂಥದಲ್ಲಿಯೂ ಈ ಕೆಲಸ ಆಗಿದೆ. ಆದುದರಿಂದ ಕೆಲವು ಮಹತ್ವದ ಕೃತಿಗಳನ್ನಷ್ಟೇ ಪ್ರಸ್ತಾಪಿಸಿ ಒಂದು ಪಕ್ಷಿ ನೋಟವನ್ನು ನೀಡಿದರೆ ಆಧುನಿಕ ಕನ್ನಡ ಸಾಹಿತ್ಯಕ್ಕೆ ಮಹಿಳೆಯರ ಕೊಡುಗೆಯನ್ನು ಅರಿಯಬಹುದು.

ತಿರುಮಲಾಂಬಾ ಅವರ ಕಾಲಕ್ಕೆ ವಿಧವಾ ವಿವಾಹವು ಕಾನೂನುಬದ್ಧವಾಗಿದ್ದು, ಕಲ್ಯಾಣಮ್ಮ, ಕೊಡಗಿನ ಗೌರಮ್ಮ ಸೇರಿದಂತೆ ಎಲ್ಲರೂ ಅದರ ಬಗ್ಗೆ ಬರೆದವರೇ, ಅವರ ಕಾಲಕ್ಕೆ ಅಂತಹ ಮಾತನ್ನೆತ್ತುವುದು, ಚರ್ಚಿಸುವುದು ದೊಡ್ಡ ಸಾಹಸವಾಗಿದ್ದು ವಿಧವೆಯ ಸಂಕಟಕ್ಕೆ ಮಾತಿನ ರೂಪ ಕೊಡುವ ಧೈರ್ಯ ತೋರಿಸುವುದೇ ಹೆಚ್ಚಿನದಾಗಿತ್ತು. ಕಲ್ಯಾಣಮ್ಮನವರ 'ನಿರ್ಭಾಗ್ಯವನಿತೆ'ಯ ಇಂದಿರಾ ಹೇಳುತ್ತಾಳೆ. "ಆಹಾ ಪುರುಷನ ಕಾಠಿಣ್ಯವೆಂತಹುದು? ಪುರುಷನನ್ನೇ ಸ್ಪರ್ಶಿಸಿ ಅರಿಯದ ಕೇವಲ ಬಾಲೆಯರಾದ ಅಬಲೆಯರು ಸತಿ ವಿಯೋಗ ಹೊಂದಿದರೆ ಮತ್ತೊಬ್ಬನನ್ನು ವರಿಸಕೂಡದಂತೆ. ತನ್ನ ಯೌವನ ಕಾಲದಲ್ಲಿ ವಿವಾಹಿತವಾಗಿ ಸುಖವನ್ನನುಭವಿಸಿ ಮಕ್ಕಳನ್ನು ಪಡೆದು ಇರತಕ್ಕ ಪುರುಷನೋರ್ವನು ತನ್ನ ವಯೋಧಿಕ ಕಾಲದಲ್ಲಿ ವಿಧುರನಾದರೆ ಅವನು ಬಾಲ ಪ್ರಾಯದ ಕನ್ಯೆಯನ್ನು ವರಿಸಬಹುದಂತೆ" - ಇಂದಿನ ನಮ್ಮ ವಿಮರ್ಶೆಯ ಮಾನದಂಡದಿಂದ ಅಳೆದರೆ ಹಾಸ್ಯಾಸ್ಪದವೆನ್ನಿಸಬಹುದಾದ ಈ ಮಾತುಗಳು ಅವರ ಕಾಲಕ್ಕೆ ಒಂದು ಸಾಹಸವೇ ಆಗಿತ್ತೆಂಬುದನ್ನು ನಾವು ಮರೆಯಬಾರದು. ಈ ಕತೆಯನ್ನು ತ್ರಿವೇಣಿಯವರ 'ದೂರದ ಬೆಟ್ಟ' ಕಾದಂಬರಿಗೆ ಹೋಲಿಸಿದರೆ ತ್ರಿವೇಣಿ ತಮ್ಮ ಹಿಂದಿನವರಿಗಿಂತ ಪ್ರಗತಿಪರ. ಇಲ್ಲಿಯ ವಿಧವೆ ಸುನಂದಾ ಇನ್ನೊಬ್ಬನನ್ನು ಪ್ರೀತಿಸಿ ಮದುವೆಯಾಗುವ ಮೊದಲು ಸಮಾಜದ ನಿರ್ಬಂಧಕ್ಕಿಂತ ಮಾನಸಿಕ ತುಮುಲಕ್ಕೆ ಗುರಿಯಾಗುತ್ತಾಳೆ. ನಾವು ಬೆಳೆದು ಬಂದ ಸಾಂಪ್ರದಾಯಿಕ ಕುಟುಂಬ ವ್ಯವಸ್ಥೆಯು ನಮ್ಮ ಮನಸ್ಸಿನ ಮೇಲೆ ಬೀರುವ ಪ್ರಭಾವಕ್ಕೂ ಆಧುನಿಕತೆಯು ಒಡ್ಡುವ ಆಮಿಷಕ್ಕೂ ನಡೆಯುವ ಘರ್ಷಣೆಗೆ

ಮನೋವೈಜ್ಞಾನಿಕ ಲೇಪ ಹಚ್ಚಿದ್ದು ತ್ರಿವೇಣಿಯವರ ಹೊಸತನ. ಉಷಾ ನವರತ್ನರಾಂ ಅವರ 'ಅರಿಶಿನ ಅಳಿಸಬೇಡಮ್ಮಾ' ಎಂಬ ಕತೆಯಾಗಲೀ, 'ಆಂದೋಲನ', 'ಆಶ್ವಾಸನ' ಕಾದಂಬರಿಗಳಾಗಲೀ ಇನ್ನಷ್ಟು ಪ್ರಗತಿಪರ. ಅಣ್ಣ ತಮ್ಮ ಇಬ್ಬರನ್ನೂ ಪ್ರೀತಿಸಿ ಅಣ್ಣನನ್ನು ಮದುವೆಯಾಗುವ ಈ ಕತೆಯ ನಾಯಕಿ, ಗಂಡ ಸತ್ತ ನಂತರ ಮೈದುನನನ್ನು ಮದುವೆ ಯಾಗುವ ಕತೆ ಇದು. ಅತ್ಯಂತ ಜನಪ್ರಿಯ ಲೇಖಕಿಯಾಗಿ ಅತಿ ಸುಲಭವಾಗಿ ಸುಭಗವಾಗಿ ಬರೆಯುತ್ತಿದ್ದ ಉಷಾ ಅಂಥವರೂ ಮಾನಸಿಕ ತುಮುಲಕ್ಕೆ ಒತ್ತು ಕೊಡುತ್ತಾರೆಂದರೆ ಆ ಕಾಲಕ್ಕೆ ಸಮಾಜದ ಭಯ ಎಷ್ಟಿತ್ತು ಎಂಬುದನ್ನು ಊಹಿಸಬಹುದು. ಸುಮ್ಮನೆ ಕುತೂಹಲಕ್ಕೆ ಹೇಳುವುದಾದರೆ ಈ ಕೃತಿಗಳು ಬಂದ ಇಪ್ಪತ್ತು ವರ್ಷದ ನಂತರ ಪ್ರಸಾರವಾಗುತ್ತಿರುವ 'ಮೂಡಲ ಮನೆ' ಧಾರಾವಾಹಿಯು ಈ ಸಮಸ್ಯೆಯನ್ನು ಇನ್ನಷ್ಟು ಗೋಜಲಾಗಿಸಿದೆ.

ತಿರುಮಲಾಂಬಾ ಅವರ 'ನಭಾ' ಕಾದಂಬರಿಯ ವಿಧವೆ ತನ್ನ ತಲೆಗೂದಲನ್ನು ಬೋಳಿಸಿ ಕೊಳ್ಳಲು ಇಷ್ಟು ಪಡದೇ ಕನಸಿನಲ್ಲಿ ದೇವರು ಬಂದು ಕೂದಲಿಗೆ ಕತ್ತರಿ ಹಾಕಬಾರದೆಂದು ಅಪ್ಪಣೆ ಕೊಡಿಸಿದ್ದಾನೆ ಎಂದು ಸುಳ್ಳು ಹೇಳುತ್ತಾಳೆ. ಎಂ.ಕೆ. ಇಂದಿರಾ ಅವರ 'ಫಣಿಯಮ್ಮ' ಕಾದಂಬರಿಯ ಪರ್ಯಾಯ ನಾಯಕಿಯಾದ ದಾಕ್ಷಾಯಣಿ ಕೂದಲು ಕತ್ತರಿಸಿಕೊಳ್ಳುವುದಿಲ್ಲ ವೆಂದು ಹಠ ಹಿಡಿಯುತ್ತಾಳೆ. ಮೈದುನನಿಂದಲೇ ಮಗು ಪಡೆದು ಇದೂ ಈ ವಂಶದ್ದೇ ತಾನೇ ಎಂದು ವಾದಿಸುತ್ತಾಳೆ. ಫಣಿಯಮ್ಮನ ಪಾತ್ರದಲ್ಲಿ ಎಷ್ಟೇ ಹೊಸತನ ಮಾನವೀಯತೆ ಇದ್ದರೂ ಅವಳು ಯೋಚಿಸುವ ರೀತಿಯೂ ಸಾಂಪ್ರದಾಯಕವೇ ಆದುದರಿಂದ ದಾಕ್ಷಾಯಣಿಯ ಪಾತ್ರವನ್ನು ಸಮಾನಾಂತರವಾಗಿ ತಂದು ಬದಲಾಗಿರುವ ಕಾಲವನ್ನೂ ಸೂಚಿಸಲಾಗಿದೆ.

ಇದು ಒಂದು ರೀತಿಯಲ್ಲಿ ಹೆಣ್ಣಿನ ಶೋಷಣೆಯಾದರೆ ಪುರಾಣಗಳ ಕಾಲದಲ್ಲೂ ಹೆಣ್ಣಿನ ಶೋಷಣೆಯಿತ್ತು ಎಂದು ಹೇಳುವ ಮೂಲಕ ಲೈಂಗಿಕ ದೌರ್ಜನ್ಯದ ಪರಿಣಾಮಗಳನ್ನು ದಿಟ್ಟವಾಗಿ ಅಳೆದವರು ಅನುಪಮಾ ನಿರಂಜನ. ಚಂದ್ರವಂಶದ ರಾಜ ಯಯಾತಿಯ ಮಗಳು 'ಮಾಧವಿ'ಗಾಲವನೆಂಬ ಋಷಿ ತನ್ನ ಗುರುದಕ್ಷಿಣೆಗಾಗಿ ಅವಳನ್ನು ಮುದುಕರೂ ಆದ ನಾಲ್ವರು ರಾಜರಿಗೆ ಮಾರುತ್ತಾನೆ. ಅವರಿಗೆ ಒಬ್ಬೊಬ್ಬ ಚಕ್ರವರ್ತಿ ಪುತ್ರನನ್ನು ಹೆತ್ತುಕೊಟ್ಟ ಅವಳಿಂದ ತನಗೂ ಒಬ್ಬ ಮಗಬೇಕೆಂದು ಗಾಲವ ಬಯಸುತ್ತಾನೆ. ತಂದೆ ಏರ್ಪಡಿಸಿದ್ದ ಸ್ವಯಂವರವನ್ನೂ ಗಾಲವನ ಬಯಕೆಯನ್ನೂ ತಿರಸ್ಕರಿಸಿದ ಮಾಧವಿ ಕಾಡಿಗೆ ಹೊರಟು ಹೋಗುತ್ತಾಳೆ. ಇಂತಹ ಬಂಡಾಯದ ಸ್ತ್ರೀ ಪಾತ್ರವನ್ನು ಪುನಃ ಸೃಷ್ಟಿಸುವ ಮೂಲಕ ಹೆಣ್ಣಿನ ದುಃಖದ ಅನಾವರಣ ಮಾಡಿದವರು ಅನುಪಮಾ. ಅನಕೃ ಅವರ 'ಸಂಜೆ ಗತ್ತಲು', 'ನಗ್ನ ಸತ್ಯ', 'ಶನಿ ಸಂತಾನ' ಮತ್ತು ತರಾಸು ಅವರ "ಮಸಣದ ಹೂ"ಗಳು ಮಾಡಲಾಗದ್ದನ್ನು ತ್ರಿವೇಣಿಯವರ "ಹೂವು ಹಣ್ಣು" ಮಾಡಿತು. ಹೀಗೆ ಪುರುಷರು ಈಗಾಗಲೇ ಚಿತ್ರಿಸಿದ್ದ ಸಮಸ್ಯೆಗಳನ್ನೇ ಕೈಗೆತ್ತಿಕೊಂಡು, ವಿಭಿನ್ನವಾಗಿ, ಸಹಜವಾಗಿ, ಸ್ವೋಪಜ್ಞತೆಯಿಂದ ಬರೆದುದೇ ಲೇಖಕಿಯರ ಕೊಡುಗೆ. ಯುಗಧರ್ಮಕ್ಕೆ ಸ್ಪಂದಿಸಿ ಬದಲಾವಣೆಗಳಿಗೆ ಮನಸ್ಸು ತೆರೆದು

ಪ್ರಗತಿ ಪರವಾಗಿ ಯೋಚಿಸಿದ್ದೇ ಅವರ ಅಗ್ಗಳಿಕೆ. ಹಾಗೆಂದ ಮಾತ್ರಕ್ಕೆ ಈ ತಲೆಮಾರಿನಲ್ಲಿ ಬರೆದ ಮತ್ತು ಈಗಲೂ ಬರೆಯುತ್ತಿರುವ ಎಲ್ಲಾ ಲೇಖಕಿಯರಿಗೂ ಈ ಮಾತನ್ನು ಅನ್ವಯಿಸಲಾಗುದು. ರಂಜನೆಗೆಂದೇ ಬರೆದು ಬದುಕಿನ ಕಠೋರ ವಾಸ್ತವಗಳನ್ನು ಮುಚ್ಚಿಟ್ಟು ಹುಸಿ ಸಂಸ್ಕೃತಿಗೆ ನೀರೆರೆದ ಮತ್ತು ಹದಿಹರಯದ ಮನಸ್ಸುಗಳನ್ನು ವಾಸ್ತವದಿಂದ ಪಲಾಯನ ಮಾಡಿಸುವ ಬರವಣಿಗೆಯ ಲೇಖಕಿಯರು ಹಿಂದೆಯೂ ಇದ್ದರು, ಈಗಲೂ ಇದ್ದಾರೆ. ಇವರ ಎಲ್ಲಾ ಕಾದಂಬರಿಗಳ ನಾಯಕರು ಸ್ಫುರದ್ರೂಪಿಯೂ, ಆಜಾನುಬಾಹುವೋ ಆಗಿದ್ದು ಸಕಲ ಕಲಾವಲ್ಲಭನಾಗಿರುತ್ತಾನೆ. ಇವರ ನಾಯಕಿಯರೂ ರತಿದೇವಿಯೂ ಸಕಲ ಗುಣ ಪರಿಪೂರ್ಣಳೂ ಆಗಿರುತ್ತಾಳೆ. ಪ್ರಥಮ ನೋಟದಲ್ಲೇ ಇವರ ಪ್ರಣಯ, ಅದಕ್ಕೆ ನೂರಾ ಎಂಟು ಅಡ್ಡಿ ಆತಂಕಗಳು ಕೊನೆಗೆ ಶುಭಂ ಎಂದು ಮುಗಿಯುವ ಹುಸಿ ಲೋಕದ ಪ್ರೇಕ್ಷಕರಿಗಾಗಿ ನೇಯ್ದ ಚಿತ್ರಗಳು, ಇಂತಹ ಸಂತೆಗೆ ಮೂರುಮೊಳ ನೇಯುವ ಯಾವ ಅಧ್ಯಯನ ಪರಿಶ್ರಮವೂ ಇಲ್ಲದೇ ಕಾರ್ಖಾನೆಯಿಂದ ವಸ್ತುಗಳನ್ನು ಉತ್ಪಾದಿಸುವಂತೆ ವಾರಪತ್ರಿಕೆ ಮಾಸಪತ್ರಿಕೆಗಳಿಗಾಗಿ ಕತೆ ಕಾದಂಬರಿಗಳನ್ನು ಉತ್ಪಾದಿಸುವ ಲೇಖಕಿಯರು ಸಾಹಿತ್ಯಕ್ಕೆ ಕೊಟ್ಟ ಕೊಡುಗೆ ಏನು ಎಂದರೆ ಸಮೃದ್ಧಿ ಒಂದೇ ಎಂದು ಹೇಳಬೇಕಾಗುತ್ತದೆ. ಆದರೆ ಅದೇ ಪತ್ರಿಕೆಗೆ ತುಂಬಾ ಸರಳವಾಗಿ ಬರೆದೂ ಗಹನವಾದ ಸತ್ಯವನ್ನು ಬಿಂಬಿಸುವ ವಸುಮತಿ ಉಡುಪ ಅಂಥವರೂ ಇಲ್ಲಿ ಕಾಣ ಸಿಗುತ್ತಾರೆ.

ಕಾವ್ಯ ಜಗತ್ತೇ ಒಂದು ವಿಸ್ಮಯ. ಆಧುನಿಕ ಪೂರ್ವ ಮಹಿಳಾ ಸಾಹಿತ್ಯದಲ್ಲಿ ಕಾವ್ಯದ್ದೇ ವಿಜೃಂಭಣೆ. ಆಧುನಿಕ ಸಾಹಿತ್ಯವು ಈ ಶತಮಾನದ ಉತ್ತರಾರ್ಧದಲ್ಲಿ ಕತೆ ಕಾದಂಬರಿಗಳ ಜೊತೆಗೆ ಕಾವ್ಯ, ಪ್ರಬಂಧ, ವಿಮರ್ಶೆ, ಪ್ರವಾಸ, ವೈದ್ಯ ಸಾಹಿತ್ಯ, ಶಿಶು ಸಾಹಿತ್ಯ, ಮಹಾಕಾವ್ಯ, ಕಥನ ಕಾವ್ಯ, ಅನುವಾದ, ಸಂಶೋಧನೆ ಈ ಕವಲುಗಳಲ್ಲಿ ಹರಿದಿರುವುದು ಅಪೇಕ್ಷಣೀಯ ವಾಗಿದೆ. ನವೋದಯದ ಹಂತದಲ್ಲಿಯೇ ತಿರುಮಲಾಂಬಾ, ತಿರುಮಲೆ ರಾಜಮ್ಮ, ಬೆಳಗೆರೆ ಜಾನಕಮ್ಮ ಮೊದಲಾದವರು ಕವಿತೆ ರಚಿಸಿದ್ದರೂ ಮಹಿಳಾ ಕಾವ್ಯಕ್ಕೆ ಸಂಬಂಧಿಸಿದಂತೆ ಬಂಡಾಯದ ಹಂತವೇ ಮುಖ್ಯವಾಗುತ್ತದೆ. ಮಹಿಳಾ ಕಾವ್ಯದ ಸಾಧಕ ಬಾಧಕಗಳನ್ನು ಚರ್ಚಿಸುವುದು. ಈ ಸೀಮಿತ ಪುಟಗಳ ಮಿತಿಯಲ್ಲಿ ಸಾಧ್ಯವಿಲ್ಲದ ಕಾರಣದಿಂದ ಕೆಲವು ತಾತ್ವಿಕ ವಿಷಯಗಳಿಗೆ ನನ್ನ ಮಾತುಗಳನ್ನು ಸೀಮಿತಗೊಳಿಸುವೆ. ಅದುವರೆಗೂ ಅನಾವರಣ ಗೊಳ್ಳದ ಸ್ತ್ರೀ ಜಗತ್ತು ಅನಾವರಣಗೊಂಡಿತು. ಪುರುಷ ಪ್ರಧಾನ ಮೌಲ್ಯಗಳ ನಡುವೆ ಸ್ತ್ರೀಸಂವೇದನೆ ಮೊದಲು ಇಣಿಕಿ ನೋಡಿ ಅನಂತರ ಪ್ರಭುತ್ವ ಸ್ಥಾಪಿಸಿತು. ಅನೇಕ ಹಳೆಯ ಮೌಲ್ಯಗಳು ಪ್ರಶ್ನಿತವಾಗಿ ಹೊಸ ಮೌಲ್ಯಗಳು ಸ್ಥಾಪನೆಗೊಂಡವು. ಈ ಪ್ರಶ್ನೆಗಳೂ ಗಮನಾರ್ಹವಾದುವು. ಉತ್ತರ ಬೇಕಿಲ್ಲದ ಅಥವಾ ಪ್ರಶ್ನಿಸುವುದಕ್ಕಾಗಿಯೇ ಮಾಡಿದ ಈ ಕೆಲಸವು ಅನೂಹ್ಯ ಜಗತ್ತಿನ ಅನಾವರಣದ ರೋಮಾಂಚನವನ್ನುಂಟುಮಾಡಿತು. ಬಂಡಾಯದ ಕಿಡಿ ಹಾರಿಸಿತು. ಜೊತೆ ಜೊತೆಗೇ ಉತ್ತಮವಾದ ಪ್ರತಿಮೆಗಳನ್ನು ಕಟ್ಟುವ ಕೆಲಸ ನಡೆಯಿತು. ಹಳೇ ಪ್ರತಿಮೆಗಳ ಭಂಜನೆ ಮತ್ತು ಹೊಸ ಪ್ರತಿಮೆಗಳ ನಿರ್ಮಾಣ

ಅವ್ಯಾಹತವಾಗಿ ನಡೆಯಿತು. ವಿವಾಹದಂತಹ ಸಂಸ್ಥೆಗಳು ಹೊಸ ಒತ್ತಡಗಳಿಗೆ ಒಳಗಾದುದ ರಿಂದ ಅಲ್ಲಿಯೂ ಸಮಸ್ಯೆಗಳು ಹುಟ್ಟಿ ಲೈಂಗಿಕ ಸಂಬಂಧಗಳ ಬಗ್ಗೆ ಕೂಡ ಮುಕ್ತತೆಯಿಂದ ಬರೆಯುವ ವಾತಾವರಣ ಉಂಟಾಯಿತು. ಕೌಟುಂಬಿಕ ಸಂಬಂಧಗಳು ನಿಷ್ಠುರ ವಿಮರ್ಶೆಗೆ ಒಳಗಾದವು.

ಪುತಿನ ಟ್ರಸ್ಟ್ ಪ್ರಶಸ್ತಿ ಪಡೆದ ಎಚ್.ಎಲ್. ಪುಷ್ಪ ಅವರ ಅಂತರಂಗದ ಪಿಸುದನಿಯಿಂದ ಹಿಡಿದು ಅದೇ ಪುತಿನ ಟ್ರಸ್ಟ್ ಪ್ರಶಸ್ತಿ ಪಡೆದ ಪ್ರತಿಭಾ ನಂದಕುಮಾರ್ ಅವರ ಪೋಲಿ ಪದ್ಯದವರೆಗೆ, ಬಂಡಾಯದ ಘೋಷಣೆಗಳನ್ನು ವಾಚ್ಯವಾಗಿಯೇ ಮಂಡಿಸುವ ಲಲಿತಾ ನಾಯಕ ಅವರ ದೊಡ್ಡ ಧ್ವನಿಯಿಂದ ಹಿಡಿದು ಅದನ್ನೇ ಕಲಾತ್ಮಕವಾಗಿ ಹೇಳುವ ಸುಕನ್ಯಾ ಮಾರುತಿವರೆಗೆ, ಚ. ಸರ್ವಮಂಗಳಾ, ಶೈಲಜಾ ಉಡಚಣ ಅವರಂತಹ ಹಿರಿಯ ಕವಯತ್ರಿಯ ರಿಂದ ಹಿಡಿದು ಪುಟ್ಟ ಕವಯತ್ರಿ ರೂಪಾ ಹಾಸನವರೆಗೆ ಹರಡಿರುವ ಇಂದಿನ ಮಹಿಳಾ ಕಾವ್ಯದ ಸೋದಾಹರಣ ವಿಮರ್ಶೆಯು ಈ ಲೇಖನದಲ್ಲಿ ಸಾಧ್ಯವಾಗದಿರುವುದಕ್ಕೆ ವಿಷಾದವೂ, ಅಂತಹ ಪ್ರಯತ್ನಗಳು ಬೇರೆ ಬೇರೆ ಕಡೆ ವಿಚಾರ ಸಂಕಿರಣಗಳಲ್ಲಿ ನಡೆದಿರುವುದಕ್ಕೆ ಸಂತೋಷವೂ, ಇದು ಐದಾರು ಪಿಎಚ್.ಡಿ. ಪ್ರಬಂಧಗಳಿಗೆ ವಸ್ತುವಾಗಿರುವುದಕ್ಕೆ ಹೆಮ್ಮೆಯೂ ಅನ್ನಿಸುತ್ತದೆ.

ಪಾಶ್ಚಾತ್ಯ ವಿದ್ವಾಂಸರು ನಮ್ಮ ಸಾಹಿತ್ಯ ಚರಿತ್ರೆಯನ್ನು ಕಟ್ಟಿ, ವ್ಯಾಕರಣ ರಚಿಸಿ, ಗ್ರಂಥ ಸಂಪಾದನೆ ಮಾಡಿ ತೋರಿಸಿದ ಮೇಲೆ ಆರ್. ನರಸಿಂಹಾಚಾರ್, ಡಿ.ಎಲ್.ಎನ್, ಆ.ನೇ. ಉಪಾಧ್ಯೆ. ಇದನ್ನು ಮುಂದುವರೆಸಿದರು. ಅನಂತರ ವಿಶ್ವವಿದ್ಯಾಲಯಗಳಲ್ಲಿ ಪಿಎಚ್.ಡಿ. ಪದವಿಗಾಗಿ ನೋಂದಾಯಿಸಿಕೊಳ್ಳುವುದು ಪ್ರಾರಂಭವಾದ ಮೇಲೆ ಮಹಿಳೆಯರೂ ಸಂಶೋಧನೆಗೆ ಗಮನಕೊಟ್ಟರು. ಇವರಲ್ಲಿ ಬಹುಮಂದಿ ಪದವಿ ಪಡೆದು ತಟಸ್ಥರಾದರೂ ಕೆಲವರಾದರೂ ಪ್ರಬಂಧ ಪ್ರಕಟಿಸುವ ಮತ್ತು ಅನಂತರವೂ ಸಂಶೋಧನೆಯಲ್ಲಿ ಮುಂದು ವರೆಯುವ ಉತ್ಸಾಹವನ್ನು ತೋರಿದರು. ಡಾ. ಕಮಲಾ ಹಂಪನಾ, ಶಾಂತಾದೇವಿ ಮಾಳವಾಡ, ಡಾ. ವಿಜಯಾ ದಬ್ಬೆ, ಡಾ. ವಿಜಯಾ ಸುಬ್ಬರಾಜ್, ಡಾ. ಸುಮಿತ್ರಾ ಬಾಯಿ ಇಂತಹ ಕೆಲವು ಪ್ರಮುಖರನ್ನು ಹೆಸರಿಸಬಹುದು. ಕನ್ನಡ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಇಂದಿನ ವೈಚಾರಿಕತೆ ಅಥವಾ ವಿಮರ್ಶೆ ಎಂದರೆ ಅದು ಸ್ತ್ರೀವಾದಕ್ಕೆ ಸಂಬಂಧಿಸಿಯೇ ಇರುವುದು ಆಶ್ಚರ್ಯವಾದರೂ ಸತ್ಯ.

ಅಸ್ತಿತ್ವವಾದದ ಪ್ರಬಲ ಪ್ರತಿಪಾದಕಿ, ಫ್ರೆಂಚ್ ಲೇಖಕಿ ಸಿಮೋನ್-ದ-ಬುವಾಳ "ದಿ ಸೆಕೆಂಡ್ ಸೆಕ್ಸ್' ಎಂಬ ಪುಸ್ತಕವನ್ನು ಸಧ್ಯಕ್ಕೆ ಸ್ತ್ರೀವಾದದ ಮೊದಲ ಪುಸ್ತಕ ಎಂದು ಪರಿಗಣಿಸಲಾಗುತ್ತಿದೆ. ಸೆಕೆಂಡ ಸೆಕ್ಸ್ ಎಂದರೆ ಎರಡನೇ ದರ್ಜೆ ಪ್ರಜೆ, ಮಹಿಳೆ ಎಂದರ್ಥ. ಮೊದಮೊದಲು ಪಾಶ್ಚಾತ್ಯ ಪರಿಕಲ್ಪನೆಗಳನ್ನೇ ಕನ್ನಡಕ್ಕೆ ಅನುವಾದಿಸಿ ಸ್ತ್ರೀವಾದದ ಪ್ರತಿಪಾದನೆ ನಡೆಯುತ್ತಿದ್ದುದರಿಂದ ಆ ವಿಚಾರಧಾರೆಯು ಕಬ್ಬಿಣದ ಕಡಲೆಯಂತಿದ್ದು

ಸಂವಹನ ಸಾಧ್ಯವಾಗುತ್ತಿರಲಿಲ್ಲ. ಅನಂತರ ಕ್ರಮೇಣ ಈ ನೆಲದ ಮಣ್ಣಿಗೆ, ನಮ್ಮ ಸಮಾಜಕ್ಕೆ ಅನ್ವಯಿಸಿ ಸ್ತ್ರೀವಾದದ ಪ್ರತಿಪಾದನೆ ನಡೆಯತೊಡಗಿದ ಮೇಲೆ ಭಾರತೀಯ ಸ್ತ್ರೀವಾದದ ಪರಿಕಲ್ಪನೆ ಅಸ್ತಿತ್ವಕ್ಕೆ ಬಂದಿತು. ಇದೀಗ, ಐದು ಸಾವಿರ ವರ್ಷಗಳ ಹಿಂದಿನ ಜಾನಪದದ ಕಾಲಕ್ಕೆ ಭಾರತೀಯ ಸ್ತ್ರೀವಾದದ ಮೂಲವನ್ನು ಕೊಂಡೊಯ್ಯಬಹುದು ಎಂಬ ವಾದ ಪ್ರಬಲವಾಗತೊಡಗಿದೆ. ಪ್ರಾರಂಭದಲ್ಲಿ ಕೆಲವು ಲೇಖಕಿಯರಿಗೆ ಇದರ ಬಗ್ಗೆ ಸಹಮತ ವಿರಲಿಲ್ಲ. "ವೈದಿಕ ಪುನರುತ್ಥಾನದ ಕಲ್ಪನೆಯಾಗಲೀ, ಜಾನಪದಕ್ಕೆ ಮರಳಬೇಕೆಂಬ ವಾದವಾಗಲೀ, ಅಸಮಗ್ರ ಗ್ರಹಿಕೆಗಳೇ ಆಗಿವೆ" (ಡಾ. ಬಿ.ಎಸ್. ಸುಮಿತ್ರಾಬಾಯಿ ಮತ್ತು ಎನ್. ಗಾಯತ್ರಿ) "ಮಾತೃಪ್ರಧಾನ ಸಮಾಜದ ಕೆಲವು ಎಳೆಗಳಾಗಲೀ, ಪುರಾಣ ಮೌಖಿಕ ಪರಂಪರೆಗಳ ವೈಭವೀಕರಣವಾಗಲೀ, ರಂಜನೀಯ ಹೇಳಿಕೆಗಳ ಭಾಷಣಗಳಾಗುತ್ತವೆಯೇ ಹೊರತು ಅದರಿಂದ ಸ್ತ್ರೀವಾದೀ ಚಳವಳಿಗೆ ಬೇಕಾದ ಆಲೋಚನಾ ಕ್ರಮಗಳು ಸಿಗಲಾರವು" (ಅದೇ) "ಜಾಗತಿಕ ನೆಲೆಯ ಸತ್ಯಗಳನ್ನು ಒಳಗೊಂಡ ಪಶ್ಚಿಮದ ಸ್ತ್ರೀವಾದದ ಸಾರಾಸಗಟಾದ ನಿರಾಕರಣೆಯೂ ಅಂಧಾನುಕರಣೆಯಂತೆ ನಮ್ಮ ಉತ್ಥಾನಕ್ಕೆ ಮಾರಕ. ಪಶ್ಚಿಮವನ್ನು ತೋರಿಕೆಗೆ ನಿರಾಕರಿಸಿ, ಯಾವುದೋ ಮೂಲೆಯಲ್ಲಿ ನಿಂತು, ಹೊರ ಪ್ರಪಂಚವನ್ನು ನೋಡದೇ ತನ್ನಲ್ಲಿರುವ ಒಂದು ಕ್ಷೇತ್ರದ ಹಿಡಿ ಸಾಮಗ್ರಿಯಿಂದ ಭಾರತೀಯ ಸ್ತ್ರೀವಾದವನ್ನು ಕಟ್ಟ ಹೊರಡುವವರನ್ನು, ಕಟ್ಟಿದ್ದೇವೆಂದು ಭ್ರಮಿಸುವವರನ್ನು ಕಂಡು ನಗಬೇಕೋ, ಅಳಬೇಕೋ ತಿಳಿಯುವುದಿಲ್ಲ (ಡಾ. ವಿಜಯಾ ದಬ್ಬೆ). ಆದರೆ ಹೆಚ್ಚಿನ ಸಂಶೋಧನೆ ನಡೆದಂತೆ ಜಾನಪದ ಜಗತ್ತಿನ ಅನಾವರಣವಾಯಿತು. ತನ್ನ ತೊಡೆ ತೋರಿಸಿ ಜೂಜಿನಲ್ಲಿ ಕೌರವನನ್ನು ಗೆಲ್ಲುವ ದ್ರೌಪದಿ, ರಾವಣನನ್ನು ಮೋಹಿಸಿದ ಪತಿವ್ರತೆ ಸೀತೆ, ರಾಜಪ್ರಭುತ್ವದ ಅನ್ಯಾಯದ ವಿರುದ್ಧ ಸಿಡಿದೆದ್ದ ಕಲ್ಲುರ್ಟಿ, ಸಿಂಗರಿಸಿದ ಪೊರಕೆಯನ್ನು ದಂಡಿಗೆಯಲ್ಲಿಟ್ಟು ಕಳುಹಿಸುವ ಮೂಲಕ ಗಂಡನ ಮೋಸವನ್ನು ಪ್ರತಿಭಟಿಸುವ ಮಾನಿಗ, ಕತ್ತಿನ ಕರಿಮಣಿ, ಮೂಗಿನ ಮೂಗುತಿ, ಕೈಯ ಬಳೆಗಳನ್ನು ಗಂಡನ ಮುಂದೆ ಬಿಸುಟು ವಿಚ್ಛೇದನ ಹೇಳುವ ಸಿರಿ, ಗಂಡನನ್ನು ಕೊಂದವನನ್ನು ಕೊಲ್ಲುವ ಹಿರಿದಿಮ್ಮ - ಇವು ಸ್ತ್ರೀವಾದಿ ಪ್ರತಿಮೆಗಳಾಗಿ ಕಂಡುಬಂದವು.

ಜಾನಪದ ಮಹಾಭಾರತ, ರಾಮಾಯಣದ ಸೀತೆ, ದ್ರೌಪದಿಯರು ವಾಲ್ಮೀಕಿ, ವ್ಯಾಸರ ಸೀತೆ ದ್ರೌಪದಿಯರಂತಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಜಾನಪದದಲ್ಲಿ ಸ್ತ್ರೀವಾದಿ ನೆಲೆಗಳನ್ನು ಹುಡುಕಬಹುದು ಎನ್ನುವ ಲೇಖಕಿಯೊಬ್ಬರು "ಲಿಖಿತವನ್ನಷ್ಟೇ ಪ್ರಮಾಣ ಎಂದು ನಂಬುವ ಚಿತ್ತಭ್ರಮೆಯಿಂದ ನಾವು ಇಂದು ಬಿಡುಗಡೆ ಪಡೆಯಬೇಕು. ಹೆಣ್ಣಿನ ಅಭಿವ್ಯಕ್ತಿ ನೆಲೆಯಾದ ಮೌಖಿಕ ಜಗತ್ತಿನ ಬಗೆಗೆ ವಿಶೇಷ ಕಾಳಜಿ ಹೊಂದಿರಬೇಕಾದ ನಮ್ಮ ಸ್ತ್ರೀವಾದಿಗಳು ಪಾಶ್ಚಾತ್ಯ ಸ್ತ್ರೀವಾದಿ ಲಯದಲ್ಲೇ ಉಸಿರಾಡುತ್ತಿದ್ದು; ಜಾನಪದ ಅಥವಾ ಮೌಖಿಕ ಪರಂಪರೆಯ ಬಗ್ಗೆ ದಿವ್ಯ ನಿರ್ಲಕ್ಷ್ಯ ತೋರುತ್ತಲೇ ಬಂದಿದ್ದಾರೆ" ಎಂದು ಆಪಾದಿಸುತ್ತಾ

“ಪಾಶ್ಚಾತ್ಯ ಸ್ತ್ರೀವಾದವು ಎಲ್ಲಿ ನಿಲ್ಲುತ್ತದೆಯೋ ಅಲ್ಲಿ ಭಾರತೀಯ ಸ್ತ್ರೀವಾದ ಪ್ರಾರಂಭವಾಗುತ್ತದೆ (ಡಾ. ಗಾಯತ್ರಿ ಸಾವಡ) ಎನ್ನುತ್ತಾರೆ. ಹೀಗಾಗಿ ಭಾರತೀಯ ಸ್ತ್ರೀವಾದವನ್ನು ಕಟ್ಟುವಾಗ ಪಾಶ್ಚಾತ್ಯ ಪರಿಕಲ್ಪನೆಯ ಜೊತೆ ಜೊತೆಗೆ ಭಾರತೀಯ ಸಂದರ್ಭದ ಸಂಕೀರ್ಣತೆಯ ಅರಿವೂ ಅಗತ್ಯ. ಅಂದರೆ ಭಾರತೀಯ ಸ್ತ್ರೀವಾದವು ಏಕಕಾಲಕ್ಕೆ ಪಾಶ್ಚಾತ್ಯ ಹಾಗೂ ಭಾರತೀಯ ಏಕಶಿಲ್ಪದ ಪ್ರಭಾವದಿಂದ ಬಿಡಿಸಿಕೊಂಡು ಬಹುರೂಪತೆಯಿಂದ ಮತ್ತೆ ಹುಟ್ಟಬೇಕಾಗಿದೆ.

# ಶ್ಯಾಮಲಾ ಬೆಳಗಾಂವ್‌ಕರ್‌ರ ಕಥಾ ಸಾಹಿತ್ಯದಲ್ಲಿ ಸ್ತ್ರೀಸಂವೇದನೆ

ಕೆ. ಸರೋಜಾ

ಇಂದು ಭಾರತೀಯ ಸ್ತ್ರೀವಾದ ಮತ್ತು ಮಹಿಳಾ ಚಳುವಳಿಗಳ ಚಾರಿತ್ರಿಕ ಸಾಮಾಜಿಕ ಮತ್ತು ಸಾಂಸ್ಕೃತಿಕ ಆಯಾಮಗಳನ್ನು ಸಂಶೋಧಿಸಿ ದಾಖಲಿಸುವ ಕೆಲಸ ತುರ್ತಾಗಿ ಆಗ ಬೇಕಾಗಿದೆ. ಏಕೆಂದರೆ ಇಂದು ವೇಗವಾಗಿ ಬದಲಾಗುತ್ತಿರುವ ಪುರುಷಾಧಿಕಾರದ ಪುರುಷ ಪ್ರಧಾನ ಸಮಾಜದಲ್ಲಿ ಬಲವಾಗಿ ಬೇರೂರುತ್ತಿರುವ ಕೊಳ್ಳುಬಾಕ ಸಂಸ್ಕೃತಿ ಮತ್ತು ಜಾಗತೀಕರಣಗಳ ಸಂದರ್ಭದಲ್ಲಿ ಭಾರತೀಯ ಸಮಾಜ ಒಂದು ಬಗೆಯ ಚಾರಿತ್ರಿಕ ಮತ್ತು ಸಾಂಸ್ಕೃತಿಕ ವಿಸ್ಮರಣೆಯಿಂದ ಬಳಲುತ್ತಿದೆಯೆನ್ನಬಹುದು. ಇಂತಹ ವಿಸ್ಮರಣೆಯಿಂದ ನಮ್ಮ ಬಹುರೂಪಿ ಪ್ರಾದೇಶಿಕ ಸಂಸ್ಕೃತಿಗಳು ಸದ್ದಿಲ್ಲದೆ ನಿಧಾನವಾಗಿ ಸಾಯುತ್ತಿದ್ದು ಅವುಗಳಲ್ಲಿ ರುವ ಮಾನವೀಯ ಮೌಲ್ಯಗಳು ಉಸಿರುಗಟ್ಟುತ್ತಿವೆ. ಅಲ್ಲದೆ, ನಮ್ಮ ಅಗಾಧವಾದ ಸಾಮಾಜಿಕ ಶಕ್ತಿ, ಇಂದು ಭೌತಿಕ ಸುಖಗಳನ್ನು ವೈಯಕ್ತಿಕ, ಕೌಟುಂಬಿಕ ಮತ್ತು ಸಾಮುದಾಯಿಕ ನೆಲೆಗಳಲ್ಲಿ ಅರಸುವುದರಲ್ಲಿ ಹಾಗೂ ಸ್ವಾರ್ಥದ ತುಷ್ಟೀಕರಣದ ಹಿಂದೆ ಓಡುವುದರಲ್ಲಿ ವ್ಯಯವಾಗುತ್ತಿದೆ. ಇವೆಲ್ಲವುಗಳ ಪರಿಣಾಮ ಇಡೀ ಸಮಾಜದ ಮೇಲಾದರೂ ಸ್ತ್ರೀಯರು ಸಮಾಜದಲ್ಲಿ ತಮಗಿರುವ ಪರಾಧೀನತೆಯ ಮತ್ತು ಅನುಷಂಗಿಕ ಸ್ಥಾನದಿಂದಾಗಿ ಈ ಎಲ್ಲಾ ಪ್ರಕ್ರಿಯೆಗಳ ದುಷ್ಪರಿಣಾಮಗಳಿಗೆ ಗಂಡಸರಿಗಿಂತ ಹೆಚ್ಚಾಗಿ ನೇರವಾಗಿ ಬಲಿಯಾಗುತ್ತಿದ್ದಾರೆ. ಈ ಸಂದರ್ಭದಲ್ಲಿ ಸ್ತ್ರೀಪರತೆ, ಭಾರತೀಯ ಸ್ತ್ರೀವಾದೀ ಪ್ರಜ್ಞೆ ಮತ್ತು ಸ್ತ್ರೀ ಸಬಲೀಕರಣಗಳು ಬಲಗೊಂಡು ಬೆಳೆಯಬೇಕಾಗಿದ್ದಲ್ಲಿ ಈ ಮೂರು ವಿಷಯಗಳ ಬೇರುಗಳನ್ನು ನಮ್ಮ ಸಾಹಿತ್ಯ ಮತ್ತು ಸಂಸ್ಕೃತಿಗಳ ಚರಿತ್ರೆಯಲ್ಲಿ ಸಂಶೋಧಿಸಿ ದಾಖಲಿಸುವ ಅಗತ್ಯವಿದೆ. ಇದರಿಂದ ಸ್ತ್ರೀವಾದವೆನ್ನುವುದು ಪಾಶ್ಚಿಮಾತ್ಯ ದೇಶಗಳಿಂದ ಆಮದಾದ ವಸ್ತು ಹಾಗೂ ಭಾರತೀಯ ಸಮಾಜಕ್ಕೆ ಮತ್ತು ಸಂಸ್ಕೃತಿಗೆ ಒಗ್ಗದ ಪರಿಕಲ್ಪನೆ ಎಂಬ ಪೂರ್ವಗ್ರಹವನ್ನು ನಿವಾರಿಸಿ ಸ್ತ್ರೀವಾದಕ್ಕೆ ಭಾರತದಲ್ಲಿ ಒಂದು ಅಧಿಕೃತತೆಯನ್ನು ತಂದುಕೊಡಬೇಕಾಗಿದೆ.

ಈ ದಿಸೆಯಲ್ಲಿ ಆಗಬೇಕಾದ ಮುಖ್ಯ ಕೆಲಸವೆಂದರೆ, ಭಾರತೀಯ ಸಾಹಿತ್ಯ ಚರಿತ್ರೆಯಲ್ಲಿ ಮಹಿಳೆಯರ ಬರವಣಿಗೆಗಳ ಸಂಶೋಧನೆ, ಮೌಲ್ಯಮಾಪನ ಮತ್ತು ದಾಖಲಾತಿ. ಕನ್ನಡದ

ಸಂದರ್ಭದಲ್ಲಿಯೂ ಸಹ, ಪುರುಷಪ್ರಧಾನ ಸಾಹಿತ್ಯಿಕ ಚರಿತ್ರೆಯಲ್ಲಿ ಇನ್ನೂ ಅದೃಶ್ಯರಾಗಿಯೇ ಉಳಿದಿರುವ ಮತ್ತು ಕಾಣಿಸಿಕೊಂಡಿದ್ದರೂ ಸರಿಯಾದ ಸ್ತ್ರೀವಾದೀ ವಿಮರ್ಶೆಯ ನಿಕಷಕ್ಕೆ ಒಳಗಾಗದ ಹಲವಾರು ಉಜ್ವಲ ಪ್ರತಿಭಾನ್ವಿತ ಬರೆಹಗಾರ್ತಿಯರಿದ್ದಾರೆ. ಸ್ವಾತಂತ್ರ್ಯಪೂರ್ವದ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಎದ್ದು ಕಾಣುವ ಅಂತಹ ಕೆಲವೇ ಬರೆಹಗಾರ್ತಿಯರಲ್ಲಿ ಮುಖ್ಯರಾದವರು ಶ್ರೀಮತಿ ಶ್ಯಾಮಲಾ ಬೆಳಗಾಂವ್‌ಕರ್. ಉತ್ತರ ಕರ್ನಾಟಕದ ಪ್ರಪ್ರಥಮ ಮಹತ್ವದ ಲೇಖಕಿಯೆಂದೇ ಇವರನ್ನು ಗುರುತಿಸಲಾಗಿದೆ. ಇವರ ಬದುಕು ಮತ್ತು ಸಾಧನೆಗಳು ಒಂದು ಸಾಹಸಗಾಥೆಯಂತೆಯೇ ಇವೆ.

ಇವರು ತಮ್ಮ ಮೂವತ್ತಮೂರು ವರ್ಷಗಳಷ್ಟು ಕಿರಿದಾದ ಆಯಸ್ಸಿನಲ್ಲಿ ಹಿರಿದನ್ನು ಸಾಧಿಸಿದ ಸಾಧಕಿ. ಬರವಣಿಗೆ ಇವರ ಸೃಜನಶೀಲತೆಯ, ಅದಮ್ಯ ಜೀವನೋತ್ಸಾಹದ ಹಾಗೂ ಉತ್ಸಾಹ ಭರಿತ ಅವಿರತ ದುಡಿಮೆಯ ಒಂದು ಮುಖ ಮಾತ್ರ. ಮನೆಯಿಂದ ಹೆಣ್ಣು ಮಕ್ಕಳು ಅದರಲ್ಲಿಯೂ ಹರೆಯಕ್ಕೆ ಕಾಲಿಟ್ಟ ಹೆಣ್ಣುಮಕ್ಕಳ ಹೊರಗೆ ಕಾಲಿಡುವುದೇ ಮಹಾಪರಾಧವಾಗಿದ್ದ ಕಾಲದಲ್ಲಿ ಮೆಟ್ರಿಕ್‌ವರೆಗೂ ಓದಿ, ತಾವು ಹುಟ್ಟಿದ ವೇಶ್ಯಾಕುಲದ ಸಂಪ್ರದಾಯವನ್ನು ಮುರಿದು ಬೆಳಗಾವಿಯ ರಾಮಚಂದ್ರರಾಯರನ್ನು ಅಂತರ್‌ಜಾತಿಯ ವಿವಾಹವಾಗಿ, ಪತಿ ನಡೆಸುತ್ತಿದ್ದ 'ಜಯ ಕರ್ನಾಟಕದ' ಪತ್ರಿಕೆಯ ಉಪಸಂಪಾದಕಿಯಾಗಿ, ಸಾಮಾಜಿಕ ಕಾರ್ಯಕರ್ತೆಯಾಗಿ, ಸಾರ್ವಜನಿಕ ಕಾರ್ಯಗಳನ್ನೂ ಕೈಗೊಂಡು, ಮಹಿಳೆ ಮತ್ತು ಮಕ್ಕಳಿಗಾಗಿ ಹಲವು ಹನ್ನೊಂದು ಕೆಲಸಗಳನ್ನು ಹಮ್ಮಿಕೊಂಡು, ಯುದ್ಧದ ತುಟ್ಟಿಕಾಲದಲ್ಲಿ ಹಲವು ಆರ್ಥಿಕ ಸಂಕಷ್ಟಗಳ ವಿರುದ್ಧ ಹೋರಾಡುತ್ತ ಮನೆ ನಡೆಸುತ್ತಾ ಮೂರು ಮಕ್ಕಳ ಪಾಲನೆ ಮಾಡುತ್ತಾ ಜಯ ಕರ್ನಾಟಕದ ಆರ್ಥಿಕ ಹೊರೆ ಹಾಗೂ ಸಾಲಗಳನ್ನೂ ತೀರಿಸುತ್ತಾ ಬಿಡುವಿಲ್ಲದೆ ದುಡಿದವರು. ಇಂತಹ ಬಿಡುವಿಲ್ಲದ ದುಡಿಮೆಯ ನಡುವೆ ಗಡಿಬಿಡಿಯಲ್ಲಿಯೇ ತಮ್ಮ ಬರವಣಿಗೆಯ ಪ್ರತಿಭೆಯನ್ನು ಮೆರೆದ ಸಾರ್ಥಕ ಜೀವ ಶ್ಯಾಮಲೆಯವರದು.

ಇವರ ಎಲ್ಲಾ ಬರೆಹಗಳನ್ನು ಹಾಗೂ ಬದುಕಿನ ಮಾಹಿತಿಗಳನ್ನು ಸಂಗ್ರಹಿಸಿ ಸಂಶೋಧಿಸಿ 'ಶ್ಯಾಮಲ ಸಂಚಯ' ಎಂಬ ಹೊತ್ತಿಗೆಯನ್ನು ಸಂಪಾದಿಸಿರುವ ಡಾ. ವಿಜಯಾದಬ್ಬೆ ಅವರ ಪ್ರಕಾರ ಶ್ಯಾಮಲಾ ಧಾರವಾಡದಲ್ಲಿ ೧೯೧೦ ಅಥವಾ ೧೯೧೧ರಲ್ಲಿ ಜನಿಸಿದರು. ಶ್ಯಾಮಲಾ ಬರೆಯಲು ಆರಂಭಿಸಿದ್ದು ೧೯೩೪ರಲ್ಲಿ ಹಾಗೂ ನಾಲ್ಕನೆಯ ಹೆರಿಗೆಯಾದ ನಂತರ ಉಂಟಾದ ಅನಾರೋಗ್ಯದಿಂದ ಕಣ್ಮರೆಯಾದದ್ದು ೧.೧೧.೧೯೪೩ರಲ್ಲಿ ಹೀಗೆ ಒಂದು ದಶಕಕ್ಕೂ ಕಡಿಮೆ ಅವಧಿಯಲ್ಲಿ ಇನ್ನುಳಿದ ಕಾರ್ಯಭಾರಗಳ ನಡುವೆ ಹಲವು ಹನ್ನೊಂದು ಸಮಸ್ಯೆಗಳನ್ನು ಎದುರಿಸುತ್ತಲೇ ಗಡಿಬಿಡಿಯಲ್ಲೇ ಒಮ್ಮೆ ಬರೆದದ್ದನ್ನು ಮತ್ತೊಮ್ಮೆ ತಿದ್ದಿ ತೀಡಿ ಬರೆಯುವ ಪುರುಸೊತ್ತು ಇಲ್ಲದೆ ಬರೆದ ಇವರ ಬರವಣಿಗೆಯ ಬೀಸು ಬೆರಗುಗೊಳಿಸುವಂಥದ್ದು. ಈ ಅಲ್ಪಾವಧಿಯಲ್ಲಿ ಅವರು ಬರೆದ ಕಥೆಗಳು ಇಪ್ಪತ್ತೆರಡು. ಒಟ್ಟು ಪತ್ರಿಕಾ ಲೇಖನಗಳ ಸಂಖ್ಯೆ ಹದಿನೇಳು. ಈ ಲೇಖನಗಳಲ್ಲಿ ಕೆಲವು ಇಂಗ್ಲೀಷಿನ, ಮರಾಠಿಯ ಮತ್ತು ಹಿಂದಿಯ

ಭಾಷಣಗಳ ಹಾಗೂ ಲೇಖನಗಳ ಸಂಗ್ರಹಾನುವಾದಗಳಾಗಿದ್ದು; ಅವರ ಪರಭಾಷೆಗಳ ಜ್ಞಾನಕ್ಕೆ ಮತ್ತು ಭಾವಾನುವಾದ ಸಾಮರ್ಥ್ಯಕ್ಕೆ ಸಾಕ್ಷಿಯಾಗಿವೆ.

ಬಾಲ್ಯದಿಂದಲೂ ಶ್ಯಾಮಲೆಯವರು ಸ್ತ್ರೀ ಸಮಾನತೆಗಾಗಿ ತುಡಿದು ದುಡಿದರು. ಅವರ ಈ ತುಡಿತ ವಾಸ್ತವಿಕತೆಯ ನೆಲೆಗಟ್ಟಿನಲ್ಲಿ, ಜನಪದೀಯಗಳಲ್ಲಿ ಸಾಕಾರಗೊಂಡು ಇವರ ಬರೆವಣಿಗೆಗಳಲ್ಲಿ ಮೂಡಿದೆ. ಆ ಬರೆವಣಿಗೆ ಕಥೆಯಾಗಿರಬಹುದು, ಭಾಷಣದ ಸಂಗ್ರಹಾನು ವಾದವಾಗಿರಬಹುದು ಅಥವಾ ಅನುವಾದಿತ ಲೇಖನವಾಗಿರಬಹುದು, ಅವುಗಳಲ್ಲಿ ವಾಸ್ತವಿಕತೆಯ ಅಡಿಪಾಯದ ಮೇಲೆ ನಿಂತಿರುವ ಸಹಜ ಸ್ತ್ರೀಪರತೆ ಎದ್ದು ಕಾಣುತ್ತದೆ. ಇಂತಹ ಸ್ವಭಾವ ಇವರಲ್ಲಿ ಬಾಲ್ಯದಿಂದಲೂ ಇದ್ದುದ್ದನ್ನು ದ.ಬಾ. ಕುಲಕರ್ಣಿಯವರ ಲೇಖನದ ಒಂದು ಭಾಗ ಸೂಚಿಸುತ್ತದೆ : ವಿದ್ಯಾರ್ಥಿನಿಯಾಗಿದ್ದಾಗಿ ನಿಂದಲೂ ಬಹಳ ಮುಂದು. ಅಲ್ಲೂ ಸರಿಸಾಟಿಯಿಲ್ಲದ ಉತ್ಸಾಹ; ಅಲ್ಲೂ ಮುಂದಾಳುತನ. ಶಾಲೆಯಲ್ಲಿ ಪೋಲಿ ಹುಡುಗರು ಗೇಲಿ ಮಾಡಿದರೆ ಅವರಿಗೆ ಬುದ್ಧಿ ಕಲಿಸಿಬಿಡುತ್ತಿದ್ದರು. ಹೀಗೆ ಒಂದೆರಡು ಸಲ ಬುದ್ಧಿ ಕಲಿತ ಮೇಲೆ ಗಂಡು ಹುಡುಗರು ಹುಡುಗಿಯರ ಕೂಡ ಮರ್ಯಾದೆಯಿಂದ ನಡೆದುಕೊಳ್ಳಹತ್ತಿದರಂತೆ. ಆಗಿನಿಂದಲೂ ಸ್ತ್ರೀ ಜಾತಿಯ ಸರಿಸಮಾನತೆಗಾಗಿ ಕಾದಿ ದಣಿದರು'.

ಪ್ರೊ. ಸ.ಸ. ಮಾಳವಾಡರವರು ಶ್ಯಾಮಲೆಯವರ 'ಹೊಂಬಿಸಿಲು' ಕಥಾ ಸಂಗ್ರಹಕ್ಕೆ ಬರೆದಿರುವ ಹಿನ್ನುಡಿಯಲ್ಲಿ ವಿವರಿಸಿರುವಂತೆ ಶ್ಯಾಮಲೆಯವರು ಜೀವನದಲ್ಲಿ ಕಷ್ಟ ಸುಖಗಳನ್ನು ಎದುರಿಸಿ ದೃಢ ಮನಸ್ಕರಾಗಿದ್ದರು. 'ಗಂಡಸಿನಂತಹ ಗಂಡಸೂ ಹಿಂಜರಿಯ ಬಹುದಾದ ಕಾರ್ಯಗಳನ್ನು ಹೊತ್ತು ನಿರ್ವಹಿಸುವ ಸಾಹಸವನ್ನು ಅವರು ತೋರುತ್ತಿದ್ದರು. ಹಾಗೆ ಕೆಲಸವನ್ನು ನಿರ್ವಹಿಸುವಾಗ ಬರುವ ತೊಡಕುಗಳು, ನಿಂದೆ, ಬೆದರಿಕೆಗಳೆಲ್ಲವನ್ನೂ ಅವರ ದೃಢ ನಿರ್ಧಾರವು ಕೊಚ್ಚಿಕೊಂಡು ಹೋಗುತ್ತಿತ್ತು'. ಮೊದಲಿನಿಂದಲೂ ಹಲವಾರು ಕುಹಕ ನಿಂದೆಗಳನ್ನು ಆರ್ಥಿಕ ತೊಂದರೆಗಳನ್ನು ಎದುರಿಸುತ್ತಲೇ ಮನೆವಾರ್ತೆ ನಡೆಸುತ್ತಾ ಪತ್ರಿಕೆಯ ಸಾರ್ವಜನಿಕ ಕಾರ್ಯಗಳ ಮತ್ತು ಸಮಾಜ ಕಲ್ಯಾಣ ಕೆಲಸಗಳ ಹೊಣೆಗಾರಿಕೆ ಯನ್ನು ನಿರ್ವಹಿಸುತ್ತಲೇ ಲೇಖಕಿಯಾಗಿ ಬೆಳೆದ ಶ್ಯಾಮಲೆಯವರ ಕಥನ ಕಲೆಗೆ ಅವರ ವಿಸ್ತಾರವಾದ ಜೀವನಾನುಭವವೇ ಗಟ್ಟಿ ತಳಹದಿಯಾಯಿತು. ಅವರು ಜೀವಿಸಿದ್ದ ಮನೆ ಅವರು ಕೆಲಸ ಮಾಡಿದ ಜಯ ಕರ್ನಾಟಕ ಪತ್ರಿಕೆಯ ಕಛೇರಿ ಎರಡೂ ಧಾರವಾಡದ ರಾಯಿಟರ್ ಓಣಿಯಲ್ಲಿದ್ದವು. ಪ್ರೊ. ಸ.ಸ. ಮಾಳವಾಡರು ಹೇಳುವಂತೆ 'ರಾಯಿಟರ್ ಓಣಿ', ಜಯ ಕರ್ನಾಟಕ ಕಚೇರಿ, ಈ ಹೆಸರುಗಳಿಂದಲೇ ಆ ಓಣಿಯ ಸ್ಥಿತಿಗತಿಯನ್ನು ಕಲ್ಪಿಸಿಕೊಳ್ಳದೆ, ಆ ಓಣಿಯ ನೆರೆಯ ಹಾಗೂ ಅಂತಹ ಬೇರೆ ಹೀನಸ್ಥಿತಿಯ ಕೇರಿ(Slum) ಗಳನ್ನು ಮನಗಂಡಾಗ ಶ್ಯಾಮಲೆಯವರ ಕತೆಗಳ ಹಿನ್ನೆಲೆಯನ್ನು ನಾವು ಸರಿಯಾಗಿ ಅರಿತುಕೊಳ್ಳುತ್ತೇವೆ. ಅಂತಹ ದೀನಸ್ಥಿತಿಯ ಕೇರಿಯ ಸಮಾಜದ ನಾಯಕ ನಾಯಕಿಯರನ್ನು ನಾವು ಶ್ಯಾಮಲೆಯವರ ಕತೆಗಳಲ್ಲಿ ಕಾಣುತ್ತೇವೆ.

ಅವರ ಕಥೆಗಳಲ್ಲಿ ಬರುವ ಘಟನೆಗಳು, ಸನ್ನಿವೇಶಗಳು, ಪಾತ್ರಗಳು ಮತ್ತು ವಿವರಣೆಗಳು ಒಂದರಂತೆ ಇನ್ನೊಂದಿಲ್ಲ. ಇದಕ್ಕೆ ಅವರ ವೈವಿಧ್ಯಮಯ ವಿಸ್ತಾರವಾದ ಜೀವನಾನುಭವವೇ ಕಾರಣವಾಗಿರಬಹುದು. ತಾವು ಕಂಡುಂಡ ಅನುಭವಗಳನ್ನು ಸಹಜವಾಗಿ, ಸರಳವಾದಿ ನೇರವಾಗಿ ಕಟ್ಟಿ ಕಥೆಗಳನ್ನು ರೂಪಿಸುತ್ತಾ ಹೋಗಿದ್ದಾರೆ. ವೇಶ್ಯಾ ಕುಲದಲ್ಲಿ ಹುಟ್ಟಿ ಅದರ ಸಂಪ್ರದಾಯವನ್ನು ಮುರಿದು ಅಂತರ್‌ಜಾತಿಯ ವಿವಾಹವಾಗಿ ಸಮಾಜದ ಕುಹಕ ನಿಂದೆಗಳನ್ನು, ಪೊಳ್ಳುತನಗಳನ್ನು ಎದುರಿಸುತ್ತಾ, ಬಡತನದಲ್ಲೇ ಬದುಕಿ ಜೊತೆಗೆ ಸಾಮಾಜಿಕ ಕಾರ್ಯಕರ್ತೆಯಾಗಿ ಸಾರ್ವಜನಿಕ ಕೆಲಸಗಳಲ್ಲಿ ತೊಡಗಿಸಿಕೊಂಡು, ಮನೆ, ಮಕ್ಕಳು, ಪತಿ, ಪತ್ರಿಕೆ ಎಲ್ಲವನ್ನು ಕೊರಳಿಗೆ ಕಟ್ಟಿಕೊಂಡು ಈಜಿ ಗೆದ್ದ ಗಟ್ಟಿ ತೀವ ಶ್ಯಾಮಲೆಯವರದು ಎನ್ನಬಹುದು. ಹಾಗಾಗಿ ಸಮಾಜದಲ್ಲಿ ನಡೆವ ಅನ್ಯಾಯ, ದೌರ್ಜನ್ಯ, ಬದುಕಿನ ಏಳುಬೀಳುಗಳನ್ನಷ್ಟೇ ಅಲ್ಲದೆ ಇವುಗಳೆಲ್ಲದರ ಬೇರುಗಳಲ್ಲಿರುವ ವ್ಯವಸ್ಥೆಯ ಮತ್ತು ಆ ವ್ಯವಸ್ಥೆಯ ಪ್ರಕ್ರಿಯೆಗಳನ್ನು ಇವರು ಚೆನ್ನಾಗಿ ಅರಿತಿದ್ದರು. ಹಾಗಾಗಿ ಅವರ ಕಥನ ಸಾಹಿತ್ಯದಲ್ಲಿ ಬರೀ ಘಟನೆ ಮತ್ತು ಪಾತ್ರಗಳಿಗಷ್ಟೇ ಅಲ್ಲದೆ ಅದಕ್ಕೆ ತಕ್ಕ ಹಿನ್ನೆಲೆ, ಆ ಹಿನ್ನೆಲೆಯಲ್ಲಿರುವ ಸಾಮಾಜಿಕ ವ್ಯವಸ್ಥೆಯ ಬಗೆಗೂ ಇವರು ಬೆಳಕು ಚೆಲ್ಲುತ್ತಾ ಹೋಗುತ್ತಾರೆ. ಅಂತೆಯೇ ಇವರ ಕತೆಗಳಲ್ಲಿ ವೈವಿಧ್ಯಮಯ ವಾಸ್ತವತೆಗಳಿದ್ದರೂ ಸಹ ಯಾವುದರ ವೈಭವೀಕರಣವೂ ಇಲ್ಲ. ಆದ್ದರಿಂದಲೇ ಏನೋ ಇವರ ಕತೆಗಳಲ್ಲಿ ಕಾಣುವ 'ಸ್ತ್ರೀಪರತೆ' ಎಂಬುದು 'ಸ್ತ್ರೀವಾದದ' ಹಣೆಪಟ್ಟಿ ಕಟ್ಟಿಕೊಳ್ಳದೆ ಮಾನವೀಯ ಮೌಲ್ಯಗಳ ಮಾನವೀಯ ಅನುಕಂಪದ ಪ್ರತಿಪಾದನೆಯಾಗಿ ಹೊರಹೊಮ್ಮಿದೆ.

ಇನ್ನು ಇವರ ಕಥಾ ಸಾಹಿತ್ಯವನ್ನು ಎರಡು ಬಗೆಯ ನಿಕಷಗಳಿಗೆ ಒಡ್ಡಬಹುದಾಗಿದೆ. ಮೊದಲನೆಯದಾಗಿ ಇವರ ಕಥೆಗಳು ಸ್ತ್ರೀ ದೃಷ್ಟಿಕೋನವನ್ನು ಎಷ್ಟರಮಟ್ಟಿಗೆ ಬಿಂಬಿಸಿ ಓದುಗರಲ್ಲೂ ಇಂತಹದೊಂದು ದೃಷ್ಟಿಕೋನವನ್ನು ಹುಟ್ಟು ಹಾಕಬಲ್ಲದು ಎಂಬುದು. ಎರಡನೆಯದಾಗಿ ಇವರ ಕತೆಗಳು ಸಾಹಿತ್ಯಿಕವಾಗಿ ಎಷ್ಟರಮಟ್ಟಿಗೆ ಓದುಗರ ಮನಸ್ಸನ್ನು ತಟ್ಟಿ, ಕತೆಗಾರ್ತಿಯ ಆತ್ಮನಿಷ್ಠ ಅನುಭವದ ಅಭಿವ್ಯಕ್ತಿಯ ಆಶಯಗಳನ್ನು ಸಂವಹನಗೊಳಿಸುತ್ತದೆ ಎಂಬುದು. ಕನ್ನಡ ಸಾಹಿತ್ಯದ ಖ್ಯಾತ ಹಿರಿಯ ವಿಮರ್ಶಕರಾದ ಡಾ. ಜಿ.ಎಸ್. ಆಮೂರರು ಹೇಳುವಂತೆ ಒಂದು ಘಟನೆ ಅಥವಾ ಘಟನೆಗಳು ಕಲ್ಪನೆಗಳು ಅಥವಾ ಪಾತ್ರಗಳು ಸಣ್ಣ ಕಥೆಯಾಗಿ ಬೆಳೆಯಬೇಕಾಗಿದ್ದಲ್ಲಿ ಅವಕ್ಕೆ ಕಲೆಯ ಸಂಸ್ಕಾರ ಬೇಕು. ಈ ಸಂಸ್ಕಾರ ಎರಡು ವಿಧವಾಗಿ ನಡೆಯಬಲ್ಲದು. ಒಂದು ಲೇಖಕನ ಆಶಯಗಳು ಸಾಹಿತ್ಯ ಪ್ರಕಾರಗಳ ನಿಯಮಗಳನ್ನು ಹಾಗೂ ಸಾಂಸ್ಕೃತಿಕ ಅಂಶಗಳನ್ನು ಒಳಗೊಳ್ಳುವ ಮೂಲಕ ರೂಪ ಆಕೃತಿಗಳನ್ನು ಪಡೆಯುವುದರಲ್ಲಿ. ಎರಡು ಕಥೆ ಲೇಖಕನ/ಲೇಖಕಿಯ ಆತ್ಮನಿಷ್ಠ ಅನುಭವ ಹಾಗೂ ಅಭಿವ್ಯಕ್ತಿಯ ನೆಲೆಯಲ್ಲಿ ಸಂಸ್ಕಾರಗೊಂಡು ರೂಪಿತವಾಗಬೇಕು. ಅಂದರೆ ಸಣ್ಣಕಥೆಯಲ್ಲಿ ಕಥನ ಕೇವಲ ಘಟನೆಗಳ ಸರಮಾಲೆಯಾಗಿಯೇ ಉಳಿಯದೆ ಸಾಹಿತ್ಯಿಕ ನಿಯಮಗಳಿಗೆ ಅನುಸಾರವಾಗಿ ರೂಪಿತವಾಗುತ್ತ, ಕಥನದ ಕಾಲಮಾನದ ಸಾಂಸ್ಕೃತಿಕ

ಅಂಶಗಳನ್ನೂ ಒಳಗೊಂಡು ತನ್ನ ರೂಪ ಆಕೃತಿಗಳನ್ನು ತಳೆಯಬೇಕು. ಅದು ಕಥೆಗಾರನ/ ಕತೆಗಾರ್ತಿಯ ಅರಿವು ದರ್ಶನಗಳ ಅಭಿವ್ಯಕ್ತಿ ಮಾಧ್ಯಮವಾಗಿ ಪರಿವರ್ತಿತವಾದಾಗ ಸಣ್ಣಕಥೆ ತನ್ನ ಮಿತಿಗಳನ್ನು ಮೀರಿ ಅರ್ಥಪೂರ್ಣವಾಗುತ್ತದೆ ಯಶಸ್ವಿಯಾಗುತ್ತದೆ.

ಮೊದಲಿಗೆ ಸ್ತ್ರೀ ದೃಷ್ಟಿಕೋನದಿಂದ ಶ್ಯಾಮಲೆಯವರ ಕಥೆಗಳನ್ನು ಪರಿಶೀಲಿಸೋಣ. ಕಥೆಗಳಲ್ಲಿ ಸ್ತ್ರೀ ದೃಷ್ಟಿಕೋನವು ಎಷ್ಟರಮಟ್ಟಿಗೆ ಚಿತ್ರಿತವಾಗಿದೆ ಎಂಬುದನ್ನು ನಿರ್ಧರಿಸಲು ಮೂರು ಮಾನದಂಡಗಳಿವೆ. ಕಥೆಯಲ್ಲಿನ ಸ್ತ್ರೀ ಸಂಬಂಧಿತ ಕಾಳಜಿಗಳು, ಸ್ತ್ರೀ ಪಾತ್ರಗಳು, ಘಟನೆಗಳು ಕಥೆ ನಡೆದ ದೇಶ, ಕಾಲಮಾನಗಳಿಗೆ ಅನುಗುಣವಾಗಿ, ವಸ್ತುನಿಷ್ಠವಾಗಿ ಇವೆಯೋ ಇಲ್ಲವೋ ಎಂಬುದರ ಜೊತೆಗೆ ಈ ಚಿತ್ರಣದಲ್ಲಿ ಸ್ತ್ರೀಯರ ಸ್ಥಿತಿಗತಿಗಳನ್ನು ನೋಡುವ ನೋಟ ಯಾವುದೇ ಸಾಂಸ್ಕೃತಿಕ, ಸಾಮಾಜಿಕ ನಿರೀಕ್ಷೆ, ಆಶಯ ಅಥವಾ ಪೂರ್ವಗ್ರಹಗಳಿಂದ ಮುಸಳಿಸದೆ ಯಥಾವತ್ತಾಗಿವೆಯೆ ಇಲ್ಲವೆ ಎಂಬುದು ಮೊದಲ ಮಾನದಂಡ. ಅಂದರೆ, ಕಥಾ ಚಿತ್ರಣವು ಸ್ತ್ರೀಯರ ಅನುಭವಾತ್ಮಕ ನೆಲೆಯಲ್ಲಿ ರೂಪಿತವಾಗಿ ಸಾಮಾಜಿಕ ಮತ್ತು ಸಾಂಸ್ಕೃತಿಕ ವಾಸ್ತವತೆಗಳನ್ನು ಯಥಾವತ್ತಾಗಿ ರೂಪಿಸಿದೆಯೋ ಇಲ್ಲವೋ ಎಂಬುದನ್ನು ಪರೀಕ್ಷಿಸುವುದು. ಸ್ತ್ರೀಯರ ಸ್ಥಿತಿಗತಿಗಳ ಮತ್ತು ಸನ್ನಿವೇಶಗಳ ಹಿನ್ನೆಲೆಯಲ್ಲಿರುವ ಪ್ರಕ್ರಿಯೆಗಳು ಹಾಗೂ ವ್ಯವಸ್ಥೆಗಳು ಯಾವುವು ಎಂಬುದರ ಬಗ್ಗೆ ಕಥೆ ಬೆಳಕು ಬೀರಿ ಅವುಗಳನ್ನು ಕುರಿತ ಒಳನೋಟಗಳನ್ನು ಓದುಗರಿಗೆ ನೀಡಿದೆಯೇ ಇಲ್ಲವೇ ಎಂಬುದನ್ನು ಎರಡನೆಯ ಮಾನದಂಡ ಅಳೆಯುತ್ತದೆ. ಸ್ತ್ರೀ ಅನುಭವಾತ್ಮಕ ನೆಲೆಯಿಂದ ನೋಡಿದಾಗ ಕಂಡು ಬರುವ ಸಾಮಾಜಿಕ ಮತ್ತು ಸಾಂಸ್ಕೃತಿಕ ವಾಸ್ತವತೆಗಳ ಅರಿವನ್ನು ಓದುಗರಲ್ಲಿ ಹುಟ್ಟು ಹಾಕಿ ಅವರಲ್ಲಿ ಸ್ತ್ರೀಪರ ಸಹಾನುಭೂತಿಯನ್ನೂ, ಸ್ತ್ರೀಪರ ಬದಲಾವಣೆಗಳ ಬಯಕೆಯನ್ನೂ ಅಂತಹ ಬದಲಾವಣೆಗಳಿಗೆ ಓದುಗರ ಒಪ್ಪಿಗೆಯನ್ನೂ ಅವರ ಮನಸ್ಸಿನಲ್ಲಿ ಎಷ್ಟರಮಟ್ಟಿಗೆ ಕಥೆ ಮೂಡಿಸಬಲ್ಲುದು ಎಂಬುದೇ ಮೂರನೆಯ ಮಾನದಂಡ. ಸ್ತ್ರೀ ದೃಷ್ಟಿಕೋನದ ಈ ಮೂರು ಮಾನದಂಡಗಳಿಂದ ಶ್ಯಾಮಲೆಯವರ ಕಥೆಗಳನ್ನು ಪರಿಶೀಲಿಸಿದಾಗ ಮತ್ತು ಅವರು ಬದುಕಿದ್ದ ದೇಶ ಕಾಲಮಾನಗಳಿಗೆ ಅನ್ವಯಿಸಿ ನೋಡಿದಾಗ ಅವರ ಕೆಲವು ಕಥೆಗಳನ್ನು ಬಿಟ್ಟರೆ, ಬಹಳಷ್ಟು ಕಥೆಗಳನ್ನು ಯಶಸ್ವಿ ಕಥೆಗಳೆಂದೇ ಕರೆಯಬಹುದಾಗಿದೆ. 'ಕಂತಿಯ ದೇಶಾಂತರ', 'ನಡೆದು ಬಂದ ಲಕ್ಷ್ಮಿ' ಕಥೆಗಳು ಇಂತಹ ಯಶಸ್ವಿ ಕಥೆಗಳ ಅತ್ಯುತ್ತಮ ಉದಾಹರಣೆಗಳೆನ್ನಬಹುದು.

ಇನ್ನು ಸ್ತ್ರೀ ಕತೆಗಾರ್ತಿಯರ ಬಗ್ಗೆ ವಿಮರ್ಶಕರು ಗುರುತಿಸಿರುವ ಕೆಲವು ಮಿತಿಗಳನ್ನು ಎಷ್ಟರಮಟ್ಟಿಗೆ ದಾಟಲು ಶ್ಯಾಮಲೆಯವರಿಗೆ ಸಾಧ್ಯವಾಗಿದೆ ಎಂಬುದರ ಪರಿಶೀಲನೆಯೊಂದಿಗೆ ಅವರ ಕತೆಗಳ ಸ್ತ್ರೀಪರತೆಯನ್ನು ಹಾಗೂ ಸಾಹಿತ್ಯಿಕ ಮೌಲ್ಯಗಳನ್ನು ಒಟ್ಟಂದದಲ್ಲಿ ನೋಡಿದಾಗ ಇವರ ಕಥಾ ಸಾಹಿತ್ಯದ ಸಮಗ್ರ ವಿಮರ್ಶೆ ದೊರತೀತು. ಪ್ರಸ್ತುತ ಪ್ರಬಂಧ ಈ ದಿಸೆಯಲ್ಲಿ ಮಾಡಿರುವ ಪ್ರಾಮಾಣಿಕವಾದ ಚಿಕ್ಕ ಪ್ರಯತ್ನ ಮಾತ್ರ.

ಸ್ತ್ರೀಪರವಾದ ಸಹಾನುಭೂತಿ ಸ್ತ್ರೀ ಲೇಖಕಿಯರ ಮಿತಿಗಳಲ್ಲಿ ಮುಖ್ಯವಾದದ್ದು. ಇವರಿಗೆ ಮಾನವ ಸ್ವಭಾವದ ಆಳಗಳಿಗೆ ಇಳಿದು ನೋಡುವ ಪ್ರವೃತ್ತಿ ಬೇಕಿಲ್ಲ. ವಸ್ತುನಿಷ್ಠತೆಯಿಲ್ಲ. ಪುರುಷಪಾತ್ರಗಳು ವಂಚಕರಾಗಿಯೂ ಸ್ತ್ರೀ ಪಾತ್ರಗಳು ಅತಿಭಾವುಕತೆಯ ಮೊಟ್ಟೆಗಳಾಗಿಯೂ ಆಗುವ ಸಂಭವವೇ ಹೆಚ್ಚು ಎನ್ನುವ ವಿಮರ್ಶಕರ ಸಾಧಾರಣೀಕರಣದ ಹೊರಗೆ ಉಳಿಯುವ ಗಟ್ಟಿಗಾಳು ಎಂದು ಡಾ. ದಬ್ಬೆಯವರು ಶ್ಯಾಮಲೆಯವರನ್ನು ಗುರುತಿಸುತ್ತಾರೆ. ಸ್ತ್ರೀಯರೇ ಶೋಷಣೆಯ ಹಸ್ತಕರಾಗಿ ಅಸಹಾಯಕ ಮಹಿಳೆಯರನ್ನು ಶೋಷಿಸುವ ವಾಸ್ತವತೆಯನ್ನು ನಿಷ್ಠುರವಾಗಿ ಚಿತ್ರಿಸುವ 'ತಾಯಿ ಮಾತಾಯಿ', 'ಕರುಳ ಕತ್ತರಿ', 'ದೊಡ್ಡಮ್ಮ ನೋಡಿದ ವರ', 'ಸವತಿಯರು' ಮತ್ತು ಬಲವಂತವಾಗಿ ಸೊಸೆಗೆ ನಿಯೋಗ ಮಾಡಿಸಿ ಶೋಷಿಸುವ ಗಂಗಾಬಾಯಿಯ ಪಾತ್ರವಿರುವ 'ಕುಲಪುತ್ರ' ಅಥವಾ 'ಗುಪ್ತದಾನ' ಇತ್ಯಾದಿ ಕಥೆಗಳನ್ನು ಶ್ಯಾಮಲೆ ಬರೆದಿದ್ದಾರೆ. ಈ ಕಥೆಗಳು ಅವರ ವಸ್ತುನಿಷ್ಠತೆಯನ್ನು, ಸ್ತ್ರೀ ಇನ್ನೊಬ್ಬ ಸ್ತ್ರೀಯನ್ನು ಶೋಷಣೆ ಮಾಡುವಲ್ಲಿ ಶೋಷಕಳ ಬೆನ್ನಾಗಿರುವ ಶೋಷಕ ಸಾಮಾಜಿಕ ವ್ಯವಸ್ಥೆಯ ಮತ್ತು ಶೋಷಕ ಪ್ರಕ್ರಿಯೆಗಳ ಮೇಲೆ ಅವರು ಬೆಳಕು ಚೀರಿರುವುದನ್ನು ಎತ್ತಿ ತೋರುತ್ತವೆ. ಆದ್ದರಿಂದಲೇ ಇವರ ಸ್ತ್ರೀಪರತೆ ಕುರುಡ ಸ್ತ್ರೀಪರತೆಯಾಗಿ ಮೂಡಿಲ್ಲ. ಬದಲಿಗೆ, ಸ್ತ್ರೀಶೋಷಣೆ ಸ್ತ್ರೀಯರಿಂದಲೂ ಆಗುತ್ತದೆ, ಆಗಬಹುದು ಎಂಬುದನ್ನು ನಿರೂಪಿಸುತ್ತಾ ಶೋಷಣೆಗಳ ಬೇರುಗಳಲ್ಲಿರುವ ಪುರುಷ ನಿರ್ಧಾರಿತ ಪುರುಷ ಕೇಂದ್ರಿತ ಸಾಂಸ್ಕೃತಿಕ ಮತ್ತು ಸಾಮಾಜಿಕ ಪ್ರಕ್ರಿಯೆಗಳು ಮತ್ತು ಮನೋಭಾವನೆಗಳ ಮೇಲೆಯೂ ಬೆಳಕು ಚೆಲ್ಲಿ ಸ್ತ್ರೀಶೋಷಣೆಯ ಸಮಗ್ರ ಚಿತ್ರವನ್ನು ಶ್ಯಾಮಲೆಯವರು ಕೊಡುತ್ತಾರೆ. ಇಂತಹ ಸ್ತ್ರೀಶೋಷಣೆಯ ಸಮಗ್ರ ಚಿತ್ರಣ ನೀಡುತ್ತಲೇ ಸ್ತ್ರೀಪರತೆಯನ್ನು ಎತ್ತಿಹಿಡಿಯುವಲ್ಲಿ ಹಾಗೂ ಓದುಗರ ಸಹಾನುಭೂತಿ ಪಡೆಯುವಲ್ಲಿ ಶ್ಯಾಮಲಾ ಯಶಸ್ವಿಯಾಗುತ್ತಾರೆ.

ಸಾಮಾನ್ಯವಾಗಿ ಶ್ಯಾಮಲೆಯವರ ಕಾಲಮಾನದಲ್ಲಿ ಹಾಗೂ ಆನಂತರವೂ ಕೆಲಕಾಲ ಸ್ತ್ರೀ ಸಾಹಿತ್ಯದಲ್ಲಿ ಪರಿತ್ಯಕ್ತೆಯರ, ವಿಧವೆಯರ ಬದುಕನ್ನು ಚಿತ್ರಿಸುವಾಗ ಅವರ ತ್ಯಾಗ ಸಹನೆ, ಶ್ರದ್ಧೆಗಳನ್ನು ವೈಭವೀಕರಿಸುತ್ತಾ ಅವರನ್ನು ಹುತಾತ್ಮರನ್ನಾಗಿಸುವ ಹಾಗೂ ಅವರನ್ನು ದುರಂತಗಳಲ್ಲಿ ಕೊನೆಗೊಳಿಸುವ ಪ್ರವೃತ್ತಿಯಿತ್ತು. ಆದರೆ ಶ್ಯಾಮಲೆಯವರು ಹೀಗೆ ದುರಂತಗಳಲ್ಲಿ ಹುತಾತ್ಮತೆಯಲ್ಲಿ ಅಂತ್ಯಗೊಳ್ಳದ ಜೀವನ್ಮುಖಿ ಪರಿಹಾರಗಳನ್ನು ತಮ್ಮ ಕಥೆಗಳಲ್ಲಿ ಸೂಚಿಸಿದ್ದಾರೆ. ಉದಾಹರಣೆಗೆ ಗಂಡನ ಹಿಂಸೆ ತಾಳಲಾರದೆ ಗಂಡನನ್ನು ತೊರೆದು ಮಕ್ಕಳನ್ನು ಬೆನ್ನಿಗೆ ಕಟ್ಟಿಕೊಂಡು ಹೋಗುವ ಬೇಡರ ಜಾತಿಯ ಬಡ ತಾಯಿ ಕಂತಿಯು ತನ್ನ ಕಾರ್ಯಶೀಲತೆಯಿಂದ, ಅವಳಿಗೆ ಬದುಕಿನ ಮೇಲಿದ್ದ ಅಗಾಧ ಪ್ರೀತಿಯಿಂದ ಅವಳ ಬದುಕು ದುರಂತದಲ್ಲಿ ಕೊನೆಗೊಳ್ಳದೆ ಜೀವನ್ಮುಖಿಯಾಗಿ ನೇರ್ಪುಗೊಳ್ಳುತ್ತದೆ.

ಡಾ. ದಬ್ಬೆಯವರ ಅಭಿಪ್ರಾಯದಂತೆ ಕಂತಿಯು ಪ್ರೀತಿ ಬಯಸುವ ತ್ಯಾಗವನ್ನು ತನ್ನ ಕ್ರಿಯಶೀಲತೆಯ ಮೂಲಕ ಮಾಡುತ್ತಾಳೆ. ಈ ಪಾತ್ರದ ಮತ್ತೊಂದು ವಿಶೇಷವೆಂದರೆ ತನ್ನ ಕುಟುಂಬದ ಬಗ್ಗೆ ಕಂತಿ ತೋರುವ ಪ್ರೀತಿ, ಶ್ರದ್ಧೆ ಅದಕ್ಕಾಗಿ ಪಡುವ ಅತೀವ ಶ್ರಮದಿಂದಾಗಿ

ಅವಳು ಹುತಾತ್ಮತೆಯನ್ನು ತನ್ನ ವ್ಯಕ್ತಿತ್ವದ ಮೇಲೆ ಎಳೆದುಕೊಳ್ಳಬೇಕಾಗಿಲ್ಲ ಎಂಬುದು. ಕಂತಿ ಜೀವನದ ಸಂತೋಷಕ್ಕೂ ಸ್ಪಂದಿಸುತ್ತಾ ತನ್ನ ಪ್ರೀತಿ, ತ್ಯಾಗ ಮತ್ತು ಶ್ರದ್ಧೆ ತೋರಲು ಸಾಧ್ಯ ಎಂದು ತನ್ನ ಬದುಕಿನ ರೀತಿಯಿಂದ ತೋರಿಸುತ್ತಾಳೆ. ಆದ್ದರಿಂದಲೇ ಒಂದು ಹೊಸ ಬದುಕಿನ ಸಂತೋಷಕ್ಕೆ ಸ್ಪಂದಿಸುವ ಸಂದರ್ಭ ಬಂದಾಗ ತನ್ನ ಗಂಡನಲ್ಲದ ಮಾದೇವನ ಪ್ರೀತಿಗೆ ತೆರೆದುಕೊಳ್ಳುತ್ತಾಳೆ. ಉಡಿಕೆ ಮಾಡಿಕೊಂಡು ಹುತಾತ್ಮತೆಯ ನರಳುವಿಕೆಯ ನರಕದಿಂದ ಪಾರಾಗಿ ಜೀವನ್ಮುಖಿಯಾಗುತ್ತಾಳೆ.

ಇನ್ನು ಜೋಗತಿ ದ್ಯಾಂವಕ್ಕ ಶ್ಯಾಮಲೆಯ ಕಥಾ ಸೃಷ್ಟಿಯಲ್ಲಿಯೇ ಮರೆಯಲಾಗದ ಪಾತ್ರ. 'ನಡೆದು ಬಂದ ಲಕ್ಷ್ಮಿ' ಕತೆಯಲ್ಲಿ ದ್ಯಾಂವಕ್ಕನ ಧೀರ ಬದುಕಿನ ಉದಾರತೆಯು ಅರಳುತ್ತಾ ಹೋಗುವುದನ್ನು ಕಾಣಬಹುದು. ಹಿಂಸಾಪ್ರವೃತ್ತಿಯ ಕುಡುಕ ಗಂಡನನ್ನು ದ್ಯಾಂವಕ್ಕನೇ ಮನೆಯಿಂದ ಹೊರಗೆ ಹಾಕಿ "ಗಂಡ್ಸೀನಾಧಾರ ಇಲ್ದ ಯಾವ ಹೆಂಗಸು ಬಾಳವೇ ಮಾಡಿ ಮುಂದಕ ಬರ್ತಾಳ?" ಎಂದು ಹಂಗಿಸಿದ ಗಂಡನ ಸವಾಲನ್ನು ಸ್ವೀಕರಿಸಿ ಏರುಜವ್ವನ ದಲ್ಲಿ ತನ್ನತನವನ್ನು ಮೆರೆಯುತ್ತಾ ನಾಲ್ಕೈದು ವರ್ಷದ ಮಗನನ್ನು ಬೆಳೆಸಿ ದೊಡ್ಡವನನ್ನಾಗಿ ಮಾಡಿ ದುಡಿದು ಸಾಕಷ್ಟು ಆರ್ಥಿಕವಾಗಿಯೂ ಮೇಲೇರಿ ನೈತಿಕವಾಗಿ ಬದುಕಿ ತನ್ನ ಬದುಕನ್ನು ತನ್ನ ಮಗನ ಬದುಕನ್ನೂ ನೇರ್ಪಡಿಸಿಕೊಳ್ಳುತ್ತಾಳೆ. ಹೀಗೆ ಬಹಳ ಹಿಂದೆಯೇ ಹೆಣ್ಣಿನ ಕರ್ತೃತ್ವ ಶಕ್ತಿಯನ್ನು ಹತ್ತಿಕ್ಕುವ ಅಂಶಗಳು ವಿವಾಹದ ಚೌಕಟ್ಟಿನಲ್ಲಿರುವುದನ್ನು ಪರೋಕ್ಷ ವಾಗಿ ಶ್ಯಾಮಲೆಯವರು ಬೆರಳು ಮಾಡಿ ತೋರಿದ್ದಾರೇನೋ ಎಂದು ಭಾಸವಾಗುತ್ತದೆ. ಈ ಕತೆಯು ಕೆಳಜಾತಿ ಮತ್ತು ಕೆಳವರ್ಗದ ಹೆಣ್ಣು ಮಗಳದಾಗಿದ್ದು ಅದನ್ನು ಚಿತ್ರಿಸುವ ನೋಟ ಮೇಲ್ವರ್ಗದ ಅಥವಾ ಮೇಲ್ಜಾತಿಯದಾಗಿ ಇರದೆ ಮತ್ತು ಮೇಲ್ಜಾತಿ ವರ್ಗಗಳ ಮೌಲ್ಯ ಗಳನ್ನು ಹೇರದೆ ತೀವ್ರ ಆಕ್ಷೇಪಣೆ ನಿಂದೆಗಳಿಗೆ ಕಾರಣವಾಗಬಹುದಾದ ವಿವಾಹ ಬಾಹಿರ ಬದುಕನ್ನು ಮತ್ತು ದ್ಯಾಂವಕ್ಕನ ಮಗ ಸಹದೇವನ ವಿವಾಹೇತರ ಲೈಂಗಿಕ ಸಂಬಂಧಗಳನ್ನು ಕಟ್ಟಿಕೊಡುತ್ತದೆ. ಈ ಕತೆಯಲ್ಲಿ ಬರುವ ದ್ರೌಪದಿ ಗಂಡನ ಮನೆಯಲ್ಲಿ ಇನ್ನಿಲ್ಲದ ಹಿಂಸೆ ಅನುಭವಿಸಿ ದ್ಯಾಂವಕ್ಕನ ಮಗನೊಂದಿಗೆ ಓಡಿ ಹೋಗುತ್ತಾಳೆ. ದ್ಯಾಂವಕ್ಕ ಈ ಸಮಸ್ಯೆಯನ್ನು ಬಿಡಿಸುವಾಗ ತನ್ನ ಮಗ ಮತ್ತು ದ್ರೌಪದಿಯ ಮನಸ್ಸುಗಳನ್ನು ಬದುಕುಗಳನ್ನು ಉಳಿಸಬೇಕೆಂಬುದರ ಬಗ್ಗೆ ಗಮನ ನೀಡಿ ಮೊದಲ ಮದುವೆಯಿಂದ ದ್ರೌಪದಿಗೆ ಸೋಡ ಚೀಟಿ ಕೊಡಿಸುವುದಲ್ಲದೆ ಅವಳನ್ನು ತನ್ನ ಮಗನಿಗೆ ಮದುವೆ ಮಾಡಿಸುತ್ತಾಳೆ. ಅವಳನ್ನು ನಡೆದು ಬಂದ ಲಕ್ಷ್ಮಿಯಾಗಿ ಮನೆ ತುಂಬಿಸಿಕೊಳ್ಳುತ್ತಾಳೆ. ಏರುಜವ್ವನದಲ್ಲಿ ಗಂಡನನ್ನು ತೊರೆದು ಪ್ರೀತಿ ಕಾಣದೆ ಶ್ರಮಜೀವನ ನಡೆಸಿದ ದ್ಯಾಂವಕ್ಕ ಎರಡು ಜೀವಗಳನ್ನು ಅಗಲಿಸದೆ ಮಂದಿಯ, ದೈವದವರ, ಸಮಾಜದ ನಿಂದೆ ಟೀಕೆಗಳಿಗೆ ಸೊಪ್ಪು ಹಾಕದೆ ಒಂದುಗೂಡಿಸಿ ತನ್ನ ಸಹಜ ಸಿದ್ಧ ಉದಾರತೆಯನ್ನು ಮೆರೆಯುತ್ತಾಳೆ. ಹೀಗೆ ಕೆಳಗಿನ ಜಾತಿಗಳಲ್ಲಿಯ ಕುಟುಂಬ ಮತ್ತು ಮಹಿಳೆಯರ ತುಂಬು ಬದುಕಿನ, ನೈಜ ಪ್ರೀತಿಯ ಸಹಜ ಪ್ರಪಂಚ ವೊಂದನ್ನು ಓದುಗರು ವಸ್ತುನಿಷ್ಠವಾಗಿ ಕಾಣಲು, ಅಲ್ಲಿನ ಪಾತ್ರಗಳೊಂದಿಗೆ ಸ್ಪಂದಿಸಲು

ಸಾಧ್ಯವಾಗುವ ಚಿತ್ರಣವನ್ನು ಈ ಕಥೆ ಕಟ್ಟಿಕೊಡುತ್ತದೆ. ಉತ್ತರ ಕರ್ನಾಟಕದ ಹಳ್ಳಿಯ ಜನಪದೀಯ ಭಾಷೆಯ ಸೊಗಡು ಈ ಕತೆಯ ನೈಜತೆಗೆ ಮತ್ತು ಯಶಸ್ಸಿಗೆ ಇನ್ನೊಂದು ಕಾರಣವಾಗಿದೆ.

ಇದೇ ರೀತಿ 'ವಸಂತರಾಯನ ಮದುವೆ' ಮತ್ತು 'ತಾಯಿ ಮಾತಾಯಿ' ಕಥೆಗಳಲ್ಲಿ ವಿವಾಹಪೂರ್ವ ಸಂಬಂಧ, ವಿವಾಹಬಾಹಿರ ಬಸಿರು ಸಂತಾನಗಳ ವಿಷಯಗಳು ಬಂದರೂ ಅವನ್ನೇ ಬೆಟ್ಟವಾಗಿಸಿ ಪಾತ್ರಗಳ ಬದುಕುಗಳನ್ನು ದುರಂತವಾಗಿಸಬೇಕೆಂಬ ಅಪೇಕ್ಷೆ ಲೇಖಕಿಗೆ ಇಲ್ಲದಿರುವುದರಿಂದ ಹಾಗೂ ಇಂತಹ ವಿಷಯಗಳಲ್ಲಿ ಲೇಖಕಿ ಹೆಣ್ಣುಗಂಡುಗಳಿಬ್ಬರನ್ನೂ ಸಮಾನ ಹೊಣೆಗಾರರನ್ನಾಗಿ ಮಾಡುವುದರಿಂದ ಈ ಕಥೆಗಳ ಸ್ತ್ರೀಪಾತ್ರಗಳು ಮರುಮದುವೆಯಾಗಿ ತಮ್ಮ ಬದುಕನ್ನು ನೇರ್ಪಡಿಸಿಕೊಳ್ಳುತ್ತಾರೆ. ಹಾಗೆ ಅವರು ಮಾಡಿದ್ದು ಸರಿ ಎನ್ನುವ ಸಹಾನುಭೂತಿ ಒಪ್ಪಿಗೆಗಳು ಓದುಗರಲ್ಲೂ ಉಂಟಾಗುವಂತೆ ಬರೆದಿರುವುದು ಅಂದಿನ ಸಂಪ್ರದಾಯ ನಿಷ್ಠ ಸಾಮಾಜಿಕ ಕಾಲಕ್ಕೆ ಶ್ಯಾಮಲೆಯವರ ಸಾಧನೆ ಎನ್ನಬಹುದು. ಈ ಬಗೆಯ ಕತೆಗಳ ಅಂತ್ಯವನ್ನು ಶ್ಯಾಮಲೆಯವರ ಕತೆಗಳಲ್ಲಿನ ರಚನಾತ್ಮಕ ದೃಷ್ಟಿಯೆನ್ನಬಹುದು. ಸ್ತ್ರೀ ಬದುಕಿನ ಸಮಸ್ಯೆಗಳು, ಕಷ್ಟಗಳು, ದುರಂತಗಳನ್ನು ಹೇಗೆ ಪರಿಹರಿಸಬಹುದು ಎಂಬುದಕ್ಕೆ ಇಲ್ಲಿ ದಿಕ್ಸೂಚಿಗಳಿವೆ ಎಂಬ ಕಾರಣದಿಂದಲೂ ಈ ಕತೆಗಳು ಸ್ತ್ರೀವಾದೀ ಸಾಹಿತ್ಯ ವಿಮರ್ಶೆಯ ದೃಷ್ಟಿಯಿಂದ ಗೆಲ್ಲುತ್ತವೆ.

ಶ್ಯಾಮಲೆಯವರ ಕತೆಗಳನ್ನು ವಿಮರ್ಶಿಸುವಾಗ ಇವರು ತಮ್ಮ ಕಥಾ ವಸ್ತುವಿನ ಆಯ್ಕೆಯಲ್ಲಿ, ನಿರೂಪಣೆಯಲ್ಲಿ ತಮ್ಮ ದೇಶ ಕಾಲಮಾನಗಳಿಗಿಂತ ಬಹಳ ಮುಂದೆ ಇದ್ದ ದಿಟ್ಟರಾಗಿದ್ದರು ಎಂಬುದು ಗಮನಿಸಬೇಕಾದ ಸಂಗತಿ. ಉದಾಹರಣೆಗೆ 'ಕುಲಪುತ್ರ ಅಥವಾ ಗುಪ್ತದಾನ' ಎಂಬ ಕಥೆ. ಈಗಾಗಲೇ ಒಮ್ಮೆ ಪ್ರಸ್ತಾಪಿಸಿರುವಂತೆ, ಮನೆಯ ಸೊಸೆಯನ್ನು ಬಲವಂತವಾಗಿ ನಿಯೋಗಕ್ಕೆ ಒಪ್ಪಿಸಿ ಮತ್ತೆ ಮತ್ತೆ ಶೋಷಿಸುವ ಹಾಗೂ ನಿಯೋಗ ಮಾಡಿದವನ ಹೆಂಡತಿಯನ್ನೂ ಶೋಷಿಸಿದ ಕತೆ. ಈ ಕತೆಯನ್ನು ಪ್ರಕಟಿಸುವಾಗ ಶ್ಯಾಮಲೆಯವರು ಕೊಟ್ಟ ಪೀಠಿಕೆಯನ್ನು ಗಮನಿಸಬೇಕು. ಈ ಲೇಖಕಿಯ ಪ್ರಕಾರ "ಇಂತಹ ನಿಯೋಗ ಪ್ರಸಂಗಗಳು ನಡೆದಿವೆ ಮತ್ತು ನಡೆಯುತ್ತಿವೆ. ...ಸಾಹಿತ್ಯ ವ್ಯವಸಾಯಿಗಳಿಗೆ ಒಳ್ಳೆಯದು, ಕೆಟ್ಟದು ಎರಡೂ, ವಿವರಣೆಗೆ ವರ್ಣನೆಗೆ ಯೋಗ್ಯವಾದ ವಸ್ತುಗಳಾಗಬಲ್ಲವು. ಅವನ್ನು ಚಿತ್ರಿಸುವಾಗ ಸಹೃದಯತೆಯನ್ನು ಅವರು ಆಶ್ರಯಿಸಿದರೋ ಇಲ್ಲವೋ ಎಂಬುದನ್ನು ನೋಡಬೇಕಾದುದು ಅವಶ್ಯ". ಶ್ಯಾಮಲೆಯವರಿಗೆ ಇಂತಹ ಸಹೃದಯತೆ ಸಮೃದ್ಧವಾಗಿ ಇರುವುದರೊಂದಿಗೆ ದಿಟ್ಟತನವೂ ಇದ್ದುದರಿಂದ ಇಂತಹ ಕೆಲವು ಕಥೆಗಳನ್ನು ಬರೆಯಲು ಅವರಿಗೆ ಸಾಧ್ಯವಾಯಿತು ಎನ್ನಬಹುದು.

ಕನ್ನಡದ ಖ್ಯಾತ ವಿಮರ್ಶಕರಾದ ಡಾ. ಜಿ.ಎಸ್. ಆಮೂರರ ಪ್ರಕಾರ ಶ್ಯಾಮಲಾ ಬೆಳಗಾಂವ್‌ಕರ್ ಮತ್ತು ಅವರ ಓರಿಗೆಯವರಾದ ಕೊಡಗಿನ ಗೌರಮ್ಮ ಹಾಗೂ ರಾಜವಾಡೆಯವರ ರಚನೆಗಳ ಕೇಂದ್ರದಲ್ಲಿರುವ ಸ್ತ್ರೀಯರು, ಪುರುಷ ನಿರ್ಮಿತ ವ್ಯವಸ್ಥೆಯ

ವಿರುದ್ಧ ನೇರವಾಗಿ ಬಂಡೇಳುವುದಿಲ್ಲವಾದರೂ ಅವರು ಅದನ್ನು ಸಮರ್ಥಿಸುವುದಿಲ್ಲ. ಇಂತಹ ಪುರುಷ ವ್ಯವಸ್ಥೆಯ ಉಸಿರುಗಟ್ಟುವ ಪರಿಸರದಲ್ಲಿ ಅವರು ನಡೆಸುವ ಹೋರಾಟ ದಲ್ಲಿ ಹಿಮ್ಮೆಟ್ಟುತ್ತಾರೆ. ಶ್ಯಾಮಲೆಯವರ ಕತೆಗಳನ್ನೇ ತೆಗೆದುಕೊಂಡಲ್ಲಿ, 'ನೀಲೆಯ ಸಂಸಾರ' ಕತೆಯ ನೀಲಾ, 'ದೊಡ್ಡಮ್ಮ ನೋಡಿದ ವರ' ಕತೆಯ ಸರೋಜ ಮತ್ತು 'ಸವತಿಯರು' ಕತೆಯ ರುಕ್ಮಿಣಿ ಹಾಗೂ ಸತ್ಯಭಾಮ ಇಂತಹ ಪಾತ್ರಗಳಿಗೆ ಉದಾಹರಣೆಯಾಗಿ ನಿಲ್ಲುತ್ತಾರೆ. ಈ ಕತೆಗಳಲ್ಲಿನ ಪಾತ್ರಗಳು ತಮ್ಮ ಇಷ್ಟಕ್ಕೆ ಅನುಸಾರವಾಗಿ ಜೀವನ ಸಂಗಾತಿಯನ್ನು ಆರಿಸಿಕೊಳ್ಳಲಾಗದಂತೆ, ಪಡೆಯಲಾಗದಂತೆ ಅವರನ್ನು ಪರಾಧೀನತೆಯಲ್ಲಿ ಬದುಕುವಂತೆ ಮಾಡಿದ ಕೌಟುಂಬಿಕ ಸಾಮಾಜಿಕ ಒತ್ತಡಗಳಿಗೆ ಬಲಿಯಾಗುತ್ತವೆ. ಇಲ್ಲಿ ಕಡ್ಡಾಯವಾಗುವ ಮದುವೆಗೆ ಒಪ್ಪಿಕೊಂಡು ಬದುಕಬೇಕಾದ ನೀಲೆಯಂತೆ, ಇಷ್ಟಪಟ್ಟ ವರನ ಬದಲಿಗೆ ಅವನ ಮುದಿತಂದೆಯನ್ನು ಮೋಸದ ಮದುವೆಯಲ್ಲಿ ವರನನ್ನಾಗಿ ಒಪ್ಪಿಕೊಳ್ಳಬೇಕಾಗುವ ಸರೋಜಳಂತೆ ಹಾಗೂ 'ಸವತಿಯರು' ಕತೆಯಲ್ಲಿನ ಸತ್ಯಭಾಮೆಯಂತೆ ಈಗಾಗಲೇ ವಿವಾಹಿತನಾಗಿರುವವನಿಗೆ ತನ್ನನ್ನು ಒಪ್ಪಿಸಿಕೊಳ್ಳಲೇಬೇಕಾದ ಅನಿವಾರ್ಯತೆಯಿದೆ. ಆದರೆ ನೀಲೆಯು ಮದುವೆಯಾದ ನಂತರ ತನ್ನ ಪತಿ ಮತ್ತು ಅವನ ಮನೆಯವರ ಮನಗೆದ್ದು ಮನಸ್ಸಿಲ್ಲದಿದ್ದರೂ ಕೊಟ್ಟ ಮನೆ ಹುಟ್ಟಿದ ಮನೆಗಳ ಕೀರ್ತಿ ಕಾಪಾಡುವ ಸಲುವಾಗಿ ವೈಯಕ್ತಿಕ ಭಾವನೆಗಳನ್ನು ಬಲಿಗೊಟ್ಟರೂ ಪ್ರತಿ ತಿಂಗಳೂ ತಾನು ಮದುವೆಯಾಗಲು ಬಯಸಿದ್ದ ತನ್ನ ಸೋದರತ್ತೆಯ ಮಗ ಶಂಕರನನ್ನು ನೋಡಲು ಹೋಗುತ್ತಾಳೆ, ಅವನ ಮುಖ ನೋಡಿ ಹಿರಿಹಿರಿ ಹಿಗ್ಗುತ್ತಾಳೆ. ಅವಳ ಈ ಮೊದಲಿನ ಪ್ರೀತಿ ಗೊತ್ತಿದ್ದ ಅವಳ ಗಂಡ ಇದಕ್ಕೆಂದೂ ಅಡ್ಡಿ ಬರದೇ ಇರುವುದು ಅಚ್ಚರಿಯೆನಿಸಿ ಓದುಗರನ್ನು ಸಂದಿಗ್ಧದಲ್ಲಿ ಕೆಡವದೇ ಇರದು. ಹಾಗೆಯೇ 'ದೊಡ್ಡಮ್ಮ ನೋಡಿದ ವರ' ಕಥೆಯ ಸರೋಜ ಹಾಗೂ ಅವಳು ಮದುವೆಯಾಗಲು ಒಪ್ಪಿದ್ದ ಅವಳ ಈಗಿನ ಮಲಮಗ ಭಾಸ್ಕರನನ್ನು ಅವನು ದುಃಖಿಸಿದಾಗಲೆಲ್ಲಾ ಪರಸ್ಪರ ಸಂತೈಸುವ ಸಂಬಂಧ ಚಿತ್ರಣ ಸಹ ಅಚ್ಚರಿ ಪಡುವಂತಹದ್ದು. ಅಂತೆಯೇ ವರದಕ್ಷಿಣೆ ಕೊಡಲಾಗದ ತಂದೆ ತಾಯಿಯರ ಬಡತನದಿಂದಾಗಿ ಎರಡನೆಯ ಮದುವೆಗೆ ಒಪ್ಪಿದ ಕಾವೇರಿ, ಕೃಷ್ಣರಾಯನ ಕೈಹಿಡಿದು ಉತ್ತರ ಕರ್ನಾಟಕದ ಪದ್ಧತಿಯಂತೆ ಸತ್ಯಭಾಮೆಯೆಂಬ ಹೊಸ ಹೆಸರು ಹೊತ್ತು ಅವನ ಮನೆ ತುಂಬುತ್ತಾಳೆ. ಅಲ್ಲಿ ಮಕ್ಕಳಿಲ್ಲದ ಬಂಜೆಯೆಂದು ಮನೆಯವರೆಲ್ಲರ ತೀವ್ರ ತಿರಸ್ಕಾರಕ್ಕೂ ಶೋಷಣೆಗೂ ಒಳಗಾಗಿದ್ದ ತನ್ನ ಸವತಿ ರುಕ್ಮಿಣಿಯನ್ನು ತನ್ನಂತೆಯೇ ಪರಿಸ್ಥಿತಿಯ ಬಲಿಪಶುವಾಗಿರುವವಳು ಎಂದು ತಿಳಿದು ಪ್ರೀತಿಯಿಂದ ಕಾಣುತ್ತಾಳೆ. ಅವಳನ್ನು ತನ್ನ ಸಮಾನಳನ್ನಾಗಿ ಕಂಡು ಅವಳ ಶೋಷಣೆಯನ್ನು ನಿಲ್ಲಿಸಿ ತನ್ನ ಹಿರಿತನವನ್ನು ಮೆರೆಯುತ್ತಾಳೆ. ತನ್ನ, ಕೃಷ್ಣರಾಯನ ಮತ್ತು ರುಕ್ಮಿಣಿಯ ಬದುಕನ್ನು ಸತ್ಯಭಾಮೆ ಬೆಳಗುತ್ತಾಳೆ. ತನ್ನಂತೆಯೇ ಸೊಸೆಯಾಗಿ ಬಂದ ರುಕ್ಮಿಣಿಯ ದುಸ್ಥಿತಿಗೆ ಸ್ಪಂದಿಸುವಲ್ಲಿ ಅದನ್ನು ಕಾರ್ಯರೂಪಕ್ಕೆ ಇಳಿಸುವಲ್ಲಿ ಅವಳು ತೋರುವ ಚಾಲಾಕಿತನಗಳು ಈ ಪಾತ್ರದಲ್ಲಿ ಚೆನ್ನಾಗಿ ಚಿತ್ರಿತವಾಗಿವೆ.

ಈ ಮೂರು ಕತೆಗಳಲ್ಲಿ ನಾವು ಗಮನಿಸಬೇಕಾದ ಅಂಶವೊಂದಿದೆ. ಈ ಮೂರು ಪಾತ್ರಗಳಲ್ಲಿ ಅಂತರ್ಗತವಾಗಿರುವ ವಾಸ್ತವತೆಯ ಪ್ರಜ್ಞೆ, ವಿವೇಕ, ಬದುಕಿ ಉಳಿವ ಸಾಹಸ ಹಾಗೂ ಹೃದಯವಂತಿಕೆಗಳ ಮೇಲೆ ಈ ಮೂರು ಕತೆಗಳು ಒತ್ತು ನೀಡಿರುವುದು ಗಮನಿಸಬೇಕಾದ ಅಂಶ. ಈ ಅಂಶ ಮಹತ್ವದ್ದು ಏಕೆಂದರೆ ಪರಾಧೀನತೆಯಲ್ಲಿ ಬದುಕ ಬೇಕಾಗಿರುವ ಸ್ತ್ರೀಯರಿಗೂ ತಮ್ಮದೇ ಆದ ವ್ಯಕ್ತಿತ್ವವಿದೆ ಎಂಬುದನ್ನು ಇದು ತೋರಿಸುತ್ತದೆ. ಆದರೆ ತಾತ್ವಿಕತೆಯ ಅಭಾವದಿಂದಾಗಿ ಇದನ್ನು ಸ್ಪಷ್ಟವಾಗಿ ಅಸ್ಮಿತೆಯ ಅರಿವು ಎಂದು ಕರೆಯಲಾಗುವುದಿಲ್ಲ. ಆದರೆ ಇದನ್ನು ಆ ದಿಕ್ಕಿನಲ್ಲಿ ನಡೆವ ಒಂದು ಹೆಜ್ಜೆ ಎಂದು ಗುರುತಿಸಬಹುದಾಗಿದೆ. ಹೀಗೆ ಶ್ಯಾಮಲಾರವರ ಪಾತ್ರಶಿಲ್ಪಗಳಲ್ಲಿ ಅನನ್ಯತೆಯ/ಅಸ್ಮಿತೆಯ ಕುರುಹುಗಳು ಕಾಣಿಸಿಕೊಂಡರೂ ಅವು ಸ್ಪಷ್ಟವಾಗಿಲ್ಲದೇ ಇರುವುದು ಕತೆಗಾರ್ತಿಯ ಮಿತಿಯೆನ್ನಬಹುದು.

ಇವರ ಇನ್ನೊಂದು ಮಿತಿಯೆಂದರೆ ಇವರ ಎಲ್ಲಾ ಕಥೆಗಳಲ್ಲಿ ಬರುವ ಯಾವುದೇ ಸ್ತ್ರೀಪಾತ್ರವನ್ನು ತೆಗೆದುಕೊಂಡರೂ, ಆ ಪಾತ್ರವು ಒಂದು ವ್ಯಕ್ತಿಯಾಗಿ ಗುರುತಿಸಲ್ಪಡದೆ, ಪತ್ನಿ, ಮಗಳು, ವಿಧವೆ, ಭಗ್ನ ಪ್ರೇಮಿಯಾದ ಸ್ತ್ರೀ, ಪರಿತ್ಯಕ್ತೆ, ವಿವಾಹವನ್ನು ಎದುರು ನೋಡುತ್ತಿರುವ ಕನ್ಯೆ, ತಾಯಿ ಇತ್ಯಾದಿ ಪುರುಷ ಸಂಬಂಧೀ ಪಾತ್ರವಾಗಿಯೇ ಗುರುತಿ ಸಲ್ಪಟ್ಟಿದೆ. ಅವರು ಬದುಕಿದ್ದ ಕಾಲಮಾನದ ಪುರುಷಾಧಿಕಾರದ ಸಾಮಾಜಿಕ ಸಂದರ್ಭದಲ್ಲಿ ಸ್ತ್ರೀಗೆ ಒಂದು ಸ್ವತಂತ್ರ್ಯ ಅಸ್ತಿತ್ವವಾಗಲೀ ಅದರ ಕಲ್ಪನೆಯಾಗಲೀ ಇರಲಿಲ್ಲ. ಆದ್ದರಿಂದ ಶ್ಯಾಮಲೆಯವರ ಕಥೆಗಳಲ್ಲಿ ಬರುವ ಸ್ತ್ರೀಪಾತ್ರಗಳೆಲ್ಲಾ ಈ ಅವಸ್ಥೆಯ ಪ್ರತೀಕಗಳಾಗಿಯೇ ಬಂದಿವೆ. ಈ ಮಿತಿಯೊಳಗೆ ಸಹ ಅವರ ಅನೇಕ ಸ್ತ್ರೀಪಾತ್ರಗಳು ತಮ್ಮತನವನ್ನು ಯಾವುದೋ ಒಂದು ಬಗೆಯಲ್ಲಿ ಅಭಿವ್ಯಕ್ತಿಸಿರುವುದು ಲೇಖಕಿಯ ಪ್ರತಿಭೆಗೆ ಸಾಕ್ಷಿಯಾಗಿದೆ. 'ನಡೆದು ಬಂದ ಲಕ್ಷ್ಮಿ' ಕತೆಯ ದ್ಯಾಂಪಕ್ಕ, 'ಕಂತಿಯ ದೇಶಾಂತರ'ದ ಕಂತಿ ಮತ್ತು 'ಸವತಿಯರು' ಕಥೆಯ ಸತ್ಯಭಾಮೆ ಇಂತಹ ಪಾತ್ರಗಳಿಗೆ ಉತ್ತಮ ಉದಾಹರಣೆಗಳಾಗಿದ್ದಾರೆ.

ಹಿಂದಿಯ ಪ್ರಸಿದ್ಧ ಲೇಖಕಿ ಮೃದುಲಾ ಗಾರ್ಗ್‌ರವರ ಪ್ರಕಾರ ಇಂದಿಗೂ ಸಹ ಸೃಜನಾತ್ಮಕ ಸಾಹಿತ್ಯದಲ್ಲಿ ವೇಶ್ಯೆಯರ ಹೆಣ್ಣುಮಕ್ಕಳ ಬಗ್ಗೆ ಹೆಚ್ಚಿನ ಬರೆವಣಿಗೆ ಆಗಿಲ್ಲ. ಸಾಹಿತ್ಯದಲ್ಲಿ ಇಂತಹ ಕೆಲವಿಷಯಗಳ ಬಗ್ಗೆ ಹೆಚ್ಚಿನ ದಿವ್ಯ ಮೌನವಿದೆ ಎಂಬುದು ಸ್ತ್ರೀವಾದೀ ವಿಮರ್ಶಕಿಯರ ಟೀಕೆಯೂ ಹೌದು. ಆದರೆ ಬಹಳ ಹಿಂದೆಯೇ ಶ್ಯಾಮಲೆಯವರು ಈ ಕುರಿತು 'ಸ್ನೇಹ ದರ್ಶನ', 'ತಾಯಿ ಮಾತಾಯಿ' ಮತ್ತು 'ಕರುಳ ಕತ್ತರಿ' ಎಂಬ ಮೂರು ಕಥೆಗಳನ್ನು ಬರೆದಿದ್ದಾರೆ. ಮೊದಲೆರಡು ಕಥೆಗಳಲ್ಲಿ ನಾಯಕಿಯರು ವೇಶ್ಯಾ ವೃತ್ತಿಯ ಅಂಚಿಗೆ ತಳ್ಳಲ್ಪಟ್ಟಿದ್ದರೂ ಅದರ ವಿರುದ್ಧ ಹೋರಾಡಿ ವಿವಾಹವಾಗಿ ಉತ್ತಮ ಜೀವನ ನಡೆಸುತ್ತಾರೆ. 'ಕರುಳ ಕತ್ತರಿ' ಕಥೆಯಲ್ಲಿ ವೇಶ್ಯಾ ಕುಲದಲ್ಲಿ ತಂದೆ ತಾಯಿಯರೇ ತಮ್ಮ ಮಕ್ಕಳನ್ನು ಶೋಷಿಸುತ್ತಾರೆ ಎಂಬುದನ್ನು ಚಂದ್ರಿಯ ದುರಂತದಲ್ಲಿ ಕಾಣಬಹುದಾಗಿದೆ.

ಶ್ಯಾಮಲಾರ ಕಥೆಗಳೆಲ್ಲವೂ ಗಂಭೀರ ಸಾಮಾಜಿಕ ಅಥವಾ ಸ್ತ್ರೀಯರ ಸಮಸ್ಯೆಗಳನ್ನು ಕುರಿತೇ ಬರೆದವುಗಳಲ್ಲ. ಆದರೆ ಇಂತಹ ಗಂಭೀರ ಕತೆಗಳ ನಿರೂಪಣೆಯಲ್ಲಿಯೂ ಕೆಲವೆಡೆ ವಿನೋದ, ಪರಿಹಾಸ ಮತ್ತು ಉಲ್ಲಾಸಗಳು ತಂಗಾಳಿಯಂತೆ ತೂರಿಬಂದು ಮನಸ್ಸಿಗೆ ಮುದ ನೀಡುತ್ತವೆ. ತಮ್ಮ ಸಹಜ ಉಲ್ಲಾಸ ಪರಿಹಾಸಗಳು ತುಂಬಿದ ವೈನೋದಿಕ ಶೈಲಿಯ ಔಚಿತ್ಯಪೂರ್ಣವಾದ ಶುಚಿಯಾದ ಹಾಸ್ಯ ರಸಾಯನವನ್ನು ಒದಗಿಸುವ ಕತೆಗಳನ್ನೂ ಶ್ಯಾಮಲ ಬರೆದಿದ್ದಾರೆ. ಮೂವರು 'ನಾಗರೀಕರು', 'ದಾಜೀಬಾನ ಬ್ಯಾಂಕು', 'ಬಕಪಕ್ಷಿ', 'ಬ್ರಹ್ಮಚಾರಿ ರಾಮಮೂರ್ತಿ', 'ನನ್ನನ್ನು ನೋಡಲಿಕ್ಕೆ ಬಂದಾಗ' ಈ ಕತೆಗಳು ಇವರ ವೈನೋದಿಕ ಶೈಲಿಯ ಲಾಲಿತ್ಯಕ್ಕೆ ಸುಭಗತೆಗೆ ಉತ್ತಮ ನಿದರ್ಶನಗಳಾಗಿವೆ. ಅದರಲ್ಲಿಯೂ 'ಮೂವರು ನಾಗರೀಕರು' ಮತ್ತು 'ಮಹಾಶಿವರಾತ್ರಿ' ಕಥೆಗಳು ಬಾಲ್ಯದ ವಿನೋದ, ಕಿಡಿಗೇಡಿತನ, ಮುಗ್ಧತೆ ಇತ್ಯಾದಿಗಳನ್ನು ಚಿತ್ರಿಸುತ್ತಾ ಮಕ್ಕಳ ಸ್ವಭಾವ ಚಿತ್ರಣವನ್ನು ನೀಡುತ್ತವೆ. ಭಾರತೀಯ ಆಂಗ್ಲ ಲೇಖಕರಲ್ಲಿ ಪ್ರಸಿದ್ಧರಾದ ಆರ್.ಕೆ. ನಾರಾಯಣ್ ಅವರ 'ಸ್ವಾಮಿ ಅಂಡ್ ಹಿಸ್ ಫ್ರೆಂಡ್ಸ್' ಕಥಾ ಸರಣಿಯನ್ನು ಈ ಕತೆಗಳು ನೆನಪಿಗೆ ತರುತ್ತವೆ. ಈ ಕತೆಗಳಲ್ಲಿ ಶ್ಯಾಮಲಾ ರವರು ಮಕ್ಕಳ ದೃಷ್ಟಿಯಲ್ಲಿ ಬದುಕಿನ ವ್ಯಾಪಾರಗಳನ್ನು ನೋಡುವ ನೋಟ ಚೇತೋಹಾರಿ ಯಾದದ್ದು.

ಇವೆಲ್ಲವುದರ ಒಟ್ಟಿಗೇನೆ ಶ್ಯಾಮಲಾ ಅಂದಿನ ಕಾಲಕ್ಕೆ ಹೊಸದೆನಿಸುವ 'ಸ್ವಭಾವ ಚಿತ್ರಣ'ದ ಪ್ರಯೋಗ ಮಾಡಿದ್ದರು. ಇದನ್ನು 'ಮಹಾಶಿವರಾತ್ರಿ' ಬಾಲಕ ಗೋವಿಂದನ ಪಾತ್ರ ಬಣ್ಣನೆಯಲ್ಲಿ ಕಾಣಬಹುದು. 'ಮುನ್ನೂರು ಅರವತ್ತೈದು' ಎಂಬ ಕಥೆ ಪತ್ರಗಳ ರೂಪದಲ್ಲಿ ಮಾರ್ಮಿಕವಾಗಿ ಮೂಡಿದೆ. ಅದೇ ರೀತಿ 'ವಸಂತರಾಯನ ಮದುವೆ', 'ಬ್ರಹ್ಮಚಾರಿ ರಾಮಮೂರ್ತಿ', 'ನನ್ನನ್ನು ನೋಡಲಿಕ್ಕೆ ಬಂದಾಗ' ಎನ್ನುವ ಕಥೆಗಳನ್ನು ಪ್ರಥಮ ಪುರುಷದ ಒಂದು ಬಗೆಯ ಸ್ವಗತದಲ್ಲಿ ಮೂಡಿಸಲಾಗಿದೆ. ಈ ಎಲ್ಲಾ ಕತೆಗಳು ತಮ್ಮ ವೈನೋದಿಕ ಶೈಲಿಯಿಂದ ಉತ್ತಮ ಪರಿಹಾಸದಿಂದ ಓದುಗರ ಮನಸ್ಸನ್ನು ಉಲ್ಲಾಸ ಗೊಳಿಸುತ್ತವೆ.

ಒಟ್ಟಂದದಲ್ಲಿ ಶ್ಯಾಮಲಾ ಕಥಾ ಸಾಹಿತ್ಯವು ವಾಸ್ತವಿಕ ಪ್ರಜ್ಞೆಯ ನೆಲಗಟ್ಟಿನ ಮೇಲೆ ನಿಂತು ಅವರ ವೈವಿಧ್ಯಮಯ ವಿಸ್ತಾರವಾದ ಜೀವನಾನುಭವದ ಹಾಗೂ ನೈಜ ಪ್ರತಿಭೆಯ ದ್ರವ್ಯದಿಂದ ಕೂಡಿದೆ. ಇವರು ತಮ್ಮ ಕಥೆಗಳಲ್ಲಿ ಯಾವುದನ್ನೂ ಸ್ತ್ರೀಯರೂ ಒಳಗೊಂಡಂತೆ ಯಾರನ್ನೂ ವೈಭವೀಕರಿಸದೇ ಇರುವುದರಿಂದ ಹಾಗೂ ತಮ್ಮ ತೀರ್ಮಾನ ಅಥವಾ ಅಭಿಪ್ರಾಯಗಳನ್ನು ಯಾವುದೇ ಕಥೆಯಲ್ಲಿ ಹೆಚ್ಚಾಗಿ ಹೇರದೇ ಇರುವುದರಿಂದ ಇವರ ಬಹಳಷ್ಟು ಕತೆಗಳು ಕಲಾತ್ಮಕತೆಯ ದೃಷ್ಟಿಯಿಂದ ಮೌಲಿಕವಾಗಿವೆ. ಲೇಖಕಿಯ ಮುಕ್ತ ಮನಸ್ಸಿನಿಂದಾಗಿ ಹಾಗೂ ಪಾತ್ರ ನಿರೂಪಣೆಯಲ್ಲಿ ತೋರುವ ಸಂಯಮದಿಂದಾಗಿ 'ದಾಜೀಬಾ', 'ಕಂತಿ', 'ದ್ಯಾಂವಕ್ಕ'ನಂತಹ ಪಾತ್ರಗಳು ತಮ್ಮ ನೈಜತೆಯನ್ನು ವೈಶಿಷ್ಟ್ಯವನ್ನು ಉಳಿಸಿಕೊಳ್ಳುತ್ತವೆ. ಜೊತೆಗೇ ಜಾತಿವರ್ಗಗಳ ಹಾಗೂ ಲಿಂಗತ್ವ ಬೇಧಗಳಿಂದ ಉಂಟಾಗುವ

ಅಮಾನವೀಯತೆಯ ಬಗ್ಗೆ ತಮಗಿರುವ ಕೋಪವನ್ನು ಕೆಲವು ಕಥೆಗಳಲ್ಲಿ ನೇರವಾಗಿ ಹೊರ ಗೆಡಹಿದ್ದರೂ ಅದರಿಂದ ಕಥಾ ಶಿಲ್ಪಕ್ಕಾಗಲೀ ಕಲಾತ್ಮಕತೆಗಾಗಲೀ ಕುಂದು ಉಂಟಾಗದೇ ಇರುವುದನ್ನು ಗಮನಿಸಬಹುದು.

ಹೀಗೆ ಹಲವು ಹನ್ನೊಂದು ರೀತಿಗಳಲ್ಲಿ ಶ್ಯಾಮಲಾ ಕಥಾ ಸಾಹಿತ್ಯವು ಇಂದಿಗೂ ಪ್ರಸ್ತುತವಾಗಿದ್ದು ಇಂದಿನ ಲೇಖಕಿಯರಿಗೂ ಸ್ಫೂರ್ತಿದಾಯಕವಾಗಬಲ್ಲದು. ದೊಡ್ಡ ಹುದ್ದೇದಾರಳಾದ ಮೇಲ್ವರ್ಗದ ಪ್ರತಿಷ್ಠಿತ ಡಾಕ್ಟರಿಣಿಯ ಪಾತ್ರದಿಂದ ಹಿಡಿದು ಕಡು ಬಡವಳಾದ ಕಂತಿಯವರೆಗೆ ಎಲ್ಲಾ ಸ್ತರಗಳ ಸ್ತ್ರೀಯರ ಚಿತ್ರಣ ಇವರ ಕಥಾಕುಂಚದಿಂದ ಹೊರಹೊಮ್ಮಿದೆ. ತಮ್ಮ ಕಾಲಮಾನದ ಸ್ತ್ರೀಯರ ಬದುಕನ್ನು ತೀರ ಹತ್ತಿರದಿಂದ, ಆಪ್ತವಾಗಿ ನೈಜವಾಗಿ ಚಿತ್ರಿಸಿರುವುದರಿಂದ ಇವರ ಕಥಾ ಸಾಹಿತ್ಯವು, ನಮ್ಮ ನಾಡಿನ ನೆಲದಲ್ಲಿ ಸ್ವಾತಂತ್ರ್ಯಪೂರ್ವದಲ್ಲಿಯೇ ಅರಳುತ್ತಿದ್ದ ಸ್ತ್ರೀವಾದಿ ಪ್ರಜ್ಞೆಯ ಸಾಹಿತ್ಯಿಕ ಇತಿಹಾಸವನ್ನು ಅರಿಯಲು ಮಹಿಳಾ ಅಧ್ಯಯನಗಳ ವಿದ್ವಾಂಸರುಗಳಿಗೂ ಮತ್ತು ವಿದ್ಯಾರ್ಥಿ ಸಮೂಹಕ್ಕೂ ಉಪಯುಕ್ತವಾಗಿದೆ.

ಕೊನೆಯದಾಗಿ ಡಾ. ವಿಜಯಾ ದಬ್ಬೆಯವರು ಶ್ಯಾಮಲಾ ಕಥಾ ಸಾಹಿತ್ಯದ ಬಗ್ಗೆ ಸಂಗ್ರಹ ರೂಪದಲ್ಲಿ ಸಂಕ್ಷಿಪ್ತವಾಗಿ ಕೊಟ್ಟ ಅಭಿಪ್ರಾಯವನ್ನು ಉದ್ಧರಿಸುವುದು ಇಲ್ಲಿ ಅನುಚಿತವಾಗ ಲಾರದು. "ಶ್ಯಾಮಲಾ ಕಥನ ಸಾಹಿತ್ಯವು ಮೇಲ್ನೋಟಕ್ಕೇ ಕಾಣುವಂತೆ ತೆರೆದ ಮನಸ್ಸುಳ್ಳದ್ದು, ಉಲ್ಲಾಸ ಪ್ರವೃತ್ತಿಯದು, ಬದುಕಿನ ನೆಮ್ಮದಿಗಾಗಿ ಬದಲಾವಣೆಯನ್ನು ಆಶಿಸುವಂಥದ್ದು. 'ಈ ಸಾಹಿತ್ಯದ ಒಳನಾಡಿನಲ್ಲಿ ಸಂಚರಿಸಿದಂತೆಲ್ಲಾ ಮತ್ತು ಕೆಲವು ರಚನಾತ್ಮಕ ಅಂಶಗಳು ನಮ್ಮನ್ನು ತಟ್ಟುತ್ತವೆ..... ಉದಾರ ಅನುಕಂಪ, ಮನುಷ್ಯ ಸ್ವಭಾವದ ಬಗೆಗಿನ ವಿನಯ, ಹೀಗೂ ಪ್ರಪಂಚವಿದೆಯೆಂಬುದನ್ನು ಪೂರ್ವಗ್ರಹವಿಲ್ಲದೆ ನೋಡುವ ಪ್ರಬುದ್ಧತೆ ಶ್ಯಾಮಲೆಯವರ ಉತ್ತಮ ಕತೆಗಳ ಕಲಾತ್ಮಕತೆಯನ್ನೂ ಮೌಲಿಕತೆಯನ್ನೂ ಹೆಚ್ಚಿಸಿವೆ; ತನ್ನ ಜನಪದ ಸತ್ವ ಮತ್ತು ಜನಪರತೆಯಿಂದ ಈ ಸಾಹಿತ್ಯವು ಆಪ್ತವೂ ಪ್ರಸ್ತುತವೂ ಆಗುತ್ತದೆ. .....ಸ್ತ್ರೀಯರ ಬದುಕನ್ನು ನೋಡುವ ಚಿಕಿತ್ಸಕ ದೃಷ್ಟಿಯನ್ನು ಮಸಳಿಸದ ಈ ಸಾಹಿತ್ಯದ ಸ್ತ್ರೀಪರ ಗುಣಕ್ಕೆ ಇರುವ ಕಸುವು, ಸಮತೋಲನ, ಅರ್ಥಪೂರ್ಣತೆ ಬೆಲೆ ಯುಳ್ಳದ್ದಾಗಿದೆ. .... ಕೆಳಜಾತಿ ವರ್ಗಗಳ ಬದುಕನ್ನು ಹತ್ತಿರದಿಂದ, ಒಳಗಿನಿಂದ ಹಿಡಿಯುವ ಹಂಬಲ ಪ್ರಯತ್ನದಲ್ಲಿ ಶ್ಯಾಮಲೆ ವಿಶಿಷ್ಟರಾಗಿದ್ದಾರೆ. ಶ್ಯಾಮಲಾ ಕತೆಗಳು ಅವಿರುವಂತೆಯೇ ಚಿತ್ತಾರವಿಲ್ಲದೆಯೂ ತಾಳಿಕೆ ಬರುವಂಥವಾಗಿವೆ.

**ಗ್ರಂಥಋಣ**

೧. ದಬ್ಬೆ ವಿಜಯಾ, ೧೯೯೯, **ಶ್ಯಾಮಲಾ ಸಂಚಯ**, (ಸಂಪಾದಿತ ಕೃತಿ), ಬೆಂಗಳೂರು, ಕರ್ನಾಟಕ ಲೇಖಕಿಯರ ಸಂಘ.

೨. ದ.ಬಾ. ಕುಲಕರ್ಣಿ, ೧೯೬೦, ದಿವಂಗತೆ ಸೌ. ಶ್ಯಾಮಲಾದೇವಿ, ಸಂಗ್ರಹಿತ ಲೇಖನ, **ಶ್ಯಾಮಲಾ ಸಂಚಯ**, ಕೃತಿಯಲ್ಲಿ ವಿಜಯಾದಬ್ಬೆ (ಸಂಪಾದಕರು) ಬೆಂಗಳೂರು, ಕರ್ನಾಟ ಲೇಖಕಿಯರ ಸಂಘ, ಪು. ೨೮೮.

೩. ಜಿ.ಎಸ್. ಆಮೂರ, ೨೦೦೪, **ಕನ್ನಡ ಕಥನ ಸಾಹಿತ್ಯ : ಸಣ್ಣಕತೆ.**

೪. ಬೆಳಗಾಂವಕರ್ ಶ್ಯಾಮಲಾದೇವಿ, ೧೯೩೬, **ಹೂ ಬಿಸಿಲು,** ಧಾರವಾಡ, ಮನೋರಂಜನ ಗ್ರಂಥ ಪ್ರಕಾಶನ ಸಮಿತಿ, ಎರಡನೆಯ ಮುದ್ರಣ, ೧೯೪೫.

೫. ಬೆಳಗಾಂವಕರ್ ಶ್ಯಾಮಲಾದೇವಿ, ೧೯೪೩, **ಹೊಂಬಿಸಿಲು,** ಧಾರವಾಡ, ಮನೋರಂಜನ ಗ್ರಂಥ ಪ್ರಕಾಶನ ಸಮಿತಿ.

೬. ಮಲ್ಲಿಕಾ ಘಂಟಿ, ೧೯೯೪, ಕನ್ನಡದಲ್ಲಿ ಮಹಿಳಾ ಕಥಾಸಾಹಿತ್ಯ, (ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪಿಎಚ್.ಡಿ. ಪ್ರಬಂಧ, ಧಾರವಾಡ, ಯುವ ಲೋಕ ಪ್ರಕಾಶನ, ಪುಟ ೧೨೯-೧೪೧.

೭. ಸ.ಸ. ಮಾಳವಾಡ, ೧೯೪೩, **ಹೊಂಬಿಸಿಲು** ಕೃತಿಯ ಹಿನ್ನುಡಿ, ಧಾರವಾಡ, ಮನೋರಂಜನ ಗ್ರಂಥ ಪ್ರಕಾಶನ ಸಮಿತಿ

೮. ಶಾಲಿನಿ ರಘುನಾಥ, ಶ್ಯಾಮಲಾದೇವಿ ಬೆಳಗಾಂವಕರ್.

೯. Deccan Herald, **Women and Literature : Time to break the gender barrier,** 30.4.95, Page 5.

---

ಧಾರವಾಡದ ಸಾಹಿತ್ಯಿಕ ಸಾಂಸ್ಕೃತಿಯ ಸಂಸ್ಥೆಯಾದ 'ಅವನಿ' ರಸಿಕರಂಗ ಏರ್ಪಡಿಸಿದ್ದ "ಉತ್ತರ ಕರ್ನಾಟಕದ ಲೇಖಕಿಯರ ಕಥಾ ಸಾಹಿತ್ಯ" - ಈ ಕುರಿತ ವಿಚಾರ ಸಂಕಿರಣದಲ್ಲಿ ದಿ: ೨೭.೦೩.೦೫ ರಂದು ಮಂಡಿಸಿದ ವಿಮರ್ಶಾತ್ಮಕ ಪ್ರಬಂಧ.

# ವಚನ ಸಾಹಿತ್ಯದ ಭಾಷಾ ಬಳಕೆಯಲ್ಲಿನ ಸ್ತ್ರೀಸಂವೇದನಾ ಸ್ವರೂಪ

ಎಸ್.ಎಸ್. ಅಂಗಡಿ

**ಕ**ನ್ನಡ ಸಾಹಿತ್ಯಕ್ಕೆ ಸುಮಾರು ಸಾವಿರದ ಐನೂರು ವರ್ಷಗಳ ಇತಿಹಾಸವಿದೆ. ಆದರೆ ಅಷ್ಟು ವರ್ಷಗಳ ಕಾಲವೂ ಸ್ತ್ರೀಪರವಾದ, ಸ್ತ್ರೀ ವಿಚಾರಗಳನ್ನು ಪ್ರತಿಧ್ವನಿಸುವ ಸಾಹಿತ್ಯ ರಚನೆಯಾದುದು ತುಂಬ ಕಡಿಮೆ. ಹತ್ತನೆಯ ಶತಮಾನದಲ್ಲಿ ಅತ್ತಿಮಬ್ಬೆ ತಾನು ಬರೆಹಗಾರ್ತಿಯಾಗದಿದ್ದರೂ ತನ್ನ ಸಂಪತ್ತನ್ನು ಜೈನಧಾರ್ಮಿಕ ಕೃತಿಯಾದ ಶಾಂತಿಪುರಾಣವನ್ನು ಪ್ರಚಾರ ಮಾಡಲು ಬಳಸಿದ್ದು ಹಾಗೂ ರನ್ನನ ಸಾಹಿತ್ಯಕ ಚಟುವಟಿಕೆಗಳಿಗೆ ಪ್ರೋತ್ಸಾಹವನ್ನು ನೀಡಿದ್ದು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಸ್ಮರಿಸುವಂತಹ ಮಹತ್ವದ ಘಟ್ಟ.

ಹನ್ನೆರಡನೆಯ ಶತಮಾನದ ವಚನ ಸಾಹಿತ್ಯ ಸ್ತ್ರೀಪರವಾದ ಚಳುವಳಿಗೆ ವೈಚಾರಿಕವಾದ ಭದ್ರಬುನಾದಿಯನ್ನು ಹಾಕಿತು ಎಂದು ಹೇಳಿದರೆ ಉತ್ಪ್ರೇಕ್ಷೆಯಾಗಲಿಕ್ಕಿಲ್ಲ. ಸಂಸಾರದ ಸಾಂಸ್ಥಿಕ ಬಂಧನದಿಂದ ಹೊರಬಂದು ಮಹಿಳೆ ತನ್ನ ಮಾರ್ಗವನ್ನು ತಾನೇ ಆಯ್ದುಕೊಳ್ಳಬಹುದು ಎಂಬ ಸಿದ್ಧಾಂತಕ್ಕೆ ಒಂದು ವಿಶಿಷ್ಟವಾದ ತಿರುವನ್ನು ನೀಡಿದ ಅಕ್ಕಮಹಾದೇವಿಯ ಬದುಕು- ಬರೆಹಗಳು ಕನ್ನಡ ಸಾಹಿತ್ಯದ ಸ್ತ್ರೀಪರ ಚಿಂತನೆಯ ಚರಿತ್ರೆಯಲ್ಲಿ ಮಹತ್ವದ ಘಟ್ಟಗಳು. ಅಕ್ಕಮಹಾದೇವಿಯ ಮಾರ್ಗದಲ್ಲಿ ಮುನ್ನಡೆದ ಮುಕ್ತಾಯಕ್ಕ, ಕಾಳವ್ವೆ, ಗಂಗಾಂಬಿಕೆ ಮುಂತಾದ ಶರಣರ ಬರೆಹಗಳಲ್ಲಿ ಸ್ತ್ರೀವಾದಿ ತತ್ವಗಳ ಛಾಯೆಯನ್ನು ಗುರುತಿಸಬಹುದು. ಕನ್ನಡ ಸಾಹಿತ್ಯದಲ್ಲಿ ಸ್ತ್ರೀವಾದಿ ಸಾಂಸ್ಕೃತಿಕ ನೆಲೆಗಳನ್ನು ಹುಡುಕುವಾಗ ಶರಣರ ವಚನಗಳಿಗೆ ಆದ್ಯತೆ ನೀಡಬೇಕಾಗಿದೆ.

ಸಾಹಿತ್ಯದ ಪ್ರತಿಯೊಂದು ಸಾಮಾಜಿಕ ಚಳುವಳಿಯ ಅತ್ಯಂತ ಪ್ರಬಲ ಸಾಧನಗಳಲ್ಲಿ ಭಾಷೆಯೂ ಒಂದು. ಭಾಷಿಕರ ಭಾವನೆಗಳನ್ನು, ಅನುಭವಗಳನ್ನು ಹೊರತರುವ ಅತ್ಯಂತ ಪ್ರಬಲ ಮಾಧ್ಯಮ ಭಾಷೆಯಾಗಿರುವುದರಿಂದ ಅದು ಬದುಕಿನ ದಿಕ್ಕನ್ನೇ ಬದಲಾಯಿಸುತ್ತದೆ. ಮಹಿಳೆಯರ ಸಂವೇದನೆಗಳಿಗೆ ಸೂಕ್ಷ್ಮ ಗ್ರಹಿಕಾಶಕ್ತಿಗೆ ಅವರ ಭಾಷಾ ನಿರ್ವಚನ ಪ್ರಮುಖ ಪಾತ್ರವಹಿಸುತ್ತದೆ. ಸ್ತ್ರೀಯ ಭಾಷೆ-ಲಯ-ನಾದ ಪುರುಷರಿಗಿಂತ ಭಿನ್ನವಾಗಿರುತ್ತದೆ. ತನ್ನತನದ ಅಭಿವ್ಯಕ್ತಿಗೆ ಆಕೆ ಬಳಸುವ ಭಾಷೆ ಅವಳ ಅಸ್ತಿತ್ವವನ್ನು ಪುರುಷ ಲೋಕದ ವೈಭವೀಕರಣಕ್ಕೆ ವಿರುದ್ಧ ನಡೆಯುವ ತತ್ಪರಿಣಾಮವಾಗಿ ಲಿಂಗ ಸಮಾನತೆಯನ್ನು ಬಿಂಬಿಸುತ್ತದೆ.

ಕೌಟುಂಬಿಕ ಪರಿಸರದಲ್ಲಿ ನಡೆಯುವ ಸಾಮಾಜೀಕರಣ ಪ್ರಕ್ರಿಯೆ ಭವಿಷ್ಯದಲ್ಲಿ ಜೀವನವನ್ನು ಕುರಿತಂತೆ ತಳೆಯಬಹುದಾದ ಭಾಷಿಕ ನಿಲುವು, ಒಲವುಗಳಿಗೆ ಭದ್ರಬುನಾದಿಯನ್ನು ಹಾಕಿಕೊಡುತ್ತದೆ. ಭಾಷಿಕ ಕ್ರಿಯೆಗಳು ಬದುಕಿನ ಹಲವು ವಲಯಗಳಲ್ಲಿ ನಡೆಯುವುದರಿಂದ ವಿಭಿನ್ನ ಸಾಮಾಜೀಕರಣದ ಪರಿಣಾಮಗಳನ್ನು ಭಾಷಿಕರು ಎದುರಿಸಬೇಕಾಗುತ್ತದೆ. ಬದಲಾಗುತ್ತಿರುವ ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳೆಯರು ತಮ್ಮ ಭಾವನೆಗಳನ್ನು, ಆಲೋಚನೆಗಳನ್ನು ನಿರ್ಭಯವಾಗಿ ಅಭಿವ್ಯಕ್ತಿಸಿದ್ದಾರೆ. ಸ್ತ್ರೀಪರವಾದ ಧೋರಣೆಯ ಪುನರ್ ಮೌಲೀಕರಣದಲ್ಲಿ ಅವರು ಬಳಸುವ ಭಾಷೆ ತುಂಬ ಮಹತ್ವದ ಪಾತ್ರವಹಿಸುತ್ತದೆ. ವಚನಕಾರರ ರಚನೆಗಳು ಇದಕ್ಕೆ ಹೊರತಲ್ಲ. ವಚನಕಾರರು ತಮಗೆ ಅನಿಸಿದ್ದನ್ನು ತಮ್ಮ ಸಾಮಾಜಿಕ ಸಂದರ್ಭದ (ಔಪಚಾರಿಕ ಮತ್ತು ಅನೌಪಚಾರಿಕ) ಭಾಷೆ ಮತ್ತು ಲಯದಲ್ಲಿ ಅಭಿವ್ಯಕ್ತಿಸಿದ್ದಾರೆ. ಆ ಸಂದರ್ಭದಲ್ಲಿ ಒಂದು ಬಗೆಯ ಸಾಂಸ್ಕೃತಿಕ ಕಾವ್ಯ ಸಂಯೋಜನೆಯ ಕ್ರಿಯೆ ಅವರ ರಚನೆಗಳಲ್ಲಿ ನಡೆದಿದೆ.

## I

ಮಹಿಳೆಯ ಸಂವೇದನೆ ಗ್ರಹಿಕೆಯ ಲಯ, ಗತಿ ಪುರುಷ ಸಂವೇದನೆಗಳಿಗಿಂತ ಭಿನ್ನವಾಗಿದೆ. ಕೆ.ವಿ. ನಾರಾಯಣ ಅವರು ಒಂದು ಸಂದರ್ಭದಲ್ಲಿ ಹೇಳಿದ ಮಾತುಗಳನ್ನೇ ಬಳಸಿ ಹೇಳುವುದಾದರೆ ಸ್ತ್ರೀ ಭಾಷೆ ಸದ್ದಿನಿಂದ ಮೌನದ ಕಡೆ ಚಲಿಸುತ್ತದೆ. ಅದು ಸಂಬಂಧ ಮೂಲವಾದುದು. ಭಾವನೆಗಳನ್ನು ಪಡೆದುಕೊಳ್ಳುವ ಮತ್ತು ಶೇಖರಿಸಿಟ್ಟುಕೊಳ್ಳುವ ಭಾಷಿಕ ಕ್ರಿಯೆ ಅಲ್ಲಿರುತ್ತದೆ. ಸ್ತ್ರೀವಾದಿ ಚಿಂತನೆ ಸ್ತ್ರೀ ಸಂವೇದನೆಯ ಜೈವಿಕ ಪರಿಗ್ರಹಿಕೆಯನ್ನು ನಿರಾಕರಿಸುತ್ತದೆ. ಲಿಂಗಾಧರಿತ ವ್ಯವಸ್ಥೆಯಲ್ಲಿ ಹೆಣ್ಣು ಗಂಡಿಗೆ ವಿಭಿನ್ನ ಅನುಭವಗಳಿವೆ ಎಂಬುದು ತಾತ್ವಿಕ ಸತ್ಯ. ಈ ವಿಭಿನ್ನ ಅನುಭವಗಳನ್ನು ಅಭಿವ್ಯಕ್ತಿಸಲು ವಿಭಿನ್ನ ಭಾಷಾರೂಪ ಅಗತ್ಯವಿದೆ. ಹೆಣ್ಣಿನ ಅಸ್ತಿತ್ವದ ಬಗ್ಗೆ ನೇತ್ಯಾತ್ಮಕವಾದ ಪುರುಷ ಲಯ ಭಾಷೆಯಲ್ಲಿ ಹೆಣ್ಣು ತನ್ನ ಅನುಭವವನ್ನು ಅಭಿವ್ಯಕ್ತಿಸುವುದು ಹೇಗೆ? ಭಾಷೆ ಎನ್ನುವುದು ಕೇವಲ ಪದಗಳ ಗುಂಪಲ್ಲ. ಅದು ಒಂದು ಸಂಸ್ಕೃತಿಯ ನಿರ್ದಿಷ್ಟ ದೃಷ್ಟಿಕೋನದ ಪ್ರತಿಬಿಂಬ. ಒಂದು ಸಂಸ್ಕೃತಿಯ ನಡೆ-ನುಡಿ, ನಂಬಿಕೆ- ಆಚರಣೆಗಳು-ಆಲೋಚನೆಗಳು ಭಾಷೆಯ ಮೂಲಕ ಹೊರಹೊಮ್ಮುತ್ತಲೇ ಅಸ್ತಿತ್ವ ಪಡೆದುಕೊಳ್ಳುತ್ತವೆ. ಒಂದು ಭಾಷಾ ಸ್ವರೂಪದ ಹಿಂದೆ ಒಟ್ಟು ಆ ಭಾಷಾಸಮುದಾಯದ ಅನುಭವ, ಆಲೋಚನೆಗಳು ಕೆಲಸ ಮಾಡುತ್ತವೆ. ವಚನ ಸಾಹಿತ್ಯದ ಉಗಮಕ್ಕಿಂತ ಹಿಂದೆ ಸ್ತ್ರೀಯರ ಪರಿಸ್ಥಿತಿ ತುಂಬ ಶೋಚನೀಯವಾಗಿತ್ತು. ಮನೆಬಿಟ್ಟು ಆಚೆ ಅವರು ಹೋಗುವಂತಿರಲಿಲ್ಲ. ಅವರಿಗೆ ವ್ಯಕ್ತಿ ಸ್ವಾತಂತ್ರ್ಯವಿರಲಿಲ್ಲ. ಅಂತಹ ಉಸಿರುಗಟ್ಟುವ ವಾತಾವರಣದ ಸಂದರ್ಭದಲ್ಲಿ ಹುಟ್ಟಿಕೊಂಡ ವಚನಕಾರರು ಸ್ತ್ರೀ ಸಮಾಜವನ್ನು ಸಾಮಾಜಿಕ ನ್ಯಾಯದ ಮೇಲೆ ಕಟ್ಟಲು ಹೆಣಗಿದರು. ಸ್ತ್ರೀಯರು ಪುರುಷರಷ್ಟೇ ಸಮಾನರು ಎಂಬ ಲಿಂಗಸಮಾನತೆಯ ತತ್ವವನ್ನು ಅವರು ಪ್ರತಿಪಾದಿಸಿದರು.

ಮೊಲೆ ಮುಡಿ ಬಂದರೆ ಹೆಣ್ಣೆಂಬರು
ಗಡ್ಡ ಮೀಸೆ ಬಂದರೆ ಗಂಡೆಂಬರು
ನಡುವೆ ಸುಳಿವಾತ್ಮ
ಗಂಡೂ ಅಲ್ಲ ಹೆಣ್ಣು ಅಲ್ಲ ಕಾಣಾ ರಾಮನಾಥ

ದಾಸಿಮಯ್ಯನ ಪ್ರಕಾರ ಗಂಡು-ಹೆಣ್ಣಿನ ವ್ಯತ್ಯಾಸ ಕೇವಲ ದೈಹಿಕ ವ್ಯತ್ಯಾಸಗಳ ಮೇಲೆ ಸ್ಥಾಪಿತವಾಗದೆ ಅವರೊಳಗಿನ ಆತ್ಮಕ್ಕೆ ಭೇದವಿಲ್ಲ ಎಂದು ಹೇಳಿ ಲಿಂಗಭೇದವನ್ನು ಅಳಿಸಿಹಾಕಿದರು. ಗೊಗ್ಗವ್ವೆ, ಸತ್ಯಕ್ಕರು ತಮ್ಮ ವಚನಗಳಲ್ಲಿ ಆತ್ಮಕ್ಕೆ ಲಿಂಗಭೇದವಿಲ್ಲವೆಂದು ಒತ್ತಿ ಹೇಳಿ ಲಿಂಗಸಮಾನತೆಯನ್ನು ಪ್ರತಿಪಾದಿಸಿದರು. ಭಾರತೀಯ ಸಂಸ್ಕೃತಿಯಲ್ಲಿ ಹೆಣ್ಣು-ಹೊನ್ನು-ಮಣ್ಣು ಇವು ಮೂರನ್ನು ಮಾಯೆಯೆಂದು ಪರಿಗಣಿಸಿ ಅನರ್ಥಕ್ಕೆ ಗುರಿಪಡಿಸಲಾಗಿತ್ತು. ಈ ವಿಷಮ ಸ್ಥಿತಿಯನ್ನು ಶರಣರು 'ಮಾಯೆ' ಎಂಬ ಪರಿಕಲ್ಪನೆಯ ಬಗೆಗಿದ್ದ ತಪ್ಪು ನಂಬಿಕೆಯಿಂದ ಹೊಡೆದು ಹಾಕಿ ಹೆಣ್ಣನ್ನು ಮಾಯಾ ಸೆರೆಯಿಂದ ಮುಕ್ತಗೊಳಿಸಿದರು.

ಹೊನ್ನು ಮಾಯೆಯೆಂಬರು ಹೊನ್ನು ಮಾಯೆಯಲ್ಲ
ಹೆಣ್ಣು ಮಾಯೆಯೆಂಬರು ಹೆಣ್ಣು ಮಾಯೆಯಲ್ಲ
ಮಣ್ಣು ಮಾಯೆಯೆಂಬರು ಮಣ್ಣು ಮಾಯೆಯಲ್ಲ
ಮನದ ಮುಂದಣ ಆಸೆಯೇ ಮಾಯೆ ಕಾಣಾ ಗುಹೇಶ್ವರ

ಅಲ್ಲಮನ ಪ್ರಕಾರ ಕೇವಲ ಹೆಣ್ಣು-ಹೊನ್ನು-ಮಣ್ಣುಗಳು ಮಾತ್ರ ಮಾಯೆಯಲ್ಲ. ಮನದ ಮುಂದಣ ಆಸೆಯೇ ಮಾಯೆ ಎಂದು ಸಾರಿ ಸಮಾಜದಲ್ಲಿ ಹೆಣ್ಣಿನ ಬಗೆಗಿದ್ದ ತಪ್ಪು ಕಲ್ಪನೆ ತೊಡೆದುಹಾಕಿ ಅವಳು ಪುರುಷನಂತೆ ಒಂದು ಜೀವ ಎಂಬ ಹಿತಕರ ವಾತಾವರಣವನ್ನು ಸಮಾಜದಲ್ಲಿ ಮೂಡಿಸಿದರು. ಹೆಣ್ಣಿಗೆ ಕೊಟ್ಟ ಈ ಸಮಾನತೆ ವಚನಕಾರರ ಅಭೂತಪೂರ್ವ ಸಾಧನೆಯಾಗಿದೆ. ಆದರೆ ಸ್ತ್ರೀ ಕುರಿತು ಬಸವಣ್ಣನವರ ನಿಲುವುಗಳನ್ನು ಪರಿಶೀಲಿದಾಗ ಅವರ ಮನೋಧೋರಣೆ ಸ್ಪಷ್ಟವಾಗುತ್ತದೆ.

ಜನಿತಕ್ಕೆ ತಾಯಾಗಿ ಹೆತ್ತಳು ಮಾಯೆ
ಮೋಹಕ್ಕೆ ಮಗಳಾಗಿ ಹೆತ್ತಳು ಮಾಯೆ
ಕೂಟಕ್ಕೆ ಸ್ತ್ರೀಯಾಗಿ ಕೂಡಿದಳು ಮಾಯೆ
ಇದಾವ ಪರಿಯಲ್ಲು ಕಾಡಿತ್ತು ಮಾಯೆ
ಈ ಮಾಯೆ ನೀವೆ ಬಲ್ಲಿರಿ ಕೂಡಲ ಸಂಗಮದೇವ

ಬಸವಣ್ಣನವರಿಗೆ ಹೆಣ್ಣು ಮಾಯೆಯಾಗಿಯೇ ಕಂಡಳು. ಅದು ಅವರ ಮೂರು-ನಾಲ್ಕು ವಚನಗಳಲ್ಲಿ ಪುನರಾವರ್ತನೆಯಾಗುತ್ತದೆ. ಅವರೇ ಬೇರೊಂದು ವಚನದಲ್ಲಿ

ಗಂಡನ ಮೆಲೆ ಸ್ನೇಹವಿಲ್ಲದ ಹೆಂಡತಿ
ಲಿಂಗದ ಮೇಲೆ ನಿಷ್ಠೆಯಿಲ್ಲದ ಭಕ್ತಿ
ಇದ್ದರೇನೋ ಶಿವಶಿವಾ

ಗಂಡನ ಮೇಲೆ ಸ್ನೇಹ ಇಲ್ಲದಿದ್ದರೆ ಅದು ನಿಜವಾದ ದಾಂಪತ್ಯವಲ್ಲ, ಸರಿ. ಆದರೆ ಹೆಣ್ಣಿನ ಮೇಲೆ ಗಂಡನಿಗಿರಬೇಕಾದ ಸ್ನೇಹದ ಬಗ್ಗೆ ಬಸವಣ್ಣನವರು ಯೋಚಿಸುವುದಿಲ್ಲ. ಹೆಣ್ಣನ್ನು ಕುರಿತು ಬಸವಣ್ಣನವರ ನಿಲುವು ಸಾಂಪ್ರದಾಯಿಕವಾಗಿತ್ತು; ವ್ಯವಸ್ಥೆಗೆ ಪೂರಕವಾಗಿತ್ತು. ಅದಕ್ಕೆ ಮುಖ್ಯಕಾರಣ ಆ ಕಾಲದ ಸಾಮಾಜಿಕ ಒತ್ತಡವನ್ನು ಮೀರುವುದು ಅವರಿಗೆ ಸಾಧ್ಯವಾಗಲಿಲ್ಲ. ವ್ಯವಸ್ಥೆ ಬಸವಣ್ಣನಂತಹವರನ್ನು ತನ್ನ ಮುಷ್ಠಿಯೊಳಗೆ ಹಾಕಿಕೊಂಡಿತ್ತು.

ವಚನ ಸಂಸ್ಕೃತಿಯಲ್ಲಿ ಶರಣರು ದಾಂಪತ್ಯ ಜೀವನ ನಡೆಸುತ್ತಲೇ ತುಂಬ ಕಾಯಕ ನಿಷ್ಠರಾಗಿದ್ದರು ಅಂತಹ ಶರಣ ದಂಪತಿಗಳು ನಮಗೆ ದೊರೆಯುತ್ತಾರೆ. ಆಯ್ದಕ್ಕಿ ಮಾರಯ್ಯ-ಆಯ್ದಕ್ಕಿ ಲಕ್ಕಮ್ಮ, ಮೋಳಿಗೆ ಮಾರಯ್ಯ-ಮೋಳಿಗೆ ಮಹಾದೇವಿಯಮ್ಮ, ಉರಿಲಿಂಗ ಪೆದ್ದಿ- ಕಾಳವ್ವೆ ಮುಂತಾದವರು. ಅವರ ವಿಶೇಷವೆಂದರೆ ವಚನ ಸಂಸ್ಕೃತಿಯಲ್ಲಿ ಶರಣ ದಂಪತಿಗಳು ಮಕ್ಕಳಿಗಾಗಿ ಹಂಬಲಿಸುವ ಉದಾಹರಣೆಗಳು ದೊರೆಯುವುದಿಲ್ಲ. ಕಾಯಕ, ದಾಸೋಹ ಅವರಿಗೆ ಮುಖ್ಯವಾಗುತ್ತದೆ. ಆಯ್ದಕ್ಕಿ ಮಾರಯ್ಯ ಆಗತ್ಯಕ್ಕಿಂತ ಹೆಚ್ಚು ಅಕ್ಕಿ ತಂದಾಗ ಅವನ ಹೆಂಡತಿ ಲಕ್ಕಮ್ಮ ಪ್ರಶ್ನಿಸುತ್ತಾಳೆ. "ಒಮ್ಮನವ ಮೀರಿ ಇಮ್ಮನದಲ್ಲಿ ತಂದಿರಿ...... ಅಲ್ಲಿಯೇ ಸುರಿದು ಬನ್ನಿ" ಎಂದು ಗಂಡನಿಗೆ ಆಜ್ಞೆ ಮಾಡುತ್ತಾಳೆ. ವಚನ ಸಂಸ್ಕೃತಿಯಲ್ಲಿ ಗಂಡನಿಗೆ ತಿಳಿಹೇಳುವ ಅಧಿಕಾರ ಹೆಣ್ಣಿಗಿದೆ. ವಚನಕಾರರ ಕಾಲಕ್ಕೆ ಅಂತಹ ಒಂದು ವೈಚಾರಿಕ ಸಂಪ್ರದಾಯ ನಿರ್ಮಾಣವಾಗಿತ್ತು. ಅಕ್ಕಮಹಾದೇವಿ, ಸಿದ್ಧಮಾದರಿಯ ಸಮಾಜ ರಚನೆಯನ್ನು ಪ್ರಶ್ನಿಸಿದ ಚಿಂತನೆಗಳು ಅವಳ ವಚನಗಳಲ್ಲಿವೆ.

> ಅತ್ತೆ ಮಾಯೆ ಮಾವ ಸಂಸಾರಿ
> ಮೂವರು ಮೈದುನರು ಹುಲಿಯಂಥಾ ಅವದಿರು
> ನಾಲುವರು ನಗೆವೆಣ್ಣು ಕೇಳು ಕೆಳದಿ !
> ಐವರು ಭಾವದಿರನೊಯ್ಯ ದೈವವಿಲ್ಲ!
> ಆರು ಪ್ರಜೆಯತ್ತಿಗೆಯರ ಮೀರಲಾರೆನು ತಾಯೆ!
> ಹೇಳುವೆಡೆ, ಏಳು ಪ್ರಜೆ ತೊತ್ತಿರ ಕಾವಲು!
> ಕರ್ಮವೆಂಬ ಗಂಡನ ಬಾಯಿ ಟೊಣೆದು
> ಹಾದರವನಾಡುವೆನು ಹರನ ಕೂಡೆ!
> ಮನವೆಂಬ ಸಖಿಯ ಪ್ರಸಾದದಿಂದ
> ಅನುಭವವ ಕಲಿತೆನು ಶಿವನೊಡನೆ
> ಕರಚೆಲುವ ಶ್ರೀಶೈಲ ಚೆನ್ನಮಲ್ಲಿಕಾರ್ಜುನನ
> ಸಜ್ಜನದ ಗಂಡನ ಮಾಡಿಕೊಂಬೆನು

ಸಾಂಪ್ರದಾಯಕ ಸಂಸಾರ ವ್ಯವಸ್ಥೆಯನ್ನು ಅಲ್ಲಿ ಬರುವ ಎಲ್ಲ ಕೌಟುಂಬಿಕ ಸಂಬಂಧಗಳನ್ನು ಅಕ್ಕ ಸಾರಾಸಗಟವಾಗಿ ತಿರಸ್ಕರಿಸಿದ್ದಾಳೆ. ತನ್ನೊಳಗಿನ ಒಳತೋಟಿಯ ಅನುಭವವನ್ನು ಸೊಗಸಾಗಿ ವಿವರಿಸಿದ್ದಾಳೆ. ಕರ್ಮಠ ವಾತಾವರಣದ ಸಂಸಾರವನ್ನು ಧಿಕ್ಕರಿಸಿ, ಬಿಡುಗಡೆ

ಹೊಂದಿ ಸ್ವಾತಂತ್ರ್ಯ ಬಯಸಿದ್ದಾಳೆ. ಸಾಮಾಜಿಕ ವ್ಯವಸ್ಥೆ ವಿಧಿಸಿದ ಎಲ್ಲ ನಿಯಮಗಳನ್ನು ಧಿಕ್ಕರಿಸಿ ತನ್ನಿಚ್ಛೆಯನ್ನು ಮೆರೆದ ವ್ಯಕ್ತಿ ಸ್ವಾತಂತ್ರ್ಯ ಅಕ್ಕನ ಬಾಳಿನ ವಿಶೇಷವಾಗಿದೆ. ಅಕ್ಕ ತನ್ನ ಹೆಣ್ತನವನ್ನೇ ಲಿಂಗಪತಿಗೆ ಒಡ್ಡಿದ ಭಾವ ಅವಳ ವಚನಗಳಲ್ಲಿ ಸೋಪಜ್ಞತೆಯಿಂದ ಮೂಡಿಬಂದಿದೆ. 'ಶರಣಸತಿ-ಲಿಂಗಪತಿ' ಈ ಭಾವ ಶರಣರ ವಚನಗಳ ಸ್ಥಾಯಿ ಭಾವವಾಗಿದೆ. ಈ ಕಾರಣಗಳಿಂದಾಗಿ ವಚನಗಳಿಗೆ ವಿಶಿಷ್ಟವಾದ ಭಾವತೀವ್ರತೆಯಿದೆ; ಒಂದು ವಿಶಿಷ್ಟವಾದ ಸ್ವಭಾವ ಲಯವಿದೆ. ವೈದಿಕ ಸಂಸ್ಕೃತಿಯು ಹೆಣ್ಣನ್ನು ಸೂತಕದ, ಹೊಲೆತನದ ರೂಪವಾಗಿ ಪರಿಭಾವಿಸಿತ್ತು. ವಚನ ಸಂಸ್ಕೃತಿಯು ಅದನ್ನು ತಿರಸ್ಕರಿಸಿತು. ಸೂತಕದಿಂದ ಬಿಡುಗಡೆ ಹೊಂದುವ ದಾರಿಯನ್ನು ವಚನಕಾರರು ಕಂಡುಕೊಂಡರು.

ಹೆಣ್ಣು ಹೆಣ್ಣಾದರೆ ಗಂಡಿನ ಸೂತಕ
ಗಂಡು ಗಂಡಾದೊಡೆ ಹೆಣ್ಣಿನ ಸೂತಕ
ಮನದ ಸೂತಕ ಹಿಂಗಿದೊಡೆ!
ತನುವಿನ ಸೂತಕ ತೆರೆಹುಂಟೇ ಅಯ್ಯಾ?
ಮೊದಲಿಲ್ಲದ ಸೂತಕಕ್ಕೆ ಮರುಳಾಯಿತ್ತು ಜಗವೆಲ್ಲ!
ಎನ್ನದೇವ ಚೆನ್ನಮಲ್ಲಿಕಾರ್ಜುನಯ್ಯನೆಂಬ
ಗುರುವಂಗೆ ಜಗವೆಲ್ಲಾ ಹೆಣ್ಣು ನೋಡಾ!

ಅಕ್ಕಮಹಾದೇವಿಯ ಈ ಆಲೋಚನೆ ಕ್ರಾಂತಿಕಾರಿಯಾಗಿದೆ. ಹೆಣ್ಣು ಸೂತಕವೆಂದು ಪರಿಗಣಿಸಿದರೆ ಈ ಜಗತ್ತು ಸೂತಕ! ಎಂದು ಹೇಳಿ ಅವಳನ್ನು ಸೂತಕದ ಪಾತಕದಿಂದ ಬಿಡುಗಡೆ ಮಾಡಿದಳು. ಹೆಣ್ಣನ್ನು ಮಾಯೆ ಮತ್ತು ಸೂತಕದ ಸಂಕೋಲೆಯಿಂದ ಬಿಡಿಸಿದ ಶರಣರು ಅವಳಲ್ಲಿ ದೇವತ್ವವನ್ನು ಕಂಡರು.

ಕನಿಷ್ಠದಲ್ಲಿ ಹುಟ್ಟಿದೆ, ಉತ್ತಮದಲ್ಲಿ ಬೆಳೆದೆ
ಸತ್ಯ ಶರಣರ ಪಾದವಿಡಿದೆ
ಆ ಶರಣರ ಪಾದ ವಿಡಿದು ಗುರುವಿನ ಕಂಡೆ, ಲಿಂಗವ ಕಂಡೆ,
ಜಂಗಮವ ಕಂಡೆ, ಪಾದೋದಕವ ಕಂಡೆ, ಪ್ರಸಾದವ ಕಂಡೆ
ಇಂತಿವರ ಕಂಡೆನ್ನ ಕಂಗಳ ಮುಂದಣ ಕತ್ತಲೆ ಹರಿಯಿತ್ತು
ಕಂಗಳ ಮುಂದಣ ಕತ್ತಲೆ ಹರಿಯಲೊಡನೆ
ಮಂಗಳದ ಮಹಾಬೆಳಗಿನೊಳಗೋಲಾಡಿ ಸುಖಿಯಾದೆನಯ್ಯಾ
ಅಪ್ಪಣ್ಣ ಪ್ರಿಯ ಚೆನ್ನಬಸವಣ್ಣಾ - ಹಡಪದ ಲಿಂಗಮ್ಮ

ನೀತಿಯ ನೆಲೆಗಟ್ಟಿನ ಮೇಲೆ 'ಸಮತಾವಾದ ಸಮಾಜ ರಚನೆ' ಶರಣರ ಗುರಿಯಾಗಿತ್ತು. ಹೆಣ್ಣನ್ನು ಕೇವಲ ಭೋಗದ ವಸ್ತು ಎಂದು ಭಾವಿಸಿದ್ದ ಪುರುಷ ಅವಳ ಮೇಲೆ ಕಾಕ ದೃಷ್ಟಿ ಬೀರಿದಾಗ ಅದನ್ನು ಶರಣರು ಖಂಡಿಸಿದರು. ಮೊದಲು ಅವರು ನಯವಾದ ಮಾತುಗಳಲ್ಲಿ ಎಚ್ಚರಿಸುತ್ತಾರೆ.

- ಛಲಬೇಕು ಶರಣಂಗೆ ಪರಸತಿಯನೊಲ್ಲೆಂಬ - ಬಸವಣ್ಣ
- ಪರಸ್ತ್ರೀಯರ ಕೂಡದಿಪ್ಪುದೇ ಶೀಲ - ಶಿವಲೆಂಕ ಮಂಚಣ್ಣ
- ಪರಧನ ಪರಸ್ತ್ರೀಯ ವಿಸರ್ಜಿಸಿ ಪೂಜಿಸು ಪರಶಿವನ - ಸಿದ್ಧರಾಮ

ಶರಣರು ನೆಮ್ಮದಿ ಜೀವನಕ್ಕೆ ಪ್ರಾಶಸ್ತ್ಯ ಕೊಟ್ಟರು. ಸತಿಪತಿಗಳ ಅಂತರಂಗ ಬಹಿರಂಗ ಏಕವಾಗಿ ಅವರ ಆಚಾರ-ವಿಚಾರಗಳಲ್ಲಿ ತಾದಾತ್ಮ್ಯ ತೋರಬೇಕೆಂದರು. ಜೇಡರದಾಸಿಮಯ್ಯ ಹೇಳುವಂತೆ "ಸತಿಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ" ದಂಪತಿಗಳ ಏಕಭಕ್ತಿಯ ಪರಿಣಾಮವನ್ನು ತಿಳಿಸುತ್ತದೆ. ಇದರಿಂದ ಹೆಣ್ಣು-ಗಂಡು, ಮೇಲು-ಕೀಳೆಂಬ ಭೇದ ಉಳಿಯು ವುದಿಲ್ಲ. ಆಚಾರ-ವಿಚಾರ ಸ್ವಾತಂತ್ರ್ಯದಿಂದ ಅವರು ಬದುಕು ಸಾಗಿಸುತ್ತಾರೆ. ವಚನಗಳಲ್ಲಿ ಸ್ತ್ರೀಸಂವೇದನೆ ಹೃದಯ ಸ್ಪರ್ಶಿಯಾಗಿ ಮೂಡಿಬಂದಿದೆ. ಇಂತಹ ಸಂದರ್ಭದಲ್ಲಿ ಭಾಷೆ ಒಂದು ಸಂಸ್ಕೃತಿಯ ಬದುಕಿನ ವಾಹಕವಾಗಿರುವಂತೆ ಆ ಬದುಕಿನ ಸಾತತ್ಯತೆಯನ್ನು ಉಳಿಸಿ ಕೊಂಡು ಬರುತ್ತದೆ.

## II

ದ್ರಾವಿಡ ಭಾಷೆಗಳಲ್ಲಿ ಲಿಂಗವಿವಕ್ಷೆಯು ಅರ್ಥವನ್ನು ಅವಲಂಬಿಸಿರುತ್ತದೆ. ಅಲ್ಲಿ ಬುದ್ಧಿಗೆ ಪ್ರಾಧಾನ್ಯವನ್ನೀಯಲಾಗಿದೆ. ಇದರಿಂದಾಗಿ ಬುದ್ಧಿಸಹಿತವಾದ ವಸ್ತುಗಳು ಮಹತ್ ಲಿಂಗವಾಗಿ, ಬುದ್ಧಿರಹಿತವಾದ ವಸ್ತುಗಳು ಅಮಹತ್ ಲಿಂಗವಾಗಿ ಪ್ರಯೋಗವಾಗುತ್ತವೆ. ಈ ಬಗೆಯ ಮಾನವೀಯ ಲಿಂಗಭೇದವನ್ನು ವಚನಕಾರರು ಬೌದ್ಧಿಕಕ್ಕಿಂತ ಮಿಗಿಲಾಗಿ ತಾತ್ವಿಕ ದೃಷ್ಟಿಯಿಂದ ಆಲೋಚಿಸಿದ್ದಾರೆ. ಗಂಡು-ಹೆಣ್ಣು ಎಂಬ ಭೇದಭಾವ ಮನುಷ್ಯ-ಮನುಷ್ಯ ರಲ್ಲಿನ ಶ್ರೇಷ್ಠ -ಕನಿಷ್ಠ ಎಂಬ ಬಗೆಯದಾಗದೆ ನೈಸರ್ಗಿಕ ನೆಲೆಯಿಂದ ಲಿಂಗಭೇದ ಸೂಚಿತವಾದರೆ ಪ್ರಶ್ನೆಯಿಲ್ಲ ಎಂಬ ಅಂಶವನ್ನು ಹೀಗೆ ಪ್ರಸ್ತಾಪಿಸಿದ್ದಾರೆ. ಇದನ್ನೇ ಜೇಡರ ದಾಸಿಮಯ್ಯ ಮೊಲೆ ಮುಡಿ ಬಂದರೆ ಹೆಣ್ಣೆಂಬರು, ಗಡ್ಡ ಮೀಸೆ ಬಂದರೆ ಗಂಡೆಂಬರು, ಒಳಗೆ ಸುಳಿವಾತ್ಮ ಹೆಣ್ಣು ಅಲ್ಲ-ಗಂಡು ಅಲ್ಲ ಎಂದು ವಿವರಿಸುತ್ತಾರೆ. ಅಕ್ಕಮಹಾದೇವಿ 'ಭಾವಿಸಲು ತಾನು ಗಂಡುರೂಪು' ಎಂದೂ ಇನ್ನೊಂದೆಡೆ 'ಹೆಣ್ಣ ಬಿಟ್ಟ ಬಳಿಕ ಆಕೆಯನಾರು ಕೂಡಿದರೇನು?' ಎಂದು ನುಡಿಯುತ್ತಾಳೆ. ಒಟ್ಟಿನಲ್ಲಿ ಸಾಮಾಜಿಕ ವ್ಯವಹಾರ ಪ್ರಣಾಲಿ ಮತ್ತು ಅಲ್ಲಿನ ವಾಸ್ತವಿಕತೆಗನುಸರಿಸಿ ಮತ್ತು ತಾತ್ವಿಕ ತಳಹದಿಯ ಮೇಲಿಂದ ವಚನಕಾರರ ಪ್ರಯೋಗಗಳಲ್ಲಿ ಲಿಂಗಭೇದವು ಭಾಷೆಯ ವ್ಯತ್ಯಾಸಕ್ಕೆ ಕಾರಣವಾಗಿರುವುದಕ್ಕೆ ಈ ಕೆಳಗಿನ ಭೇದಗಳಲ್ಲಿ ನಿದರ್ಶನಗಳನ್ನೀಯಲಾಗಿದೆ.

| | | |
|---|---|---|
| ಪುಲ್ಲಿಂಗ | - | ಕರಿಕ ಕೆಂಚನ ನೆನೆದಡೆ ಕೆಂಚನಾಗಬಲ್ಲನೆ? |
| | | ಕೆಂಚ ಕರಿಕನ ನೆನೆದಡೆ ಕರಿಕನಾಗಬಲ್ಲನೆ? |
| ಸ್ತ್ರೀಲಿಂಗ | - | ಗಂಗಾದೇವಿ ಮುಂಡೆಯಾದಳು, ಗೌರೀ ದೇವಿ ಒಲೆಯ ಕಳೆದಳು |
| ನಪುಂಸಕ | - | ಏತ ತಲೆವಾಗಿದರೇನು ಗುರುಭಕ್ತನಾಗಬಲ್ಲುದೆ? |
| | - | ಇಕ್ಕಳ ಕೈಮುಗಿದರೇನು ಭೃತ್ಯಾಚಾರಿಯಾಗಬಲ್ಲುದೆ? |

- ಹಬ್ಬಕ್ಕೆ ತಂದ ಹರಕೆಯ ಕುರಿ ತೋರಣಕ್ಕೆ ತಂದ ತಳಿರ ಮೇಯಿತ್ತು
- ಪಶುವೇನು ಬಲ್ಲುದು ಹಸುರೆಂದೆಳಸುವುದು

ಮಹತ್‌ಲಿಂಗ - ಬುದ್ಧಿ ಪ್ರಾಧಾನ್ಯ :

- ತಂದೆ ತಾಯಿಗಳಿಲ್ಲದ ಕಂದಾ ನಿನಗೆ ನೀನೆ ಹುಟ್ಟಿದೆಯಲ್ಲಾ!
- ನಿನ್ನ ಚಾರಿತ್ರ್ಯ ನಿನಗೆ ಸಹಜ ಗುಹೇಶ್ವರ
- ಸೂರ್ಯನುದಯ ತಾವರೆಗೆ ಜೀವಾಳ
- ಚಂದ್ರಮನುದಯ ನೈದಿಲೆಗೆ ಜೀವಾಳ
- ಹೆಣ್ಣು ಸಾಕ್ಷಾತ್ ಕಪಿಲ ಸಿದ್ಧಮಲ್ಲಿಕಾರ್ಜುನ

ಇಲ್ಲಿ 'ಕಂದ'ನ ಬಗೆಗಿನ ತಿಳಿವಳಿಕೆ, ಸೂರ್ಯ ಚಂದ್ರರ ಕ್ರಿಯಾಶೀಲತ್ವ, ಹೆಣ್ಣು ಮಾಯೆಯಾಗಿರದೆ ಅವಳು ಸಾಕ್ಷಾತ್ ದೇವತೆ ಎಂಬ ವೈಚಾರಿಕ ಒಪ್ಪಿಗೆಯಿಂದ ಇವೆಲ್ಲವೂ ಬೇರೆ ಬೇರೆ ಲಿಂಗಗಳಾಗಿದ್ದರೂ 'ಮಹತ್' ವರ್ಗದಲ್ಲಿ ಪ್ರಯೋಗಗೊಂಡಿವೆ.

ಅಮಹತ್‌ಲಿಂಗ - 'ಎಮ್ಮ ಕುನ್ನಿಗೆ ಕೂಸು ಕೊಡಬೇಡ' ಎಂಬಲ್ಲಿ ಕೂಸು-ಕುನ್ನಿ ಪದಗಳು ಅಮಹತ್‌ದ್ದಾಗಿ ತೋರಿವೆ. 'ಹೆಣ್ಣು ಮಾಯೆಯೆಂಬರು' ಎಂಬಲ್ಲಿ 'ಮಾಯೆ' ಯೆಂಬುದು ಅಮಹತ್ ಸೂಚಕವಾಗಿದೆ. 'ಮಾಯೆಯ ಕೈಯಲ್ಲಿ ಓಲೆ ಕಂಠವ ಕೊಟ್ಟರೆ ಲಗುಸ-ಪಿಗುಸವ ಬರೆಯಿತ್ತು' ಎಂಬ ಅಲ್ಲಮನ ಮಾತಿನಲ್ಲಿ ಮಾಯೆ ಬುದ್ಧಿಹೀನವಾಗಿ ತೋರುತ್ತದೆ. ಆದರೆ ಇದನ್ನೇ 'ಮಾಯೆಯೆಂಬ ರಕ್ಕಸಿ' ಎಂದು ಬಣ್ಣಿಸುವಲ್ಲಿ ಇದನ್ನು ಮಹತ್ ವರ್ಗಕ್ಕೆ ಸೇರಿಸಲಾಗಿದೆ. ಬಸವಣ್ಣನವರು ಅರಸಿ ಮತ್ತು ತೊತ್ತು ಪದಗಳನ್ನು ಮಹತ್‌ದಲ್ಲಿ ಪ್ರಯೋಗಿಸಿರುವಂತಿದೆ.

ಸಾಮಾನ್ಯವಾಗಿ ಪುರುಷರೇ ಅಧಿಕ ಸಂಖ್ಯೆಯಲ್ಲಿ ಬರೆದಿರುವ ಇಲ್ಲವೆ ಮಾತನಾಡಿರುವ ಸಾಧ್ಯತೆಗಳಿರುವ ಸಮಾಜದಲ್ಲಿ ಪುಲ್ಲಿಂಗವೇ ಭಾಷೆಯ ಅಭಿವ್ಯಕ್ತಿಯಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ಆದರೆ ಪುರುಷನಿಗಿಂತ ಭಿನ್ನವಾಗಿ ಸ್ತ್ರೀ ಸಹ ತನ್ನ ಸ್ತ್ರೀವಾದಿತ್ವನ್ನಾಗಲಿ ಇಲ್ಲವೆ ವೈಚಾರಿಕತೆಯನ್ನಾಗಲಿ ಪ್ರಕಟಪಡಿಸಲು ಆಕೆ ಸ್ತ್ರೀಲಿಂಗ ಭಾಷೆಯನ್ನು ಅಷ್ಟೇ ಕಾಳಜಿಯಿಂದ ಉಳಿಸಿಕೊಂಡಾಗ ಸ್ತ್ರೀಯ ಸ್ಥಾನ ಪುರುಷನಿಗಿರುವಷ್ಟೇ ಮಹತ್ವದ್ದಾಗಿ ತೋರುತ್ತದೆ. ಹನ್ನೆರಡನೆಯ ಶತಮಾನದ ವಚನಕಾರ್ತಿಯರಲ್ಲಿ ಮಹಾದೇವಿಯಕ್ಕ ಇದನ್ನು ಅತ್ಯಂತ ಸ್ಪಷ್ಟವಾಗಿ ಪ್ರಕಟಿಸಿದ್ದಾಳೆ. ಬಹುಶಃ ಉಳಿದ ಸ್ತ್ರೀ ವಚನಕಾರ್ತಿಯರು ತಮ್ಮ ತಮ್ಮ ಪತಿ ಅಧೀನದಲ್ಲಿ ಇಲ್ಲವೆ ಪುರುಷ ಪ್ರಧಾನ ಸಮಾಜದ ಪ್ರಭಾವಮುದ್ರೆಯಿಂದ ಹೊರಬರಲು ಅಷ್ಟಾಗಿ ಸಾಧ್ಯವಾಗಿಲ್ಲ. ಆದರೆ ಅಕ್ಕಮಹಾದೇವಿ ಸ್ವತಂತ್ರ, ಮುಕ್ತವಿಚಾರವುಳ್ಳ ಧೀರ ಹಾಗೂ ದಿಟ್ಟ ಸ್ತ್ರೀವಾದಿ ವಚನಕಾರ್ತಿಯಾಗಿ ನಮಗೆ ತೋರುತ್ತಾಳೆ. ಒಟ್ಟಿನಲ್ಲಿ ಸ್ತ್ರೀವಾದಿತ್ವವನ್ನು ಲಿಂಗವೈದೃಶ್ಯದ ಆಧಾರದ ಮೇಲಿಂದ ನಾವು ಕೆಳಗಿನ ಅಂಶಗಳಲ್ಲಿ ಗುರುತಿಸಲು ಶಕ್ಯವಾಗುತ್ತದೆ.

ಶಿವಶರಣೆಯರ ಅಂಕಿತನಾಮಗಳು : ಅಕ್ಕಮಹಾದೇವಿ, ಮಹಾದೇವಮ್ಮ ಲಿಂಗಮ್ಮ, ನೀಲಂಬಿಕೆ ಮುಂ.

| | | |
|---|---|---|
| ಸ್ತ್ರೀಲಿಂಗ ಸೂಚಕ/ಳ್/ಪ್ರತ್ಯಯ | : | 'ಕೂಡಲಸಂಗನ ಶರಣಳ'<br>'ಕೂಡಲ ಸಂಗನ ಶರಣನ ಸತಿಯಳು' |
| ಸ್ತ್ರೀವಾಚಕ ಸರ್ವನಾಮಗಳು | : | 'ಅವಳ ಕಂದ ಬಾಲಸಂಗ'<br>'ಕಂಗಳ ಮುತ್ತ ಪವಣಿಸುವಾಕೆ<br>ನೀನಾರು ಹೇಳಾ?' |
| ಸ್ತ್ರೀಸಂಬಂಧ ಕೃದ್ವಾಚಕಗಳು | : | 'ಚೆನ್ನಬಳಿಯವಳಾನು'<br>'ಚೆನ್ನಮಲ್ಲಿಕಾರ್ಜುನದೇವನ<br>ಒಳಗಾದವಳ', 'ಗಂಡನುಳ್ಳಮ್ಮನ<br>ಗೌರಿಯಂದು', 'ನಾನು ನಿಮ್ಮವಳಲ್ಲಯ್ಯ' |
| ಸ್ತ್ರೀ ಕೌಟುಂಬಿಕ ವಾಚಿಗಳು | : | 'ಮಾದರ ಚೆನ್ನಯ್ಯನ ಮೊಮ್ಮಗಳು' |
| ಸ್ತ್ರೀ ಸಂಬೋಧಕಗಳು | : | 'ಪುರಷನ ಒಲವಿಲ್ಲದ ಲಲನೆ<br>ಯಂತಾಗಿರ್ದೆನವ್ವ!'<br>'ಅಕ್ಕ ಕೇಳವ್ವ! ನಾನೊಂದು ಕನಸು ಕಂಡೆ'<br>'ತಾರೌ, ನೀಡೌ, ಉಣ್ಣೌ, ಎಂಬಲ್ಲಿನ<br>'ಔ' ಪ್ರತ್ಯಯ<br>'ಎಲೆ ಎಲೆಗೆ' ಪ್ರತ್ಯಯಗಳು |
| ಸ್ತ್ರೀ ಬೈಗುಳಗಳು | : | ಚಾಂಡಾಲಗಿತ್ತಿ, ಮುಂಡೆ, ಸೂಳೆ,<br>ಹಾದರಗಿತ್ತಿ ಮುಂ. |

'ಶರಣಸತಿ-ಲಿಂಗಪತಿ' ಎಂಬ ಭಾವವನ್ನು ಜೀವನದಲ್ಲಿ ಅನುಸಂಧಾನಕ್ಕೆ ತಂದುಕೊಂಡ ಅಕ್ಕಮಹಾದೇವಿ ಅದನ್ನು ಪುರುಷ ಶರಣರಿಗಿಂತ ಹೆಚ್ಚು ನಿಕಟವಾಗಿ, ಆತ್ಮೀಯವಾಗಿ ಪ್ರಕಟಿಸುತ್ತಾಳೆ. ಆಕೆಯ ನುಡಿಗಳಲ್ಲಿ ಆಧ್ಯಾತ್ಮಿಕ ವಿರಹ-ಶೃಂಗಾರಗಳ ಸುಮಧುರ ಸಮನ್ವಯವನ್ನು ಕಾಣುತ್ತೇವೆ. ಹೆಣ್ಣಿನ ಸಹಜ ಸಂವೇದನ ಶೀಲತೆ, ಭಾವೋತ್ಕರ್ಷಗಳು ಮಿಡಿಯುವಂತೆ ಭಾಷೆ ಅಭಿವ್ಯಕ್ತಗೊಳ್ಳುತ್ತದೆ. ಭಾಷೆಯ ಪರಿಕರಗಳಾದ ಧ್ವನಿ, ಆಕೃತಿಮಾ ಹಾಗೂ ವಾಕ್ಯಗಳಲ್ಲಿ ತನ್ನದೇ ಆದ ಲಯಗಾರಿಕೆಯನ್ನು ತರುವುದು ಹಾಗೂ ವರ್ಣಾತ್ಮಕ ಶೈಲಿ ಆಕೆಯ ವ್ಯಕ್ತಿ ಭಾಷೆಯ ವೈಲಕ್ಷಣ್ಯಗಳಾಗಿವೆ.

ಸಂವೇದನಾತ್ಮಕ ಗುಣ : - ಆವಿಗೆಯ ಕಿಚ್ಚಿನಂತೆ
ನೀವು ಕಾಣಿರೇ ನೀವು ಕಾಣಿರೇs
- ಕಂಡರೆ ನೀವು ಹೇಳಿರೇs
- ನೀವು ಹೇಳಿರೇs
- ಅಹುದಹುದು ಮತ್ತೇನು?
ಮರಹಿಂಗೆ ಹಿರಿದು ಕಿರಿದುಂಟಲ್ಲದೆ
ಅರಿವಿಂಗೆ ಹಿರಿದು ಕಿರಿದುಂಟೆ ಹೇಳಯ್ಯಾ?

- ಈಳೆ-ನಿಂಬೆ-ಮಾವು-ಮಾದಲಕ್ಕೆ
  ಹುಳಿನೀರನೆರದವರಾರಯ್ಯ? !
- ಎನ್ನ ಕಾಯ ಮಣ್ಣು, ಜೀವ ಬಯಲು!
  ಆವುದ ಹಿಡಿವೆನಯ್ಯ ದೇವ?

ಭಾವೋತ್ಕರ್ಷತೆ :

- ಅಯ್ಯಾ ನೀ ಕೇಳಿದಡೆ ಕೇಳು ಇಲ್ಲದಿರೆ ಮಾಣು
  ನಾ ಹಾಡಿದಲ್ಲದೆ ಸೈರಿಸೆನು ನೋಡಾ
- ವನವೆಲ್ಲ ನೀವೆ, ವನದೊಳಗಣ ದೇವ
  ತರುವೆಲ್ಲ ನೀವೆ
- ಸಾಯುವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು
- ಬೆಂದ ಸಂಸಾರ ಬೆಂಬಿಡದೆ ಕಾಡುತ್ತಿರುವುದಯ್ಯಾ!
  ಏವೆನಯ್ಯ ಏವೆನಯ್ಯ ?
- ಕಾಯಕಕೆ ನೆಳಲಾಗಿ ಕಾಡಿತ್ತು ಮಾಯೆ!
  ಪ್ರಾಣಕ್ಕೆ ಮನವಾಗಿ ಕಾಡಿತ್ತು ಮಾಯೆ!
  ಮನಕ್ಕೆ ನೆನಹವಾಗಿ ಕಾಡಿತ್ತು ಮಾಯೆ!
  ನೆನಹಿಂಗೆ ಅರಿವಾಗಿ ಕಾಡಿತ್ತು ಮಾಯೆ!
  ಜಗದ ಜಂಗುಳಿಗ ಬೆಂಗೋಲನೆತ್ತಿ ಕಾಡಿತ್ತು ಮಾಯೆ!
  ಚೆನ್ನಮಲ್ಲಿಕಾರ್ಜುನ, ನೀನೊಡ್ಡಿದ ಮಾಯೆಯ
  ನಾರೂ ಗೆಲಬಾರದು

ಆಧ್ಯಾತ್ಮಿಕ ಶೃಗಾರ-ವಿರಹ :-

- ಎನ್ನ ಮಾಯದ ಮದವ ಮುರಿಯಯ್ಯ!
  ಎನ್ನ ಕಾಯದ ಕಳವಳ ಕೆಡಿಸಯ್ಯ!
- ಶಿವನೇ, ಉಳಿವ ಕರೆವ ನೇಹವುಂಟೆ?
  ಸಂಸಾರಕ್ಕಂ ನಿಮ್ಮಲ್ಲಿಗೆಡೆಯಾಡುವ ಭಕ್ತಿಯುಂಟೇ?
  ಏನಯ್ಯ ಶಿವನೇ
  ಏಳೆಂದು ಪೇಳ್ವೆ ಲಜ್ಜೆಯ ಮಾತ ಚೆನ್ನಮಲ್ಲಿಕಾರ್ಜುನ
- ಕಿಚ್ಚಿಲ್ಲದ ಬೇಗೆಯಲ್ಲಿ ಬೆಂದೆನವ್ವ!
  ಏರಿಲ್ಲದ ಘಾಯದಲಿ ನೊಂದೆನವ್ವ!
- ಅರಸಿನವನೆಮಿಂದು ಹೊಂದೊಡಿಗೆಯನು ತೊಟ್ಟು
  ... ಪುರುಷ ಬಾರಾ, ಬಟ್ಟೆಗಳ ನೋಡಿ ಬಾಯಾರುತ್ತಿಹೆನು
- ಹರನೇ ನೀನೆನಗೆ ಗಂಡನಾಗಬೇಕೆಂದು ಅನಂತಕಾಲ
  ತಪಿಸಿರ್ದೆ ನೋಡಾ

ಧ್ವನಿಮಾಗಳಲ್ಲಿನ ಲಯಗಾರಿಕೆ/ಸ್ವರಾಘಾತ :
- ಎರೆಯಂತೆ ಕರಕರಗಿ ಮಳಲಂತೆ ಜರಿಜರಿದು
ಕನಸಿನಲಿ ಕಳವಳಿಸಿ ಆನುಬೆರಗಾದೆ
- ಕಾಯ ಕರ್ರನೆ ಕಂದಿದರೇನಯ್ಯ?
- ಮಾಯ ಮಿರ್ರನೆ ಮಿಂಚಿದರೇನಯ್ಯ?
- ಚಿಲಿ ಮಿಲಿ ಎಂದೋದುವ ಗಿಳಿಗಳಿರಾ
- ಶೀಲ! ಶೀಲ! ಎಂತೆಂಬಿರಯ್ಯ?
ಶೀಲದ ನೆಲೆಯ ಬಲ್ಲಡೆ ಹೇಳಿರೋ!

- ತುಂಬಿದುದು ತುಳುಕದು ನೋಡಾ
ನಂದಿದುದು ಸಂದೇಹಿಸದು ನೋಡಾ!

ವಾಕ್ಯಾತ್ಮಕ ಲಯ :
- ಸಜ್ಜನಳಾಗಿ ಮಜ್ಜನಕ್ಕೆರವೆ
- ಅಳಿಸಂಕುಳವೆ, ಮಾಮರವೆ! ಬೆಳುದಿಂಗಳೆ
ಕೋಗಿಲೆಯೆ......

- ಲಿಂಗವೆನ್ನ, ಲಿಂಗವೆನ್ನ ಸಂಗವೆನ್ನ ಸಮರಸವೆನ್ನ
- ಊರ ನಡುವೆ ಒಂದು ಬೇಟೆ ಬಿದ್ದಿತ್ತು!
ಆರು ಕಂಡವರು ಕೊಡಿರಯ್ಯ!

- ಕದಳಿಯೆಂಬುದು ತನು! ಕದಳಿಯೆಂಬುದು ಮನ!
ಕದಳಿಯೆಂಬುದು ವಿಷಯಂಗಳು
ಕದಳಿಯೆಂಬುದು ಭವಘೋರಾರಣ್ಯ!

ಅಕ್ಕ ಕೌಟುಂಬಿಕ ಪದಗಳನ್ನು ಬಳಸುವ ಹಾಗೂ ಅವನ್ನು ಸಂಬೋಧನೆಯಲ್ಲಿ ಜೋಡಿಸಿಕೊಳ್ಳುವ ಬಗೆ ಆಕೆಯ ವಾಕ್ಯಶೈಲಿಯನ್ನು ಪುರುಷ ಭಾಷೆಯಿಂದ ಪ್ರತ್ಯೇಕಿಸುವಂತಿರುತ್ತದೆ. 'ಅವ್ವ' ಪದಕ್ಕೆ ಹೆಚ್ಚಿನ ಪ್ರಾಶಸ್ತ್ಯವಿದೆ. ತದನಂತರ 'ಅಕ್ಕ', 'ಅಣ್ಣ'ಗಳು ಪ್ರಯೋಗಗೊಳ್ಳುತ್ತವೆ. 'ಗಂಡ' ಪದಕ್ಕೆ 'ಪುರುಷ' ಪದವೂ ಸಹ ಪರ್ಯಾಯವಾಗಿ ಬಳಕೆಗೊಳ್ಳುತ್ತದೆ. 'ಗಂಡ' ಪದ ಹತ್ತಾರು ರೂಪಗಳಲ್ಲಿ ವಿಶೇಷಣಯುಕ್ತವಾಗಿ ಇಲ್ಲವೆ ಅಲಂಕಾರಿಕವಾಗಿ ಪ್ರಯೋಗವಾಗುವುದು ಇನ್ನೊಂದು ವೈಶಿಷ್ಟ್ಯವಾಗಿದೆ. ಉದಾ. 'ಪರಗಂಡ', 'ಮಿಕ್ಕನಗಂಡ', 'ಲೋಕದ ಗಂಡ', 'ತಲೆಯಿಲ್ಲದ ಗಂಡ', 'ಎಲ್ಲರಗಂಡ' ಮುಂ. 'ವಿವಾಹ ಸಂಬಂಧಿ' ಶಬ್ದಗಳ ವಿಪುಲ ಬಳಕೆಯನ್ನು ಅಕ್ಕಮಹಾದೇವಿಯಲ್ಲಿ ಕಾಣುತ್ತೇವೆ. ಉದಾ. ತೆತ್ತಿಗ, ಮದವಳಿ, ಮದುವಳಿಗ, ಹಸ, ಬಾಸಿಗ, ಚಪ್ಪರ, ನಿಬ್ಬಣಿಗ, ಕಂಕಣ, ಕೈಧಾರೆ, ಸೇಸೆ, ಪ್ರಾಕೃತಿಕ ಆವರಣದಲ್ಲಿ ಹೆಚ್ಚಿನ ವಚನಗಳು ಹೊರಹೊಮ್ಮಿರುವುದರಿಂದ ಪ್ರಕೃತಿ ಶಬ್ದಗಳಾದ ವನ, ಗಿರಿ, ಬೆಟ್ಟ, ಮೊರಡಿ, ಸಮುದ್ರ, ಕೆರೆ, ತೊರೆ, ತರು, ಮರ, ಈಳೆ, ಲಿಂಬೆ, ಹಂಸೆ, ಗಿಳಿ, ಕೋಗಿಲೆ, ಮಾಮರ, ತಳಿರು ಮುಂ. ವಿಪುಲವಾಗಿ ದೊರೆಯುತ್ತವೆ. ನೋಡಿರೋ

ಕೇಳಿರೋ ಮುಂತಾದ ಪುರುಷ ಸಂಬೋಧನಪರ 'ಓ' ಪ್ರತ್ಯಯವನ್ನು 'ಏ' ಪ್ರತ್ಯಯಾಂತ್ಯ ವಲ್ಲಿ ಸೇರಿಸಿ ನೋಡಿರೇ ಕೇಳಿರೇ ಎಂದು ನುಡಿಯುವುದರಿಂದ ಆಕೆ ಸ್ತ್ರೀವಾದಿ ಭಾಷೆಯನ್ನು ಸಹಜವಾಗಿ ಉಪಯೋಗಿಸಿಕೊಳ್ಳುತ್ತಾಳೆ. ಅನೇಕ ಕಡೆಗಳಲ್ಲಿ ಅಕ್ಕಮಹಾದೇವಿ ಕೆಲವು ವಚನಗಳನ್ನು ಮೊದಲಿಗೆ ಹಾಡಾಗಿಸಿಕೊಂಡು ಅನಂತರ ಅವನ್ನು ವಚನ ರೂಪದಲ್ಲಿ ಪರಿವರ್ತಿಸಿರುವುದರಿಂದ ಅಕ್ಕನ ವಚನಭಾಷೆ ಗದ್ಯ ಪದ್ಯಗಳೆರಡರ ನಡುವಿನ ಬಂಧವಾಗಿ 'ಶಿಷ್ಟ' ಸ್ವರೂಪವನ್ನು ಪ್ರತಿನಿಧಿಸುತ್ತದೆ.

ಅಕ್ಕಮಹಾದೇವಿಯ ವಚನಗಳನ್ನು ಕುರಿತು ರಾಜೇಂದ್ರ ಚೆನ್ನಿ ಅವರು ಹೇಳುವಂತೆ 'ಕನ್ನಡ ಭಾಷೆಯ, ಮನಸ್ಸಿನ ಜಾಯಮಾನವೆನ್ನಬಹುದಾದ ಅಂಶಗಳು ಅಕ್ಕನ ಕಾವ್ಯಗಳಲ್ಲಿ ಸ್ಫುಟವಾಗಿಯೇ ಇವೆ. ಪದಜೋಡಣೆಯ ರಚನೆಯ ಸಾಂದ್ರತೆ, ಸಂಸ್ಕೃತ ಮತ್ತು ಕನ್ನಡದ ಹದವಾದ ಬೆರಸುವಿಕೆ, ಅನುಭವದ ಮಂಡನೆಯಲ್ಲಿ ವಿನಮ್ರತೆ, ಹಿಡಿತದ ಭಾವತೀವ್ರತೆ, ಸಂಕೀರ್ಣ ಅನುಭವದ ಹೊರೆಯನ್ನು ಸಹಜವಾಗಿ ಹೊರಬಲ್ಲ ಅಚ್ಚದೇಸೀಯ ಕ್ರಿಯಾ ಪದಗಳ ನಡೆ, ಭಾಷೆಯ ಸಹಜ ಗತಿ ಇವೆಲ್ಲವು ಅಕ್ಕನ ವಚನಗಳಲ್ಲಿವೆ*. ಅಕ್ಕನ ವಚನಗಳು ಸಮಾಜಮುಖಿ ಚಿಂತನೆಗಳಿಂದ ಕೂಡಿವೆ.

ಈ ಚರ್ಚೆಯ ಹಿನ್ನೆಲೆಯಲ್ಲಿ ನಮ್ಮ ಮನಸ್ಸಿನಲ್ಲಿ ಮೂಡುವ ಪ್ರಮುಖ ಪ್ರಶ್ನೆಯೆಂದರೆ ಮಹಿಳಾ ವಿಚಾರಗಳಿಗೆ ಸಂಬಂಧಿಸಿದ ಭಾಷೆ ಸಾಹಿತ್ಯದ ಸ್ವರೂಪ ಹೇಗಿರಬೇಕು ಎನ್ನುವುದು. ಈ ಪ್ರಶ್ನೆಗೆ ವಚನಕಾರರು ಉತ್ತರಿಸಿದ್ದಾರೆ. ವಾಸ್ತವ್ಯಗಳನ್ನು ವಿಶ್ಲೇಷಿಸುವುದು ಅವರ ಧೋರಣೆಯಾಗಿತ್ತು. ಭಾಷೆಯೆನ್ನುವುದು ಆಯಾ ಸಮಾಜದ ಒಟ್ಟು ಜನಜೀವನದ ಕ್ರಮವನ್ನೂ ಮೌಲ್ಯಗಳನ್ನೂ ಬಿಂಬಿಸುವಂತಹ ವಾಹಕ. ಅಲ್ಲಿ ನಿರಂತರತೆಯೂ ಇದೆ, ಚಲನಶೀಲತೆಯೂ ಇದೆ. ವಚನಕಾರರು ಭಾಷೆಯನ್ನು ಎರಡೂ ಆಯಾಮಗಳಲ್ಲಿಯೂ ಬಳಸಿದರು.

---

* ರಾಜೇಂದ್ರಚೆನ್ನಿ-ಮಹಾದೇವಿಯಕ್ಕ ಮತ್ತು ವಚನಸಂಪ್ರದಾಯ, 'ನಡುಹಗಲಿನಲ್ಲಿ ಕಂದೀಲುಗಳು' (೨೦೦೪), ಪು. ೧೫೮.

# ಮಹಿಳೆ ಮತ್ತು ಲೈಂಗಿಕ ಕಿರುಕುಳ

ಬಿ.ಕೆ. ಶಿವರಾಜ, ವಿಠೋಬಾ ಭೀಮಪ್ಪ

ಆದಿ ಕಾಲದಿಂದಲೂ ನಮ್ಮಲ್ಲಿ ಮಹಿಳೆಗೆ ಒಂದು ನೆಲೆಯಲ್ಲಿ ಗೌರವಯುತ ಸ್ಥಾನವಿದೆ. ಭಾರತೀಯ ನಾರಿಯರ ಸ್ಥಾನಮಾನಕ್ಕೂ ಜಗತ್ತಿನ ಇತರೆ ದೇಶಗಳ ನಾರಿಯರ ಸ್ಥಾನ ಮಾನಕ್ಕೂ ಇರುವ ವ್ಯತ್ಯಾಸ ಗಣನೀಯವಾಗಿದೆ. ಜಗತ್ತಿನಲ್ಲಿ ಸ್ತ್ರೀತ್ವವನ್ನು ದೈವತ್ವಕ್ಕೆ ಏರಿಸಿದ ಕೀರ್ತಿ ಮಾತ್ರ ನಮ್ಮ ಭಾರತ ದೇಶಕ್ಕೆ ಇದೆ. 'ಮಾತೃ ದೇವೋಭವ' ಎಂಬ ವಾಕ್ಯವೇ ಇದಕ್ಕೆ ಸಾಕ್ಷಿಯಾಗಿದೆ. ಹಿಂದಿನಿಂದಲೂ ಮಹಿಳೆ ತನ್ನ ಗೃಹಸ್ಥ ಜೀವನದ ಜೊತೆಗೆ ಉಳಿದ ಎಲ್ಲಾ ರಂಗಗಳಲ್ಲಿಯೂ ಅವಿರತವಾಗಿ ದುಡಿಯುತ್ತ ತನ್ನದೇ ಆದ ಸ್ಥಾನವನ್ನು ಉಳಿಸಿಕೊಂಡಿದ್ದಾಳೆ. ಇದು ರಾಜಕೀಯವಾಗಿ, ಶೈಕ್ಷಣಿಕವಾಗಿ, ಸಾಮಾಜಿಕವಾಗಿ, ಸಾಂಸಾರಿಕ ವಾಗಿ, ವೈಜ್ಞಾನಿಕವಾಗಿ, ಬೌದ್ಧಿಕವಾಗಿ ಮತ್ತು ನೈತಿಕವಾಗಿ ಯಾವುದರಲ್ಲಿ ತಾನು ಕಡಿಮೆ ಇಲ್ಲಾ, ತಾನು ಅಬಲೆಯಲ್ಲ ಸಬಲೆ ಅನ್ನುವುದನ್ನು ಜಗತ್ತಿಗೆ ತೋರಿಸಿಕೊಟ್ಟಿದ್ದಾಳೆ ಎಂಬುದು ಹುಬ್ಬೇರಿಸುವ ಸಂಗತಿಯಾದರೆ, ಪ್ರಸ್ತುತದ ದಿನಗಳಲ್ಲಿ ಮಹಿಳೆ ಎಲ್ಲಾ ಕಡೆಗಳಲ್ಲಿ ಲೈಂಗಿಕ ಕಿರುಕುಳ ಅನುಭವಿಸುತ್ತಿದ್ದಾಳೆ ಎಂದರೆ ತುಂಬಾ ವಿಷಾದನೀಯವಾಗಿದೆ.

ಬಡವರ ಮೇಲೆ ಬಲ್ಲಿದವರ, ಇಲ್ಲದವರ ಮೇಲೆ ಉಳ್ಳವರ, ದುರ್ಬಲರ ಮೇಲೆ ಸಬಲರ ದೌರ್ಜನ್ಯ ದಬ್ಬಾಳಿಕೆಗಳು ನಿರಂತರವಾಗಿ ನಡೆದುಕೊಂಡು ಬರುತ್ತಿವೆ. ಇತ್ತೀಚಿನ ದಿನಗಳಲ್ಲಿ ಇಂಥ ಸಂಗತಿಗಳು ಲೆಕ್ಕವಿಲ್ಲದಷ್ಟು ಇವೆ. ವರ್ಣಭೇದ ನೀತಿಯಾಗಲಿ, ಲಿಂಗಭೇದ ನೀತಿಯಾಗಲಿ, ಅಸಹಾಯಕರನ್ನು ಮತ್ತು ಅಮಾಯಕರನ್ನು ಶೋಷಿಸಿತೇ ಹೊರತು ಚರಿತ್ರೆಯಲ್ಲಿ ಸಹನೀಯ ಭಾಗವಾಗಲಿಲ್ಲ. ವಿಷಾದದ ಸಂಗತಿಯೆಂದರೆ ಅದು ಮುಗಿದುಹೋದ ಅಧ್ಯಾಯವಾಗದೆ, ಇವತ್ತಿಗೂ ಮರುಕಳಿಸುತ್ತಿರುವುದು ಚರಿತ್ರೆ ಮತ್ತು ವರ್ತಮಾನದ ಪುಟಗಳಿಂದ ಇಂಥಹ ಕೆಲವು ಕಹಿ ಸಂಗತಿಗಳು ಉಳಿಯುವಂತಾಗಿವೆ.

### ಲೈಂಗಿಕ ಕಿರುಕುಳದ ಪರಿಕಲ್ಪನೆ

ಲೈಂಗಿಕ ಕಿರುಕುಳ ಎಂಬುದು ೨೧ನೇ ಶತಮಾನದ ಹೊಸ ಶಬ್ದವಾಗಿದೆ. ಇದಕ್ಕೆ ಇಂಗ್ಲಿಷಿನಲ್ಲಿ 'ಸೆಕ್ಸುವಲ್ ಹೆರಾಸಮೆಂಟ್' ಎನ್ನುತ್ತಾರೆ. ನೌಕರಿ, ಉದ್ಯಮ, ಕೃಷಿ ಹಾಗೂ ಇತರೆಡೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸ್ತ್ರೀಯರ ಮೇಲೆ ದೈಹಿಕ ಅಥವಾ ಮಾನಸಿಕವಾಗಿ ತೊಂದರೆ ಕೊಡುವುದು ಲೈಂಗಿಕ ಕಿರುಕುಳವಾಗಿದೆ.

ಆರೋಗ್ಯ ಕೇಂದ್ರಗಳಲ್ಲಿ ವೈದ್ಯಾಧಿಕಾರಿಗಳಿಂದ ನರ್ಸಗಳ ಅಥವಾ ಮಹಿಳಾ ವೈದ್ಯಾಧಿಕಾರಿಗಳ ಮೇಲೆ, ಕೈಗಾರಿಕೆಗಳಲ್ಲಿ ಮೇಲಾಧಿಕಾರಿಗಳಿಂದ ಮಹಿಳಾ ಕ್ಲರ್ಕ್, ಟೈಪಿಸ್ಟ ಮತ್ತು ಕೆಲಸದಾಳುಗಳ ಮೇಲೆ, ಕಾಲೇಜ್ ಮತ್ತು ಪ್ರೌಢ ಶಾಲೆಗಳಲ್ಲಿ ಲೆಕ್ಚರರ್ಸ್ ಮತ್ತು ಮುಖ್ಯೋಪಾಧ್ಯಾಯರಿಂದ ಟೀಚರ್ಸ್ ಮತ್ತು ವಿದ್ಯಾರ್ಥಿನಿಯರ ಮೇಲೆ, ಕೃಷಿ ಕ್ಷೇತ್ರಗಳಲ್ಲಿ ಭೂಮಾಲಿಕರಿಂದ ಮಹಿಳಾ ಕೂಲಿಯಾಳುಗಳ ಮೇಲೆ ಮತ್ತು ಮಾರುಕಟ್ಟೆ, ಬಸ್‌ನಿಲ್ದಾಣ, ರೈಲುನಿಲ್ದಾಣ, ಪೋಲಿಸ ಠಾಣೆ ಇತ್ಯಾದಿ ಕಡೆಗಳಲ್ಲಿ ಮಹಿಳೆಯರ ಮೇಲೆ ಲೈಂಗಿಕ ಕಿರುಕುಳಗಳು ನಿರಂತರವಾಗಿ ನಡೆಯುತ್ತಲೇ ಇವೆ. ರಕ್ಷಣೆ ನೀಡುವವರಿಂದಲೇ ಲೈಂಗಿಕ ಕಿರುಕುಳ ನಡೆಯುತ್ತಿರುವಾಗ ಸಾಮಾನ್ಯರ ಪಾಡೇನು ಎಂದು ವಿಚಾರ ಮಾಡುತ್ತಲೇ ಕಾಲ ಕಳೆಯುವಂತಾಗಿದೆ.

## ಭಾರತದಲ್ಲಿ ಲೈಂಗಿಕ ಕಿರುಕುಳಗಳು

ಭಾರತವು ಪ್ರಪಂಚದಲ್ಲಿಯೇ ಅತಿ ಹೆಚ್ಚು ಜನಸಂಖ್ಯೆಯನ್ನು ಹೊಂದಿದ ಎರಡನೆಯ ರಾಷ್ಟ್ರವಾಗಿದೆ. ೧೦೨ ಕೋಟಿ ಜನಸಂಖ್ಯೆಯಲ್ಲಿ ಸುಮಾರು ೪೯ ಕೋಟಿಗಿಂತ ಹೆಚ್ಚು ಮಹಿಳೆಯರಿದ್ದಾರೆ ಎಂಬುದು ಆಶ್ಚರ್ಯಕರ ಸಂಗತಿಯಾಗಿದೆ. ಮಹಿಳೆಯರ ಮೇಲೆ ನಡೆಯುವ ಕಿರುಕುಳಗಳಲ್ಲಿ ಯುರೋಪ ರಾಷ್ಟ್ರಗಳನ್ನು ಬಿಟ್ಟರೇ ಭಾರತವೆ ಮುಂಚೂಣಿಯಲ್ಲಿರುವುದು ತಿಳಿದು ಬಂದಿದೆ. ಭಾರತದಲ್ಲಿ ಲೈಂಗಿಕ ಕಿರುಕುಳದ ಪ್ರಥಮ ಪ್ರಕರಣ ಬಹುರಾಷ್ಟ್ರೀಯ 'ಟೀನ್' ಕಂಪನಿಯಲ್ಲಿ ಕಂಡುಕೊಂಡಿತು. ಕಂಪನಿಯ ಮ್ಯಾನೇಜರ್‌ನು ಸೆಕ್ರೆಟೆರಿಯತ್ತ ಕೆಟ್ಟದೃಷ್ಟಿಯಿಂದ ನೋಡುತ್ತಿದ್ದ. ಆಕೆಗೆ, ನಿನಗೆ ಹೆಚ್ಚು ಸಂಬಳ ಹಾಗೂ ಬಡ್ತಿ ಸಹ ಕೊಡುತ್ತೇನೆ, ಆದರೆ ನಾನು ಹೇಳಿದಂತೆ ಮಾಡಬೇಕು ಎಂದು ಒತ್ತಡ ತರುತ್ತಿದ್ದ. ಆ ಯುವತಿ ಸ್ಪಷ್ಟವಾಗಿ ಅದಕ್ಕೆ ನಿರಾಕರಿಸಿದ್ದರ ಪರಿಣಾಮವಾಗಿ ಆಕೆ ಕೆಲಸ ಕಳೆದುಕೊಳ್ಳಬೇಕಾಯಿತು. ಇಂತಹ ಉದಾಹರಣೆಗಳು ನಮ್ಮಲ್ಲಿ ಸಾಕಷ್ಟು ಸಿಗುತ್ತವೆ. ನಮ್ಮ ದೇಶದಲ್ಲಿ ಅತ್ಯಾಚಾರ, ಅಪಹರಣ, ವರದಕ್ಷಿಣೆ ಸಾವು, ಹಿಂಸೆ, ಲೈಂಗಿಕ ಕಿರುಕುಳಗಳಂತಹ ಮುಂತಾದ ಅಪರಾಧಗಳನ್ನು ಈ ಕೆಳಗಿನ ಕೋಷ್ಟಕದ ಸಹಾಯದಿಂದ ತಿಳಿದುಕೊಳ್ಳಬಹುದಾಗಿದೆ.

**ಕೋಷ್ಟಕ ೧**

**ಭಾರತದಲ್ಲಿ ನಡೆದ ಅಪರಾಧಗಳು**

| ಕ್ರ.ಸಂ. | ಅಪರಾಧ ಪ್ರಕರಣಗಳು | ಪ್ರಕರಣಗಳ ಸಂಖ್ಯೆ | | |
|---|---|---|---|---|
| | | ೧೯೯೮ | ೧೯೯೯ | ೨೦೦೦ |
| ೧. | ಅತ್ಯಾಚಾರಗಳು | ೧೫೧೫೧<br>(೧೨.೭೪) | ೧೫೪೬೮<br>(೧೨.೫೬) | ೧೬೪೯೬<br>(೧೨.೮೬) |

| | | | | |
|---|---|---|---|---|
| ೨. | ಅಪಹರಣಗಳು | ೧೬೩೫೧ (೧೩.೭೫) | ೧೫೯೬೨ (೧೨.೯೬) | ೧೫೦೨೩ (೧೧.೭೧) |
| ೩. | ವರದಕ್ಷಿಣೆ ಸಾವುಗಳು | ೬೯೭೫ (೫.೮೭) | ೬೬೯೯ (೫.೪೪) | ೬೯೯೫ (೫.೪೫) |
| ೪. | ಚಿತ್ರ ಹಿಂಸೆಗಳು | ೪೧೩೭೬ (೩೪.೮೧) | ೪೩೮೨೩ (೩೫.೬೦) | ೪೫೭೭೮ (೩೫.೭೦) |
| ೫. | ಕಾಡಿಸುವುದು ಪೀಡಿಸುವುದು | ೩೦೯೫೯ (೨೬.೦೪) | ೩೨೩೧೧ (೨೬.೨೪) | ೩೨೯೪೦ (೨೫.೬೮) |
| ೬. | ಲೈಂಗಿಕ ಕಿರುಕುಳಗಳು | ೮೦೫೪ (೬.೭೯) | ೮೮೫೮ (೭.೨೦) | ೧೧೦೨೪ (೮.೬೦) |
| | ಒಟ್ಟು | ೧೧೮೮೬೬ | ೧೨೩೧೨೧ | ೧೨೮೨೫೬ |

**Note :** Figure in brackets are shows the percentage of respective heads in that years.

**Source :** Crime in India, 2002. National Crime records Bureau, Ministry of Home Affair.

ಈ ಮೇಲಿನ ಕೋಷ್ಟಕದಲ್ಲಿರುವ ಅಂಕಿ ಅಂಶಗಳನ್ನು ನೋಡಿದಾಗ ಯಾವುದೇ ನಾಗರಿಕ ಸಮಾಜ ತಲೆ ತಗ್ಗಿಸದೆ ಇರುವುದಿಲ್ಲ. ವರದಕ್ಷಿಣೆ ಪೀಡೆ, ಲೈಂಗಿಕ ಕಿರುಕುಳ, ಬಾಲ್ಯ ವಿವಾಹ ಮುಂತಾದ ಪ್ರಕರಣಗಳು ಪತಿ, ತಂದೆ - ತಾಯಿ ಕುಟುಂಬದ ಇತರ ಸದಸ್ಯರಿಂದಲೇ ನಡೆಯುವುದರಿಂದ ಕೆಲವೆಡೆ 'ಮನೆ' ಎಂಬ ಸ್ಥಳ ಮಹಿಳೆಯರಿಗೆ ಸುರಕ್ಷಿತ ಸ್ಥಳ ಆಗದೇ ಮಸಣವಾಗಿದೆ.

ಭಾರತದಲ್ಲಿ ಬಾಲ್ಯ ವಿವಾಹ, ವರದಕ್ಷಿಣೆ ಪೀಡೆ, ಅತ್ಯಾಚಾರ, ಅಪಹರಣಗಳಂಥ ಪ್ರಕ್ರಿಯೆಗಳು ಮಹಿಳೆಯರು, ಕೆಲಸ ಮಾಡುವ ಕಡೆಗಳಲ್ಲಿ ಲೈಂಗಿಕ ಕಿರುಕುಳ, ಗಂಡಂದಿರ ರಿಂದ ದೈಹಿಕ ಮತ್ತು ಮಾನಸಿಕ ಹಿಂಸಾಚಾರ, ಆರೋಗ್ಯದ ದೃಷ್ಟಿಯಿಂದ ನಡೆಸಲಾಗುವ ಹಿಂಸಾಚಾರಗಳು, 'ಗಂಡು ಮಗು'ವಿಗೆ ಜನ್ಮ ಕೊಟ್ಟಿಲ್ಲ ಎಂಬ ಕಾರಣಕ್ಕೆ ಅತ್ತೆ, ಮಾವ, ಗಂಡ, ಮೈದುನರಿಂದ ನಡೆಸಲಾಗುವ ಹಿಂಸಾಕೃತ್ಯಗಳು ಭಾರತದ ಸ್ತ್ರೀಯನ್ನು ಕುಗ್ಗಿಸಿವೆ. ಜಾತಿ ಆಧಾರಿತ ಹಿಂಸೆ, ಗರ್ಭದಲ್ಲಿ ಹೆಣ್ಣು ಶಿಶು ಇದೆ ಎಂದು ತಿಳಿದು, ಪ್ರೀತಿಯಿಂದಲೇ 'ಭ್ರೂಣ ಹತ್ಯೆ ಮಾಡಿಸುತ್ತಿರುವುದು ಇತ್ಯಾದಿಗಳನ್ನು ನೋಡಿದರೆ ಹೆಣ್ಣು ಈ ಆಧುನಿಕ ಯುಗದಲ್ಲೂ ಕೂಡ ಹೆಚ್ಚಿನ ಹಿಂಸೆಗೆ ಗುರಿಯಾಗಿರುವುದು ನಾಗರಿಕ ಜಗತ್ತಿನ ಕರಾಳ ಮುಖವಾಗಿದೆ (ರವೀಂದ್ರ ಭಟ್ಟ್ ಐನಕೈ - ೨೦೦೪).

## ಭಾರತದಲ್ಲಿ ರಾಜ್ಯವಾರು ಲೈಂಗಿಕ ಕಿರುಕುಳ ಪ್ರಕರಣಗಳು

ಕೆಲವೊಂದು ಅಂಕಿ-ಅಂಶಗಳನ್ನು ಅವಲೋಕಿಸಿದಾಗ ಭಾರತದ ಮಹಾನಗರಗಳಲ್ಲಿಯೇ ಹೆಚ್ಚು ಲೈಂಗಿಕ ಕಿರುಕುಳದ ಪ್ರಕರಣಗಳು ಬೆಳಕಿಗೆ ಬಂದಿರುವುದು ಕಂಡು ಬರುತ್ತದೆ. ೨೦೦೦ರಲ್ಲಿ ದೆಹಲಿಯಂತ ಮಹಾನಗರ ಒಂದರಲ್ಲಿಯೇ ೪೭೩ ಅತ್ಯಾಚಾರ ಪ್ರಕರಣಗಳು ನಡೆದಿವೆ ಎಂದಾದರೆ, ದೂರು ನೀಡದೆ ಮರ್ಯಾದೆಗೆ ಅಂಜಿ ಕುಳಿತವರ ಸಂಖ್ಯೆಯನ್ನು ನೀವೇ ಊಹಿಸಬಹುದು. ಇದರಲ್ಲಿ ಶೇ. ೩೫ರಷ್ಟು ಜನ ೧೧ ರಿಂದ ೧೫ ವಯಸ್ಸಿನ ಒಳಗಿರುವ ಬಾಲೆಯರೆಂದರೆ ಆಶ್ಚರ್ಯಕರ ಸಂಗತಿಯಾಗಬಹುದು! ಸೆಪ್ಟೆಂಬರ್ ೨೦೦೨ರಲ್ಲಿ ದೆಹಲಿಯ 'ಸಂಗಮ್ ವಿಹಾರ್' ಪ್ರದೇಶದಲ್ಲಿ ೬೦ರ ವೃದ್ಧೆಯೊಬ್ಬಳ ಮೇಲೆ ಅತ್ಯಾಚಾರ ವಾಗಿದೆ ಎಂದರೆ ನೀವು ನಂಬುತ್ತೀರಾ? ನಂಬಲೇಬೇಕಾದುದು ಅತ್ಯಾಚಾರ ಮಾಡಿದವನು ಬೇರೆ ಯಾರೂ ಅಲ್ಲ, ಅವಳ ೧೯ರ ಹರೆಯದ ಮೊಮ್ಮಗನ ಸ್ನೇಹಿತ! ವಿಚಿತ್ರವೆಂದರೆ 'ಅಪರಾಧಿ'ಗೆ ಆಕೆ ಅಪರಿಚಿತೆಯಾಗಿರಲಿಲ್ಲಾ. ಜೊತೆಗೆ ಆಕೆ ಎಂದೂ ತರುಣಿಯರಂತೆ ಇರಲೇ ಇಲ್ಲಾ (ದಿಕ್ರೂಸಿ ಅಕ್ಟೋಬರ್ ೨೦೦೨).

ಭಾರತದ ಪ್ರತಿಯೊಂದು ರಾಜ್ಯಗಳಲ್ಲಿ ಲೈಂಗಿಕ ಕಿರುಕುಳದಿಂದ, ಮಾನ - ಮರ್ಯಾದೆಗೆ ಅಂಜಿ ಆತ್ಮಹತ್ಯೆಗೆ ಶರಣು ಹೋದ ಮಹಿಳೆಯರ ಸಂಖ್ಯೆ ದಿನೇ ದಿನೇ ಹೆಚ್ಚುತ್ತಿರುವುದು, ಪುರುಷ ಪ್ರಧಾನ ಸಮಾಜಕ್ಕೆ ನಾಚಿಕೆಗೇಡು ಸಂಗತಿಯಾಗಿದೆ. ಈ ಕೆಳಗಿನ ಕೋಷ್ಟಕವನ್ನು ಗಮನಿಸಿದಾಗ ಭಾರತದ ಪ್ರತಿಯೊಂದು ರಾಜ್ಯಗಳು ಲೈಂಗಿಕ ಕಿರುಕುಳದ ಪ್ರಕರಣಗಳನ್ನು ತೋರಿಸುವಲ್ಲಿ ನಾ - ಮುಂದು, ತಾ - ಮುಂದು ಎಂದು ದಾಪುಗಾಲು ಇಡುತ್ತಿವೆ.

## ಕೋಷ್ಟಕ -೨

### ೨೦೦೦ರಲ್ಲಿ ವಿವಿಧ ರಾಜ್ಯಗಳಲ್ಲಿ ಮಹಿಳೆಯರ ವಿರುದ್ಧದ ಅಪರಾಧ ಪ್ರಕರಣಗಳು

| ರಾಜ್ಯಗಳು | ಅತ್ಯಾಚಾರಗಳು | | | ಅಪಹರಣಗಳು | | | ವರದಕ್ಷಿಣೆ ಸಾವುಗಳು | | | ಪೀಡಿಸುವುದು | | | ಲೈಂಗಿಕ ಕಿರುಕುಳಗಳು | | |
|---|---|---|---|---|---|---|---|---|---|---|---|---|---|---|---|
| | I | R | P | I | R | P | I | R | P | I | R | P | I | R | P |
| ಆಂಧ್ರಪ್ರದೇಶ | ೯೪೪ | ೧.೨ | ೫.೭ | ೭೧೬ | ೦.೯ | ೪.೮ | ೪೪೨ | ೦.೬ | ೬.೩ | ೩೨೩೧ | ೪.೩ | ೯.೮ | ೨೨೮೦ | ೩.೦ | ೨೦.೭ |
| ಅಸ್ಸಾಂ | ೭೬೨ | ೨.೯ | ೪.೬ | ೧೧೦೧ | ೪.೨ | ೭.೩ | ೫೦ | ೦.೨ | ೦.೭ | ೭೭೩ | ೩.೦ | ೨.೪ | ೧೮ | ೦.೧ | ೦.೨ |
| ಬಿಹಾರ | ೧೫೭೦ | ೧.೬ | ೯.೫ | ೭೦೦ | ೦.೭ | ೪.೭ | ೧೦೮೫ | ೧.೧ | ೧೫.೫ | ೪೫೬ | ೦.೫ | ೧.೪ | ೧೨೨ | ೦.೧ | ೧.೧ |
| ಗುಜರಾತ | ೩೩೦ | ೦.೭ | ೨.೦ | ೮೬೮ | ೧.೮ | ೫.೮ | ೯೩ | ೦.೨ | ೧.೩ | ೯೪೪ | ೧.೯ | ೨.೯ | ೧೧೯ | ೦.೨ | ೧.೧ |
| ಹರಿಯಾಣ | ೪೨೧ | ೨.೧ | ೨.೬ | ೨೯೯ | ೧.೫ | ೨.೦ | ೨೬೩ | ೧.೩ | ೩.೮ | ೬೦೫ | ೩.೦ | ೧.೮ | ೪೨೩ | ೨.೧ | ೩.೮ |
| ಕರ್ನಾಟಕ | ೨೮೧ | ೦.೫ | ೧.೭ | ೩೨೩ | ೦.೬ | ೨.೨ | ೨೧೭ | ೦.೪ | ೩.೧ | ೧೫೬೮ | ೩.೦ | ೪.೮ | ೭೫ | ೦.೧ | ೦.೭ |
| ಕೇರಳ | ೫೫೨ | ೧.೭ | ೩.೩ | ೮೯ | ೦.೩ | ೦.೬ | ೨೫ | ೦.೧ | ೦.೪ | ೧೬೯೫ | ೫.೨ | ೫.೧ | ೬೯ | ೦.೨ | ೦.೬ |
| ಮಧ್ಯಪ್ರದೇಶ | ೩೭೩೭ | ೪.೭ | ೨೨.೭ | ೮೬೯ | ೧.೧ | ೫.೮ | ೬೮೫ | ೦.೯ | ೯.೮ | ೮೫೭೬ | ೧.೬ | ೨೫.೯ | ೮೪೦ | ೧.೦ | ೭.೬ |

| | | | | | | | | | | | | | | |
|---|---|---|---|---|---|---|---|---|---|---|---|---|---|---|
| ಮಹಾರಾಷ್ಟ್ರ | ೧೩೧೦ | ೧.೪ | ೭.೯ | ೬೬೨ | ೦.೭ | ೪.೪ | ೩೭೧ | ೦.೪ | ೫.೩ | ೨೮೦೫ | ೩.೧ | ೮.೫ | ೯೩೦ | ೧.೦ | ೮.೪ |
| ಓರಿಸ್ಸಾ | ೭೪೭ | ೨.೧ | ೪.೫ | ೩೫೯ | ೧.೦ | ೨.೪ | ೨೭೬ | ೦.೮ | ೩.೯ | ೧೬೮೫ | ೪.೬ | ೫.೦ | ೧೩೫ | ೦.೪ | ೧.೨ |
| ರಾಜಸ್ಥಾನ | ೧೨೪೨ | ೨.೩ | ೭.೫ | ೨೫೫೦ | ೪.೭ | ೧೭.೦ | ೪೨೯ | ೦.೮ | ೬.೧ | ೩೦೯೨ | ೫.೭ | ೯.೪ | ೫೦ | ೦.೧ | ೦.೫ |
| ತಮಿಳುನಾಡು | ೫೩೮ | ೦.೯ | ೩.೩ | ೮೦೫ | ೧.೩ | ೫.೪ | ೧೯೧ | ೦.೩ | ೨.೭ | ೧೯೪೮ | ೩.೧ | ೫.೯ | ೨೧೬೭ | ೩.೫ | ೧೯.೭ |
| ಉತ್ತರ ಪ್ರದೇಶ | ೧೮೬೫ | ೧.೧ | ೧೧.೩ | ೨೭೫೫ | ೧.೬ | ೧೮.೩ | ೨೨೨೨ | ೧.೩ | ೩೧.೮ | ೨೬೦೭ | ೧.೫ | ೭.೯ | ೩೧೬೯ | ೧.೮ | ೨೮.೭ |

**Source :** Crime in India, 2000. National Crime records Bureau, Ministry of Home Affair.

(I = Incidence, R = Rate, P= Proportion)

## ಲೈಂಗಿಕ ಕಿರುಕುಳದ ಕೆಲವು ಸತ್ಯ ನಿದರ್ಶನಗಳು

ಮಥುರಾ, ಮಾಯಾ ತ್ಯಾಗಿ, ರಮೀಜಾ ಮತ್ತು ಅನುಸೂಯಮ್ಮ ಸಂಥವರ ಹೆಸರುಗಳು ನೆನಪಾದೊಡನೆ, ಮಹಿಳೆಯರ ಮೇಲಿನ ಲೈಂಗಿಕ ಕಿರುಕುಳಗಳು ಭಾರತದಲ್ಲಿ ಎಷ್ಟರಮಟ್ಟಿಗೆ ನಡೆದಿವೆ ಎಂಬುದು ತಿಳಿಯುತ್ತದೆ. ಕಳೆದೆರಡು ದಶಕಗಳಲ್ಲಿ ಮಹಿಳೆಯರ ಮೇಲೆ ನಡೆದಿರುವ ಲೈಂಗಿಕ ಕಿರುಕುಳದ ವಿರುದ್ಧ ನಡೆದ ತೀವ್ರ ಹೋರಾಟದ ಸಂಕೇತಗಳು ಹಾಗೂ ಹೆಣ್ಣಾಗಿ ಹುಟ್ಟಿದುದಕ್ಕೆ ಹಲ್ಲೆಗೊಳಗಾದ ಹೆಣ್ಣಿನ ಪ್ರತಿನಿಧಿಗಳು ಇವರಾಗಿದ್ದಾರೆ.

೧೯೭೦ರಲ್ಲಿ ೧೬ರ ಹರೆಯದ ಮಥುರಾ ಪೋಲಿಸ್ ಅತ್ಯಾಚಾರಕ್ಕೆ ತುತ್ತಾದಳು. ಆರೋಪಿಗಳಿಗೆ ಸೆಷನ್ಸ್ ನ್ಯಾಯಾಲಯದಲ್ಲಿ ಬಿಡುಗಡೆಯಾದರೆ, ಹೈಕೋರ್ಟಿನಲ್ಲಿ ಶಿಕ್ಷೆಯಾಯಿತು. ಆದರೆ ಸುಪ್ರಿಂಕೋರ್ಟ್ ಆರೋಪಿಗಳನ್ನು ಆರೋಪದಿಂದ ಮುಕ್ತಗೊಳಿಸಿತು. ಅತ್ಯಾಚಾರ ಅಪರಾಧ ಸಾಬೀತುಪಡಿಸುವಲ್ಲಿನ ವೈಫಲ್ಯವೇ ಈ ಬಿಡುಗಡೆಗೆ ಕಾರಣವಾಯಿತು. ಮಹಿಳಾ ಹೋರಾಟದಿಂದಾಗಿ ಲೈಂಗಿಕ ಕಿರುಕುಳಗಳಿಗೆ ಒಳಗಾದ ವ್ಯಕ್ತಿಯು ತಾನು ಅಪರಾಧಿಯಲ್ಲ ಎಂಬುದನ್ನು ನ್ಯಾಯಾಲಯದಲ್ಲಿ ಸಾಬೀತುಪಡಿಸಬೇಕಾದ ಕಾನೂನಿನ ತಿದ್ದುಪಡಿಯನ್ನು ತರಬೇಕಾಗಿ ಬಂದಿದ್ದು ಈಗ ಇತಿಹಾಸವಾಗಿದೆ (ಎನ್. ಗಾಯತ್ರಿ-೧೯೯೬).

೧೯೮೦ರ ಜೂನ್ ತಿಂಗಳಲ್ಲಿ ೨೦ ವರ್ಷದ ಮಾಯಾತ್ಯಾಗಿ ಎಂಬ ಹರೆಯದ ವಿವಾಹಿತ ಮಹಿಳೆ ಪತಿಯೊಂದಿಗೆ ಸಂಬಂಧಿಕರ ಮದುವೆಗೆಂದು ಹೊರಟಿದ್ದಳು. ಅವರ ದುರಾದೃಷ್ಟಕ್ಕೆ ಕಾರು ನಡು ದಾರಿಯಲ್ಲಿ ಕೆಟ್ಟು ಹೋಯಿತು. ಆಗ ಸಮಯ ಮಧ್ಯಾಹ್ನ ೧೨.೩೫ ಆಗಿತ್ತು. ಚಾಲಕ ದುರಸ್ತಿಗಾಗಿ ಮೆಕ್ಯಾನಿಕನನ್ನು ಕರೆದುಕೊಂಡು ಬರಲು ಹೋಗಿದ್ದನು. ಆಗ ಕಾರಿನಲ್ಲಿದ್ದ ಪತಿ ಬಹಿರ್ದೆಸೆಗೆಂದು ಕೆಳಗಿಳಿದು ಹೋಗಿದ್ದರು. ಆಗ ಅಲ್ಲಿಗೆ ಸಬ್‌ಇನ್‌ಸ್ಪೆಕ್ಟರ್ ನರೇಂದ್ರಕುಮಾರ ಸಿಂಗ್ ಮತ್ತು ಮುಖ್ಯ ಪೇದೆಯೊಬ್ಬರು ಬಂದರು. ಕಾರಿನಲ್ಲಿ ತ್ಯಾಗಿ ಒಬ್ಬರೇ ಇರುವುದು ಕಂಡು ಅವಳ ಜೊತೆಗೆ ಅಶ್ಲೀಲವಾಗಿ ನಡೆದುಕೊಂಡರು, ಸಹಾಯಕ್ಕಾಗಿ ಬಂದ ಪತಿಯ ಮೇಲೆ ಗುಂಡು ಹಾರಿಸಿ ಸಾಯಿಸಿದರು. ನಂತರ ತ್ಯಾಗಿಯ ಮೇಲೆ ಅತ್ಯಾಚಾರಗೈದು ಪರಾರಿಯಾದರು. ತ್ಯಾಗಿ ಪೋಲಿಸ್ ಕಟ್ಟೆ ಏರಿದಾಗ, ತ್ಯಾಗಿಯವರದು ಡಕಾಯಿತ ಗುಂಪೆಂದು ಸಾರಲಾಯಿತು. ಎಷ್ಟೇ ಕಷ್ಟಪಟ್ಟರು ತ್ಯಾಗಿಗೆ ನ್ಯಾಯ ಸಿಗದೇ ಸುಪ್ರಿಂಕೋರ್ಟಿನಲ್ಲಿ ಈ ಪ್ರಕರಣ ಇನ್ನೂ ಕೊಳೆಯುತ್ತಿದೆ.

ಒಮ್ಮೆ ಆಂಧ್ರದ ಕರ್ನೂಲ ಜಿಲ್ಲೆಯ ನಂದಿಕೊಟ್ಕೂರ್ ಹಳ್ಳಿಯ ರಮೀಜಾ ಬೀ ಎಂಬ ಹರೆಯದ ಬಡ ಹುಡುಗಿ ಪತಿಯ ಜೊತೆಯಲ್ಲಿ ಸಿನಿಮಾ ನೋಡಲು ಪಕ್ಕದ ಶಹರಕ್ಕೆ ಹೋಗಿದ್ದಳು. ಎರಡನೆಯ ಆಟ ಮುಗಿಸಿಕೊಂಡು ಆಟೋದಲ್ಲಿ ಹಳ್ಳಿಗೆ ಬರುವಾಗ, ಪತಿ ಮೂತ್ರ ವಿಸರ್ಜನೆ ಮಾಡಲು ಆಟೋದಿಂದ ಕೆಳಗಿಳಿದಿದ್ದನು. ಆಗ ಬೇಟೆಗೆಂದು ಬಂದ ನಾಲ್ವರು ಪೋಲಿಸರು ವಿಚಾರಣೆಗಾಗಿ ರಮೀಜಾಬೀಯನ್ನು ಸ್ಟೇಷನ್ನಿಗೆ ಕರೆದೊಯ್ದು, ರಾತ್ರಿಯಲ್ಲಾ ಒಂದು ಕೋಣೆಯಲ್ಲಿ ಕೂಡಿ ಹಾಕಿ, ಸರದಿಯಂತೆ ರಮೀಜಾಬೀ ಮೇಲೆ ಅತ್ಯಾಚಾರ

ಮಾಡಿದರು. ಸಹಾಯಕ್ಕಾಗಿ ಬಂದ ಪತಿಯನ್ನು ಬಡಿದು ಸಾಯಿಸಿದರು. ವಿಷಯ ತಿಳಿದ ಜನರೆಲ್ಲರೂ ಪ್ರತಿಭಟನೆಗೆ ಇಳಿದರು. ಈ ಸಮಯದಲ್ಲಿ ೧೮ ಪೋಲಿಸ ಸ್ಟೇಷನ್‌ಗಳನ್ನು ಸುಡಲಾಯಿತು. ಏನು ಪ್ರಯೋಜನವಾಗದೆ ಕೊನೆಗೆ ನ್ಯಾಯಾಲಯದಿಂದ ರಮೀಜಾಬೀಗೆ ವೇಶ್ಯಾ ಪಟ್ಟ ದೊರೆಯಿತು! ಇಂತಹ ಲೈಂಗಿಕ ಕಿರುಕುಳಗಳಿಗೆ ಇಂದಿನ ನಮ್ಮ ಭಾರತ ದೇಶದಲ್ಲಿ ಲೆಕ್ಕವೇ ಇಲ್ಲ. ಸುಸಂಸ್ಕೃತ ಮಹಿಳೆಯರು ಮರ್ಯಾದೆಗೆ ಅಂಜಿ ತೆರೆಯ ಮರೆಯಲ್ಲಿ ಕೈಕಟ್ಟಿ ಕುಳಿತುಕೊಂಡಿದ್ದಾರೆ. ನಾಗಲ್ಯಾಂಡ್, ಮೀಜೋರಾಂ ಮತ್ತು ಅಸ್ಸಾಂ ನಂತಹ ಗಡಿ ಪ್ರದೇಶಗಳಲ್ಲಿ ಸೇನಾದಳದವರು ನಡೆಸುವ ಲೈಂಗಿಕ ಕಿರುಕುಳಕ್ಕೆ ಲೆಕ್ಕವೇ ಇಲ್ಲದಂತಾಗಿದೆ.

**ಕ್ಷೇತ್ರವಾರು ನಡೆಯುವ ಲೈಂಗಿಕ ಕಿರುಕುಳಗಳು**

ನಮ್ಮ ದೇಶದಲ್ಲಿ ಜನಸಂಖ್ಯೆ ಹೆಚ್ಚಾದಂತೆಲ್ಲಾ ಅನ್ಯಾಯ, ಅತ್ಯಾಚಾರ, ಅಪಹರಣ, ಹಿಂಸೆ, ವರದಕ್ಷಿಣೆ, ಸಾವು ಇನ್ನಿತರ ಲೈಂಗಿಕ ಕಿರುಕುಳಗಳು ಹೆಚ್ಚಾಗುತ್ತಿವೆ. ಇವುಗಳಿಗೆ ಸ್ಪಷ್ಟವಾದ ಕ್ಷೇತ್ರವಿಲ್ಲ. ಅಡುಗೆ ಮನೆಯಿಂದ ಹಿಡಿದು ಅಧಿಕಾರ ವರ್ಗದ ಎಲ್ಲಾ ಕ್ಷೇತ್ರಗಳ ವರೆಗೆ ಲೈಂಗಿಕ ಕಿರುಕುಳ ಎಂಬ ಘೋರ ಕೃತ್ಯ ಆವರಿಸಿಕೊಂಡಿದೆ.

**ಕೃಷಿಕ್ಷೇತ್ರದಲ್ಲಿ**

ಇದು ಹಳ್ಳಿಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಬಡ ಸುಂದರ ಮಹಿಳೆಯರ ಮೇಲೆ ಭೂ-ಮಾಲೀಕರ ಅತ್ಯಾಚಾರಗಳು ಸಾಕಷ್ಟಿವೆ. ನಾಳೆ ಇಷ್ಟು ಜನರಿಗೆ ತೋಟದಲ್ಲಿ ಕೆಲಸವಿಲ್ಲ, ಕಾರಣ ನೀನೊಬ್ಬಳೆ ಕೆಲಸಕ್ಕೆ ಬರಬೇಕು ಎಂದು ಹೇಳಿ, ಅಂಥವರ ಮೇಲೆ ಅತ್ಯಾಚಾರ ಮಾಡುವ ಯೋಜನೆ ರೂಪಿಸುವುದು ಹಳ್ಳಿಗಳಲ್ಲಿ ಸರ್ವೇಸಾಮಾನ್ಯವಾಗಿದೆ. ಬೋಧಗಯಾದ ಮಹಾಂತನಂತೂ ತಾನೂ ವಾಸಿಸುವ ಪ್ರದೇಶದಲ್ಲಿ ಒಂದು ಅಲಿಖಿತ ಕಾನೂನೇ ಮಾಡಿ ಕೊಂಡಿದ್ದಾನಂತೆ. ರಾತ್ರಿ ವೇಳೆ ಅವನ ಜೀತದಾಳುಗಳ ಹೆಂಡತಿಯರು ಅವನ ಮಂಚ ಏರಲೇಬೇಕು. ಗುಡಿಸಿಲಿನ ಹೊರಗೆ ಅವನು ಬಿಡುವ ಚಪ್ಪಲಿಗಳು ಹೊರಗಿನಿಂದ ಬರುವ ಗಂಡನಾದವನಿಗೆ ಎಚ್ಚರಿಕೆಯ ಸಂಕೇತ. ಆ ವೇಳೆಯಲ್ಲಿ ಗಂಡ ಗುಡಿಸಲ ಒಳಗೆ ಪ್ರವೇಶಿಸ ಬಾರದು. ಅಲ್ಲಿನ ಎಲ್ಲ ಅಧಿಕಾರಿಗಳಿಗೆ ಈ ವಿಷಯ ಗೊತ್ತು, ಆದರೆ ಅವನ ಮೇಲೆ ಯಾವುದೇ ಕ್ರಮ ತೆಗೆದುಕೊಳ್ಳುವ ಶಕ್ತಿ ಅವರಲ್ಲಿ ಇಲ್ಲ. ಏಕೆಂದರೆ ಚುನಾವಣೆ ಸಮಯದಲ್ಲಿ ಎಲ್ಲ ಪಕ್ಷದವರಿಗೆ ಇವನಿಂದಲೇ, ಹಣಕಾಸಿನ ಸರಬರಾಜಾಗುತ್ತಿದೆಯಂತೆ, ಆದ್ದರಿಂದ ಇವನ ವಿರುದ್ಧ ಧನಿಯೆತ್ತುವ ಧೈರ್ಯ ಯಾರಿಗಿದೆ? ಇಂತಹವರ ದೌರ್ಜನ್ಯಕ್ಕೆ ಬಲಿಯಾದ ಎಷ್ಟು ಹೆಣ್ಣು ಮಕ್ಕಳು ನಮ್ಮಲ್ಲಿಲ್ಲ?!

**ಕೈಗಾರಿಕಾ ಕ್ಷೇತ್ರದಲ್ಲಿ**

ಹಲವಾರು ಕೈಗಾರಿಕಾ ಕೇಂದ್ರಗಳಲ್ಲಿ ವ್ಯವಸ್ಥಾಪಕರಿಂದ ಹಿಡಿದು ಮಾಲಿಕರವರೆಗಿರುವ ಅಧಿಕಾರಿ ವರ್ಗ ಮಹಿಳೆಯರ ಮೇಲೆ ಅತ್ಯಾಚಾರ ಎಸಗುತ್ತಲೇ ಬಂದಿದೆ. ಈ ಕಿರುಕುಳ

ತಾಳಲಾರದೆ, ನೂರಾರು ಜನ ಮಹಿಳೆಯರು ತಮ್ಮ ಹುದ್ದೆಯನ್ನು ಸಹ ಕಳೆದುಕೊಂಡ ವರಿದ್ದಾರೆ. ಜೈಲವಿಲ್ಲಾದ ಕಬ್ಬಿಣದ ಅದುರಿನ ಗಣಿಗಳ ಕಾರ್ಮಿಕ ಹೋರಾಟದಲ್ಲಿ ಹೋರಾಟವನ್ನು ಅಡಗಿಸಲೆಂದು ಅನೇಕ ಮಹಿಳೆಯರ ಮೇಲೆ ಅತ್ಯಾಚಾರವೆಸಗಲಾಯಿತು. ವೇತನದಲ್ಲಿ ಹೆಚ್ಚಳ, ಬಡ್ತಿ, ಮತ್ತು ವಿಶೇಷ ಸ್ಥಾನಮಾನಗಳ ಆಸೆ-ಆಮಿಸೆಗಳಿಗೊಳಗಾದ ಇಂಥಹ ಹಲವು ಮಹಿಳೆಯರು ವಿವಿಧ ರೀತಿಯ ಕಿರುಕುಳಗಳಿಗೆ ಬಲಿಯಾಗಿದ್ದಾರೆ.

**ಆರೋಗ್ಯ ಕ್ಷೇತ್ರದಲ್ಲಿ**

ಅಂಕಿಅಂಶಗಳ ಪ್ರಕಾರ ಆರೋಗ್ಯ ಕ್ಷೇತ್ರಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಲೈಂಗಿಕ ಕಿರುಕುಳಗಳು ನಡೆಯುತ್ತಿರುವುದು ಕಂಡುಬಂದಿದೆ. ವೈಧ್ಯಾಧಿಕಾರಿಗಳಿಂದ ಹಿಡಿದು ಕಾಂಪೌಂಡಗಳವರೆಗಿನ ಮಹಿಳೆಯರು ಒಂದಿಲ್ಲೊಂದು ಲೈಂಗಿಕ ಕಿರುಕುಳಗಳಿಗೆ ಒಳ ಗಾಗಿದ್ದಾರೆ. ಎಷ್ಟೋ ಅತ್ಯಾಚಾರಗಳು ವೈಧ್ಯಾಧಿಕಾರಿಗಳಿಂದ ನಡೆದ ಘಟನೆಗಳಾದರೆ, ರೋಗಿಗಳ ಮೇಲೆ ಅತ್ಯಾಚಾರವೆಸಗುವುದು ಇನ್ನೊಂದು ಘಟನೆಗಳಾಗಿವೆ. ೨೦೦೦ರಲ್ಲಿ ಕರ್ನಾಟಕದ ಗುಲಬರ್ಗಾ ಜಿಲ್ಲೆಯ ಸುರಪೂರ ತಾಲೂಕಿನ ಹಳ್ಳಿಯೊಂದರಲ್ಲಿ ೧೬ರ ಹರೆಯದ ಸುಜಾತ ಎಂಬ ದಲಿತ ಬಡ ವಿದ್ಯಾರ್ಥಿನಿ ಅನಾರೋಗ್ಯದಿಂದ ಇದ್ದಾಗ, ರಕ್ತ ಪರೀಕ್ಷೆ ಮಾಡಿಸಿಕೊಳ್ಳಲು ರಕ್ತ ಪರೀಕ್ಷಾಲಯಕ್ಕೆ ಹೋದಾಗ, ರಕ್ತ ಪರೀಕ್ಷೆ ಮಾಡುವಾತನಿಂದ ಅತ್ಯಾಚಾರಕ್ಕೊಳಗಾದಳು. ವಿಷಯ ಬಹಿರಂಗಗೊಂಡಾಗ ಆತ ಪರಾರಿಯಾದ, ನೊಂದ ಸುಜಾತ ನ್ಯಾಯಾಲಯದ ಕಟ್ಟೆ ಏರಿದಳು. ಜಿಲ್ಲೆಯಾದ್ಯಂತ ಹಲವಾರು ದಲಿತ ಸಂಘಟನೆ ಗಳಿಂದ, ಮಹಿಳಾ ಸಂಘಟನೆಗಳಿಂದ ಪ್ರತಿಭಟನೆಗಳು ನಡೆದವು. ಏನು ಪ್ರಯೋಜನವಾಗದೆ, ನ್ಯಾಯಾಲಯದಲ್ಲಿ ಪ್ರಕರಣದ ಫೈಲುಗಳು ಧೂಳು ಹಿಡಿದವು. ನ್ಯಾಯ ಸಿಕ್ಕದಾದ ಸುಜಾತ ಆತ್ಮಹತ್ಯೆಗೆ ಪ್ರಯತ್ನಿಸಿ ವಿಫಲವಾದಳು. ಇದೊಂದೇ ಕಾರಣದಿಂದ ಅವಳು ಇನ್ನುವರೆಗೂ ಅವಿವಾಹಿತಳಾಗಿ ಶಪಿಸುತ್ತಾ ಕತ್ತಲೆ ಕೋಣೆಯೊಳಗೆ ಕೊಳೆಯುತ್ತಿದ್ದಾಳೆ. ಇಂಥಹ ಪ್ರಕರಣಗಳಿಗೆ ನಮ್ಮ ಭಾರತದಲ್ಲಿ ಕೊರತೆಯೆಂಬುದೇ ಇಲ್ಲ.

**ಧಾರ್ಮಿಕ ಕ್ಷೇತ್ರದಲ್ಲಿ**

ಕಾಪಾಡುವ ದೇವರೇ ಕೆಟ್ಟದ್ದು ಮಾಡುತ್ತಾನೆಂದರೆ ನೀವು ನಂಬುತ್ತಿರಾ? ಹೌದು ನಂಬಲೇಬೇಕಾದಂತದ್ದು, ಇದು ಕಲಿಯುಗ, ಕಲಿಯುಗದಲ್ಲಿ ಏನೆಲ್ಲಾ ನಡೆಯಬಾರದ್ದು ನಡೆಯುತ್ತವೆ ಎಂಬುದು ಹಿರಿಯರ ವಾಣಿಯಾಗಿದೆ. ತಂದೆಯಿಂದ ಮಗಳ ಮೇಲೆ ಅತ್ಯಾಚಾರ, ಸಹೋದರರಿಂದ ಸಹೋದರಿಯರ ಮೇಲೆ ನಡೆದ ಎಷ್ಟೋ ಅತ್ಯಾಚಾರಗಳು ತೆರೆಯ ಮರೆಯಲ್ಲಿ ನಡೆಯುತ್ತವೆ. ಧರ್ಮದ ಹೆಸರಿನಲ್ಲಿ ನಡೆಯುವ ಅತ್ಯಾಚಾರಗಳಿಗೇನು ನಮ್ಮ ಭಾರತದಲ್ಲಿ ಕೊರತೆಯಿಲ್ಲ. ದೈವವನ್ನೇ ನಂಬಿ ಬಂದ ಮುಗ್ಧ ಮಹಿಳೆಯರಿಗೆ ತಮ್ಮ ಕಾಲಿನ ಹೆಬ್ಬೆರಳಿನಿಂದ ಹಣೆಗೆ ಮುತ್ತಿಡುವ ಹಲವಾರು ಮಠಾಧೀಶರಿದ್ದಾರೆ. ರಾಯಚೂರ ಜಿಲ್ಲೆಯ ಕೊಪ್ಪಳ ತಾಲೂಕಿನ ಕುದುರೆ ಮೋತಿ ಗ್ರಾಮದ ಮಹಾಂತಸ್ವಾಮಿಯ

ಅಪರಾವತಾರ ಯಾರಿಗೆ ನೆನಪಿಲ್ಲ? ಮಠಕ್ಕೆ ಹೋಗಿ ಬರುವ ಹೆಣ್ಣು ಮಕ್ಕಳನ್ನು ಕಾಮಕೇಳಿಗೆ ಒತ್ತಾಯಿಸಿ, ಅದಕ್ಕೆ ಮಣಿಯದವರ ಮೇಲೆ ಗೂಂಡಾ ಶಿಷ್ಯರಿಂದ ಹಿಂಸೆ, ಅತ್ಯಾಚಾರ ಮಾಡಿಸುವ ಸ್ವಾಮಿ ಆ ಗ್ರಾಮದ ಶಾಲಾ ಶಿಕ್ಷಕರ ಪತ್ನಿ ಪಾರ್ವತಮ್ಮನು ಅವನಿಗೆ ಒಲಿಯದಿದ್ದಕ್ಕಾಗಿ ಆಕೆಯನ್ನು ನಗ್ನಳನ್ನಾಗಿ ಮೆರವಣಿಗೆ ನಡೆಸಿದನು. ಆಕೆಯ ನೆರವಿಗೆ ಬಂದ ಮಹಿಳೆಯರ ಮೇಲೂ ಹಲ್ಲೆ ನಡೆಸಲು ಯೋಜಿಸಿದ. ಸ್ಥಳೀಯ ರಾಜಕೀಯ ಅಭಯ ಹಸ್ತದಿಂದಾಗಿ ಸುರಕ್ಷಿತವಾಗಿ ಶಿಕ್ಷೆಯಿಲ್ಲದೆ ಮೆರೆದ. ಕಾವಿಯ ಮುಸುಕಿನಲ್ಲಿ ನಡೆದ ಈ ಲೈಂಗಿಕ ಕಿರುಕಳ ಒಂದಾದರೆ, ತಿರುವನಂತಪುರದ ಭೀಮಪಲ್ಲಿಯಲ್ಲಿ ನಡೆದ ಸುಲೋಶಿ ಬೀವಿಯ ಪ್ರಕರಣ ಧರ್ಮದ ಮತ್ತೊಂದು ಮುಖವನ್ನು ತೋರಿಸುತ್ತದೆ. ಹೀಗೆ ಬಹಿರಂಗ ಗೊಂಡ ಪ್ರಕರಣಗಳ ಸಂಖ್ಯೆ ಕಡಿಮೆಯಾದರೂ, ತೆರೆಯ ಮರೆಯಲ್ಲಿ ಧರ್ಮದ ಹೆಸರಿನಲ್ಲಿ ನಡೆಯುವ ಅತ್ಯಾಚಾರ, ಹಿಂಸೆಗಳಿಗೆ ಲೆಕ್ಕವೇ ಇಲ್ಲದಂತಾಗಿದೆ.

### ಶೈಕ್ಷಣಿಕ ಕ್ಷೇತ್ರದಲ್ಲಿ

ಕೈ ಮುಗಿದು ಒಳಗೆ ಬಾ ಬಾಲಕನೆ ಇದು ವಿದ್ಯಾಮಂದಿರ ಎಂಬ ಬರಹದ ಒಳಗಡೆಯೇ ಮಹಿಳೆಯರ ಮೇಲೆ ಹಲವಾರು ಲೈಂಗಿಕ ಕಿರುಕುಳಗಳು ನಡೆಯುತ್ತವೆ. ಮುಖ್ಯೋ ಪಾಧ್ಯಾಯಿನಿಯಿಂದ ಹಿಡಿದು ವಿದ್ಯಾರ್ಥಿನಿಯರುಗಳ ಮೇಲೆ ಹಲವಾರು ಅತ್ಯಾಚಾರ, ಅಪಹರಣ, ಹಿಂಸೆ ಇತರ ಲೈಂಗಿಕ ಕಿರುಕುಳಗಳು ನಡೆದ ಉದಾಹರಣೆಗಳು ಸಾಕಷ್ಟಿವೆ. ದೆಹಲಿಯಲ್ಲಿ ಪ್ರೌಢ ಶಾಲೆಯಲ್ಲಿನ ಒಬ್ಬ ಶಿಕ್ಷಕಿ ತನ್ನ ಜೊತೆಗೆ ಸಹಕರಿಸಲಿಲ್ಲ ಎಂಬ ಕಾರಣಕ್ಕಾಗಿ ಶಾಲೆಯ ಮುಖ್ಯೋಪಾಧ್ಯಾಯ ಆ ಶಿಕ್ಷಕಿಗೆ ದಿನಾಲು ಹಿಂಸೆ ಕೊಡುತ್ತಿದ್ದನು. ತಾಳಿಕೊಳ್ಳಲಾದರೆ ಆ ಶಿಕ್ಷಕಿ ಪೋಲಿಸ ಸ್ಟೇಷನ್‌ನಲ್ಲಿ ಮುಖ್ಯೋಪಾಧ್ಯಾಯರ ಮೇಲೆ ದಾವೆ ಹೂಡಿದಳು. ಆಗ ಮುಖ್ಯೋಪಾಧ್ಯಾಯ ಗುಂಡಾಗಳಿಗೆ ಹಣ ಕೊಟ್ಟು ಆ ಮಹಿಳೆ ಯನ್ನು ಅಪಹರಿಸಿ ಅವಳನ್ನು ಲೈಂಗಿಕವಾಗಿ ಹಿಂಸಿಸಿ ಸಾಯಿಸಿದನು. ಹಣದ ಬಲ ಮತ್ತು ರಾಜಕೀಯ ಬಲದಿಂದಾಗಿ ಮುಖ್ಯೋಪಾಧ್ಯಾಯ ಸುರಕ್ಷಿತವಾಗಿ ಉಳಿದನು.

ಕರ್ನಾಟಕದ ಸುರಪೂರ ತಾಲೂಕಿನ ತಾಂಡವೊಂದರಲ್ಲಿ ೧೩ ವರ್ಷದ ೭ನೇ ತರಗತಿ ಯಲ್ಲಿ ಓದುತ್ತಿದ್ದ ಬಾಲಕಿಯು, ಅದೇ ತಾಂಡಾದಲ್ಲಿದ್ದ ೨೯ರ ಹರೆಯದ ಪ್ರಾಥಮಿಕ ಶಾಲೆಯ ಶಿಕ್ಷಕನ ಹತ್ತಿರ ಮನೆ ಪಾಠ ಹೇಳಿಸಿಕೊಳ್ಳಲು ದಿನಾಲು ಬರುತ್ತಿದ್ದಳು. ಬಾಲಕಿಯ ಸೌಂದರ್ಯಕ್ಕೆ ತಲೆಕೆಡಿಸಿಕೊಂಡು ಸಮಯಕ್ಕಾಗಿ ಕಾಯುತ್ತಿದ್ದ. ಅಂತಹ ಸಮಯ ಒಂದು ದಿನ ಬಂದೇ ಬಿಟ್ಟಿತು. ಅವನ ಹೆಂಡತಿ ಹೆರಿಗೆಗೆಂದು ತವರು ಮನೆಗೆ ಹೋಗಿ ಬರುವುದಾಗಿ ಹೇಳಿ ಆ ಬಾಲಕಿಯರ ತಂದೆ-ತಾಯಿಯರ ಪರವಾನಗಿಯನ್ನು ಪಡೆದುಕೊಂಡು ಆ ಬಾಲಕಿಯನ್ನು ಕರೆದುಕೊಂಡು, ಹೆಂಡತಿಯ ಊರಿಗೆ ಹೋಗದೆ, ಮೈಸೂರು - ಊಟಿ ಇನ್ನಿತರ ಕಡೆಗಳಲ್ಲೆಲ್ಲಾ ಬಾಲಕಿಯನ್ನು ಕರೆದುಕೊಂಡು ಹೋದನು, ಆ ಬಾಲಕಿಗೆ ಮದುವೆ ಯಾಗುವುದಾಗಿ ನಂಬಿಸಿ ಲೈಂಗಿಕ ತೃಷೆ ಪಡೆದಿದ್ದನು. ಮುಗ್ಧ ಬಾಲಕಿ ನಂಬಿ ಅವನ ಜೊತೆಗೆ ಸಹಕರಿಸಿದ್ದಳು. ಮಗಳು ಬಾರದಿದ್ದಕ್ಕಾಗಿ ಬಾಲಕಿಯರ ತಂದೆ-ತಾಯಿಗಳು ಶಿಕ್ಷಕನ ಹೆಂಡತಿ

ಊರಿಗೆ ಫೋನಾಯಿಸಿ ವಿಷಯ ತಿಳಿಸಿದರು. ಅಲ್ಲಿಗೆ ಬಂದಿರದ ವಿಷಯ ತಿಳಿದ ತಂದೆ-ತಾಯಿಯರು ಪಕ್ಕದ ಹುಣಸಗಿಯ ಪೋಲಿಸ ಸ್ಟೇಷನ್‌ನಲ್ಲಿ ಅಪ್ರಾಪ್ತ ವಯಸ್ಸಿನ ಬಾಲಕಿಯ ಅಪಹರಣ ಪ್ರಕರಣ ದಾಖಲಾಯಿತು. ಕೆಲವೇ ದಿನಗಳಲ್ಲಿ ಶಿಕ್ಷಕನನ್ನು ಬಂಧಿಸಿ ಸ್ಟೇಷನ್ನಿಗೆ ತರಲಾಯಿತು. ಬಾಲಕಿಯನ್ನು ವೈದ್ಯಕೀಯ ತಪಾಸಣೆಗೆ ಒಳಪಡಿಸಲಾಯಿತು. ವಿಷಯ ತಿಳಿದ ತಂದೆ-ತಾಯಿಯರು ದಿಗಿಲು ಬಡಿದಂತವರಾದರು. ಶಿಕ್ಷಕನ ಮೇಲೆ ಕ್ರಮ ತೆಗೆದುಕೊಳ್ಳುವುದಾಗಿ ಸಬ್‌ಇನ್‌ಸ್ಪೆಕ್ಟರ್ ಬಾಲಕಿಯ ತಂದೆ-ತಾಯಿಯರನ್ನು ಸಮಾಧಾನ ಮಾಡಿ ಕಳುಹಿಸಿದರು. ಹಣದ ಬಲ ಮತ್ತು ರಾಜಕೀಯ ಬಲದಿಂದ ಶಿಕ್ಷಕ ಕೆಲವೇ ದಿನಗಳಲ್ಲಿ ಅಪರಾಧ ಮುಕ್ತನಾಗಿ ಹೊರಬಂದಿರುವ ಘಟನೆ ಸಾಮಾನ್ಯವಾದುದಾಗಿದೆ. ಇಂಥಹ ಹಲವಾರು ಘಟನೆಗಳು ನಮ್ಮ ಭಾರತದಲ್ಲಿ ಸಾಕಷ್ಟಿವೆ. ಕೇವಲ ಒಂದೇ ವರ್ಷದಲ್ಲಿ ನಮ್ಮ ಭಾರತದಲ್ಲಿ ೧೫ ವಯಸ್ಸಿನ ಒಳಗಿರುವ ಬಾಲಕಿಯರ ಮೇಲೆ ೩೩೫೦ ರಷ್ಟು ಅತ್ಯಾಚಾರದ ಅಪಹರಣ ಇಂತಹ ಲೈಂಗಿಕ ಕಿರುಕುಳಗಳ ಪ್ರಕರಣಗಳು ದಾಖಲಾಗಿವೆ. ಆದರೆ ಸ್ವಾಭಿಮಾನಕ್ಕೆ ಅಂಜಿ ಕುಳಿತಿರುವ ಪ್ರಕರಣಗಳ ಸಂಖ್ಯೆ ಎಷ್ಟಿರಬಹುದೆಂದು ನೀವೇ ಊಹಿಸಿರಿ.

**ಕತ್ತಲಾವರಿಸಿದ ಕಾರಾಗೃಹಗಳು**

ಮಹಿಳೆಯರ ಹಕ್ಕುಗಳ ರಕ್ಷಣೆಗಾಗಿ ಕೇಂದ್ರದಲ್ಲಿ ಮಹಿಳಾ ಆಯೋಗ ಮತ್ತು ರಾಜ್ಯಗಳಲ್ಲಿ ರಾಜ್ಯ ಮಹಿಳಾ ಆಯೋಗಗಳಿದ್ದರೂ ಮಹಿಳೆಯರ ಮೇಲೆ ದಿನಾಲು ಅತ್ಯಾಚಾರಗಳು ನಡೆಯುತ್ತಿವೆ. ಇತ್ತೀಚೆಗೆ ಬಿಹಾರದ ಸಸಾರಂ ಜೈಲಿನಲ್ಲಿ ೩೫ ವರ್ಷ ವಯಸ್ಸಿನ ನಜ್ಮಾಖತೂನ ಎಂಬ ಮಹಿಳಾ ವಿಚಾರಣಾಧೀನ ಕೈದಿಯ ಮೇಲೆ ಜೈಲಿನ ಸಿಬ್ಬಂದಿಯವರೆ, ಅತ್ಯಾಚಾರವೆಸಗಿದ್ದಾರೆ. ಗರ್ಭಿಣಿಯಾದ ಅವಳು ಆಗಸ್ಟ್ ೬ ರಂದು ಪಾಟ್ನಾ ವೈದ್ಯಕೀಯ ಕಾಲೆಲ್ಮ ಆಸ್ಪತ್ರೆಯಲ್ಲಿಯೇ ಗಂಡು ಮಗುವಿಗೆ ಜನ್ಮ ನೀಡಿದಳು. ಅದೇ ಜೈಲಿನ ಪುರುಷರ ವಾರ್ಡಿನಲ್ಲಿದ್ದ ಅವಳ ಪತಿಯು ಆ ಮಗುವಿಗೆ ತಂದೆ ನಾನಲ್ಲವೆಂದು ಹೇಳಿದ್ದಾನೆ. ಏಕೆಂದರೆ ತಾನು ಹಲವು ವರ್ಷಗಳಿಂದ ಅವಳೊಂದಿಗಿಲ್ಲವೆಂದು ವಾದಿಸುತ್ತಿದ್ದಾನೆ. ತನ್ನ ಮೇಲೆ ಅತ್ಯಾಚಾರವೆನಸಗಿದವರು ಯಾರೆನ್ನುವುದು ನಜ್ಮಾಳಿಗೆ ಗೊತ್ತಿಲ್ಲ, ಆದರೆ ಮುಖ ನೋಡಿ ಗುರುತಿಸಬಹುದು ಎಂದು ಹೇಳಿದ್ದಾಳೆ, ಆದರೆ ಅವಳ ಕೂಗು ಯಾರು ಕೇಳುವವರಿಲ್ಲದೆ ನಜ್ಮಾಳ ಪ್ರಕರಣ ಗೆದ್ದಲು ಹಿಡಿದಿದೆ.

ಗುಜರಾತಿನ ಬಾರಾಬಂಕಿಯ ಕುರ್ಸಿಯಲ್ಲಿ ಅಲ್ಲಿನ ಪೋಲೀಸ್ ಸ್ಟೇಷನ್ ಅಧಿಕಾರಿ ಮತ್ತು ಸಬ್‌ಇನ್ಸ್‌ಪೆಕ್ಟರ್ ಇಬ್ಬರೂ ಸೇರಿ ಒಬ್ಬ ದಲಿತ ಮಹಿಳೆಯ ಮೇಲೆ ಅತ್ಯಾಚಾರ ನಡೆಸಿ ಕೊಲೆ ಮಾಡಿದ ಆಪಾದನೆಗೆ ಗುರಿಯಾಗಿದ್ದಾರೆ. ಆ ಮಹಿಳೆಯ ಗಂಡನನ್ನು ಕಳ್ಳತನ ಪ್ರಕರಣದಲ್ಲಿ ಹಿಡಿಯಲು ಹೋದಾಗ, ಗುಡಿಸಲಿನಲ್ಲಿ ಅವನು ಇಲ್ಲದ್ದನ್ನು ಕಂಡು ಅವಳ ಮೇಲೆ ಅತ್ಯಾಚಾರವೆಸಗಿ ಕೊಲೆ ಮಾಡಿದ್ದರು. ಹೀಗೆ ನಮ್ಮ ಪೊಲೀಸ್ ಯಂತ್ರದ ನಿಷ್ಕ್ರೀಯತೆ ಎಷ್ಟೆಂದರೆ ಅತ್ಯಾಚಾರದ ಅಪರಾಧಿಗಳನ್ನು ಹಿಡಿಯದಿರುವುದು, ಆ ಬಗ್ಗೆ

ಮಾಧ್ಯಮಗಳನ್ನು ದುರುಪಯೋಗಪಡಿಸಿಕೊಳ್ಳುತ್ತಿರುವವರನ್ನು ಶಿಕ್ಷಿಸುವ ರೀತಿ ಕೂಡಾ ನಿಜಕ್ಕೂ ಬೇಸರ ಹುಟ್ಟಿಸುತ್ತದೆ.

### ಪತ್ರಿಕಾ ರಂಗದಲ್ಲಿ

ದೇಶದ ನಾಲ್ಕನೇ ಅಂಗವಾಗಿರುವ ಪತ್ರಿಕಾ ರಂಗದಲ್ಲಿಯೂ ಲೈಂಗಿಕ ಕಿರುಕುಳಗಳು ನಡೆಯುತ್ತವೆಂದರೆ, ಸಾಮಾನ್ಯರ ಪಾಡೇನು ಎಂದು ಯೋಚಿಸುತ್ತೀರಾ? ಯಾವುದೇ ಮಹಿಳೆ ಲೈಂಗಿಕ ಕಿರುಕುಳಕ್ಕೆ ಒಳಗಾದ ವಿಷಯ ತಿಳಿದ ತಕ್ಷಣ ಅದನ್ನು ಬಯಲಿಗೆಳೆದು ತನ್ನ ಹಿರಿಮೆಯನ್ನು ತೋರಿಸಿಕೊಡುವ ಪತ್ರಿಕೋದ್ಯಮದಲ್ಲಿಯೂ ಉದ್ಯೋಗಸ್ಥ ಮಹಿಳೆಯರ ಮೇಲೆ ಲೈಂಗಿಕ ಕಿರುಕುಳಗಳು ನಡೆಯುತ್ತಿದೆಯೋ ಅಂತಹ ಒಂದು ಸತ್ಯ ಘಟನೆ ಅಸ್ಸಾಂನಿಂದ ವರದಿಯಾಗಿದೆ.

'ಅಮರ ಅಸ್ಸಾಂ' ದಿನಪತ್ರಿಕೆಯ ಉಪಸಂಪಾದಕಿ ಸಬಿತಾ ಲಹ್ಕರ್ ಅದೇ ಪತ್ರಿಕೆಯ ಸಂಪಾದಕ ಹೋಮನ್ ಬೊರ್ಗೊಹೇನ್ ಅವರು ತಮ್ಮ ಅಧಿಕಾರದ ದುರುಪಯೋಗದಿಂದ ತಮ್ಮೊಂದಿಗೆ ಲೈಂಗಿಕ ಸಂಬಂಧ ಬೆಳೆಸಲು ಎರಡು ವರ್ಷಗಳ ಅವಧಿಯಲ್ಲಿ ಹಲವು ಬಾರಿ ಒತ್ತಾಯಿಸಿದ್ದಾರೆ ಎಂದರು ಆರೋಪಿಸಿದ್ದಾರೆ. ಈ ರೀತಿಯ ಅನೈತಿಕ ಸಂಬಂಧಕ್ಕೆ ಪ್ರತಿಯಾಗಿ ಸಂಬಳ ಹೆಚ್ಚಿಸುವ ಹಾಗೂ ಬಡ್ತಿ ನೀಡುವ ಆಮಿಷಗಳನ್ನು ಬೊರ್ಗೊಹೇನ್ ಒಪ್ಪಿದ್ದ ರೆನ್ನಲಾಗಿದೆ. ಮಕ್ಕಳು ಶಾಲೆಯ ಖರ್ಚಿಗಾಗಿ ಅವರ ಕಿರುಕುಳವನ್ನು ಸಹಿಸಿಕೊಂಡಿದ್ದ ಸಬಿತಾ ಸಹಿಸಿ ಮಿತಿಮೀರಿದಾಗ ಕೆಲಸಕ್ಕೆ ರಾಜಿನಾಮೆ ನೀಡಿದುದಾಗಿ ಹೇಳುತ್ತಾರೆ. ಒಬ್ಬ ಪ್ರಸಿದ್ಧ ಪತ್ರಕರ್ತರೊಬ್ಬರ ವಿರುದ್ಧ ಸಿಡಿದೆದ್ದ ಸಬಿತಾಗೆ ಅಸ್ಸಾಂ ಪತ್ರಕರ್ತರ ಸಂಘ ನ್ಯಾಯ ದೊರಕಿಸಿ ಕೊಡಲು ಸಿದ್ಧವಾಗಿದ್ದು, ಶೋಷಿತರ ಮಹಿಳೆಯರ ಪೆಣರಮ್ ಸೇರಿದಂತೆ ಹಲವಾರು ಸಂಘಟನೆಗಳು ಸಬಿತಾ ಪರವಾಗಿ ನಿಂತಿವೆ (ದಿಕ್ಸೂಚಿ, ನವೆಂಬರ್-೨೦೦೩).

### ಚಿತ್ರರಂಗದಲ್ಲಿ

ಬೆಳ್ಳಿ ತೆರೆಯ ಮೇಲೆ ಮಹಿಳೆ ಲೈಂಗಿಕ ಅಥವಾ ಸೌಂದರ್ಯದ ವಸ್ತುವಾಗಿ ಬಿಂಬಿಸಲ್ಪ ಡುತ್ತಾಳೆ. ಇದು ಅಪೇಕ್ಷಿತವೋ ಅನಪೇಕ್ಷಿತವೋ ಇನ್ನೂ ಸಾರ್ವಜನಿಕ ಚರ್ಚಾ ವಿಷಯ ವಾಗಿದೆ. ಹಲವಾರು ಹರೆಯದ ಮಹಿಳೆಯರು ಚಿತ್ರಗಳಲ್ಲಿ ನಾಯಕಿಯಾಗಬೇಕೆಂಬ ಆಸೆಯಿಂದ ಬಂದು, ನಿರ್ದೇಶಕ, ನಿರ್ಮಾಪಕ ವರ್ಗದವರಿಂದ ಹಲವಾರು ಲೈಂಗಿಕ ಕಿರುಕುಳ ಗಳಿಗೆ ಬಲಿಯಾದ ಪ್ರಕರಣಗಳು ಸಾಕಷ್ಟಿವೆ.

ಸುಮಾರು ೩೦ ವರ್ಷಗಳ ಹಿಂದಿನ ಬಿ.ಆರ್. ಛೋಪ್ರಾ ಅವರ 'ಇನ್ಸಾಫ್ ಕಾ ತರಾಝು' ಹಿಂದಿ ಚಿತ್ರದಲ್ಲಿ ಅತ್ಯಾಚಾರ ದೃಶ್ಯಗಳು ಪ್ರೇಕ್ಷಕರನ್ನು ಉಸಿರುಗಟ್ಟಿಸುವಷ್ಟು ಅಶ್ಲೀಲವಾಗಿದ್ದವು. ಮರ್ಡರ್, ಹವಾ ಮತ್ತು ಗರ್ಲ್ ಫ್ರೆಂಡ್ ಚಿತ್ರಗಳು ಅಶ್ಲೀಲತೆಯನ್ನು ಪ್ರದರ್ಶಿಸುವ ಹಿಂದಿ ಚಲನಚಿತ್ರಗಳಾಗಿವೆ. ಹೀಗೆ ಭವ್ಯ ಭವಿಷ್ಯವನ್ನು ಹೊತ್ತುಕೊಂಡು ಬಂದ ಹರೆಯದ ಮಹಿಳೆಯರು ಹಲವಾರು ಲೈಂಗಿಕ ಕಿರುಕುಳಗಳ ದೃಶ್ಯಗಳಲ್ಲಿ ಕಾಣಿಸಿ ಕೊಂಡು ತಮ್ಮ ಮುಂದಿನ ಚಿತ್ರರಂಗದಲ್ಲಿನ ಕನಸ್ಸನ್ನು ಕಮರಿಸಿಕೊಂಡಿದ್ದಾರೆ.

## ಲೈಂಗಿಕ ಕಿರುಕುಳದ ಬಗೆಗಿನ ಸಮೀಕ್ಷೆಗಳು

ಭಾರತದಲ್ಲಿ ಪ್ರತಿ ೫೪ ನಿಮಿಷಕ್ಕೆ ಒಬ್ಬ ಮಹಿಳೆ ಅತ್ಯಾಚಾರಕ್ಕೊಳಗಾಗುತ್ತಾಳೆ ಎಂದು ವಿಶ್ವಸಂಸ್ಥೆ ಸಮೀಕ್ಷೆ ತಿಳಿಸಿದರೆ, ಪ್ರತಿ ೩೫ ನಿಮಿಷಕ್ಕೆ ಒಬ್ಬಳಂತೆ ಪ್ರತಿದಿನ ೪೨ ಮಹಿಳೆಯರು ಅತ್ಯಾಚಾರಕ್ಕೊಳಗಾಗುತ್ತಾರೆ ಎಂದು ಮಹಿಳಾ ಅಭಿವೃದ್ಧಿ ಅಧ್ಯಯನ ಸಂಸ್ಥೆಯ ಸಮೀಕ್ಷೆ ತಿಳಿಸುತ್ತದೆ.

ಈ ನಿಟ್ಟಿನಲ್ಲಿ ೧೦ ಸಾವಿರ ಮಹಿಳೆಯರನ್ನು ಸಮೀಕ್ಷಿಸಿದಾಗ, ೫೦ ಪ್ರತಿಶತದಷ್ಟು ಮಹಿಳೆಯರು ಮದುವೆಯ ಬದುಕಿನಲ್ಲಿ ಒಂದಲ್ಲ ಒಂದು ರೀತಿಯ ಹಿಂಸೆ ಅನುಭವಿಸುತ್ತಿದ್ದಾರೆ. ಶೇ. ೪೩.೫ರಷ್ಟು ಮಹಿಳೆಯರು ಪ್ರತಿನಿತ್ಯ ಮನ ನೆಮ್ಮದಿ ಕೆಡಿಸಿಕೊಳ್ಳುವ ಬೈಗುಳಕ್ಕೀಡಾಗುತ್ತಾರೆ. ಶೇ. ೪೦.೩ರಷ್ಟು ಮಹಿಳೆಯರು ನಾನಾ ಬಗೆಯ ಹೊಡೆತ-ಬಡಿತ ತಿನ್ನಬೇಕಾಗುತ್ತದೆ ಎಂಬುದು ತಿಳಿದು ಬಂದಿದೆ (ದಿಕ್ಸೂಚಿ, ಜುಲೈ-೨೦೦೩).

೧೯೯೮ ರಲ್ಲಿ ಶ್ರೀರಾಮ್ ಮತ್ತು ಬಶಿಯೂ ಎಂಬುವರು ನಡೆಸಿದ ಸಮೀಕ್ಷೆಯ ಪ್ರಕಾರ ಶೇ. ೫೦ರಷ್ಟು ಪತ್ನಿಯರು ಗಂಡನಿಂದ ಹೊಡೆತ ತಿನ್ನುತ್ತಾರೆ. ಇದೇ ವರ್ಷ ಗುಜರಾತಿನಲ್ಲಿ ನಡೆಸಲಾದ ಸಮೀಕ್ಷೆಯ ಪ್ರಕಾರ ಶೇ. ೬೬ರಷ್ಟು ಮಹಿಳೆಯರ ಮೇಲೆ ಪುರುಷರ ದೈಹಿಕ ಮತ್ತು ಮಾನಸಿಕ ಹಿಂಸಾಚಾರ ನಡೆಯುತ್ತದೆ, ಅಲ್ಲದೇ ಶೇ. ೪೨ರಷ್ಟು ಪತ್ನಿಯರನ್ನು ಅವರ ಗಂಡಂದಿರು ಥಳಿಸುತ್ತಾರೆ. ೧೫ ರಿಂದ ೩೯ ವರ್ಷದೊಳಗಿನ ಮಹಿಳೆಯರ ಶೇ. ೪೫ ಮಂದಿ ಅವರ ಆಪ್ತರಿಂದಲೇ ಹಿಂಸಾಚಾರಕ್ಕೆ ಒಳಗಾಗುತ್ತಿದ್ದಾರೆ ಎಂದು ಉತ್ತರ ಪ್ರದೇಶದಲ್ಲಿನ ಕರೊಲಿನಾ ವಿಶ್ವವಿದ್ಯಾಲಯ ಸಮೀಕ್ಷೆ ಮಾಡಿತು.

೨೦೦೦ರಲ್ಲಿ ಅಂತರರಾಷ್ಟ್ರೀಯ ಕ್ಲಿನಿಕಲ್ ಎಪಿಡೆಮೋಲಾಜಿಸ್ಟ್ ನೆಟವರ್ಕ್ ನಡೆಸಿದ ಸಮೀಕ್ಷೆಯ ಪ್ರಕಾರ ಶೇ. ೪೩.೫ರಷ್ಟು ಮಹಿಳೆಯರು ತಮ್ಮ ವೈವಾಹಿಕ ಜೀವನದಲ್ಲಿ ಒಮ್ಮೆಯಾದರೂ ಗಂಡನಿಂದ ಹಿಂಸಾಚಾರಕ್ಕೆ ಒಳಗಾಗಿದ್ದಾರೆ. ಶೇ. ೪೦.೫ರಷ್ಟು ಮಹಿಳೆಯರು ಲೈಂಗಿಕ ಕಿರುಕುಳಕ್ಕೆ ಒಳಗಾಗಿದ್ದಾರೆ. ಶೇ. ೬೮ ರಷ್ಟು ಲೈಂಗಿಕ ಕಿರುಕುಳ ಪ್ರಕರಣಗಳು ಪೋಲಿಸ ಠಾಣೆಗಳವರೆಗೆ ಹೋಗುವುದಿಲ್ಲ ಎಂದು ಚಂದೀಗಡದ ಅಭಿವೃದ್ಧಿ ಮತ್ತು ಸಂಪರ್ಕ ಸಂಸ್ಥೆ ಕೈಗೊಂಡ ಸಮೀಕ್ಷೆ ತಿಳಿಸಿದೆ. ಇತ್ತೀಚೆಗೆ ಕಳಪೆ ಕಾನೂನು ವ್ಯವಸ್ಥೆಯಿಂದಾಗಿ ಪ್ರತಿಯೊಂದು ಕ್ಷೇತ್ರದಲ್ಲಿ ಲೈಂಗಿಕ ಕಿರುಕುಳಗಳ ಸಂಖ್ಯೆ ಹೆಚ್ಚಾಗುತ್ತಲೇ ಇದೆ. ಇವುಗಳಿಗೆ ಕೊನೆಯೇ ಇಲ್ಲಾ ಎಂದು ಅಧಿಕಾರಿಗಳು ಕೈಕಟ್ಟಿಕೊಂಡು ಕುಳಿತುಕೊಂಡಿದ್ದಾರೆ (ರವೀಂದ್ರ ಭಟ್ಟ, ಐನಕೈ-೨೦೦೪).

## ಲೈಂಗಿಕ ಕಿರುಕುಳಗಳಿಗೆ ಕೊನೆ ಇದೆಯೇ?

ಹಲವಾರು ಕ್ಷೇತ್ರಗಳಲ್ಲಿ ಲೈಂಗಿಕ ಕಿರುಕುಳಗಳಿಗೆ ಬಲಿಯಾದ ಮಹಿಳೆಯರು, ಲೈಂಗಿಕ ಕಿರುಕುಳಗಳಿಗೆ ಕೊನೆ ಇದೆಯೇ ಎಂದು ನಿರುತ್ಸಾಹದಾಯಕವಾಗಿ ಕೇಳುತ್ತಾರೆ. ಈ ಕೆಳಗಿನ ಅಂಶಗಳನ್ನು ಅಳವಡಿಸಿಕೊಂಡಲ್ಲಿ ಮಹಿಳೆಯರ ಮೇಲಾಗುವ ಲೈಂಗಿಕ ಕಿರುಕುಳಗಳನ್ನು ಸ್ವಲ್ಪ ಮಟ್ಟಿಗಾದರೂ ನಿಯಂತ್ರಿಸಬಹುದು ಅವುಗಳೆಂದರೆ,

- ಮಹಿಳೆಗೆ ಸಂಬಂಧಿಸಿದ ಕುಟುಂಬ, ಜನಾಂಗ ಹಾಗೂ ಸಮಾಜದಲ್ಲಿನ ಮಹಿಳೆಯ ಬಗೆಗಿನ ಆಲೋಚನಾ ಲಹರಿಯೇ ಬದಲಾಗಬೇಕು, ಅಂದಾಗ ಮಾತ್ರ ಸಂಸಾರದಲ್ಲಿ ಹೆಣ್ಣಿಗೆ ಶಾಂತಿ ಹಾಗೂ ಗೌರವದಿಂದ ಬಾಳುವುದು ಸಾಧ್ಯವಾಗುತ್ತದೆ.
- ಮಹಿಳೆಯರಿಗಾದ ಅನ್ಯಾಯಗಳನ್ನು ಹಂತ ಹಂತವಾಗಿ ತಡೆಯಬೇಕಾದರೆ ವೈಚಾರಿಕ ನೆಲೆ, ಸಂಸ್ಕಾರಿಕ ಹಿನ್ನೆಲೆ, ಕಾನೂನಿನ ಚೌಕಟ್ಟಿನಲ್ಲಿ ಸಮತೋಲನದೊಡನೆ ಪ್ರಯತ್ನಿಸ ಬೇಕು. ಮಹಿಳಾ ಹಕ್ಕಿನ ಅರಿವನ್ನು ಹೆಚ್ಚಾಗಿ ಜನರಿಗೆ ಮುಟ್ಟಿಸುವ ಕಾರ್ಯವಾಗಬೇಕು.
- ಗಂಡನಾದವನು ಹೆಂಡತಿಯ ಮೇಲೆ ಹಿಂಸೆ, ಅನಾವಶ್ಯಕ ದಬ್ಬಾಳಿಕೆ ಮಾಡುವ ಮುಂತಾದ ಕಾರಣಗಳಿಂದಾಗಿ ವಿಚ್ಛೇದನದ ಕಾನೂನನ್ನು ಸುಲಭವಾಗಿಸಬೇಕು.
- ಕಾನೂನಿನ ಪ್ರಕಾರ ವರದಕ್ಷಿಣೆ ಕೊಡುವುದು ಮತ್ತು ತೆಗೆದುಕೊಳ್ಳುವುದು ಅಪರಾಧ. 'ಕ್ರಿಮಿನಲ್ ಪ್ರಿಸ್ ಆಫ್ ಟ್ರಸ್ಟ್' ಕಾಯ್ದೆಯ ಪ್ರಕಾರ, ಮದುವೆಯಾದ ೭ ವರ್ಷ ದೊಳಗೆ ಹೆಂಡತಿ ಅಸ್ವಾಭಾವಿಕ ಸಾವನ್ನಪ್ಪಿದರೆ ಅದು ವರದಕ್ಷಿಣೆಯ ಹಿಂಸೆ ಸಾವೆಂದೇ ಪರಿಗಣಿಸಲಾಗುತ್ತದೆ. ಇಷ್ಟಿದ್ದ್ಯಾಗ್ಯೂ ನಮ್ಮ ಭಾರತದಲ್ಲಿ ಹಲವಾರು ಮಹಿಳೆಯರು ವರದಕ್ಷಿಣೆ ಕಿರುಕುಳದಿಂದಾಗಿ ಸಾವನ್ನಪ್ಪದ ಸಾಕಷ್ಟು ನಿದರ್ಶನಗಳಿವೆ. ಕಾರಣ ವರದಕ್ಷಿಣೆ ತಡೆ ಕಾಯ್ದೆಯನ್ನು ಪರಿಣಾಮಕಾರಿಯಾಗಿ ಜಾರಿಯಲ್ಲಿ ತರಬೇಕು.
- ವಿಚ್ಛೇದನ ಪಡೆದ ಮಹಿಳೆಗೆ ಆಸ್ತಿ ಹಕ್ಕುದಾರಿಕೆಯನ್ನು ಆಯಾ ಧರ್ಮಗಳಿಗನುಸಾರ ವಾಗಿಯೇ ವಿಂಗಡಿಸಬೇಕು.
- ೧೮ ವರ್ಷಕ್ಕಿಂತ ಕಡಿಮೆಯಿರುವ ಹೆಣ್ಣನ್ನು ಮದುವೆಯಾದರೆ, ಅದು ಬಾಲ್ಯ ವಿವಾಹ ಕಾಯ್ದೆಯಡಿಯಲ್ಲಿ ಅಪರಾಧವಾಗುತ್ತದೆ ಎಂಬುದನ್ನು ತಿಳಿದಿದ್ದರೂ ಹಲವಾರು ಸಾಮೂಹಿಕ ಮದುವೆಗಳಲ್ಲಿ ರಾಜಕಾರಣಿಗಳು, ಮಠಾಧೀಶರು ಮತ್ತು ಸಮಾಜದ ಹಿರಿಯ ಗಣ್ಯರೆದುರಿನಲ್ಲಿಯೇ ಬಾಲ್ಯ ವಿವಾಹಗಳು ನಡೆಯುತ್ತಿವೆ. ಇದನ್ನು ತಪ್ಪಿಸಲು ಬಾಲ್ಯ ವಿವಾಹ ತಡೆ ಕಾಯ್ದೆಯನ್ನು ಪರಿಣಾಮಕಾರಿಯಾಗಿ ಜಾರಿಗೆ ತರಬೇಕಾದುದು ಅವಶ್ಯಕವಾಗಿದೆ.
- ಲೈಂಗಿಕ ಕಿರುಕುಳ - ಇದು ಹೆಣ್ಣಿನ ಪಾಲಿಗೆ ಹಿಂಸೆಯ ಪರಾಕಾಷ್ಠೆ. ಸಾರ್ವಜನಿಕ ಸ್ಥಳಗಳಲ್ಲಿ, ಕೆಲಸ ಮಾಡುವ ಇಲಾಖೆ, ಸಂಸ್ಥೆಗಳಲ್ಲಿ ಹೆಣ್ಣು ಕಿರುಕುಳಕ್ಕೊಳಗಾದದ್ದು ಸಾಬೀತಾದರೆ, ಕಿರುಕುಳ ನೀಡಿದ ವ್ಯಕ್ತಿಗೆ ಕಠಿಣ ಶಿಕ್ಷೆ ವಿಧಿಸಬೇಕು. ಆದರೆ ಕೆಲವೊಂದು ನುಸುಳಿ ಹೋಗುವ ಕಾನೂನುಗಳನ್ನು ಬಿಗಿಗೊಳಿಸಬೇಕು. ಲೈಂಗಿಕ ಕಿರುಕುಳ ತಡೆ ಕಾಯ್ದೆಯನ್ನು ಪರಿಣಾಮಕಾರಿಯಾಗಿ ಜಾರಿಗೆ ತರಬೇಕು.

**ಉಪಸಂಹಾರ**

ಮಹಿಳೆಯರ ಮೇಲಿನ ಅತ್ಯಾಚಾರ, ಅಪಹರಣ, ಹಿಂಸೆ, ಲೈಂಗಿಕ ಕಿರುಕುಳಗಳು ಅತ್ಯಂತ ನಾಚಿಕೆಗೇಡಿನ ಸಂಗತಿಗಳೆಂದು ಸಮಾಜಕ್ಕೆ ತಿಳಿದಿದ್ದರೂ, ಅದೇ ಸಮಾಜದಲ್ಲಿ ದಿನಗಳು ಉರುಳಿದಂತೆಲ್ಲಾ ಲೈಂಗಿಕ ಕಿರುಕುಳಗಳ ಸಂಖ್ಯೆ ಹೆಚ್ಚುತ್ತಲಿವೆ. ಮಹಿಳೆಯರ ಮೇಲೆ

ನಡೆಯುವ ಇಂತಹ ದೌರ್ಜನ್ಯಗಳಿಗೆ ಭೌಗೋಳಿಕ, ಸಾಂಸ್ಕೃತಿಕ, ಧಾರ್ಮಿಕ, ಬಡವ, ಶ್ರೀಮಂತರೆಂಬ ಚೌಕಟ್ಟುಗಳಿಲ್ಲ. ಇದು ಎಲ್ಲಿಯವರೆಗೂ ಮುಂದುವರೆಯುತ್ತಲಿದೆಯೋ ಅಲ್ಲಿಯವರೆಗೆ ನಿಜವಾದ ಪ್ರಗತಿ ಸಾಧ್ಯವಿಲ್ಲ. ಅಭಿವೃದ್ಧಿ, ಶಾಂತಿ ಮತ್ತು ಸಮಾನತೆ ಸ್ಥಾಪಿಸಲು ಸಾಧ್ಯವಿಲ್ಲ.

ಮಹಿಳೆಯರ ಮೇಲೆ ಆಗುತ್ತಿರುವ ಲೈಂಗಿಕ ಕಿರುಕುಳಗಳನ್ನು ತಡೆಯಲು ಅನೇಕ ಕಾಯ್ದೆಗಳು ಇದ್ದರೂ ಸಹಿತ ದಿನ ಬೆಳಗಾದಂತೆ ಮಹಿಳೆಯರು ಹಿಂಸೆ, ಅತ್ಯಾಚಾರ ಅಥವಾ ಇನ್ನಾವುದೋ ರೀತಿಯ ಕಿರುಕುಳಕ್ಕೆ ಒಳಗಾದ ತಕ್ಷಣ ದೂರು ಕೊಡದೇ ಇರುವುದರಿಂದ, ಅಪರಾಧಿಗಳು ಸುಲಭವಾಗಿ ತಪ್ಪಿಸಿಕೊಳ್ಳಲು ಸಾಧ್ಯವಾಗುತ್ತಿದೆ. ಆದ್ದರಿಂದ ಮಹಿಳೆಯರು ಮಹಿಳಾ ಸಂಘ, ಉಚಿತ ಕಾನೂನು ಸಲಹೆ ಸಂಸ್ಥೆಗಳನ್ನು ಸಂಪರ್ಕಿಸಬೇಕು. ಅವರು ಯಾವುದೇ ರೀತಿಯ ಆರ್ಥಿಕ ಒತ್ತಡಗಳನ್ನು ನೀಡದೇ ಉಚಿತವಾಗಿ ವಕೀಲರನ್ನು ನೇಮಿಸಿ ಅವರ ಮೂಲಕ ಕಾನೂನಿನ ರೀತಿಯಲ್ಲಿ ಕ್ರಮ ಕೈಗೊಂಡು ಅಪರಾಧಿಗಳನ್ನು ಶಿಕ್ಷೆಗೊಳ ಪಡಿಸುತ್ತಾರೆ. ಆದರೆ ಹಲವಾರು ಪ್ರಕರಣಗಳು ನ್ಯಾಯಾಲಯದಲ್ಲಿಯೇ ಧೂಳು ಹಿಡಿಯುತ್ತಿವೆ. ಬೇಲಿಯೇ ಎದ್ದು ಹೊಲ ಮೇಯ್ದಾಗ ಯಾರು ಏನೂ ಮಾಡಲು ಸಾಧ್ಯವಿಲ್ಲ ಎಂಬಂತಾಗಿದೆ ಈಗಿನ ಸಮಾಜ ಮತ್ತು ಕಾನೂನು.

**ಆಧಾರಗಳು**

೧. ಗಾಯತ್ರಿ ಎನ್. ೧೯೯೬, 'ಮಹಿಳೆ ಬಿಡುಗಡೆಯ ಹಾದಿಯಲ್ಲಿ', ನವ ಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿಮಿಟೆಡ್, ಬೆಂಗಳೂರು.
೨. ಡಾ. ನೀಲಮ್ಮ ಕೆ., ೧೯೯೭, 'ಮಹಿಳೆ : ಹಲವು ಮುಖಗಳು', ಶ್ರೀ ರೇಣುಕಾ ಪ್ರಕಾಶನ, ಶಹಾಬಾದ.
೩. ಕ್ರೈಮ್ ಇನ್ ಇಂಡಿಯಾ, ೨೦೦೦, ನ್ಯಾಶನಲ್ ಕ್ರೈಮ್ ರಿಕಾರ್ಡ್ಸ್ ಬ್ಯುರೋ, ಮಿನಿಸ್ಟ್ರಿ ಆಫ್ ಹೋಮ್ ಅಫೇರ್ಸ್, ನ್ಯೂ ದೆಹಲಿ.
೪. ಶಮಂತ, ೨೦೦೧, 'ಕಟಕಟೆಯೊಳಗೆ ಕುಟುಂಬದ ಕಣ್ಣೀರು', ಐ.ಬಿ.ಎಚ್. ಪ್ರಕಾಶನ್, ಬೆಂಗಳೂರು.
೫. ಡಾ. ಶ್ರೀಮತಿ ಎಚ್.ಎಸ್., ೨೦೦೧, 'ಆಧುನಿಕ ಭಾರತದಲ್ಲಿ ಮಹಿಳೆ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
೬. ದಿಕ್ಸೂಚಿ ಮಾಸ ಪತ್ರಿಕೆ : ಏಪ್ರಿಲ್, ಜೂನ್, ಅಕ್ಟೋಬರ್, ೨೦೦೨ ಮತ್ತು ಜುಲೈ ಮತ್ತು ನವೆಂಬರ್, ೨೦೦೩.
೭. ವಿಜಯ ಕರ್ನಾಟಕ ದಿನಪತ್ರಿಕೆ, ಜುಲೈ, ೧೦, ೨೦೦೪.

# ಸಂಸ್ಕೃತಿಯಲ್ಲಿ ಅಡಗಿರುವ ವಿಶಿಷ್ಟ ಅಂಶಗಳು : ಮಹಾಸತಿಯರ ಒಳಧ್ವನಿ

ಬಿ.ಎಸ್. ಗೀತಾ

ಕರ್ನಾಟಕ ಸಂಸ್ಕೃತಿಯಲ್ಲಿನ ಸ್ತ್ರೀ ಬದುಕಿನ ಅಳಲನ್ನು ವಿಶ್ಲೇಷಿಸಲಿಕ್ಕೆ ಸ್ತ್ರೀಸಂವೇದನೆಯು ಅಭಿವ್ಯಕ್ತಗೊಂಡ ವಿಧಾನಗಳನ್ನು ಆಶ್ರಯಿಸಬೇಕಾಗುತ್ತದೆ. ಹೆಣ್ಣಿನ ಧಾರುಣ ಚಿತ್ರವನ್ನು ಹಾಗೆಯೇ ಸ್ತ್ರೀ ಲೋಕದ ದುರಂತ ಪ್ರಜ್ಞೆ ಕಾಣಬೇಕಾದರೆ ಜಾನಪದ ಕಥನಗೀತೆಗಳು ಪುನಾರಚನೆಯ ಆಕರಗಳಾಗಿ ಸಹಾಯ ಮಾಡುತ್ತವೆ. ಸತಿ ಗೀತೆಗಳಲ್ಲಿ ಅಡಗಿರುವ ವಿಶಿಷ್ಟ ಅಂಶಗಳ ಒಳನೋಟವೊಂದು ತಿಳಿಯಬೇಕಾದರೆ, ಕಥನಗಳ ಪಾತ್ರದ ಸ್ಥಿತಿಯನ್ನು ಎಚ್ಚರಿಕೆಯಿಂದ ಅವಲೋಕಿಸಬೇಕಾಗುತ್ತದೆ.

ಹೆಣ್ಣು ಮಕ್ಕಳಾಗಿ ಹುಟ್ಟುವುದೆ ತಪ್ಪು ಎನ್ನುವ ಭಾವ ಕೆಲವು ಕಥನಗೀತೆಗಳಲ್ಲಿ ಕಂಡುಬರುತ್ತದೆ. ತಂದೆ, ತಾಯಿ, ಮಗಳ ನಡುವೆ ನಡೆಯುವ ಸಂಭಾಷಣೆಯು ಸಂಕಟದ ಮಾತುಗಳಾಗಿ ಹೊರಹೊಮ್ಮುತ್ತದೆ. ಹುಟ್ಟಿದ ಮನೆಯನ್ನು ತೊರೆದು ಮತ್ತೊಬ್ಬರ ಮನೆಗೆ ಹೊರಟು ಹೋಗುವಾಗ ಸ್ತ್ರೀ ಅನುಭವಿಸುವ ನೋವನ್ನು ಕೆಳಗಿನ ಗೀತೆಯೊಂದು ಹೀಗೆ ಅಭಿವ್ಯಕ್ತಿಸುತ್ತದೆ.

ಎತ್ತಪ್ಪ ತನಮಗಳ ಪಕ್ಕೇಲಿ ಕುಂಡಿರಿಸಿಕೊಂಡು
ಬೆಟ್ಟೇಲಿ ಕಣ್ಣೀರ ವರೆಸೂತ
ಬೆಟ್ಟೇಲಿ ಕಣ್ಣೀರ ವರೆಸೂತ ಎಣುಮಕ್ಕಳು
ಪುಟ್ಟಬಾರದೇಳು ಜಲುಮಾಕಂದ ||

(ಮಹಾಸತಿ ವೀರ ತಿಮ್ಮವ್ವ, ಪುಟ ೧೫೨)

ಎಣುಮಗಳ ಯಾಕಡದೇ ನನ್ನಮ್ಮ
ಎಣ್ಣ್ಯಾಗ ಬತ್ತಿ ಉರುದಂಗ
ಎಣ್ಣ್ಯಾಗ ಬತ್ತಿ ಉರುದಂಗ | ಮಾನವರ
ಕಣ್ಣಾಗ ನಾವು ಉರುದೇವು ||

(ಅಲ್ಲೇ, ಪುಟ ೧೫೩)

ಸಮಾಜದಲ್ಲಿ ಹೆಣ್ಣು ಮಕ್ಕಳು ಅಂದರೆ 'ಎಣ್ಯಾಗ ಬತ್ತಿ' ಇದ್ದಾಂಗೆ ಉರಿದು ಹೋಗುವ ಪರಿ ತಮ್ಮ ಜೀವನವನ್ನು ತೇಯಬೇಕಾದ ಅನಿವಾರ್ಯತೆಯನ್ನು ದುಃಖದಿಂದ ಹೇಳಿಕೊಳ್ಳುತ್ತಿದ್ದಾಳೆ. ಬಡತನದ ಕಾರಣ, ಹೋರಾಟ ಮಾಡುವ ವ್ಯಕ್ತಿಗೆ ಹೆಣ್ಣು ಕೊಡಬೇಕಾದ ಅನಿವಾರ್ಯತೆ ಹೆಣ್ಣು ಮಕ್ಕಳಾಗಿ ಹುಟ್ಟಿದ್ದೆ ಒಂದು ಶಾಪ ಎನ್ನುವ ಭಾವ ಬರುತ್ತದೆ. ಹೆಣ್ಣು ತನ್ನ ನೋವಿನ, ಮನದಾಳದ ಮಾತುಗಳನ್ನು ಹೇಳಿಕೊಳ್ಳುವುದು ತನ್ನ ಗೆಳತಿಗೆ ತಾನೆ. ಅವಳೊಬ್ಬಳೇ ಇವಳಿಗೆ ನೆರವಾಗುವವಳು.

ಬನ್ನೀಯ ಮರತಂಕ ಬನ್ನೀರಿ ಗೆಳತೇರ
ಅಲ್ಲಿಂದಿಂದಾಕ ತಿರುಗೀರಿ
ಅಲ್ಲಿಂದಿಂದಾಕ ತಿರುಗೀರಿ | ನಮ್ಮನಿಗೋಗಿ
ಅಡೆದವ್ವನ ಸುಮ್ಮಾನಿರಿಸೀರೆ ||

(ಅಲ್ಲೇ, ಪುಟ ೧೬೦)

'ವಡ್ಡಗೆರೆ ನಾಗಮ್ಮ' ಲಾವಣಿಯಲ್ಲಿ ರಣಾಗ್ರಕ್ಕೆ ಹೋದ ವೀರಣ್ಣ ಮಡಿಯುತ್ತಾನೆ. ಕೊಂಡದ ಸಿದ್ಧತೆಯೆಲ್ಲ ನಡೆಯುತ್ತದೆ. ಅತ್ತೆ ಮನೆಯಿಂದ ತವರು ಮನೆಗೆ ಸುದ್ದಿ ಬರುತ್ತದೆ. ನಾಗಮ್ಮನ ತಂದೆ ಬಂದು ಸತಿಯಾಗ ಹೊರಟ ನಾಗಮ್ಮನಿಗೆ 'ಹತ್ತು ವರಹ ಕೊಡುತ್ತೇನೆ ಕೊಂಡಕ್ಕೆ ಹಾರಬೇಡ' ಎನ್ನುತ್ತಾನೆ. ನಾಗಮ್ಮನ ಅಣ್ಣ, ಅಕ್ಕ, ತಾಯಿ ಇವಳಿಗೆ ಕೊಂಡವಾಗಬೇಡ ಎಂದೇ ಹೇಳುತ್ತಾರೆ. ಆದರೆ ನಾಗಮ್ಮ ನಾನ್ಹಾಯೋದೆ ಲೇಸು ಅಡಿಗಿಚ್ಚ' ಎಂದು ತೀರ್ಮಾನಿಸುತ್ತಾಳೆ. 'ತಿರಿದುಂಬು ಜೋಗಿಗೆ ನನ ಕೊಟ್ಟಿದ್ದರೆ ತಿರಿದುಂಡು ನಾನು ಇರುತ್ತಿದ್ದೆ ವಡ್ಡಗೇರೆಂಬೋದು ದೊಡ್ಡ ಪಟ್ಟಣವೆಂದು ನನ್ನೀಗ ಕೊಂಡಾಕೆ ಧಾರೆ ಎರೆದವರೆ ತನ್ನ ತವರೋರು. ನನ್ನ ಕೊಟ್ಟೋರ ಮನೆಯ ಉರಿಯಾಲಿ, ಬೇಯಾಲಿ' ಎಂದು ಶಾಪ ಹಾಕುತ್ತಾಳೆ. (ಬಯಲು ಸೀಮೆ ಲಾವಣಿಗಳು) ತವರು ಮನೆಯವರನ್ನು ಕುರಿತು ತನ್ನ ಮನಸ್ಸಿನ ಒಡಲಾಳದ ನೋವಿನ ಮಾತನ್ನು ಈ ರೀತಿ ವ್ಯಕ್ತಪಡಿಸುತ್ತಾಳೆ. ಸಮಾಜ ರೂಪಿಸಿದ್ದ ಸತಿಪದ್ಧತಿಯನ್ನು ಸಮ್ಮತವಿಲ್ಲದಿದ್ದರೂ ಹೋಗಲೇಬೇಕಾಗುತ್ತಿತ್ತು ಎನಿಸುತ್ತದೆ.

ಈರೋಬಿ ಕಥನಗೀತೆಯಲ್ಲಿ ಕೊಂಡಕ್ಕೆ ಹೊರಟ ಈರೋಬಿಯನ್ನು ತವರು ಮನೆಯವರೆಲ್ಲ ಕೊಂಡಕ್ಕೆ ಹೋಗುವುದು ಬೇಡ ಎಂದು ತಡೆಯಲೆತ್ನಿಸುತ್ತಾರೆ. ಈರೋಬಿ ಮಾತ್ರ 'ಕಂಡೋರ ಮನೆಯ ಕಸನ್ಯಾಕಿ ಸಾಯೋಕಿಂತ ಕೊಂಡವನ್ನೋಗೋದೆ ಕಡುಲೇಸು' ಎಂದು ತೀರ್ಮಾನಿಸುತ್ತಾಳೆ. ಕಂಡೋರ ಮನೆಯವರ್ಯಾರು ಎಂದರೆ ಗಂಡನ ಮನೆಯವರೇ ಆಗಿದ್ದಾರೆ.

ರಾಗಿ ಮಾಡಿದ ಕಲ್ಲ ಬೀದೀಗೆ ಚೆಲ್ಲೋಳೆ
ನಾದಿನಿ ನಿನ್ನ ವಿಷವ ಬಿಡಲಿಲ್ಲ | ನಮ್ಮಿಬ್ಬರ
ಗುದ್ದಾಟವಿಲ್ಲಿಗೆ ಸವೆದ್ಹೋದೊ

ಬತ್ತ ಮಾಡಿದ ಕಲ್ಲ ಬಚ್ಚಲಿಗೆ ಚೆಲ್ಲೋಳೆ
ಅತ್ಯಮ್ಮ ನಿನ್ನ ವಿಷವ ಬಿಡಲಿಲ್ಲ । ನಮ್ಮಿಬ್ಬರ
ಕಿತ್ತಾಟ ಇಲ್ಲಿಗೆ ಸರಿಯಾದೊ ॥

(ಜನಪದ ಖಂಡಕಾವ್ಯಗಳು)

ಈರೋಬಿ ಹೇಳುವ ಈ ಮಾತುಗಳು ಯಾರದೇ ಒತ್ತಾಯವಿಲ್ಲದೆ ಕೊಂಡವನ್ನು ಆಯ್ಕೆ ಮಾಡಿಕೊಂಡಳು ಎನ್ನುವ ಭಾವ ಬಂದರೂ, ಮುಂದಿನ ಬವಣೆಯ ಬದುಕಿನಿಂದ ಪಲಾಯನ ಮಾಡಲು ಬೆಂಕಿಗೆ ಆಹುತಿಯಾಗುವ ಅನಿವಾರ್ಯತೆಯನ್ನು ಸಮಾಜ ನಿರ್ಮಾಣ ಮಾಡಿತ್ತು ಎನ್ನಬೇಕಾಗುತ್ತದೆ.

ಮಾಸ್ತಿ ಕಥನಗೀತೆಯೊಂದರಲ್ಲಿ ಹಾಲು ಕುಡಿಯುವ ಕಂದನನ್ನು ಮಹಾಸತಿ ಬಿಟ್ಟು ಕೊಂಡಕ್ಕೆ ಹೋಗುತ್ತಾಳೆ. 'ಮಹಾಸತಿ ವೀರದಿಮ್ಮವ್ವ' ಗೀತೆಯಲ್ಲಿ ವೀರದಿಮ್ಮವ್ವ ಮಗುವನ್ನು ಬಿಟ್ಟು ಕೊಂಡವೇರುತ್ತಾಳೆ. ಆ ಸಂಜೆ ಮಗು ಅತ್ತರೆ ಅದರ ಗಂಟಲು ಒಣಗಿದರೆ ಅದಕ್ಕೆ ಕುಡಿಯಲು ಹಾಲಿಲ್ಲ' ಎಂದು ಗೀತೆ ವಿವರಿಸುತ್ತದೆ. ಮಮತೆ, ವಾತ್ಸಲ್ಯದಿಂದ ಕಾಣಬೇಕಾಗಿದ್ದ ತಾಯಿ ಅಲ್ಲಿರುವುದಿಲ್ಲ, ಆಕೆ ಕೊಂಡಕ್ಕೆ ನಡೆದಿದ್ದಾಳೆ ಎನ್ನುವ ಭಾವಾರ್ಥ. ಸತಿ ಹೋಗಲಿರುವ ಕಾಟವ್ವ ತನ್ನ ಕಂದನನ್ನು ಮುದ್ದಾಡಿ 'ಪುಲಿಕುಂಟೆ ಮೂರಾದೀಗೆ ಕೈಯ್ಯ ಮುಗುದಾಳೆ' ಕೈಮುಗಿದು ತನ್ನನ್ನೆ ಸಂತೈಸಿಕೊಳ್ಳುವ ಹವಣಿಕೆಯಲ್ಲಿದ್ದಾಳೆ. ಬಾಲ ಅಳದೀರೋ ಬಾಲಯ್ಯ ಅಳದೀರೋ ಎಂದು ಕಂದನನ್ನು ಮುದ್ದಾಡುತ್ತಾ 'ಇಂದೆ ನನಕಂದ ಅಗಲಿದೆ' ಎಂದು ರೋಧಿಸುತ್ತಾಳೆ. 'ಮಹಾಸತಿ ತಂಗ್ಯವ್ವ' ಹಾಡಿನಲ್ಲಿ ಕಂದನನ್ನು ವಿವಿಧ ರೀತಿಯಲ್ಲಿ ಶೃಂಗರಿಸಿ ನೋಡಬೇಕೆನ್ನುವ ತವಕ ಆದರೆ ಇನ್ನು ಮುಂದೆ ಒಟ್ಟಿಗೆ ಇರಲಾರದೆ ಅಗಲಬೇಕಾಗಿದೆ.

ಅಂಗಿವಲಸ್ಯಾಳು ಕಂದಮ್ಮಗಾಕ್ಯಾಳು
ಅತ್ತತ್ತ ವೋಗಿ ತಿರಿಗ್ಯಾಳು
ಅತ್ತತ್ತ ವೋಗಿ ತಿರಿಗ್ಯಾಳು । ಏನಂದಾಳು
ಕಂದಾಗ ನನಗು ರುಣವಿಲ್ಲ ॥

(ಮಹಾಸತಿ ತಂಗ್ಯವ್ವ, ಪುಟ ೨೯೧)

ಅಂಗಿ ಹೊಲಿಸಿ ಮಗುವಿಗೆ ತೊಡಿಸಿ 'ಮಹಾಸತಿ ತಂಗ್ಯವ್ವ ಸತಿಯಾಗಲು ಹೊರಡುವಾಗ ಅವಳು ಹೆಜ್ಜೆ ಅತ್ತದೆ ತಿರುತಿರುಗಿ ಕಂದನನ್ನು ನೋಡುತ್ತಾ ಹೋಗುತ್ತಾ ಕಂದಾಗ ನನಗು ರುಣವಿಲ್ಲ' ಎನ್ನುವ ಮಾತು ಹೃದಯ ವಿದ್ರಾವಕವಾದುದು.

'ಮಹಾಸತಿ ತಂಗ್ಯಮ್ಮ' ತನ್ನ ಕಂದನಿಗೆ 'ಇಟ್ಟಿಕ್ಕಿ' ಎಂದು ಕೇಳುವ ಪರಿ ಮನಕಲಕುವಂತಿದೆ. ಆಕೆಗೆ ತನ್ನ ಮಗು ಅನಾಥವಾಗುವುದೆಂಬ ಅಳಲು ಮುಂದೆ ಆ ಮಗುವಿಗೆ ತೊತ್ತಿನ ಮಗುವೆಂದು ಬೈದಾರು ಎಂಬ ಸಂಕಟವು ಅವಳನ್ನು ತೊಳಲಾಡುವಂತೆ ಮಾಡಿದೆ. 'ಇಟ್ಟಿಕ್ಕೀರಮ್ಮ ಬಟ್ಟೇಯ ಕೊಡಿರಮ್ಮ ತೊತ್ತೀನ ಮಗನೆಂದು ಬೈದೀರೆ' ಎಂದು

ತನ್ನವರನ್ನು ಅಂಗಲಾಚುತ್ತಾಳೆ. ಆದರೆ ಆ ಹೆಣ್ಣುಮಕ್ಕಳು 'ತೊತ್ತಿನ ಮಗನೆಂದು ಬೈದೆವು' ಎಂದು ಸ್ಪಷ್ಟವಾಗಿ ಅವಳಿಗೆ ಉತ್ತರ ಕೊಟ್ಟು ಬಿಡುತ್ತಾರೆ. ತಂಗ್ಯಮ್ಮ ತನ್ನ ಮಗುವಿಗೆ ಭವಿಷ್ಯ ಕರಾಳ ಎಂದು ತಿಳಿದೂ ಸತಿ ಹೋಗಿ ಬಿಡುತ್ತಾಳೆ. ಸತಿ ಹೋಗಲೇಬೇಕಾದ ಅನಿವಾರ್ಯತೆ ಅವಳನ್ನು ಇಕ್ಕಟ್ಟಿಗೆ ಸಿಲುಕಿಸುತ್ತದೆ. ಈ ಸ್ತ್ರೀಯರಿಗೆ ತಮ್ಮ ಕಂದಮ್ಮಗಳನ್ನೂ ಬಿಟ್ಟು ಸತಿ ಹೋಗಬೇಕಾದ ಪರಿಸ್ಥಿತಿ ಏನಿದ್ದಿರಬಹುದು.

ಪತಿಯಾದವನು ಸತ್ತ ಕೂಡಲೇ ಆತನ ಬೆನ್ನ ಹಿಂದೆಯೇ ಚಿತೆ ಏರಬೇಕಾದ ಸಂದರ್ಭದಲ್ಲಿ ಅಂತಹ ಸ್ತ್ರೀಯರಿಗೆ ಯಾವುದೇ ರೀತಿಯ ಪರ್ಯಾಯ ಮಾರ್ಗವಿರುತ್ತಿರಲಿಲ್ಲ. ಸತಿಪದ್ಧತಿಯನ್ನು ಧಿಕ್ಕರಿಸಿದ್ದೇ ಆದಲ್ಲಿ ಇಡೀ ಸಮುದಾಯದಿಂದ ಆಕೆ ಅವಹೇಳನಕ್ಕೆ ಗುರಿಯಾಗಬೇಕಾಗುತ್ತಿತ್ತು. ಕೆಲವು ಬಾರಿ ಸ್ತ್ರೀಯರು ಗಂಡಂದಿರರು ತೀರಿಕೊಂಡರೆ ಬೆಂಕಿಗೆ ಆಹುತಿಯಾಗಲು ನಿರಾಕರಿಸುತ್ತಿದ್ದಿರಬೇಕು. ಹಾಗೆಯೇ ತಪ್ಪಿಸಿಕೊಳ್ಳಲು ಯತ್ನಿಸಿರಬೇಕು. "ಚಿತ್ರದುರ್ಗ ಜಿಲ್ಲೆ ಹಿರಿಯೂರು ತಾಲ್ಲೂಕು ಯರಬಳ್ಳಿ ಗ್ರಾಮದ ಬಳಿ ಮಹಾಸತಿ ವೀರತಿಮ್ಮವ್ವನ ಕೊಂಡವಿದೆ. ಅದರ ಬಳಿಗೆ ಮತ್ತೊಂದು ಚಿಕ್ಕ ಜಗುಲಿ ಕೊಂಡವಿದೆ. ಅದು ತಪ್ಪಿಸಿಕೊಂಡು ಓಡುತ್ತಿದ್ದವಳನ್ನು ಹಿಡಿತಂದು ಬೆಂಕಿಗೆ ತಳ್ಳಿ ನಂತರ ಕಟ್ಟಿದ್ದು, ಆಕೆ ಪೂಜೆಯನ್ನು ತಿಮ್ಮವ್ವನಿಗೆ ಮಾತ್ರ ಪೂಜೆ ಎಂದು ಆಗ ತಿಳಿಸುತ್ತಾರೆ. ಮತ್ತೆ ಕೆಲವು ವಿಧವೆಯರು ದೂರದ ಪಟ್ಟಣಗಳ ಕಡೆ ಓಡಿ ನೆಲೆಸಿ ವೇಶ್ಯೆಯರಾಗಿ ಕಾಲ ಹಾಕುತ್ತಿದ್ದುದುಂಟು ಅಥವಾ ಶ್ರೀಮಂತರ ಮನೆಯ ಗೃಹಕೃತ್ಯಗಳನ್ನು ಮಾಡಿಕೊಂಡು ದಾಸಿಯಾಗಿ, ಅಕ್ಕಿ, ಅವಲಕ್ಕಿ ಕುಟ್ಟಿ ಮಾರುವವರಾಗಿ ಬದುಕು ಕಳೆಯುತ್ತಿದ್ದ ಸಂದರ್ಭವೂ ಇರುತ್ತಿತ್ತು. ಈ ತೆರನ ಒಂಟಿ ಬಾಳು ಬೇಸರವೆನಿಸಿ ಮತ್ತೆ ಸ್ವಂತ ಸ್ಥಳಕ್ಕೆ ವಾಪಸಾದರೆ ಅಪಮಾನ ಅವಮರ್ಯಾದೆಯಂತೂ ಕಾದಿಟ್ಟದ್ದೇ" (ಕೃಷ್ಣಮೂರ್ತಿ ಹನೂರು, ೧೯೮೧:೧೧)

ಈರೋಬಿಯ ಕಥನಗೀತೆಯಲ್ಲಿ ಇದೇ ರೀತಿಯ ಭಾವಾರ್ಥವಿದೆ. ಈರೋಬಿ ಅವಳ ಅತ್ತೆಗೆ ಹೇಳುವ ಮಾತಿದು - ಅತ್ಯಮ್ಮ ವಾರಾರಗಿತ್ತೀರು, ಆಡುಕಾಯ್ತು; ಅತ್ಯಮ್ಮ ಮೈದಯ್ಯ, ಮಾವದೀರು ನಗುತಾರೆ" ಎನ್ನುತ್ತಾಳೆ.

ನಿಂಗೇಗೌಡನೆನ್ನುವ ಚಿನ್ನದುಂಗುರ ಕಳಿಸಿ "ಈರೋಬಿ ಉಳಿದರೆ ತಾನು ಕೂಡಾವಳಿಯನ್ನು ಮಾಡಿಕೊಳ್ಳುವ ಆಸೆಯನ್ನು ತೋರಿಸುತ್ತಾನೆ. ಈರೋಬಿ ನಿರಾಕರಿಸಿ ಅವನ ಹೆಂಡಿರಿಗೂ ತನ್ನಂತದೆ ಸ್ಥಿತಿ ಬರಲಿ ಎನ್ನುವ ಹಾಗೆ ಶಾಪ ಹಾಕುತ್ತಾಳೆ. ಕೆಲವು ಜಾನಪದ ಗೀತೆಗಳಲ್ಲಿ ಒತ್ತಾಯದ ಸಹಗಮನ ನಡೆಯುತ್ತಿತ್ತು ಎನ್ನುವುದಕ್ಕೆ ಪರೋಕ್ಷ ಸೂಚನೆಗಳು ಸಿಗುತ್ತವೆ. ಕೊಂಡದ ಮಾಸ್ತ್ಯಮ್ಮ ಮಾಸ್ತಿ ಗೀತೆಯಲ್ಲಿಯ ಪದ್ಯಗಳನ್ನು ಗಮನಿಸಬಹುದು. ನೋಡಿ -

ಕದ್ದುವೋದಾಳೆಂದು ದಿಡ್ಡಿಬಾಗುಲಾಕುಸ್ತ
ಕದ್ದು ವೋಗೋರ ಮಗಳಲ್ಲ
ಕದ್ದು ವೋಗ್ರರ ಮಗಳಲ್ಲ ಕೊಡಲಿಗೌಡ
ದಿಡ್ಡಿ ಬಾಗ್ಲುಲ ತಗುಸಣ್ಣ ॥

ವೋಡಿವೋದಾಳೆಂದು ರಾಡಬಾಗುಲಾಕುಸ್ತ
ವೋಡಿವೋಗೋರಮಗಳಲ್ಲ
ವೋಡಿ ವೋಗೋರ ಮಗಳಲ್ಲ ಕೊಡಲಿಗೌಡ
ರಾಡಬಾಗುಲ ತಗುಸಣ್ಣ ॥

(ಕೊಂಡದ ಮಾಸ್ತ್ಯಮ್ಮ, ಪುಟ ೨೯)

ಸತಿಯಾಗುವವಳು ಕದ್ದು ಹೋಗಿ ಬಿಡುತ್ತಾಳೆ ಅಥವಾ ಓಡಿ ಹೋಗಬಹುದು ಎನ್ನುವ ಕಾರಣಕ್ಕೆ ದಿಡ್ಡಿ ಬಾಗಿಲನ್ನು ಹಾಕಿಸಿಬಿಡುತ್ತಿದ್ದ ಘಟನೆಗಳನ್ನು ಪದ್ಯಗಳು ವಿವರಿಸುತ್ತವೆ. ಒಟ್ಟಾರೆ ಸತಿಯಾಗಬೇಕಾದವಳ ಇಚ್ಛೆಗೆ ವಿರುದ್ಧವಾಗಿ ಆಕೆಯ ಸಮ್ಮತಿಯಿಲ್ಲದೆ ಈ ಘಟನೆಗಳು ನಡೆಯುತ್ತಿದ್ದವು ಎನ್ನುವುದು ಇದರಿಂದ ಸ್ಪಷ್ಟವಾಗುತ್ತದೆ. ಮಹಾಸತಿ ತಾಡಿನಾಗಮ್ಮ ಕಥನ ಗೀತೆಯಲ್ಲಿ ಕೊಂಡದ ಕೆನ್ನಾಲಿಗೆಯನ್ನು ಕಂಡು ಹೆದರುವ ದೃಶ್ಯವನ್ನು ವರ್ಣಿಸಲಾಗಿದೆ.

ಅಂಬಾರದುದ್ದಾಕ ಉರಿಯೆದ್ದೇಳುತಾವೆ.
ನಾನೆಂಗೋಗಾಗಲಿ ಸಿವಸಿವನೆ
ನಾನೆಂಗೋಗಾಲಿ ಸಿವಸಿವನೆ | ಏಸಿವನೆ
ರಾಯರ ಪ್ರಾಣವ ತಿರುವಯ್ಯ ॥

(ಮಹಾಸತಿ ತಾದಿನಾಗಮ್ಮ, ಪುಟ ೯೨)

ಆಕಾಶದುದ್ದಕ್ಕೂ ಕೆನ್ನಾಲಿಗೆಯನ್ನು ಚಾಚಿ ಉರಿಯುತ್ತಿರುವ ಬೆಂಕಿಯನ್ನು ಕಂಡು ಹೌಹಾರುತ್ತಾಳೆ. ಇಂತಹ ಭಯಂಕರ ಕಿಚ್ಚಿಗೆ ಹೇಗೆ ಹೊಗಲಿ? ಇಂಥ ಆತಂಕದ ಸ್ಥಿತಿಗೆ ಕಾರಣ ಗಂಡನ ಪ್ರಾಣವೆ. ಗಂಡ ಮರಳಿ ಬಂದಿದ್ದೇ ಆದರೆ ಬೆಂಕಿಗೆ ಆಹುತಿಯಾಗುವುದು ತಪ್ಪುತ್ತದೆ. 'ಏಸಿವನೆ' ಎಂದು ಶಿವನನ್ನು ಕೂಗಿ ಕರೆಯುವ ಆಕೆಯ ಅಂತರಾಳದ ತೀವ್ರ ಸಂಕಟದ ಪರಿಸ್ಥಿತಿಯನ್ನು ಅಭಿವ್ಯಕ್ತಿಸುತ್ತದೆ. 'ರಾಯರ ಪ್ರಾಣವನ್ನು ಮರಳಿಸು' ಎಂದು ಕೇಳಿಕೊಳ್ಳುತ್ತಾಳೆ. ಗಂಡ ಬದುಕಿ ಬಂದರೆ ಈ ಧಾರುಣಸ್ಥಿತಿಯಿಂದ ಪಾರಾಗಬಹುದು ಎನ್ನುವ ಹಂಬಲವಿಲ್ಲಿದೆ. ಆಕೆ ಮುಂದುವರಿದು ಬೇಡುವ ಇನ್ನೊಂದು ಪರಿ ನೋಡಿ -

ಬಾಚೀದ ಮಂಡೆ ಮ್ಯಾಲೆ ಬರಿಮಲ್ಲಿಗೆ ಹೂವು
ನೂಕದೀರೋ ಮಾವಯ್ಯ
ನೂಕದೀರೋ ಮಾವಯ್ಯ | ಎರಿಗೊರಡು
ನಿನಮಗ ಸೂಸುಕ ಮಾಸಿದರೆ ಬೈಯ್ಯೋನು ॥

ಸತಿ ಕೊಂಡ ಬೆಂಕಿಯನ್ನು ಕಂಡು ಹೆದರಿ ಓಡಿ ಹೋಗದಿರಲೆಂದು ಕೊಂಡದ ಸುತ್ತ ತೆರೆ ಕಟ್ಟಿಸುತ್ತಿದ್ದರು. ತನ್ನಲ್ಲೆ ಸ್ಥೈರಣೆಯನ್ನು ತಂದುಕೊಂಡು ಎಷ್ಟೇ ತಪ್ಪಿಸಿಕೊಂಡರೂ ಬಿಡದೆ ಎಳೆತರುವ ಹಾಗೆಯೇ ಹೀನಾಯ ಬದುಕನ್ನು ಬಾಳುವುದಕ್ಕಿಂತ ಕೊಂಡವನ್ನೆರುವುದೇ ಸರಿ ಎಂದು ನಿಶ್ಚಯಿಸಿರಬೇಕು. 'ಕಿಚ್ಚಿಗಂಜೋರ ಮಗಳಲ್ಲ ಅಚ್ಚಡದ ತೆರೆಯ ತಗುಸಯ್ಯ'

(ಮಹಾಸತಿ ಕಾಟವ್ವ, ಪುಟ ೧೧೨) ಎಂದು ಹೇಳುತ್ತಿದ್ದುದುಂಟು. ಕಿಚ್ಚಿನ ಕೊಂಡವನ್ನು ಕಂಡು ಹೆದರಿ ಹಿಮ್ಮೆಟ್ಟಿದರೆ ಅವಳಿಗದೇ ಭಂಗ, ಇಂಥ ಸಂದರ್ಭದಲ್ಲಿ ಸತಿಯಾದವಳು ಪ್ರಾಣ ಭಯಕ್ಕೆ ಅಂಜಿ ಓಡಿ ಹೋಗಬಾರದೆಂದು ಊರಿನ ದಿಡ್ಡಿಯ ಬಾಗಿಲುಗಳನ್ನು ಮುಚ್ಚಿಸುತ್ತಿದ್ದಂತೆ ವೀರದಿಮ್ಮವ್ವನ ಸಹಗಮನ ಕುರಿತ ಜನಪದ ಕಥನ ಕವನವೊಂದು ತಿಳಿಸುತ್ತದೆ. ಸಮಾಜ ತಮ್ಮನ್ನು ಹೇಗೆ ಬೆಂಕಿಯಲ್ಲಿ ನೂಕಿ ಬೇಯಿಸುತ್ತದೆ ಎಂಬ ವರ್ಣನೆಯನ್ನು ಮಾಸ್ತಿಗೀತೆ ತಿಳಿಸುತ್ತದೆ.

ಅಂಗಾಲು ಉರುದಾವೆ ಅಂಗೈ ಉರುದಾವೆ
ಉಂಗುರದ ಬೆಟ್ಟು ಉರುದಾವೆ
ಉಂಗುರದ ಬೆಟ್ಟು ಉರುದಾವೇ ನಾಗಮ್ಮಾನ
ಸಂಗಾತಿರಿಂದಾಕ ತಿರುವ್ಯಾರೆ

(ಮಹಾಸತಿ ತಾಡಿನಾಗಮ್ಮ, ಪುಟ ೯೩)

ಕೊಂಡಕ್ಕೆ ಬೀಳುವ ಮಾಸ್ತಿಯ ಮನಸ್ಸಿನ ತುಮುಲ ದುಃಖಗಳನ್ನು, ಭಾವನೆಗಳನ್ನು ಕೆಲವು ಮಾಸ್ತಿ ಗೀತೆಗಳು ಚೆನ್ನಾಗಿ ವರ್ಣಿಸುತ್ತವೆ. ಕೆಲವು ಪದ್ಯಗಳು, ಕೇವಲ ಮಾಸ್ತಿಯ ಮನಸ್ಸಿನ ಭಾವಗಳೆಂದು ಮೇಲ್ನೋಟಕ್ಕೆ ತೋರಿದರೂ ಇವುಗಳು ಆಕಾಲದ ಎಲ್ಲ ಹೆಣ್ಣುಗಳ ಆತಂಕ ಮನಸ್ಸನ್ನೇ ಸಂಕೇತಿಸುತ್ತಿರಬಹುದು. ಕೆಲವು ಪದ್ಯಗಳು ಸಂಪ್ರದಾಯಸ್ಥ ಕುಟುಂಬದ ಸ್ವರೂಪದ ಕೆಲವು ವಿವರಗಳನ್ನು ಸ್ಪಷ್ಟವಾಗಿ ಕೊಡುತ್ತವೆ. ಅತ್ತೆ ನಾದುನಿಯರು ತನ್ನ ಮೇಲೆ ತೋರುತ್ತಿದ್ದ ದ್ವೇಷ, ಅಸೂಯೆಗಳನ್ನು ಎತ್ತಿ ಹೇಳಿ ಅವುಗಳನ್ನು ಕೊನೆಗಾಣಿಸಲು ಹೇಳುವ ಭಾಗಗಳು ಸುಮಾರು ಎಲ್ಲ ಮಾಸ್ತಿ ಗೀತೆಗಳಲ್ಲೂ ಬರುತ್ತವೆ. ಒಂದು ಮಾಸ್ತಿಗೀತೆಯಂತೂ ಇದನ್ನು ವ್ಯಂಗ್ಯವಾಗಿ ಹೇಳುತ್ತ ಅತ್ಯಂತ ಪರಿಣಾಮಕಾರಿಯಾಗಿ ಈ ದ್ವೇಷ ಅಸೂಯೆಗಳನ್ನು ವಿವರಿಸುತ್ತದೆ. 'ಮಾಸ್ತಮ್ಮನಿಗೆ ಅವಳ ಓರಗಿತ್ತೀರು ಎಷ್ಟು ಅಸೂಯೆಯಿಂದ ಕಾಣುತ್ತಿದ್ದರೆಂದರೆ, ಗಂಜಿಯನ್ನು ಕೊಡಿಸಿ ಊಟಕ್ಕಿಡುವಾಗ ಇವಳಿಗೆ ಸ್ವಲ್ಪವೂ ಕೊಡುತ್ತಿರಲಿಲ್ಲವಂತೆ. ಹಾಲು ಅನ್ನ ಮಾಡಿದಾಗ ಅದನ್ನು ಇವಳಿಗೆ ಮುಟ್ಟಿಸಿ ಕೂಡ ಕೊಡಲಿಲ್ಲವಂತೆ. ಆದರೆ ಅವಳೇ ಈಗ ಕಿಚ್ಚಿನಲ್ಲಿ ಬಿದ್ದು ಉರಿಯುತ್ತಿರುವಾಗ, ಹಾಲು ಅನ್ನವನ್ನು ಬೆಂಕಿಗೆ ಸುರಿಯುತ್ತಿದ್ದಾರೆ' ಎಂದು ಪದ್ಯ ವ್ಯಂಗ್ಯವಾಗಿ ವರ್ಣಿಸುತ್ತದೆ (ಬಸವರಾಜ ಕಲ್ಗುಡಿ, ೧೯೮೫ : ೮೩). ಕಾಟವ್ವನ ಪದ್ಯವೊಂದು ಕಾಟವ್ವ ಸಂಪೂರ್ಣವಾಗಿ ಉರಿದು ಹೋದ ಚಿತ್ರವನ್ನು ಕಣ್ಣ ಮುಂದಿಡಿತ್ತಿದೆ ನೋಡಿ -

ಕಣ್ಣಾಗ ಸೆದೆಬಿದ್ದು ಎಣ್ಯಾಕ ನೊಣಬಿದ್ದು
ಸಣ್ಣ ಸೀರ್‍ಯಾಕ ಕಿಡಿಬಿದ್ದು
ಸಣ್ಣ ಸೀರ್‍ಯಾಕ ಕಿಡಿಬಿದ್ದು | ಕಾಟಮ್ಮಾನ
ಎಣೆಗಂಟಿಂದೇ ಉರುದಾವು ||

(ಮಹಾಸತಿ ಕಾಟವ್ವ, ಪುಟ ೧೧೪)

ಕೊಂಡಕ್ಕೆ ಬಿದ್ದ ಸ್ತ್ರೀ ಅದರಿಂದ ಮೇಲೇಳಲು ಆಗದೆ ನಲುಗಿ ಹೋಗುತ್ತಾಳೆ. 'ನಾಗವ್ವನ ಹೆಣಗಂಟು ನಲುಗಿ ಉರಿದೊದೆ' ಎನ್ನುವ ಮಾತಿನಲ್ಲಿ ಕೊಂಡದಲ್ಲಿ ಬಿದ್ದು ದಹಿಸಿ ಹೋದಳು. ಹಾಗೆಯೇ ಹೋಗಬೇಕಾದ ಅನಿವಾರ್ಯತೆಯನ್ನು ಬಿಡಿಸಿಡುತ್ತದೆ.

ಮಾಸ್ತಿಯ ಸಂಕಟದ ಸ್ಥಿತಿಯನ್ನು ಜನಪದ ಕಥನ ಗೀತೆಗಳು ದಾಖಲಿಸಿವೆ. ಸತಿಯ ಬದುಕಿನ ಹಿನ್ನೆಲೆ ಮುನ್ನಲೆಗಳನ್ನೆಲ್ಲ ನಿರೂಪಿಸುತ್ತ ಆಕೆ ತಲುಪಿದ ಸ್ಥಿತಿಯನ್ನು ವಿವರಿಸಿವೆ. ಸತಿಗೆ ಸಂಬಂಧಿಸಿದ ಗೀತೆಗಳನ್ನೆಲ್ಲ ಹಾಡುವವರು ಹೆಂಗಸರೇ ಆಗಿದ್ದಾರೆ ಎಂಬುದು ಗಮನಿಸತಕ್ಕ ಅಂಶವಾಗಿದೆ. ಸಮಾಜದಲ್ಲಿ ಮಾಸ್ತಿಯನ್ನು ಹೇಗೆ ಬೆಂಕಿಗೆ ನೂಕಿ ದಹಿಸಲಾಗುತ್ತದೆ ಎನ್ನುವುದನ್ನು ದುಃಖದಿಂದ ಹಾಡುತ್ತಾರೆ. ಹೋರಾಟದ ಸಲುವಾಗಿ ಗಂಡನಾದವನು ಮಡಿದಾಗ ಅವನ ಹಿಂದೆ ಕೊಂಡಕ್ಕೆ ಬಿದ್ದು ಜೀವ ಕಳೆದುಕೊಳ್ಳಬೇಕಾಗಿ ಬರುವ ವಿವರ, ಮೇಲುನೋಟಕ್ಕೆ ಮಾಸ್ತಿ ಸ್ವಸಂತೋಷದಿಂದ ಗಂಡನ ಜೊತೆ ಚಿತೆಯೇರುತ್ತಾಳೆ ಎನ್ನುವ ಅಂಶವನ್ನೆ ಇಲ್ಲಿ ಅಲ್ಲಗಳೆಯುವ ಮಾಸ್ತಿಯ ಒಳತೋಟಿಯೊಂದು ವ್ಯಕ್ತವಾಗುತ್ತದೆ. ಇದು ಅವರ ಪ್ರತಿಭಟನೆಯ ದ್ಯೋತಕವೂ ಆಗಿರಬಹುದು. ಚರಿತ್ರೆಯಲ್ಲಿ ಅಡಗಿರುವ ವಿಶಿಷ್ಟ ಮಹಿಳಾ ಶೋಷಣೆಯ ಅಂಶಗಳಾಗಿ ಮಾಸ್ತಿ ಕಥನಗೀತೆಗಳು ಗಮನ ಸೆಳೆಯುತ್ತವೆ.

**ಪರಾಮರ್ಶನ ಗ್ರಂಥಗಳು**


೧. ಈರೋಬಿ, ೧೯೬೮, (ಸಂ) ಪರಮಶಿವಯ್ಯ ಜಿ.ಶಂ., ಜಾನಪದ ಖಂಡಕಾವ್ಯಗಳು, ಶಾರದಾ ಮಂದಿರ, ಮೈಸೂರು.

೨. ಕೊಂಡದ ಮಾಸ್ತ್ಯಮ್ಮ ೧೯೮೫, ಬಸವರಾಜ ಕಲ್ಗುಡಿ, ಮಹಾಸತಿ ಆಚರಣೆ ಒಂದು ಅಧ್ಯಯನ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೩. ಮಹಾಸತಿ ತಂಗ್ಯಮ್ಮ, ೧೯೮೫, ಬಸವರಾಜ ಕಲ್ಗುಡಿ, ಮಹಾಸತಿ ಆಚರಣೆ ಒಂದು ಅಧ್ಯಯನ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೪. ಮಹಾಸತಿ ಕಾಟವ್ವ, ೧೯೮೧, (ಸಂ) ಕೃಷ್ಣಮೂರ್ತಿ ಹನೂರು, ಕತ್ತಾಲ ದಾರಿ ದೂರ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೫. ಮಹಾಸತಿ ತಾಡಿನಾಗಮ್ಮ, ೧೯೮೧, (ಸಂ) ಕೃಷ್ಣಮೂರ್ತಿ ಹನೂರು, ಕತ್ತಾಲ ದಾರಿ ದೂರ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೬. ಮಹಾಸತಿ ವೀರತಿಮ್ಮವ್ವ, ೧೯೮೧, (ಸಂ) ಕೃಷ್ಣಮೂರ್ತಿ ಹನೂರು, ಕತ್ತಾಲ ದಾರಿ ದೂರ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೭. ವಡ್ಡಗೆರೆ ನಾಗಮ್ಮ, ೧೯೭೩, (ಸಂ) ಕಾಳೇಗೌಡ ನಾಗವಾರ, ಬಯಲುಸೀಮೆ ಲಾವಣಿಗಳು, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

# ಸ್ತ್ರೀವಾದ ಎಂದರೆ ಏನು?

ತೆಲುಗು ಮೂಲ : ವಸಂತಾ ಕನ್ನಾಭಿರಾನ್

ಅನುವಾದ : ಬಿ. ಸುಜ್ಞಾನಮೂರ್ತಿ

ಸ್ತ್ರೀವಾದ ಎಂದರೆ ಏನು? ಅದರಿಂದ ನಾವು ಏನನ್ನು ಆಶಿಸುತ್ತೇವೆ? ಆ ಮೂಲಕ ಸ್ತ್ರೀವಾದದ ವ್ಯಾಖ್ಯಾನವನ್ನು ತಿಳಿದುಕೊಳ್ಳಲು ಸಾಧ್ಯವೆ? ಆತ್ಮವಿಶ್ವಾಸಕ್ಕಾಗಿ ಸ್ತ್ರೀವಾದವನ್ನು ಹುಡುಕುತ್ತಿದ್ದೇವೆಯೇ? ಅಥವಾ ಸ್ತ್ರೀ ವಿಮೋಚನಾ ಚಳುವಳಿಯ ಸಿದ್ಧಾಂತವನ್ನು ಕುರಿತು, ಅದರ ದೃಷ್ಟಿಕೋನವನ್ನು ಕುರಿತು ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದೇವೆಯೆ?

ಬಹಳ ಮಹಿಳೆಯರು ತಮ್ಮ ಉಪನ್ಯಾಸವನ್ನು ಮಹಿಳೆಯರ ವಿಷಯಗಳ ಬಗೆಗೆ, ಸಮಸ್ಯೆಗಳ ಬಗೆಗೆ ಮಾತಾಡುವ ಮುನ್ನ "ನಾನು ಸ್ತ್ರೀವಾದಿ ಅಲ್ಲ" ಎಂದು ಪ್ರಾರಂಭಿಸುತ್ತಾರೆ. ಇದು ಹೀಗೇಕೆ? ಸ್ತ್ರೀವಾದಿ ಅಲ್ಲವೆಂದು ಹೇಳುವ ಮೂಲಕ ಅವರು ಅವಹೇಳನವನ್ನು ಸ್ತ್ರೀತ್ವವನ್ನು ಕಳೆದುಕೊಂಡ ವಿಕಾರವಾದ ತೀಕ್ಷ್ಣವಾದ ಭಯವನ್ನು ಹುಟ್ಟಿಸುವ ಜೀವಿಗಳು ನಾವಲ್ಲ ಎಂದು ಹೇಳುವುದರ ಮೂಲಕ ಅವರ ಪರಿಚಯವನ್ನು ಸ್ಥಿರಪಡಿಸಿಕೊಳ್ಳು ತ್ತಿದ್ದಾರೆಯೇ?

ಸ್ತ್ರೀವಾದಿ ಎಂದ ಕೂಡಲೇ ಪುರುಷದ್ವೇಷಿ ಎಂಬ ದೃಷ್ಟಿಕೋನದಿಂದ ತಮ್ಮನ್ನು ನೋಡುವುದರಿಂದ ಕೂಡ ಹೀಗೆ ಹೇಳುತ್ತಿರಬಹುದೆ? ಅಥವಾ ಇದು ಕುಟುಂಬ ವಿರೋಧಿ ಎಂದುಕೊಳ್ಳುವುದರಿಂದಲೇ? ಹಾಗಾಗಿ ಸ್ಥಿರವಾಗಿರುವ ಸಾಮಾಜಿಕ ವ್ಯವಸ್ಥೆಗೆ ತಾವು ಸವಾಲು ಹಾಕುವರೆಂದೇ?

ಸ್ತ್ರೀವಾದ ಪುರುಷಾಧಿಪತ್ಯಕ್ಕೆ ಒಂದು ಸವಾಲಾಗಿ ಕಂಡು ಬರುತ್ತದೆ. ಆದ್ದರಿಂದ ಸ್ತ್ರೀವಾದವು ನಿಜಕ್ಕೂ ಪುರುಷರ ಲೈಂಗಿಕತ್ವಕ್ಕೇ ಸವಾಲು ಎಂದುಕೊಳ್ಳುವುದರಿಂದ ಸ್ತ್ರೀವಾದಿಯೆಂದು ಹೇಳಿಕೊಳ್ಳುವುದರಿಂದ ಪುರುಷರು ನಮ್ಮನ್ನು ಗುರುತಿಸದೆ ಕಡೆಗಣಿಸು ವರೆಂದು ಭಾವಿಸಿ, ತಾವು ಸ್ತ್ರೀವಾದಿಯಲ್ಲವೆಂದು ಆರಂಭಿಸುತ್ತಾರೆಯೆ? ಪುರುಷ ಲೈಂಗಿಕತ್ವ ದರ್ಪ ಹಾಗೂ ದಬ್ಬಾಳಿಕೆಯೆಂಬ ಬೇರುಗಳಿಂದ ಹೂತುಕೊಂಡಿದೆಯಲ್ಲವೇ? ಒಂದು ವಿಧವಾದ ದುಃಖ ಉಂಟು ಮಾಡುತ್ತಿರುವ ಉದಾಹರಣೆ ನೆನಪಿಗೆ ಬರುತ್ತಿದೆ. ಸೆಂಟ್ರಲ್ ಯೂನಿವರ್ಸಿಟಿಯಲ್ಲಿ ಎಂ.ಲಿಬ್ ಓದುವ ಒಬ್ಬ ವಿದ್ಯಾರ್ಥಿನಿಯನ್ನು ಪ್ರಾಧ್ಯಾಪಕರು

ಅವಮಾನಿಸಿದಾಗ ಅವರ ಮೇಲೆ ದೂರು ಕೊಡಲು ಆಕೆ ಹೆದರಿ, ನಿರಾಕರಿಸಿದಳು. ಅವರ ಮೇಲೆ ದೂರುಕೊಟ್ಟು "ಆ ರೀತಿಯ ಹೆಣ್ಣಾಗಿ" ಗುರುತಿಸಿಕೊಳ್ಳಲು ಆಕೆಗಿಷ್ಟವಿಲ್ಲ. ಆ ರೀತಿಯ ಹೆಣ್ಣು ಎಂದರೆ ಯಾವ ರೀತಿಯ ಹೆಣ್ಣು?

ಪುರುಷನಿಗೆ ತನ್ನನ್ನು ಹಿಂಸಿಸಲು ಇರುವ ಹಕ್ಕು ಯಾವುದು ಎಂದು ಪ್ರಶ್ನಿಸುವ ಹೆಣ್ಣು. ಆಕೆ ಯಾವ ದೂರನ್ನೂ ಕೊಡದೆ ಹೊಂದಿಕೊಳ್ಳುತ್ತಾ ಅಥವಾ ಅಂತಹ ಪರಿಸ್ಥಿತಿಗಳು ಬರದಂತೆ ನೋಡಿಕೊಳ್ಳುತ್ತಾ ಜಾರಿಯಲ್ಲಿರುವ ವರ್ತನೆಗಳ ಬಗ್ಗೆ ಪ್ರಶ್ನಿಸದೇ ಮೌನವಾಗಿ ಸಹಿಸುವುದು ಒಳ್ಳೆಯದು. ಏಕೆಂದರೆ ಪ್ರಶ್ನಿಸುವುದು, ಎದುರಿಸುವುದು ಎಂದರೆ "ಆ ಬಗೆಯ ಹೆಣ್ಣು, ಆ ಬಗೆಯ ಸ್ತ್ರೀವಾದಿ". ಆಗಲೇ ನಮ್ಮ ಸ್ನೇಹಿತರು, ಕಾಮ್ರೇಡ್‌ಗಳು, ಸಹೋದ್ಯೋಗಿಗಳು ನಮ್ಮನ್ನು ಪ್ರೀತಿಸುತ್ತಾರೆ, ರಕ್ಷಿಸುತ್ತಾರೆ. ಮಹಿಳೆಯರು ನಮ್ಮನ್ನು ತಮ್ಮೊಳಗೆ ಸೇರಿಸಿಕೊಳ್ಳುತ್ತಾರೆ. ಆದರೆ ನಾವು ದೊಡ್ಡ ಗಂಟಲು ತೆಗೆದು ಮಾತನಾಡಿದರೆ ಸಂಪ್ರದಾಯವಾದಿ ಗಂಡಸರು ನಮ್ಮನ್ನು ಬೇರೆ ಮಾಡುತ್ತಾರೆ. ನಮ್ಮೊಡನೆ ಮಾತಾಡುವುದಿಲ್ಲ. ಅಸಹ್ಯದಿಂದ ನೋಡುತ್ತಾರೆ; ದೂರವಿಡುತ್ತಾರೆ.

ಇಂತಹ ಇಬ್ಬಂದಿ ಪರಿಸ್ಥಿತಿಯಲ್ಲಿ ನಮ್ಮ ಬಹಳ ಮಂದಿ ಮಹಿಳೆಯರು ತಾವು ಸ್ತ್ರೀವಾದಿಗಳಲ್ಲ ಎಂದು ಹೇಳಿಕೊಳ್ಳುವುದರಲ್ಲಿ ಆಶ್ಚರ್ಯವೇನಿದೆ? 'ಮಿತವಾದ ರಾಜಕೀಯದಲ್ಲೂ, ಅತಿಯಾದ ರಾಜಕೀಯದಲ್ಲೂ ಕೂಡ ಸ್ತ್ರೀವಾದ ಎಂಬುದು ಒಂದು ಬಯ್ಗುಳವಾಗಿಯೇ ಇದೆ.

ಮಿತ ವಾದಿಗಳಿಗೆ ಸ್ತ್ರೀವಾದವೆಂದರೆ ಸಾಂಪ್ರದಾಯಿಕ ಮೌಲ್ಯಗಳನ್ನು, ಜವಾಬ್ದಾರಿಗಳನ್ನು ತಿರಸ್ಕರಿಸುವುದು, ಎಷ್ಟೋ ಕಾಲದಿಂದ ಸ್ಥಿರವಾಗಿರುವ, ಮಾನ್ಯವಾಗಿರುವ ಸಾಮಾಜಿಕ ವ್ಯವಸ್ಥೆಯನ್ನು ತೀವ್ರವಾಗಿ ಪ್ರಶ್ನಿಸುವ ರೂಪವಾಗಿದೆ. ಎಡಪಂಥೀಯರಿಗೆ ಸ್ತ್ರೀವಾದವೆಂದರೆ ವ್ಯಕ್ತಿವಾದ. ಇದು ಸಮೂಹವಾದಕ್ಕೆ ವಿರುದ್ಧ. ಸ್ತ್ರೀವಾದವೆಂದರೆ ಬೂರ್ಜ್ವಾ ಪದ್ಧತಿಗಳು. ಮುಖ್ಯಕ್ರಾಂತಿಕಾರಿ ಹೋರಾಟವನ್ನು ಅಡ್ಡದಾರಿಗೆ ಎಳೆದು ಬಲಹೀನಗೊಳಿಸುವುದು. ಕಾರ್ಮಿಕ ವರ್ಗವನ್ನು ಛಿದ್ರಗೊಳಿಸುವುದು. ಅದೇನೇ ಆದರೂ ನಾವು ಸ್ತ್ರೀವಾದವನ್ನು ಹೇಗೆ ಅರ್ಥ ಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದೇವೆ?

ಒಂದು ಪ್ರಾಥಮಿಕವಾದ ವ್ಯಾಖ್ಯಾನದ ಪ್ರಕಾರ ಸ್ತ್ರೀವಾದಿ ಎಂದರೆ - ಮಹಿಳೆಯರು ತಮ್ಮನ್ನು ಲೈಂಗಿಕ ವಿವಕ್ಷತೆಯಿಂದ ನೋಡಲ್ಪಡುತ್ತಾರೆಂದು, ಮಹಿಳೆಯರು ಅವರಿಗಿರುವ ಪ್ರತ್ಯೇಕ ಅವಶ್ಯಕತೆಗಳಿಂದ ತಿರಸ್ಕರಿಸಲ್ಪಡುತ್ತಿದ್ದಾರೆಂದು, ಈಡೇರದ ಆ ಅವಶ್ಯಕತೆಗಳು ಈಡೇರಬೇಕೆಂದರೆ ಈಗಿರುವ ಸಾಮಾಜಿಕ, ಆರ್ಥಿಕ, ರಾಜಕೀಯ ವ್ಯವಸ್ಥೆಯಲ್ಲಿ ಮೌಲಿಕವಾದ ಬದಲಾವಣೆಗಳು ಆಗಬೇಕೆಂದೂ ಇಚ್ಛಿಸುವವರಾಗಿದ್ದಾರೆ. ಆದರೆ ಇಲ್ಲೊಂದು ಸಮಸ್ಯೆ ಇದೆ; ಸ್ತ್ರೀವಾದ ಎಂದರೆ ಮಹಿಳಾ ಸಂಬಂಧಿ ವಿಷಯಗಳನ್ನು ಗಮನಿಸುವುದಷ್ಟೇಯೇ?

ಸ್ತ್ರೀಯರ ಪ್ರಯೋಜನಗಳನ್ನು ಮುಂದಕ್ಕೆ ತೆಗೆದುಕೊಂಡು ಹೋಗುವುದರಲ್ಲಿ ಶ್ರದ್ಧೆಯನ್ನು ತೋರಿಸುವುದಷ್ಟೇಯೇ?

ಅಷ್ಟೇ ಆದರೆ ಆ ಬಗ್ಗೆ ಆಲೋಚಿಸುವವರೆಲ್ಲಾ ಅವರು ಗುರುತಿಸಿದರೂ ಗುರುತಿಸದೆ ಹೋದರೂ ಸ್ತ್ರೀವಾದಿಗಳೇ ಆಗುತ್ತಾರೆ.

ಬಡವರ ಬಗೆಗೆ ಆಲೋಚಿಸುವುದೇ ಸಮಾಜವಾದದ ಸಾರಾಂಶ ಎಂದುಕೊಂಡರೆ ಎಷ್ಟು ತಪ್ಪೋ ಮಹಿಳೆಯರ ಬಗೆಗೆ ಆಲೋಚಿಸುವದೇ ಸ್ತ್ರೀವಾದ ಎಂದುಕೊಳ್ಳುವುದೂ ಅಷ್ಟೇ ತಪ್ಪು.

ಸ್ತ್ರೀವಾದವನ್ನು ಮಹಿಳೆಯ ಬಗ್ಗೆ ಉದ್ದೇಶಿಸಲ್ಪಟ್ಟ ಕಾರ್ಯಕ್ರಮವಾಗಿ ಅರ್ಥ ಮಾಡಿಕೊಳ್ಳಬೇಕೆ? ಅಥವಾ ಮಹಿಳೆಯರನ್ನು ಗಮನಿಸಬಹುದಾದ ವಿಷಯವಾಗಿ ಗುರುತಿಸು ವುದನ್ನು ಮಾತ್ರ ಸ್ತ್ರೀವಾದ ಎಂದುಕೊಳ್ಳಬೇಕೆ?

ಗಾಂಧೀವಾದಿಗಳು ಕೂಡ "ನಿನ್ನ ಹೆಂಡತಿಯನ್ನು ಹೊಡೆಯಬೇಡ, ನಿನ್ನ ಹೆಂಡತಿಯನ್ನು ಸುಡಬೇಡ, ಸ್ತ್ರೀಯರನ್ನು ಭೋಗ ವಸ್ತುವಾಗಿ ನೋಡಬೇಡ, ಸ್ತ್ರೀಯರನ್ನು ಕೆಡಿಸಬೇಡ, ಹಿಂಸಿಸಬೇಡ" ಎಂದೇ ಹೇಳುತ್ತಿರುತ್ತಾರೆ. ಕೋಮುವಾದಿಗಳು (ಹಿಂದೂ, ಮುಸ್ಲಿಂ, ಕ್ರೈಸ್ತ) ಸ್ತ್ರೀಯರ ಪವಿತ್ರತೆಯನ್ನು, ಶೀಲವನ್ನು ಕಾಪಾಡಬೇಕೆಂದು, ಅವರನ್ನು ಗೌರವಿಸಬೇಕೆಂದು ಮಾತನಾಡುತ್ತಾರೆ.

ಸಾಮಾಜಿಕ ಸಂಬಂಧಗಳನ್ನು, ಮುಖ್ಯವಾಗಿ ಸ್ತ್ರೀಪುರುಷ ಸಂಬಂಧಗಳನ್ನು, ಕುಟುಂಬ ದಲ್ಲಿ ಚಾಲ್ತಿಯಲ್ಲಿರುವ ಅಧಿಕಾರವನ್ನು ಮೌಲಿಕವಾಗಿ ಪ್ರಶ್ನಿಸುವುದರಿಂದ ಸ್ತ್ರೀವಾದವನ್ನು ಈ ಧೋರಣೆಗಳಿಂದ ಭಿನ್ನವಾದುದ್ದೆಂದು ಗುರುತಿಸಬಹುದು. ಸ್ತ್ರೀವಾದವನ್ನು ಅದರ ವಿಶ್ಲೇಷಣೆಗಳಿಂದ, ವಿಮರ್ಶಾತ್ಮಕತೆಯಿಂದ ಬೇರೆ ಮಾಡುವುದೆಂದರೆ ಅದರ ಸಾರಾಂಶವನ್ನು ಹೋಗಲಾಡಿಸುವುದೇ.

ಆಗ ಸಾಮಾಜಿಕ ವಿಶ್ಲೇಷಣೆಯೊಂದಿಗೆ, ವಿಮರ್ಶೆಯೊಂದಿಗೆ ಸಂಬಂಧವಿಲ್ಲದೆ ಎಲ್ಲ ಸಮಾಜ ಸುಧಾರಣೆಗಳನ್ನು ಸ್ತ್ರೀವಾದವಾಗಿ ವರ್ಗೀಕರಿಸಬಹುದು.

ಸ್ತ್ರೀವಾದದ ಶಕ್ತಿ ಅದರ ವಿವೇಚನೆ ಮತ್ತು ಸಾಮಾಜಿಕ ವಿಶ್ಲೇಷಣೆಯನ್ನಾಧರಿಸಿದೆ. ಸ್ತ್ರೀವಾದಿ ಸಿದ್ಧಾಂತದ ಪ್ರಮುಖ ಚಿಂತನೆಗಳೆಲ್ಲವನ್ನು ಈ ಉಪನ್ಯಾಸದಲ್ಲಿ ಹೇಳುವುದು ಸರಳವಲ್ಲ.

ಸ್ತ್ರೀವಾದಿ ಚಿಂತನಾ ವಿಧಾನಕ್ಕೆ ಅತಿ ಮುಖ್ಯವಾದ ಭಾವನೆಗಳನ್ನು ಕುರಿತು ಹೇಳಲು ಪ್ರಯತ್ನಿಸುತ್ತೇನೆ. ಅಂತಹ ಅತಿಮುಖ್ಯವಾದ ವಿಷಯಗಳಲ್ಲಿ ಒಂದು ಲೈಂಗಿಕತೆಗೂ, ಲಿಂಗಕ್ಕೂ ನಡುವೆಯಿರುವ ವ್ಯತ್ಯಾಸ. ಇದನ್ನು ವಿವರಿಸಲು ಪ್ರಯತ್ನಿಸುತ್ತೇನೆ.

**ಲಿಂಗ (ಜಂಡರ್)**

ಸೆಕ್ಸ್ ಎನ್ನುವುದು ಶರೀರಕ್ಕೆ ಸಂಬಂಧಿಸಿದ್ದಾದ್ದರಿಂದ ನೈಸರ್ಗಿಕವಾದದ್ದು ಎಂದುಕೊಳ್ಳ ಬಹುದು. ಜಂಡರ್ ಎಂಬುದು ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಏರ್ಪಡುತ್ತದೆ. ನಾವು ಗಂಡಾಗಿಯೋ, ಹೆಣ್ಣಾಗಿಯೋ ಹುಟ್ಟಬಹುದು. ಆದರೆ ನಾವು ಸಾಮಾಜಿಕವಾಗಿ ಮಹಿಳೆಯ ರಾಗಿ, ಪುರುಷರಾಗಿ ಗುರುತಿಸಲ್ಪಡುತ್ತಿದ್ದೇವೆ. ಉದಾಹರಣೆಗೆ ಶಾರೀರಿಕವಾಗಿ ಹೆಣ್ಣೆಂದರೆ

ಮಕ್ಕಳನ್ನು ಹೆರುವವಳು, ಆ ಮಕ್ಕಳಿಗೆ ಸ್ವಲ್ಪ ಕಾಲ ಹಾಲು ಕೊಡುವವಳು. ಆದರೆ ಸಂತಾನೋತ್ಪತ್ತಿಯೆಂಬ ಈ ಶಾರೀರಿಕ ವಿಷಯದಿಂದ ನಮ್ಮ ಮಾತೃಪ್ರೇಮ, ರಕ್ಷಣೆ, ಕೋಮಲತೆ, ದಯೆ, ವಿತರಣೆ, ಸ್ವಾರ್ಥ, ತ್ಯಾಗ ಎಂಬ ಸ್ತ್ರೀ ಪರಿಕಲ್ಪನೆಗಳಿಗೆ ಹೋಗುತ್ತೇವೆ. ಇವೆಲ್ಲ ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಸ್ತ್ರೀ ಲಕ್ಷಣಗಳಾಗಿ ಗುರುತಿಸಲ್ಪಟ್ಟಿವೆ.

ತಾಯ್ತನವನ್ನು ಕುರಿತ ಈ ಅಭಿಪ್ರಾಯಗಳು ಕೂಡಾ ಸಮಾಜದಿಂದ ಸಮಾಜಕ್ಕೆ ಎಷ್ಟೋ ಬದಲಾಗುತ್ತಿರುತ್ತವೆ. ಚಾರಿತ್ರಿಕ ಕ್ರಮದಲ್ಲಿ ಬದಲಾಗುತ್ತಿರುವ ಸಮಾಜದ ಅಗತ್ಯಗಳಿಗುಣವಾಗಿ ಈ ಅಭಿಪ್ರಾಯಗಳು ಕೂಡ ಬದಲಾಗುತ್ತಿರುತ್ತವೆ.

ಎಂದಿಗೂ ಬದಲಾವಣೆಯಿಲ್ಲದೆ ನಿಂತು ಹೋಗುವ ಮೌಲ್ಯವಾಗಿ ಹೇಳಲ್ಪಡುವ ತಾಯ್ತನ ಕೂಡ ನಿಜಕ್ಕೂ ಪರಿಕಲ್ಪನೆಯಿಂದ ಹುಟ್ಟಿ ಯಾವಾಗಲೂ ಬದಲಾವಣೆಗೆ ಗುರಿಯಾಗುತ್ತಾ ಇರುವುದೇ. ಶಾರೀರಿಕ ವಿಷಯವಾದ ಸಂತಾನೋತ್ಪತ್ತಿಗೂ ತಾಯ್ತನಕ್ಕೂ ನಡುವೆ ಇರುವ ವ್ಯತ್ಯಾಸವನ್ನು ಗುರುತಿಸುವುದು ಸ್ತ್ರೀವಾದಿ ಚಿಂತಕರ ವಿಶ್ಲೇಷಣೆಯಲ್ಲಿ ಒಂದು ಮುನ್ನಡೆಯಾಗಿದೆ. ತಾಯ್ತನವನ್ನು ಸಹಜವಾಗಿ ತೆಗೆದುಕೊಳ್ಳುವುದರಿಂದ (ಗರ್ಭಧಾರಣೆ, ಹಾಲೂಡಿಸುವುದು- ಇವುಗಳನ್ನು ಗಮನಿಸಿ ಅದು ಸಹಜವೆಂದುಕೊಳ್ಳುವರು.) ಕುಟುಂಬ ವ್ಯವಸ್ಥೆಯಲ್ಲಿ, ಸ್ತ್ರೀಪುರುಷರ ನಡುವಿನ ಸಂಬಂಧಗಳಲ್ಲಿ, ಕುಟುಂಬದೊಳಗೂ, ಹೊರಗೂ ಇರುವ ಲೈಂಗಿಕ ಶ್ರಮವಿಭಜನೆಯಲ್ಲಿ ತಾಯ್ತನಕ್ಕಿರುವ ಪ್ರಾಧಾನ್ಯತೆಯನ್ನು ಕುರಿತು ಬಹಳ ವಿರಳವಾಗಿ ವಿಶ್ಲೇಷಣೆ ನಡೆಯುತ್ತದೆ. ಒಂದು ಮಾತಿನಲ್ಲಿ ಹೇಳಬೇಕೆಂದರೆ ತಾಯ್ತನವೆಂಬ ಪರಿಕಲ್ಪನೆ ಹೆಂಗಸರ ಮೇಲೆ ಎಂತಹ ಆರ್ಥಿಕ, ರಾಜಕೀಯ ಪರಿಕಲ್ಪನೆಯ ಪ್ರಭಾವವನ್ನು ತೋರುವುದೋ, ವಿಶ್ಲೇಷಣೆ ಬಹಳ ವಿರಳವಾಗಿ ನಡೆಯುತ್ತದೆ.

ಗೈಲ್ ರೂಬಿನ್ ಎಂಬ ಮಾನವಶಾಸ್ತ್ರಜ್ಞ ಪ್ರತಿ ಸಮಾಜದಲ್ಲೂ ಉತ್ಪಾದನಾ ವಿಧಾನದೊಡನೆ ಸೆಕ್ಸ್-ಜಂಡರ್ ವಿಧಾನ ಕೂಡ ಇರುತ್ತದೆಯೆಂದೂ, ಅದು ಸೆಕ್ಸಿಗೆ, ಜಂಡರ್‌ಗೆ, ಮಕ್ಕಳಿಗೆ ಸಂಬಂಧಿಸಿದ ವಿಷಯಗಳನ್ನು ನಿಯಂತ್ರಿಸುತ್ತದೆಂದೂ ಹೇಳಿದ್ದಾರೆ. ಈ ಸೆಕ್ಸ್ ಜಂಡರ್ ವಿಧಾನವೆಂಬುದು ಸಮಾಜಕ್ಕೆ ಪ್ರಾಥಮಿಕ ನಿರ್ಣಯಾತ್ಮಕವಾದ ರಚನಾ ಸ್ವರೂಪವನ್ನು ಕೊಡುವ ಬೇರ್ಪಡಿಸಲಾಗದ ಭಾಗ.

ಪ್ರಸ್ತುತ ಬಂಡವಾಳಶಾಹಿ ಸಮಾಜದಲ್ಲಿ ಉತ್ಪಾದನಾ ವ್ಯವಸ್ಥೆಗೆ ಸೆಕ್ಸ್, ಜಂಡರ್ ಪದ್ಧತಿಗಿರುವ ವ್ಯತ್ಯಾಸವನ್ನು ಸರಳವಾಗಿ ನೋಡಬಹುದು. ಅಂದರೆ ಅವು ರಚನಾತ್ಮಕವಾಗಿ ಒಂದರೊಡನೊಂದು ಬೆರೆತಿಲ್ಲವೆಂದಲ್ಲ. ಅವು ಬಿಡಿಸಲಾಗದಂತೆ ಒಂದರೊಡನೊಂದು ಬೆರೆತಿವೆ. ತಾಯ್ತನವೆನ್ನುವುದು ಸೆಕ್ಸ್-ಜಂಡರ್ ವ್ಯವಸ್ಥೆಯನ್ನು ಉತ್ಪಾದನಾ ವ್ಯವಸ್ಥೆಯೊಂದಿಗೆ ಬೆರಸುವ ಪ್ರಧಾನವಾದ ರಚನಾ ಸ್ವರೂಪ.

ಎಲ್ಲ ಸಮಾಜಗಳಲ್ಲೂ ತಾಯ್ತನ, ಉತ್ಪಾದನಾ ವ್ಯವಸ್ಥೆ ಒಂದರೊಡನೊಂದು ನಿರ್ಧರಿಸಿಕೊಳ್ಳುವ ಸಂಬಂಧ(ದಲ್ಲಿ) ಇರುವುದನ್ನು ನಾವು ನೋಡಬಹುದು. ಆದರೆ ಹೆಂಗಸರು ಮಾಡುವ ಕೆಲಸ, ಅನಿವಾರ್ಯವಾಗಿ ಅವರು ಮಕ್ಕಳನ್ನು ನೋಡಿಕೊಳ್ಳುವ

ರೀತಿಯಲ್ಲಿ ರೂಪಿಸಲ್ಪಟ್ಟಿರುತ್ತದೆ. ಹಾಗೆಯೇ ಮಕ್ಕಳನ್ನು ಹೆರುವುದು, ಎಷ್ಟು ಮಕ್ಕಳನ್ನು ಹೆರಬೇಕು ಎಂಬ ವಿಷಯಗಳು ಮತ್ತೆ ಹೆಂಗಸರು ಕೆಲಸ ಮಾಡಲು ಅವಕಾಶವಿರುವಂತೆ ವ್ಯವಸ್ಥೆ ಮಾಡಲ್ಪಡುತ್ತವೆ. ಇದು ಇನ್ನೊಂದು ಮುಖ್ಯವಾದ ವಿಷಯಕ್ಕೆ ದಾರಿ ಮಾಡಿ ಕೊಡುತ್ತದೆ. ಅದೇನೆಂದರೆ ಚಾರಿತ್ರಿಕವಾಗಿ ಅನೇಕ ಸಂಸ್ಕೃತಿಗಳಲ್ಲಿ ಮಹಿಳೆಯರ ತಾಯ್ತನಕ್ಕೆ ಸಾಮಾಜಿಕ ವ್ಯವಸ್ಥೆಯನ್ನು ಎರಡು ಭಾಗಗಳಾಗಿ ನಿರ್ಣಯಿಸುವುದರಲ್ಲಿ ಒಂದು ಪಾತ್ರವಿದೆ. ಈ ವಿಭಾಗವೇ ಎಲ್ಲ ಸಮಾಜಗಳಲ್ಲೂ ಪ್ರಧಾನವಾಗಿ ಹೆಂಗಸರಿಗೆ ಸೇರಿದ ಮನೆ ಅಥವಾ ಖಾಸಗಿ ವಲಯ ಗಂಡಸರಿಗೆ ಸೇರಿದ ಸಾರ್ವಜನಿಕ ವಲಯವಾಗಿ ರಚನಾತ್ಮಕ ವಿಭಜನೆಗೆ ದಾರಿಯಾಗಿದೆ.

ಖಾಸಗಿ ಪ್ರಪಂಚ ಅಂದರೆ ಕುಟುಂಬ. ಇದು ತಾಯಿ ಮಕ್ಕಳ ಸುತ್ತ ನಿರ್ಮಾಣವಾಗುತ್ತದೆ. ಕುಟುಂಬದಲ್ಲಿನ ಸಂಬಂಧಗಳು ಸಹಜವಾದುವೆಂದು, ರಕ್ತ ಸಂಬಂಧಗಳೆಂದು ಅಂದು ಕೊಳ್ಳುತ್ತಾರೆ. ಇದಕ್ಕೆ ವಿರುದ್ಧವಾಗಿ ಸಾರ್ವಜನಿಕ ವಲಯವೆಂದರೆ ಕುಟುಂಬವಲ್ಲದ್ದು, ಮನೆಗಿಂತಲೂ ಪ್ರತ್ಯೇಕವಾದುದು.

ಸಾರ್ವಜನಿಕ ಸಂಸ್ಥೆಗಳು, ಆ ಕಾರ್ಯಕ್ರಮಗಳು ಕೆಲವು ಪರಿಮಿತಿಗಳಲ್ಲಿ ಅರ್ಥೈಸಲ್ಪಡುತ್ತವೆ, ರೂಪಿಸಲ್ಪಡುತ್ತವೆ. ಆ ಪರಿಮಿತಿಗಳಲ್ಲಿ ಅವುಗಳಲ್ಲಿ ಭಾಗವಹಿಸುವವರ ಪ್ರತ್ಯೇಕ ಸಂಬಂಧಗಳಿಗೆ ಎಂತಹ ಪಾತ್ರವೂ ಇಲ್ಲ. (ಕುಟುಂಬದಲ್ಲಿದ್ದಂತೆ) ಆಗ ಸಾರ್ವಜನಿಕ ವಲಯ 'ಸಮಾಜ', 'ಸಂಸ್ಕೃತಿ' ಎಂಬ ರೂಪವನ್ನು ಧರಿಸುತ್ತದೆ. ಇವು ಒಂದು ವಿಶೇಷ ಅರ್ಥದಲ್ಲಿ ರೂಪುಗೊಂಡ ಪದಗಳು (ಹೆಸರುಗಳು). (ಸಹಜವಾದ-ಶಾರೀರಿಕವಾದವಲ್ಲ. ಅವುಗಳಿಗೆ ವಿರುದ್ಧವಾದವು) ಆ ಪದಗಳು ಮಾನವ ಜನಾಂಗವನ್ನು ಪ್ರಕೃತಿಯಿಂದ, ಜೀವಶಾಸ್ತ್ರದಿಂದ ಮುಂದಕ್ಕೆ ತೆಗೆದುಕೊಂಡು ಹೋಗುತ್ತವೆ. ಸಾರ್ವಜನಿಕ ವಲಯ ಎಂದರೆ ಸಮಾಜ ಗಂಡಸರಿಗೆ ಸಂಬಂಧಿಸಿದ್ದು. ಕುಟುಂಬ, ಸ್ತ್ರೀಯರು ಸಹಜವಾದ ಒಳ್ಳೆಯ ವಿಷಯಗಳನ್ನು ಅಳವಡಿಸಿಕೊಂಡರೆ ಸಮಾಜ (ಯಾವುದರಿಂದ ಕುಟುಂಬವನ್ನು ಬೇರೆ ಮಾಡಿರುವುವೋ ಅದು) ಮಾಮೂಲಿ, ಸಹಜವಾದ ಎಂದರೆ ಪಶುಪ್ರಾಯವಾದ ನೆಲೆಯಿಂದ ಮಾನವಜಾತಿಯನ್ನು ಮುಂದಕ್ಕೆ ತೆಗೆದುಕೊಂಡು ಹೋಗುತ್ತದೆ. ಅಭಿವೃದ್ಧಿಯನ್ನು ನಾಗರಿಕತೆಯನ್ನು ಅದು ಸೂಚಿಸುತ್ತದೆ.

ಈ ಸಾರ್ವಜನಿಕ, ಖಾಸಗಿ ಎಂಬ ವಿಭಜನೆ ಔದ್ಯೋಗಿಕ ಬಂಡವಾಳಶಾಹಿ ಸ್ಥಿತಿಗಾಗಿ ಆರಂಭವಾಗಿ ಪೂರ್ತಿಯಾಗಿ ತಾಯ್ತನದ ಮೇಲೆ ಆಧಾರಪಡುವ ಕುಟುಂಬ ರೂಪವನ್ನು ತಯಾರು ಮಾಡಿದೆ.

ಬಂಡವಾಳಶಾಹಿ ಸಮಾಜಕ್ಕೆ ಮೊದಲು, ಅದರ ಆರಂಭಿಕ ಸ್ಥಿತಿಯಲ್ಲೂ ಮನೆಯೇ ಪ್ರಧಾನ ಉತ್ಪಾದನಾ ಕೇಂದ್ರ. ಮನೆಗೆ ಬೇಕಾದ ಉತ್ಪಾದನೆ ಮನೆಯಲ್ಲಿ ನಡೆಯುತ್ತಿತ್ತು ಅಥವಾ ಮನೆಯೊಂದಿಗೆ ಸಂಬಂಧವನ್ನಾದರೂ ಹೊಂದಿರುತ್ತಿತ್ತು. ಮನೆಯಲ್ಲಿ ಗಂಡು, ಹೆಣ್ಣು ಮಕ್ಕಳು, ವೃದ್ಧರು ಎಲ್ಲರಿಗೂ ಅವರವರ ಕೆಲಸಗಳು, ಸ್ಥಾನಮಾನ ಇರುತ್ತಿತ್ತು.

ಬಂಡವಾಳಶಾಹಿ ವ್ಯವಸ್ಥೆ ಬೆಳೆದಂತೆಲ್ಲಾ ಮನೆ, ಕೆಲಸ ಮಾಡುವ ಸ್ಥಳ ಬೇರೆಯಾದವು. ಹೊರಗೆ ನಡೆಯುವ ಉತ್ಪಾದನೆ ಹೆಚ್ಚಾಗಿ, ಮನೆಯಲ್ಲಿ ನಡೆಯುವ ಉತ್ಪಾದನೆ ಬಿದ್ದು ಹೋಯಿತು. ಉತ್ಪಾದನೆಯಲ್ಲಿ ಮನೆಯ ಪಾತ್ರ ಕಡಿಮೆಯಾಗುವುದರೊಂದಿಗೆ ಕುಟುಂಬದಲ್ಲಿ ನಡೆಯುವ ಶಿಕ್ಷಣ, ಧರ್ಮ, ರಾಜಕೀಯ ಕಾರ್ಯಕ್ರಮಗಳು ಕೂಡ ನಡೆಯದಂತಾದವು. ಹಾಗೆಯೇ ರೋಗಪೀಡಿತರನ್ನೂ, ಮುದುಕರನ್ನೂ ನೋಡುವ ಕೆಲಸ ಕೂಡಾ ಕುಟುಂಬದ್ದಲ್ಲವಾಯಿತು. ಇವೆಲ್ಲಾ ಹೋಗಿದ್ದರಿಂದ ಕುಟುಂಬ ವ್ಯಕ್ತಿಗತ ಸಂಬಂಧಗಳ ಸಂಸ್ಥೆಯಾಗಿ ಉಳಿಯಿತು. ಹೊರಗೆಲಸದಿಂದ ದಣಿದವರು ವಿಶ್ರಾಂತಿಗಾಗಿ, ವ್ಯಕ್ತಿಗತ ಆನಂದಕ್ಕಾಗಿ, ತಾನು ತನಗಾಗಿ ಎಂಬ ಭಾವನೆಗಾಗಿ ಹೋಗುವ ವ್ಯಕ್ತಿಗತ ಸಂಸ್ಥೆಯಾಗಿ ಬದಲಾಯಿತು. ಮಕ್ಕಳನ್ನು ಬೆಳೆಸಿ ಪೋಷಿಸಲ್ಪಡುವ ಸ್ಥಳವಾಗಿ ಉಳಿದು ಕೊಂಡಿತು. ಮನೆಗೂ ಹೊರ ಪ್ರಪಂಚಕ್ಕೂ ನಡುವೆ ಬಿರುಕನ್ನು ಈ ರೀತಿ ಸೂತ್ರೀಕರಿಸು ವುದರಿಂದ ಮಹಿಳೆಯರು ಮಾಡುವ ಕೆಲಸಕ್ಕೆ ಬೆಲೆಯಿಲ್ಲದಾಯಿತು. ಏಕೆಂದರೆ ಅದಕ್ಕೆ ಅಧಿಕಾರವಿಲ್ಲದೆ ಇನ್ನೊಂದು ಕ್ಷೇತ್ರದಲ್ಲಿ ಬೆಲೆ ಇದ್ದಾಗಲೂ ಆರ್ಥಿಕ ಪರವಾದ ಮೌಲ್ಯ ಇಲ್ಲದಾಯಿತು. ಆ ಕ್ಷೇತ್ರದಲ್ಲಿ ಲಾಭಗಳಿಲ್ಲ, ಸಾಧಿಸಬೇಕಾದವು ಇಲ್ಲ. ಇಲ್ಲಿ ಇನ್ನೊಂದು ವಿಷಯವನ್ನು ಗಮನಿಸುವುದು ಕೂಡಾ ಬಹಳ ಅಗತ್ಯ. ಅದೇನೆಂದರೆ ಕುಟುಂಬ ನಿಯಂತ್ರಣ ಪದ್ಧತಿ ಬಂದಿದ್ದರಿಂದ, ಕಡಿಮೆ ಮಂದಿ ಮಕ್ಕಳಿರುವುದರಿಂದ ಭೌತಿಕವಾಗಿ, ಶಾರೀರಿಕವಾಗಿ ಗರ್ಭಧಾರಣೆ ಮಾಡಬೇಕಾದ, ಮಕ್ಕಳನ್ನು ಬೆಳೆಸಬೇಕಾದ ಅಗತ್ಯ ಕಡಿಮೆಯಾದ್ದರಿಂದ ತಾಯ್ತನಕ್ಕಿದ್ದ ಮಾನಸಿಕವಾದ, ಪರಿಕಲ್ಪನಾ ಪರವಾದ ಪ್ರಾಧಾನ್ಯತೆ ಹೆಚ್ಚಾಯಿತು. ಹೆಚ್ಚಾದ ಆ ಪ್ರಾಧಾನ್ಯತೆ ಮನೆಯಲ್ಲೂ ಹೊರಗೂ ಮಹಿಳೆಯರ ಜೀವನದ ಮೇಲೆ ಅಧಿಕಾರ ವಹಿಸಲು ಪ್ರಾರಂಭಿಸಿತು. ಸಮಾಜದಲ್ಲಿ ಮಕ್ಕಳಿಗಿರುವ ಮೌಲ್ಯಕ್ಕೆ ತಾಯಿಯೇ ಪೂರ್ತಿ ಜವಾಬ್ದಾರಿ ವಹಿಸಬೇಕಾಗಿ ಬಂತು.

ಈ ನಡುವೆಯ ಅವಧಿಯಲ್ಲಿ ನಮಗೆ ಸಂಬಂಧಿಸಿದ ಉದಾಹರಣೆಗಳನ್ನೇ ಗಮನಿಸ ಬಹುದು. ಕಳೆದ ಶತಮಾನದ ಕೊನೆಯಲ್ಲಿ ಹಾಗೂ ಈ ಶತಮಾನದ ಆರಂಭದಲ್ಲಿ ಹತ್ತಾತ್ತನೆ ಮಹಿಳೆಯರ ಮದುವೆ ವಯಸ್ಸಿನ ಬಗ್ಗೆ ಭಾರತೀಯ ಮಹಿಳೆಯರಿಗೆ ಸರಿಯಾದ ಶಿಕ್ಷಣದ ಬಗ್ಗೆ (ಈ ಶಿಕ್ಷಣ ಮತ್ತೆ ಸಾಂಪ್ರದಾಯಿಕ ಮೌಲ್ಯಗಳನ್ನು ಕಾಪಾಡುವುದೇ) ಆಂದೋಲನ ಉಂಟಾಯಿತು. ಈ ಎರಡೂ ಇದ್ದರಾಗಲಿ ಭಾರತೀಯ ಮಹಿಳೆಯರು ಸ್ವತಂತ್ರ ಭಾರತ ದೇಶಕ್ಕಾಗಿ ಆರೋಗ್ಯವಂತರಾದ, ನೀತಿವಂತರಾದ ಪೌರರನ್ನು ಹೆರಲಾರರು. ಗಂಡಸರನ್ನು ಹೆತ್ತು ಸ್ತ್ರೀಯರನ್ನೂ, ದೇಶವನ್ನೂ ಆಳುವವರನ್ನಾಗಿ ತಯಾರು ಮಾಡುವುದು ಆ ತಾಯಿಯರ ಕರ್ತವ್ಯ, ಜವಾಬ್ದಾರಿ ಆಯಿತು.

ತಾಯ್ತನ ಕುರಿತು ಮತ್ತೆ ಒತ್ತಿ ಹೇಳುವುದರಿಂದ, ಹೆಚ್ಚು ಪ್ರಾಧಾನ್ಯತೆ ಕೊಡುವುದರಿಂದ ಮಹಿಳೆಯರ ಸಂಪಾದನೆ ಬಿಸಿ ನೀರಿಗೆ ತಣ್ಣೀರಾಗಿ ಮಾತ್ರವೇ ಇರುತ್ತದೆಂಬ ಅಭಿಪ್ರಾಯಕ್ಕೆ ಅವಕಾಶವಾಯಿತು. ಇದರಿಂದ ಮತ್ತೆ ಅಂತರ, ಕಡಿಮೆ ಸಂಬಳ, ಲೇ ಆಫ್, ಕೀಳಾಗಿ

ಭಾವಿಸುವುದು ಇವೆಲ್ಲಾ ನಡೆಯುತ್ತವೆ. ಹೆಚ್ಚಾಗಿ ಮಹಿಳೆಯರು ಕೆಲಸ ಮಾಡುವ ಸಮಾಜದಲ್ಲಿ ಈಗಲೂ ಮಹಿಳೆಯರು ಮುಖ್ಯವಾಗಿ ಹೆಂಡತಿಯರು, ತಾಯಂದಿರು ಮಾತ್ರವೇ ಕೆಲಸ ಮಾಡುವುದಿಲ್ಲವೆಂಬ ಅಭಿಪ್ರಾಯಗಳು ಪ್ರಚಾರದಲ್ಲಿವೆ. ಒಂದು ವೇಳೆ ಮಹಿಳೆಯರು ಕೆಲಸ ಮಾಡಿದರೆ ಮಕ್ಕಳಿರಬಾರದು, ಮದುವೆ ಆಗದೆ ಇರಬೇಕು. ಮಹಿಳೆಯರು ಮಾಡೋ ಕೆಲಸಗಳು ಕೂಡಾ ಅವರು ಹೆಂಗಸರಾಗಿ ನಿರ್ವಹಿಸಬೇಕಾದ ಪಾತ್ರದ ಮುಂದುವರಿಕೆಯಾಗಿರುತ್ತವೆ. ಗುಮಾಸ್ತರು, ಸೇವಾ ಕಾರ್ಯಕರ್ತರು, ಶಿಕ್ಷಕಿಯರು, ನರ್ಸುಗಳು, ಸೇಲ್ಸ್ ಗರ್ಲ್ಸ್, ಮುಂತಾದವರು. ಪುರುಷಪ್ರಧಾನ ಉದ್ಯಮಗಳೆಂದು ಹೇಳಲ್ಪಡುವ ಉಕ್ಕು, ಆಟೋಮೊಬೈಲ್ ಉದ್ಯಮಗಳಲ್ಲಿ ಮಹಿಳೆಯರು ಕೆಲಸ ಮಾಡುವುದು ಬಹಳ ವಿರಳ.

ಈ ಪರಿಕಲ್ಪನೆಯೆಲ್ಲಾ ಎಲ್ಲೋ ಕಾಗದಗಳ ಮೇಲೆ ಬರೆದಿಟ್ಟದ್ದಲ್ಲ. ಯಾವುದೋ ಸಣ್ಣ ಸಿದ್ಧಾಂತವಲ್ಲ. ಇದು ಆಚರಣೆಯಲ್ಲಿ ಬದಲಾವಣೆ ಹೊಂದಿ ಭೌತಿಕವಾದ ಅಂತರಗಳೇ ಸಹಜ ಕಾರಣಗಳೆಂದು ವಿವರಿಸುವುದರವರೆಗೆ ಹೋಗಿದೆ ಎಂಬುದನ್ನು ನಾವು ಗುರುತಿಸ ಬೇಕಾಗಿದೆ.

ಸಾಮಾಜಿಕ ಘಟಕವಾಗಿಲ್ಲದೆ ಸಹಜವಾಗಿ ಏರ್ಪಟ್ಟ ಘಟಕವಾಗಿ ನೋಡಲ್ಪಡುವ ಕುಟುಂಬದಿಂದ, ಭೌತಿಕ ಕಾರಣಗಳಿಂದ ಲೈಂಗಿಕ ಶ್ರಮವಿಭಜನೆ ಏರ್ಪಟ್ಟಿದೆಯೆಂದು ನಮಗೆ ಹೇಳುತ್ತಿದ್ದಾರೆ.

ಸಮಾಜದ ರಚನೆಯಾದ ಜಂಡರ್ ಅನ್ನು ಪುನಃ ಅರ್ಥೈಸುತ್ತಿದ್ದಾರೆ. ಪ್ರಜೆಗಳೇ ಅದರ ಸಾಮಾಜಿಕ ರೂಪಗಳನ್ನು ತಯಾರು ಮಾಡಿದರೆಂದು ಮರೆತು ಹೋಗುತ್ತಿದ್ದಾರೆ. ಅದರ ಚರಿತ್ರಾತ್ಮಕತೆಯನ್ನೆಲ್ಲಾ ಅದು ಕಳೆದುಕೊಳ್ಳುತ್ತದೆ.

ಕ್ರಮವಾಗಿ ಬಂಡವಾಳಶಾಹಿ ವ್ಯವಸ್ಥೆ ಅಭಿವೃದ್ಧಿ ಹೊಂದುತ್ತಿದ್ದಂತೆ ತಾಯಿಯ ಪಾತ್ರ ಕೂಡಾ ಹೆಂಡತಿಯ ಕಡೆ ತಳ್ಳಲ್ಪಡುತ್ತದೆ. ಹೆಂಡತಿಯರು ತಮ್ಮ ಗಂಡಂದಿರಿಗೆ ಕೂಡಾ ತಾಯಿಯರಾಗಬೇಕಾಗಿ ಬರುತ್ತದೆ. ನಿಜಕ್ಕೂ ಲೈಂಗಿಕತೆಯೇ ಇಲ್ಲದೆ ಹೋಗುವುದನ್ನೂ ಇದು ಆದರ್ಶವಾಗಿ ಮಾಡುತ್ತದೆ. ಗಂಡನ ಮನಸ್ಸತ್ವದೊಳಗೆ ತಾಯಿಯನ್ನು, ಹೆಂಡತಿಯನ್ನು ಸಿಕ್ಕಿಸಲಾಗುತ್ತದೆ. ಈ ತಾಯ್ತನದ ಇನ್ನೊಂದು ಪರಿಣಾಮವೇನೆಂದರೆ ಇದು ಪುರುಷಾಧಿಪತ್ಯ ವನ್ನು ಮತ್ತೆ ಮತ್ತೆ ಬಲವಾಗಿ ನಿಲ್ಲಿಸುತ್ತದೆ. ಆಧಿಕ್ಯತಾಭಾವವನ್ನು ಉಳಿಸಿಕೊಳ್ಳುವುದಕ್ಕೆ ಬೇಕಾದ ಪ್ರೋತ್ಸಾಹವನ್ನು ಗಂಡುಮಕ್ಕಳಿಗೆ ಕೊಡುತ್ತದೆ. ಯಾವಾಗಲೂ ಕಾಣದ ತಂದೆ ಹೊರ ಪ್ರಪಂಚದ ಸಾಹಸಗಳೊಡನೆ ಉತ್ತೇಜನದೊಡನೆ ಒಂದಾಗಿ ಕಾಣಿಸುತ್ತಾನೆ. ತಾಯಿ ಮಾತ್ರ ಎಲ್ಲಿ ತನ್ನ ಅಧಿಕಾರ, ದರ್ಪವನ್ನು ಯಾವಾಗಲೂ ಎದುರಿಸಲ್ಪಡುತ್ತಾ, ತಿರಸ್ಕರಿಸ ಲ್ಪಡುತ್ತಾ, ಅವಹೇಳನಕ್ಕೊಳಗಾಗುತ್ತಾ ಇರುತ್ತಾಳೋ ಆ ಬಂಧದಲ್ಲಿ ಸಿಲುಕಿಕೊಳ್ಳುತ್ತಾಳೆ. ಆದರಿಂದ ತಾಯ್ತನವನ್ನು ಕುರಿತು ಮೇಲು ಮೇಲೆ ದೊಡ್ಡದು ಮಾಡಿ ಮಾತಾಡಿದರೂ

ನಿಜಕ್ಕೂ ಮಹಿಳೆಯರೆಂದರೆ ಒಂದು ಬಗೆಯ ಅಸಹ್ಯ, ಅಹಂಕಾರ ಧೋರಣೆಗಳೇರ್ಪಡುತ್ತವೆ. ಒಂದು ಉದಾಹರಣೆಯಲ್ಲಿ ಇದನ್ನು ನಾವು ನೋಡಬಹುದು. ತಂದೆಯರನ್ನು 'ನೀವು' 'ಅವರು' ಎನ್ನುತ್ತಾ ಸಂಬೋಧಿಸಿ ತಾಯಿಯರನ್ನು 'ಏನೇ' ಎಂದು ಸಂಬೋಧಿಸುತ್ತಾರೆ. ನಮಗೆ ಪರಿಚಿತವಾದ ಈ ಸಂಬೋಧನಾ ರೂಪ ಕ್ರಮವಾಗಿ ಬೈಗುಳಗಳಾಗಿ ಅಸಹ್ಯಗೊಳಿಸಿಕೊಳ್ಳುವುದಕ್ಕೆ ಇಳಿಯುತ್ತದೆ. ಹೆಂಡತಿಯರಾಗಿ ಅಂಗೀಕರಿಸಲ್ಪಟ್ಟ ಸ್ತ್ರೀಯರನ್ನು ಮೊದಲು ಸೆಕ್ಸ್ ಇಲ್ಲದಂತೆ ಮಾಡಿ ಅವರನ್ನು ತಾಯಿ ಪಾತ್ರದೊಳಕ್ಕೆ ಸೇರಿಸುವುದನ್ನು ನಾವು ನೋಡುತ್ತಿದ್ದೇವೆ. ಹೀಗೆ ಮಾಡುವುದರಿಂದ 'ವೇಶ್ಯೆ' ಎಂಬ ವ್ಯಕ್ತಿ ಹುಟ್ಟಿ ಬರುತ್ತಾಳೆ. ಈ ವೇಶ್ಯೆ ಪುರುಷರ ಲೈಂಗಿಕ ಬಯಕೆಗಳಿಗೆ, ಕನಸುಗಳಿಗೆ ಕಾರಣ ವಾಗುತ್ತಾಳೆ.

### ಲೈಂಗಿಕತೆ

ಲೈಂಗಿಕತೆ ಎಂಬ ಭಾವನೆಯಲ್ಲಿ ಒಂದು ಸಮಸ್ಯೆಯಿದೆ. ಅದು ಕಾವ್ಯದಿಂದ ಶರೀರಕ್ಕೆ ಮತ್ತೆ ಅಲ್ಲಿಂದ ಕಾವ್ಯಕ್ಕೆ ಜಾರುತ್ತಿರುತ್ತದೆ. ಮಹಿಳೆಯರಿಗೆ ಲೈಂಗಿಕತೆಯ ಬಗ್ಗೆ ಸಮಾಜ ಕೊಟ್ಟ ಕಲ್ಪನೆಗಳು ಭಗ್ನವಾಗಿ ಹೋದುದರಿಂದ ಉಂಟಾದ ನಿರಾಶೆಯ ಪರಿಣಾಮವಾಗಿ ಲೈಂಗಿಕತೆಯ ಪ್ರಾಧಾನ್ಯತೆ, ಅದನ್ನು ಕುರಿತ ವಿಶ್ಲೇಷಣೆ ಬೆಳೆದಿದೆ. ಈ ನಿರಾಶೆ ಬಹಳ ಸಿಟ್ಟನ್ನುಂಟುಮಾಡಿದೆ. ಆ ಸಿಟ್ಟೇ ಸ್ತ್ರೀವಿಮೋಚನಾ ಚಳುವಳಿಯನ್ನು ಮುಂದಕ್ಕೆ ಒಯ್ಯುತ್ತಿದೆ. ನಮಗೆ ಒಂದು ಕಡೆ ರೊಮಾಂಟಿಕ್ ಪ್ರೀತಿ ಕುರಿತ ಕಲ್ಪನೆಗಳು, ಇನ್ನೊಂದು ಕಡೆ ಜೀವನ ವಾಸ್ತವಗಳು - ಮನೆಯಲ್ಲಿ ನಡೆಯುವ ಹಿಂಸೆ, ಅಶ್ಲೀಲ ಸಾಹಿತ್ಯ, ವ್ಯಭಿಚಾರ, ಹೆಂಗಸರಿಗೆ ತಮ್ಮ ಲೈಂಗಿಕತೆಯ ಮೇಲೆ ಅಧಿಕಾರ ಇರುವುದಕ್ಕೆ ಸಾಧ್ಯವಿಲ್ಲವೆನ್ನುವುದು ಕಾಣಿಸುತ್ತವೆ.

ಸ್ತ್ರೀವಾದ ಲೈಂಗಿಕತೆಯೊಂದರ ರಾಜಕೀಯ ಸ್ವಭಾವವನ್ನು ಒತ್ತಿ ಹೇಳುತ್ತದೆ. ಲೈಂಗಿಕ ಸಂಬಂಧಗಳಲ್ಲಿ ಇರುವವರ ಅಸಮಾನ ಅಧಿಕಾರಗಳಲ್ಲಿನ ರಾಜಕೀಯ ಸ್ವಭಾವವನ್ನು ಒತ್ತಿ ಹೇಳುತ್ತದೆ. ಪೂರ್ತಿಯಾಗಿ ಆತ್ಮೀಯವಾದ ವ್ಯಕ್ತಿಗತವಾದ ಸಂಬಂಧವನ್ನು ಕೂಡಾ ಬಿಡಿಸಿ ಅದರಲ್ಲಿನ ರಾಜಕೀಯ ಸ್ವಭಾವವನ್ನು ನೋಡುವುದಾದರೆ ಆಗ "ವ್ಯಕ್ತಿಗತವು ಕೂಡಾ ರಾಜಕೀಯವೇ" ಎಂಬ ಸ್ತ್ರೀ ಚಳುವಳಿಯ ಘೋಷಣೆಯಲ್ಲಿನ ಅರ್ಥವೇನೆಂಬುದು ತಿಳಿಯುತ್ತದೆ. ಈ ಘೋಷಣೆಯಿಂದಲೇ ಲೈಂಗಿಕ ರಾಜಕೀಯವೆಂಬುವು ಹೋರಾಟ ಪ್ರಾಧಾನ್ಯತೆಯುಳ್ಳದ್ದಾಗಿ ಸ್ತ್ರೀಯರು ಗುರುತಿಸಿ ಸ್ಥಿರಪಡಿಸಿದ್ದಾರೆ. ಲೈಂಗಿಕ ಸಂಬಂಧಗಳನ್ನು ರಾಜಕೀಯವುಳ್ಳವೆಂದು ಯಾಕೆ ಗುರುತಿಸಬೇಕು? ಯಾಕೆಂದರೆ ಆ ಸಂಬಂಧಗಳು ಸಾಮಾಜಿಕ ವಾಗಿ ನಿರ್ಮಿತವಾದವು ಹಾಗೂ ಏರ್ಪಡಿಸಿಕೊಂಡವೇ ಹೊರತು ಸಹಜವಾದವಲ್ಲ. ಆದ್ದರಿಂದ ಅವು ಸರಳವಾಗಿ ಬೇರೆ ರೀತಿಯಲ್ಲಿರಬಹುದು. ಈ ವಾದದಲ್ಲಿನ ಮುಖ್ಯಾಂಶ ವೇನೆಂದರೆ ಹೆಂಗಸರಿಗೂ ಗಂಡಸರಿಗೂ ಶಾರೀರಿಕವಾಗಿರುವ ಧರ್ಮಕ್ಕೂ, ಒಂದು ವಿಶಿಷ್ಟ ಚಾರಿತ್ರಿಕ ಪರಿಸ್ಥಿತಿಯಲ್ಲಿ ಸ್ತ್ರೀತ್ವ, ಪುರುಷತ್ವಗಳಾಗಿ, ಹೆಣ್ತನ, ಗಂಡಸುತನವೆಂದು

ಕರೆಯಲ್ಪಡುತ್ತಿರುವ ವ್ಯಕ್ತಿಗತವಾದ ನಡವಳಿಕೆಯ ರೀತಿಗಳಿಗೂ ಭಿನ್ನತೆಯಿದೆಯೆಂದು ಗುರುತಿಸುವುದು. ಸಮಾಜದಲ್ಲಿ ಮಹಿಳಾ ಸ್ಥಾನವನ್ನು ಅರ್ಥ ಮಾಡಿಕೊಳ್ಳಬೇಕೆಂದರೆ ಸೆಕ್ಸ್‌ಗೂ ಜಂಡರ್‌ಗೂ ನಡುವೆಯಿರುವ ಅಂತರವನ್ನು ಗುರುತಿಸುವುದು ಬಹಳ ಮುಖ್ಯ. ಈ ವಿಷಯವನ್ನು ಸ್ತ್ರೀವಾದಿ ಸಾಹಿತ್ಯದಲ್ಲೂ, ಹೊರಗೂ ಕೂಡಾ ಬಹಳ ಮಂದಿ ಗುರುತಿಸಿದ್ದಾರೆ. ಲೈಂಗಿಕ ರಾಜಕೀಯವನ್ನು ಮುಖ್ಯವಾದ ಹೋರಾಟ ವಿಷಯವಾಗಿ ರ್‍ಯಾಡಿಕಲ್ ಸ್ತ್ರೀವಾದಿಗಳು ಸ್ಥಿರಪಡಿಸಿದರು. ರ್‍ಯಾಡಿಕಲ್ ಸ್ತ್ರೀವಾದ ಮಹಿಳೆಯರ ಶೋಷಣೆಗೆ ಪ್ರಧಾನ ಕೇಂದ್ರವಾಗಿ ಭೌತಿಕ ಲೈಂಗಿಕತೆಯನ್ನು ಗಮನಿಸುತ್ತದೆ. ಸ್ತ್ರೀವಾದಿಗಳು ಪ್ರಧಾನವೆಂದ ಈ ವಿಷಯವನ್ನು ಪ್ರಚಾರ ವ್ಯವಸ್ಥೆ ಸಣ್ಣ ವಿಷಯವೆಂದು ನೋಡಿದಾಗಲೂ ನಿಜಕ್ಕೂ ಅದು ಮಹಿಳಾ ಚಳುವಳಿಯಲ್ಲಿ ಪ್ರಧಾನ ವಿಷಯವನ್ನೇ ಪ್ರತಿಬಿಂಬಿಸುತ್ತದೆ.

ಲೈಂಗಿಕತೆಯನ್ನು ಪ್ರಧಾನ ರಾಜಕೀಯ ಪ್ರಶ್ನೆಯಾಗಿ ಮಾಡುವುದರಿಂದ ಮಹಿಳೆಯರು ಅದಕ್ಕೆ ಸಂಬಂಧಿಸಿದ ವಿಷಯಗಳನ್ನು ಪ್ರಶ್ನಿಸಲು ಪ್ರಾರಂಭಿಸಿದರು. ಗರ್ಭಪಾತ ಮಾಡಿಸಿಕೊಳ್ಳುವ ಹಕ್ಕಿಗಾಗಿ, ಜನಸಂಖ್ಯಾ ನಿಯಂತ್ರಣ ಕಾರ್ಯಕ್ರಮಗಳ ಮೇಲೆ ಸಾಮ್ರಾಜ್ಯವಾದಿಗಳ ನಿರ್ಬಂಧವನ್ನು ಕುರಿತು, ಸಂತಾನೋತ್ಪತ್ತಿಯ ಪ್ರಮೇಯವಿಲ್ಲದ ಲೈಂಗಿಕ ಅನುಭವಕ್ಕಾಗಿ (ಅದು ಸ್ವಲಿಂಗವಾದರೂ, ಸ್ತ್ರೀ ಪುರುಷರಾದರೂ) ತಾಯಿಗಳಾಗುವ ಸ್ವಾತಂತ್ರಕ್ಕಾಗಿ ಮಹಿಳೆಯರು ಪ್ರಶ್ನಿಸುತ್ತಿದ್ದಾರೆ.

ಲೈಂಗಿಕತೆಯನ್ನು ಹತ್ತಿಕ್ಕದ, ಕ್ರಮಬದ್ಧಗೊಳಿಸದ, ಗರ್ಭನಿಯಂತ್ರಣವನ್ನರಿಯದ ಸಮಾಜವಂತೂ ಇರದು. ಲೈಂಗಿಕ ನಿರ್ಬಂಧಗಳಿಲ್ಲದೆ ಸ್ವೇಚ್ಛಾ ಸಮಾಜವಿರುತ್ತದೆಯೆಂದು ಕೊಳ್ಳುವುದು ಒಂದು ರೊಮಾಂಟಿಕ್ ಕಲ್ಪನೆ. ನಿರ್ಬಂಧ ಎಷ್ಟು, ಯಾವ ಚಾರಿತ್ರಿಕ ರೂಪದಲ್ಲಿದೆ ಎಂಬುದರಲ್ಲಿ ಅಂತರವಿರಬಹುದು. ಗರ್ಭನಿಯಂತ್ರಣೆಗೆ ಸಂಬಂಧಿಸಿದ ತಾಂತ್ರಿಕ ವಿವರಗಳು ಸಂಗತಿಗಳು ಬೇಕೆಂದು, ಗರ್ಭನಿಯಂತ್ರಣ ಕಾನೂನುಬದ್ಧವಾಗ ಬೇಕೆಂದು ಆಂದೋಲನೆ ಮಾಡಿದರು. ಮೊದಲ ದಿಸೆಯಲ್ಲಿ (ಕಳೆದ ಶತಮಾನ) ಮಹಿಳೆಯರು ಲೈಂಗಿಕ ಕ್ರಿಯೆ ಮದುವೆಯಲ್ಲಿ ಮಾತ್ರ ಆಗುತ್ತದೆಯೆಂದು, ಮದುವೆಗೆ ಮಾತ್ರ ಸೇರಿದ್ದೆಂದು ನಂಬಿದರು. ಲೈಂಗಿಕ ಸುಖದ ಅಗತ್ಯ ಮಹಿಳೆಯರಿಗೆ ಅಷ್ಟು ಮುಖ್ಯವಲ್ಲವೆಂದು ಕೂಡ ನಂಬಿದರು. ನಾಲ್ಕನೆಯ ದಶಕದ ಎರಡನೇ ದಿಸೆಯಲ್ಲಿ ಸ್ತ್ರೀಯರು ತಮ್ಮ ಹಿಂದಿನ ತಲೆಮಾರಿನವರ ಲೈಂಗಿಕ ವಿರೋಧಿ ದೃಷ್ಟಿಕೋನವನ್ನು ತಿರಸ್ಕರಿಸಿದರು.

ಇಲ್ಲೊಂದು ವಿಮರ್ಶೆ ಬಂತು. ಜಂಡರ್ ಸ್ತ್ರೀತ್ವ, ಪುರುಷತ್ವವೆಂದೇ ಇದೆಯೆಂದು ಹೆಂಗಸರು ಸ್ತ್ರೀತ್ವದೊಂದಿಗೆ ಗಂಡಸರು ಪುರುಷತ್ವದೊಂದಿಗೆ ಇರಬೇಕೆಂದು ಅಂತಹ ಸ್ತ್ರೀ ಪುರುಷರೇ ಒಂದು ಜೋಡಿಯಾಗಬೇಕೆಂದು ಅನ್ನುತ್ತಿದ್ದಾರೆ. ಅದರಿಂದ ಸ್ತ್ರೀ-ಪುರುಷರಿಬ್ಬರೂ ಬಹಳ ಕಳೆದುಕೊಳ್ಳುತ್ತಿದ್ದಾರೆ. ಅವರು ಅಭಿವೃದ್ಧಿ ಹೊಂದಲು ಸಾಧ್ಯವಿರುವ ಬಗೆಬಗೆಯ ಆಯಾಮಗಳಿಲ್ಲದೆ ಹೋಗುತ್ತಿವೆ. ಇದು ಸ್ತ್ರೀಯರಿಗೂ ಪುರುಷರಿಗೂ ಇರುವ ಅವಕಾಶ ಗಳನ್ನು ಬಹಳ ಕಡಿಮೆಗೊಳಿಸಿ ಅವರನ್ನು ಬಲವಂತವಾಗಿ ಜಂಡರ್ ಅಂತರದಲ್ಲಿ ಇಡುತ್ತದೆ.

ಸಂತಾನೋತ್ಪತ್ತಿ ಮಾಡಬಲ್ಲ ಸ್ತ್ರೀ-ಪುರುಷರನ್ನು ಜೋಡಿಯಾಗಿ ಅಂಗೀಕರಿಸಿ ಕಾನೂನುಬದ್ಧಗೊಳಿಸುವುದರಿಂದ ಕುಟುಂಬ ಎಂಬುದಕ್ಕೆ ಒಂದು ಖಚಿತವಾದ ಅರ್ಥ, ನಿರ್ವಚನೆ ಏರ್ಪಟ್ಟಿದೆ. ಆ ಅರ್ಥದಲ್ಲಿ ಮದುವೆಯಾಗದ, ಮದುವೆ ಇಷ್ಟವಿಲ್ಲದ ವ್ಯಕ್ತಿಗಳ ಅನುಭವಗಳನ್ನು ಕುಟುಂಬ ನಿರಾಕರಿಸುತ್ತದೆ. ಉದಾಹರಣೆಗೆ ವಿಧವೆಯರು, ಬ್ರಹ್ಮಚಾರಿಗಳು, ಮದುವೆಯಾಗದ ಹುಡುಗಿಯರು, ಅಂಗವಿಕಲತೆಯಿರುವವರು ಇವರೆಲ್ಲಾ ಕುಟುಂಬಕ್ಕೆ ಈ ಹೊತ್ತು ಇರುವ ಅರ್ಥದಿಂದ ನೋಡಿದರೆ ಎಲ್ಲಿಯೂ ಕಾಣರು. ಕುಟುಂಬ ಅವರನ್ನು ಹೊರಗೆ ಹಾಕುತ್ತದೆ. ಕಾಣಿಸದಂತೆ, ಕೇಳಿಸಿಕೊಳ್ಳದಂತೆ ಹಿಂದಕ್ಕೆ ಅಟ್ಟುತ್ತದೆ. ಅವರನ್ನು ಮರೆತು ಹೋಗಬಹುದು. ಅವರು ಸಾಮಾಜಿಕ ಸಮಸ್ಯೆಗಳಾಗಿ ತಯಾರಾಗಿ ಬಲವಂತದಿಂದ ಇಷ್ಟವಿಲ್ಲದ ಸಂಬಂಧಗಳೊಳಕ್ಕೆ ತಳ್ಳಲ್ಪಡುವರು (ವಿಧವಾಶ್ರಮಗಳು, ಅಂಗವಿಕಲರ ಪುನರ್ವಸತಿ ಕೇಂದ್ರಗಳು, ವೃದ್ಧಾಶ್ರಮಗಳು, ಹುಚ್ಚಾಸ್ಪತ್ರೆಗಳು). ಈ ಮೂಲಕ ಸಮಾಜದಲ್ಲಿರುವ ಎಷ್ಟೋ ಮಾನವ ಸಂಬಂಧಗಳು (ಸಹಾಯ, ಶಕ್ತಿ ಕೊಡುವಂತಹವು) ಗುರುತಿಲ್ಲದೆ ಹೋಗುತ್ತವೆ.

ಪ್ರತಿಯೊಂದು ಸಮಾಜದಲ್ಲೂ ಒಂದೇ ಸೆಕ್ಸಿಗೆ ಸೇರಿದವರಲ್ಲಿರುವ ಬೇರೆ ಸಹಾಯಕ ಸಂಬಂಧಗಳನ್ನು ಒಟ್ಟಾಗಿ ಸಂತಾನೋತ್ಪತ್ತಿಯೊಡನೆ ಸಂಬಂಧವಿಲ್ಲವಾದ್ದರಿಂದ ಅಸಹಜವಾದುವೆಂದು ನಿಂದಿಸುತ್ತಾರೆ. ಏಕೆಂದರೆ ಧಾರ್ಮಿಕ ದೃಷ್ಟಿಯಿಂದ ನೋಡಿದಾಗ ಸೆಕ್ಸ್ ಎಂಬುದು ಕೇವಲ ಸಂತಾನೋತ್ಪತ್ತಿಗಾಗಿಯೇ. ಪಿತೃಸ್ವಾಮ್ಯದ ಸಮಾಜಕ್ಕೆ ರಾಜಕೀಯ ವಿರೋಧಿ ಕ್ರಮವಾಗಿ, ಪ್ರತ್ಯೇಕ ಬಂದ ಲೆಸ್ಬಿಯನ್ ಬೇರ್ಪಡೆ ವಾದದ ಪ್ರಶ್ನೆಯನ್ನು ನಾನಿಲ್ಲಿ ಚರ್ಚಿಸುವುದಿಲ್ಲ. ಅದು ರಾಜಕೀಯ ಪರಿಹಾರವಾಗಿ ಒಪ್ಪಿಕೊಂಡರೂ, ಒಪ್ಪಿಕೊಳ್ಳದೇ ಹೋದರೂ ಅದೆಷ್ಟು ಅತಿವಾದವಾಗಿ ಕಂಡರೂ ಅದರ ಪ್ರಾಧಾನ್ಯತೆಯನ್ನು ಗಮನಿಸದೆ ಇರುವುದು ಅಸಾಧ್ಯ. ಹಾಗೆಯೇ ಅದಕ್ಕೆ ಆಧಾರವಾದ ಸ್ತ್ರೀಪುರುಷ ಸಂಬಂಧಗಳಲ್ಲಿನ ಹಿಂಸೆಯನ್ನು ಕುರಿತ ವಿಶ್ಲೇಷಣೆಯನ್ನು ಕೂಡಾ ಗಮನಿಸದೆ ಇರುವುದು ಅಸಾಧ್ಯ.

ಒಂದು ಉದಾಹರಣೆಯಿಂದ ವಿವರಿಸಬೇಕೆಂದರೆ ವರ್ಗ ಅಥವಾ ವ್ಯಕ್ತಿಗತ ಹಿಂಸಾವಾದ. ವ್ಯಕ್ತಿಗತವಾಗಿ ನಮಗೆ ಇಷ್ಟವಿಲ್ಲದಿದ್ದರೂ, ಅಂಗೀಕರಿಸದೆ ಹೋದರೂ ಆ ಹಿಂಸಾವಾದ ಯಾವ ವಿಶ್ಲೇಷಣೆಯ ಮೇಲೆ ಆಧಾರ ಪಟ್ಟಿದೆಯೋ, ಆ ಶೋಷಣೆಗೆ ಸಂಬಂಧಿಸಿದ ವಿಶ್ಲೇಷಣೆಯೆಲ್ಲಾ ಕೆಲಸಕ್ಕೆ ಬಾರದ್ದೆಂದು ಅನ್ನಲಾರೆವಲ್ಲವೇ?

### ಕುಟುಂಬ

ಸ್ತ್ರೀವಾದ ಗಮನಿಸುವ ಮತ್ತೊಂದು ಮುಖ್ಯವಾದ ವಿಷಯ ಕುಟುಂಬ. ಮಹಿಳೆಯರ ಶೋಷಣೆಗೆ ಕುಟುಂಬವೇ ಪ್ರಧಾನ ಕೇಂದ್ರವಾಗಿ ಕಾಣುತ್ತಿದೆ. ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಕುಟುಂಬ ಸ್ತ್ರೀಯರ ಶೋಷಣೆಯನ್ನು ಸ್ಥಿರಪಡಿಸುತ್ತಿರುವಾಗಲೂ ಹತ್ತಿಕ್ಕುವಿಕೆ ಎಲ್ಲದಕ್ಕೂ ಅದೊಂದೇ ಕಾರಣವೆಂದು ಸಂಕುಚಿತಾರ್ಥದಲ್ಲಿ ಗುರುತಿಸಬಾರದು. ಸಾಂಪ್ರದಾಯಿಕ

ಸಮಾಜವಾದವು ಸ್ತ್ರೀಯರ ಸಮಸ್ಯೆಗೆ ಕಾರಣ ಆಕೆ ಉತ್ಪಾದನೆಯಲ್ಲಿ ಭಾಗ ಹಂಚಿಕೊಳ್ಳದೆ ಹೋದದ್ದು, ಸ್ವಂತ ಆಸ್ತಿಯ ವ್ಯವಸ್ಥೆಗೆ ಆಕೆ ಅಧೀನಳಾಗಿರುವುದು, ವರ್ಗದರೋಡೆಯೆಂದು ಆ ಸಮಸ್ಯೆಯನ್ನು ಬಹಳ ಸಂಕುಚಿತಗೊಳಿಸಿದೆ.

ಜೂಲಿಯಟ್ ಮಿಚ್ಚೆಲ್ ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಸ್ತ್ರೀಯರ ಅಸಹಾಯಕತೆಗೆ ನಾಲ್ಕು ಪ್ರಧಾನ ಆಧಾರಗಳಾದ ಕಾರಣಗಳನ್ನು ಹೇಳಿದ್ದಾಳೆ. ಅವು ಕ್ರಮವಾಗಿ ಉತ್ಪಾದನೆ, ಪುನರುತ್ಪಾದನೆ, ಲೈಂಗಿಕತೆ, ಮಕ್ಕಳನ್ನು ಸಮಾಜ ಜೀವಿಗಳಾಗಿ ತಯಾರು ಮಾಡುವುದು.

ಮಹಿಳೆಯೊಬ್ಬಳ ಸಾಮಾಜಿಕ ಆರ್ಥಿಕ ಪ್ರಯೋಜನವನ್ನು ನಿರ್ದೇಶಿಸುವುದು ಆಕೆಯ ಶಾರೀರಕ ಶಕ್ತಿ.

ತಾಯ್ತನ ಕುಟುಂಬವನ್ನು ಚಾರಿತ್ರಿಕ ಅಗತ್ಯವಾಗಿ ಮಾಡಿತು. ಕುಟುಂಬವೇ ಮಹಿಳೆಗೆ ಪ್ರಪಂಚವಾಗಿತ್ತು. ಉತ್ಪಾದನೆಯಲ್ಲೂ ಸಾಮಾಜಿಕ ಜೀವನದಲ್ಲೂ ಆಕೆ ಭಾಗವಾಗದೆ ಹೋದಳು. ಅದರಿಂದ ಲೈಂಗಿಕ ವಿಪಕ್ಷತೆಗೆ ಗುರಿಯಾದಳು.

ಕುಟುಂಬವು ಬಂಡವಾಳಶಾಹಿ ವ್ಯವಸ್ಥೆಯೊಂದರ ಕ್ರಮಜೀವನದಲ್ಲಿ ಪ್ರಶಾಂತತೆಯನ್ನು ಕೊಡುತ್ತದೆ. ಉತ್ಪಾದನೆ ಮಾಡುವ ಶ್ರಮಿಕ ಶಕ್ತಿಯನ್ನು ತಯಾರು ಮಾಡುತ್ತದೆ. ಗ್ರಾಹಕ ಮಾರ್ಕೆಟ್ಟನ್ನು ನೀಡುತ್ತದೆ. ವ್ಯಕ್ತಿವಾದದಲ್ಲಿ, ಸ್ವಾತಂತ್ರ್ಯದಲ್ಲಿ, ಸಮಾನತೆಯಲ್ಲಿ ನಂಬಿಕೆಯನ್ನುಂಟುಮಾಡುವ ಸೈದ್ಧಾಂತಿಕ ಪಾತ್ರವನ್ನು ಪೋಷಿಸುತ್ತದೆ. ವ್ಯಕ್ತಿವಾದ, ಸ್ವಾತಂತ್ರ್ಯ, ಸಮಾನತೆ ಎಂಬುವು ಸಾಮಾಜಿಕ ಆರ್ಥಿಕ ವ್ಯವಸ್ಥೆಗೆ ಎಷ್ಟು ವಿರುದ್ಧವಾದುವಾದರೂ ಅವುಗಳ ಮೇಲೆ ನಂಬಿಕೆ ಇರುವುದು ಸಮಾಜಕ್ಕೆ ಬಹಳ ಅಗತ್ಯ. ಅವುಗಳ ಮೇಲೆಯೇ ಸಮಾಜ ಆಧಾರಪಟ್ಟಿರುತ್ತದೆ.

ಇದರಿಂದ ಸಂತಾನೋತ್ಪತ್ತಿ ಶಕ್ತಿಗಳಾಗಿ, ಲೈಂಗಿಕ ವಸ್ತುಗಳಾಗಿ, ಶ್ರಮಿಕರಾಗಿ, ಮಕ್ಕಳನ್ನು ಸಮಾಜ ಜೀವಿಗಳಾಗಿ ರೂಪಿಸುವವರಾಗಿ ಮಹಿಳೆಯರ ಅಸಹಾಯಕತೆ ನಮಗೆ ಅರ್ಥವಾಗುತ್ತದೆ. ಅಧಿಕಾರವೆಂಬುದು ಸಂಕೀರ್ಣವಾದ ವಾಸ್ತವಿಕತೆಯಾದ್ದರಿಂದ ಈ ವಿಶ್ಲೇಷಣೆ ಕೂಡಾ ಕುಟುಂಬ ರಾಜಕೀಯ ಆರ್ಥಿಕ ವ್ಯವಸ್ಥೆಯೊಡನೆ ಎಂತಹ ಸಂಬಂಧವನ್ನು ಹೊಂದಿದೆಯೋ ಸ್ಪಷ್ಟವಾಗಿ ತಿಳಿಯಪಡಿಸುತ್ತಿಲ್ಲ.

ಕುಟುಂಬದೊಂದಿಗೆ ಬರುವ ಸಮಸ್ಯೆ ಏನೆಂದರೆ ಅದು ಸಹಜವಾಗಿ ಯಾವತ್ತಿನಿಂದಲೋ ಇರುವುದೆಂದು ನೋಡುತ್ತಾರೆ. ಕುಟುಂಬವನ್ನು ಒಟ್ಟು ಸಾಮಾಜಿಕ ರಚನೆಯಿಂದ ಬೇರೆ ಮಾಡಿ ಸಹಜವಾದ ಘಟಕವೆಂದು ಅಂಗೀಕರಿಸುವುದರೊಂದಿಗೆ ಅದನ್ನು ಮತ್ತೆ ಈ ಸಾಮಾಜಿಕ ಪ್ರಪಂಚಕ್ಕೆ ಸೇರಿಸುವುದರಲ್ಲೂ ಅದನ್ನು ವಿಶ್ಲೇಷಿಸುವುದರಲ್ಲೂ ಸಮಸ್ಯೆಗಳು ಬರುತ್ತವೆ. ಕುಟುಂಬ ಸಹಜವಾದ ಘಟಕವಲ್ಲ. ಸಾಮಾಜಿಕವಾದ ಘಟಕವೆಂಬ ಚೈತನ್ಯವನ್ನು ಅಭಿವೃದ್ಧಿಗೊಳಿಸಬೇಕಾದ ಅಗತ್ಯವಿದೆ. ಬಂಡವಾಳಶಾಹಿ ವ್ಯವಸ್ಥೆ ಉತ್ಪಾದನೆಯನ್ನು ಸಮಾಜದೊಳಗೆ ನಡೆಸುವುದರಿಂದ ಕುಟುಂಬ ಆರ್ಥಿಕ ವ್ಯವಸ್ಥೆಗೆ ಹೊರಗಿರುವ ಪ್ರದೇಶವಾಗಿದೆ. ಮೊದಲು ಮನೆಯಲ್ಲಿ ಉತ್ಪಾದನೆ ನಡೆಯುತ್ತಿತ್ತೆಂದು ನಾವು ಗುರುತಿಸಿಕೊಳ್ಳಬೇಕು. ಕುಟುಂಬ ಬಹುಪಾಲು ಸ್ವಯಂಪೋಷಕವಾಗಿರುತ್ತಿತ್ತು. ಮನೆಗೆಲಸವೆಂದರೆ ಪೂರ್ತಿಯಾಗಿ

ಮಾನಸಿಕ ಉದ್ರೇಕಗಳಿಗೆ ಸಂಬಂಧಿಸಿದ ಕೆಲಸಗಳಲ್ಲದೆ ಆರ್ಥಿಕವಾದವು ಕೂಡಾ ಆಗುವುದರಿಂದ ಮನೆಗೆಲಸಕ್ಕೆ ಬೆಲೆ ಇರುತ್ತಿತ್ತು. ಈಗಿನ ಕುಟುಂಬ ಪ್ರಜೆಗಳಿಗೆ ಕೂಡಾ ತಮ್ಮನ್ನು ತಾವು ಉತ್ತಮಗೊಳಿಸಿಕೊಳ್ಳಲು, ಸೌಕರ್ಯವನ್ನು ಹೊಂದಲು ಇರುವ ಮತ್ತೊಂದು ಅವಕಾಶ. ಇದಕ್ಕೆ ಮುನ್ನ ಆಳುವ ವರ್ಗಗಳಿಗೇ ಪರಿಮಿತವಾದ ಈ ಕುಟುಂಬ ಸುಖ, ಸೌಕರ್ಯಗಳು, ವಿಶ್ರಾಂತಿ ಈಗ ಪ್ರಜೆಗಳವರೆಗೆ ಬಂದಿವೆ. ಇದು ಬದಲಾಗುತ್ತಿರುವ ವ್ಯವಸ್ಥೆಯಲ್ಲಿ ಭಾಗವಾಗಿ ಕುಟುಂಬದಲ್ಲಿ ಬಂದ ಬದಲಾವಣೆ. ಅದೇ ಸಮಯದಲ್ಲಿ ಇದರಿಂದ ಮನೆಯಲ್ಲಿ ಮಹಿಳೆಯರ ಕೆಲಸಕ್ಕೆ ಬೆಲೆ ಕಡಿಮೆಯಾಯಿತು. ಸ್ತ್ರೀತ್ವವೆಂದರೆ ವ್ಯಕ್ತಿಗತ ವಿಷಯವೆಂದು ಗುರುತಿಸಲಾಯಿತು.

ನೂರು ವರ್ಷಗಳ ಹಿಂದಿನ ಯುರೋಪ್‌ನ್ನು ನಾವು ಗಮನಿಸಿದ್ದಾದರೆ ಕುಟುಂಬ ಎಂಬುದು ಒಂದು ಘಟಕವಾಗಿರಲಿಲ್ಲ. ಅದರ ಬದಲು ಒಟ್ಟು ಒಂದು ಚಾವಣಿಯ ಕೆಳಗೆ ವಾಸಿಸುವರೆಲ್ಲರೂ ಒಂದು ಘಟಕವಾಗಿ ಪರಿಗಣಿಸಲ್ಪಡುತ್ತಿದ್ದರು. ಕೆಲಸದಾಳುಗಳೊಡನೆ ಮನೆಯವರೆಲ್ಲರೂ ಮನೆಗೆ ಸೇರಿದವರಾಗುತ್ತಿದ್ದರು. ಕ್ರಮ ಕ್ರಮೇಣ ಕುಟುಂಬವೆಂದರೆ ಒಂದು ಚಾವಣಿಯ ಕೆಳಗೆ ವಾಸಿಸುವವರನ್ನಲ್ಲದೆ ಒಂದು ಮನೆಯಲ್ಲಿ ವಾಸಿಸುವ ರಕ್ತ ಸಂಬಂಧಿಕರೆಂಬ ಅರ್ಥ ಸ್ಥಿರವಾಯಿತು.

ನಿಧಾನವಾಗಿ ಕುಟುಂಬವೆಂದರೆ ಗಂಡ ಹೆಂಡತಿ ಅವರ ಮಕ್ಕಳು ಎಂಬ ಅರ್ಥ ಬಂದಿತು. ಕುಟುಂಬ ಗಾತ್ರದಲ್ಲಿ ಚಿಕ್ಕದಾಗಿ ಹೋಯಿತು. ಕುಟುಂಬ ಮಾಡುವ ನಿಜವಾದ ಕೆಲಸಗಳ ಬೆಲೆ ಹೋಗಿ ಆದರ್ಶಗೊಳಿಸಲ್ಪಟ್ಟ ಕೆಲಸಗಳು ಹೆಚ್ಚಾದವು. ನಿಜಕ್ಕೂ ಕುಟುಂಬಕ್ಕಿಂತ ಕುಟುಂಬ ಜೀವನವೆಂಬ ಪರಿಕಲ್ಪನೆ ಮತ್ತಷ್ಟು ಬಲವಾದದ್ದಾಗಿ ತಯಾರಾಯಿತು (ಪರಿಕಲ್ಪನೆ ಬಲವಾಗಿ ತಯಾರಾಗುತ್ತದೆ ಎಂಬುದಕ್ಕೆ ಒಂದು ಉದಾಹರಣೆ, ನಿಜ ಜೀವನದಲ್ಲಿ ಮದುವೆಗಳು ಬಲು ಬೇಗ ಭಗ್ನವಾಗುತ್ತಿದ್ದರೂ ಪಾತಿವ್ರತ್ಯ, ಪವಿತ್ರತೆ ಎಂಬುದು ಅನಿವಾರ್ಯವಾಗದೆ ಎಲ್ಲೋ ಒಂದು ಕಡೆ ಕಾಣಿಸುತ್ತಿದ್ದವಾದರೂ ಪ್ರಚಾರ ವ್ಯವಸ್ಥೆ ಸತಿಪದ್ಧತಿಯನ್ನು ದೊಡ್ಡದು ಮಾಡುತ್ತದೆ, ಬೈತಲೆಯಲ್ಲಿ ಕುಂಕುಮವಿಟ್ಟುಕೊಳ್ಳುವುದು, ಮಂಗಳಸೂತ್ರಕ್ಕಿರುವ ಶಕ್ತಿ ಇವುಗಳನ್ನು ಪ್ರಚಾರ ಮಾಡುತ್ತದೆ).

ನಾವು ಕುಟುಂಬ ಎಂಬ ಪದಕ್ಕೆ ಬದಲು ಮತ್ತಷ್ಟು ಒಳ್ಳೆಯ ಪದವನ್ನು ಬಳಸಬಹುದು. ಕೌಟುಂಬಿಕ ಪರಿಕಲ್ಪನೆ. ಈ ಪರಿಕಲ್ಪನೆಯಲ್ಲೇ ಜಂಡರ್ ಎಂಬ ಸಾಮಾಜಿಕ ರಚನೆ ನಡೆಯುತ್ತದೆ. ನಿಜಕ್ಕೂ ಕುಟುಂಬಕ್ಕಿಂತಲೂ ಕುಟುಂಬ ಪರಿಕಲ್ಪನೆಯಲ್ಲೇ ಜಂಡರ್ ಅನ್ನೂ ಗುರುತಿಸುವುದು, ಜಂಡರ್‌ಗೆ ಅರ್ಥ ಏರ್ಪಡುವುದು ನಡೆಯುತ್ತದೆ.

### ಪಿತೃಸ್ವಾಮ್ಯ

ಎಷ್ಟು ಸಂಕ್ಷಿಪ್ತವಾಗಿಯಾದರೂ ಸರಿ ಪಿತೃಸ್ವಾಮ್ಯವೆಂಬ ಕಲ್ಪನೆಯನ್ನು ಕೂಡಾ ಪರಿಚಯಿಸುವುದು ಅಗತ್ಯ. ರ್‍ಯಾಡಿಕಲ್ ಸ್ತ್ರೀವಾದಿಗಳು ಪಿತೃಸ್ವಾಮ್ಯವನ್ನು ವ್ಯಾಪಕವಾದ ಅರ್ಥದಲ್ಲಿ ಹೀಗೆ ನಿರ್ವಚಿಸಿದ್ದಾರೆ.

ಪಿತೃಸ್ವಾಮ್ಯವೆಂದರೆ ಪುರುಷರು ಸ್ತ್ರೀಯರ ಮೇಲೆ ಚಲಾಯಿಸುವ ರಾಜಕೀಯ ಅಧಿಕಾರ. ಸಮಾಜದಲ್ಲಿ ರಾಜಕೀಯ ವಿಭಜನೆಯೊಡನೆ ಸಮಾನವಾಗುವ, ಸರಿ ಹೋಗುವ ಅಧಿಕಾರ. ಪಿತೃಸ್ವಾಮ್ಯವನ್ನು ಈ ರೀತಿ ಕೂಡ ನಿರ್ವಚಿಸಬಹುದು.

ಮಹಿಳೆಯರ ಶ್ರಮವನ್ನು, ಲೈಂಗಿಕತೆಯನ್ನು, ಸಂತಾನೋತ್ಪತ್ತಿ ಶಕ್ತಿಯನ್ನು, ಭೌತಿಕವಾಗಿಯೂ, ಪರಿಕಲ್ಪನೆಯಲ್ಲೂ ಪುರುಷರು ನಿಯಂತ್ರಿಸುವ ಒಂದು ಪದ್ಧತಿ. ಸಮಾಜವಾದಿ ಸ್ತ್ರೀವಾದಿಗಳು ಪಿತೃಸ್ವಾಮ್ಯವನ್ನು ಬಂಡವಾಳಶಾಹಿ ವ್ಯವಸ್ಥೆಗೂ ಮೊದಲಿದೆಯೆಂದು ನೋಡುತ್ತಾರೆ. ಪಿತೃಸ್ವಾಮ್ಯವೆಂದರೆ ಸ್ತ್ರೀತ್ವ-ಪುರುಷತ್ವವೆಂಬ ಪಾತ್ರಗಳ ಮೂಲಕ ಪುರುಷರಿಗೆ ಬಂದ ಅಧಿಕಾರವೆಂದು, ಆ ಅಧಿಕಾರ ಅವಿಭಕ್ತ ಕುಟುಂಬದ ಮೂಲಕ ವ್ಯವಸ್ಥೀಕೃತಗೊಳಿಸಲ್ಪಟ್ಟಿದೆಯೆಂದು ಸಮಾಜವಾದಿ ಸ್ತ್ರೀವಾದಿಗಳು ಹೇಳುತ್ತಾರೆ.

ಮಹಿಳೆಯ ಶೋಷಣೆಯೆಂಬುದು ಕೇವಲ ಪಿತೃಸ್ವಾಮ್ಯದಿಂದಲೇ ಹುಟ್ಟಿದೆಯೇ? ಪಿತೃಸ್ವಾಮ್ಯ ಬಂಡವಾಳಶಾಹಿ ವ್ಯವಸ್ಥೆಗೆ ಆಚೆಯಿರುವ ಪುರುಷಾಧಿಪತ್ಯ ವಿಧಾನವೇ? ಅಥವಾ ಪಿತೃಸ್ವಾಮ್ಯ ಸಂಬಂಧಗಳ ರಚನೆ ಬಂಡವಾಳಶಾಹಿಗೆ ಅಗತ್ಯವೇ? ಎಂಬುದು ನಮ್ಮ ಮುಂದಿರುವ ಸಮಸ್ಯೆ.

ಪಿತೃಸ್ವಾಮ್ಯವನ್ನು ಕೇವಲ ಪುರುಷಾಧಿಕಾರವಾಗಿ ನೋಡುವುದೆಂದರೆ ಆ ಅಭಿಪ್ರಾಯವನ್ನು ಜನಪ್ರಿಯಗೊಳಿಸುವುದು, ಚರಿತ್ರೆಯ ಭಾಗವಾಗಿ (Dehistorises) ನೋಡದೇ ಹೋಗುವುದು. ಪಿತೃಸ್ವಾಮ್ಯವನ್ನು ಭೌತಿಕವಾದದ ಪ್ರಕಾರ ಲೆಕ್ಕ ಹಾಕಬೇಕಾದರೆ ಮಹಿಳೆಯರ ಪರಿಸ್ಥಿತಿಯನ್ನು ಅಂದಿನ ವಿಶೇಷ ಚಾರಿತ್ರಿಕ ಪರಿಸ್ಥಿತಿಗಳೊಡನೆ ಲೆಕ್ಕ ಹಾಕುವುದು ಒಂದು ಮಾರ್ಗ. ಆದ್ದರಿಂದ ಎರಡು ವಿಧವಾದ ನಿರ್ವಚನ ಬೇಕು.

೧. ಏಕಪತ್ನಿತ್ವ ವಿವಾಹಗಳ ಮೂಲಕ ಸ್ತ್ರೀಯರ ಸಂತಾನೋತ್ಪತ್ತಿಯನ್ನು, ಲೈಂಗಿಕತೆಯನ್ನು ನಿಯಂತ್ರಣ ಮಾಡುವುದು.
೨. ಆಸ್ತಿಯ ಮೂಲಕ, ಲೈಂಗಿಕ ಶ್ರಮವಿಭಜನೆಯ ಮೂಲಕ ಮಹಿಳೆಯನ್ನು ಆರ್ಥಿಕವಾಗಿ ಆಧೀನಗೊಳಿಸುವುದು.

ಅಂದರೆ ಮಹಿಳೆಯರು ಎರಡು ಬೇರೆ ಬೇರೆ ರಚನೆಯಲ್ಲಿ ಇದ್ದಾಗಲೂ ಆ ಎರಡೂ ಒಂದರೊಡನೊಂದು ತಳುಕು ಹಾಕಿಕೊಂಡೇ ಇವೆ. ವರ್ಗ, ಪಿತೃಸ್ವಾಮ್ಯ ಎಂಬುವು ಆ ಎರಡು ರಚನೆಗಳು. ಅವರು ಯಾವ ಬಗೆಯ ಪಿತೃಸ್ವಾಮ್ಯದಲ್ಲಿ, ಯಾವ ಪರಿಧಿಯಲ್ಲಿ ಇರುವರೆಂಬುದು ಯಾವ ವರ್ಗಕ್ಕೆ ಸೇರಿದ್ದಾರೆಂಬುದರ ಮೇಲೆ ಆಧಾರಪಟ್ಟಿರುತ್ತದೆ.

ಇನ್ನೊಂದು ಮಾತಿನಲ್ಲಿ ಹೇಳಬೇಕೆಂದರೆ ಬಂಡವಾಳಶಾಹಿ ವ್ಯವಸ್ಥೆಗೆ ಮೊದಲಿನದು ಪಿತೃಸ್ವಾಮ್ಯ. ಯಾಕೆಂದರೆ ಈ ಸಮಾಜ ಲೈಂಗಿಕ ಪರವಾಗಿ ಏರ್ಪಟ್ಟಿದೆ. ಸ್ತ್ರೀ-ಪುರುಷರ ನಡುವೆ ಇರುವ ಶಾರೀರಿಕ ಭೇದಗಳಿಗೆ ಕೊಡುವ ಸೈದ್ಧಾಂತಿಕ ರಾಜಕೀಯ ವ್ಯಾಖ್ಯಾನದಿಂದಲೇ ಈ ವಿಧಾನ ಆರಂಭವಾಗಿದೆ. ಇನ್ನೂ ಸುಲಭವಾಗಿ, ಸರಳವಾಗಿ ಹೇಳಬೇಕೆಂದರೆ

ಮಹಿಳೆಯರು ಮಾನವ ಜಾತಿಯನ್ನು ಉತ್ಪಾದನೆ ಮಾಡುತ್ತಿದ್ದಾರೆಂಬ ವಿಷಯವನ್ನು ಗಂಡಸರು ವ್ಯಾಖ್ಯಾನಿಸಿ ರಾಜಕೀಯವಾಗಿ ಬಳಸಿಕೊಳ್ಳುತ್ತಿದ್ದಾರೆ.

ಈ ಆಧಿಪತ್ಯವನ್ನು ರಕ್ಷಿಸುವುದಕ್ಕೆ ಪಿತೃಸ್ವಾಮ್ಯ ಸಂಸ್ಕೃತಿ ಒಂದು ಚಾರಿತ್ರಿಕ ಸ್ಥಿತಿಯಿಂದ ಇನ್ನೊಂದು ಚಾರಿತ್ರಿಕ ಸ್ಥಿತಿಗೆ ನಡೆಸಲ್ಪಡುತ್ತದೆ. ವರ್ಷಾನುಗಟ್ಟಲೆ ತಿಕ್ಕಲ್ಪಟ್ಟ ಪರಿಕಲ್ಪನೆಯ ಒತ್ತಡದಿಂದ ಈವತ್ತು ಸಮಾಜದಲ್ಲಿ ಲೈಂಗಿಕ ವಿವಕ್ಷತೆ ಆಧಾರಪಟ್ಟಿದೆ. ಆದ್ದರಿಂದ ಭೌತಿಕ ಪರಿಸ್ಥಿತಿಗಳು ಪರಿಕಲ್ಪನೆಯನ್ನು ನಿರ್ವಚಿಸಿದರೆ ಪರಿಕಲ್ಪನೆ ಕೂಡಾ ವಾಸ್ತವ ಪರಿಸ್ಥಿತಿಗಳ ಮೇಲೆ ಪ್ರಭಾವ ಹೊಂದಿರುತ್ತದೆ. ವಾಸ್ತವವನ್ನು ಬದಲಾಯಿಸಬಲ್ಲುದು. ಅದೇ ರೀತಿ ಸ್ತ್ರೀಯರು ಅವರ ಸಾಮಾಜಿಕ ಚರಿತ್ರೆಯ ಬದಲಾವಣೆಯ ಪರಿಣಾಮದ ಫಲಿತಗಳಾದರೇ ಅವರ ಅವರ ಜೀವನವನ್ನು ಕೂಡಾ ಅವರು ತಿದ್ದಿಕೊಳ್ಳಬಲ್ಲರು. ಇದು ಎರಡೂ ಕಡೆಯಿಂದ ನಡೆಯುವ ವಿಷಯ.

ಮಹಿಳೆಯರ ಲೈಂಗಿಕತೆಯ ಮೇಲೆ ಆಧಾರಪಡುವ ಸಂತಾನೋತ್ಪತ್ತಿಯ ಸಂಬಂಧಗಳೊಡನೆ ಯಾವ ರೀತಿಯಲ್ಲಿ ಜೊತೆಗೊಳಿಸಲಾಗಿದೆಯೋ ಅರ್ಥ ಮಾಡಿಕೊಳ್ಳದೆ ಕೇವಲ ಉತ್ಪಾದನಾ ಸಂಬಂಧಗಳಲ್ಲಿಯೇ ಚಾರಿತ್ರಿಕ ಭೌತವಾದವನ್ನು ಅರ್ಥ ಮಾಡಿಕೊಳ್ಳಲಾರವೆಂದು ಸಮಾಜವಾದಿ ಸ್ತ್ರೀವಾದಿಗಳೆನ್ನುತ್ತಾರೆ. ಮಹಿಳೆಯರ ಜೀವನದಲ್ಲಿ ಅಧಿಕಾರ ಸಂಬಂಧಗಳ ವಾಸ್ತವತೆಯನ್ನು ಅರ್ಥಮಾಡಿಕೊಳ್ಳಲು ಲೈಂಗಿಕ ವಿಷಯವನ್ನಷ್ಟೇ ಗಮನಿಸಿದರೂ (ರಾಡಿಕಲ್ ಸ್ತ್ರೀವಾದಿಗಳಂತೆ) ಅಥವಾ ಒಂದು ವರ್ಗವನ್ನು ಮಾತ್ರವೇ ನೋಡಿದರೂ (ಮಾರ್ಕ್ಸ್‌ವಾದಿಗಳಂತೆ) ಸರಿ ಹೋಗದು. ಅಧಿಕಾರ(Power) ಎಂಬುದನ್ನು ವಿಶ್ಲೇಷಿಸುವುದಕ್ಕೆ ವರ್ಗ, ಪಿತೃಸ್ವಾಮ್ಯ ಬುನಾದಿ - ಎರಡೂ ಅಗತ್ಯವೇ.

ನಾವು ಬಹಳ ಸ್ಪಷ್ಟವಾಗಿ ಅರ್ಥ ಮಾಡಿಕೊಳ್ಳಬೇಕಾದ ಇನ್ನೊಂದು ವಿಷಯ ದರೋಡೆಗೂ, ಶೋಷಣೆಗೂ ಇರುವ ವ್ಯತ್ಯಾಸ. ಮಾರ್ಕ್ಸ್ ಎಂಗೆಲ್ಸ್‌ರ ದೃಷ್ಟಿಯಲ್ಲಿ ದರೋಡೆ, ಶೋಷಣೆ ಎಂಬುವು ಸಮನಾರ್ಥಕಗಳೇ ಆದರೂ ದರೋಡೆಯೆಂಬುದು ಬಂಡವಾಳಶಾಹಿ ವ್ಯವಸ್ಥೆಯಲ್ಲಿನ ವರ್ಗ ಸಂಬಂಧಗಳಲ್ಲಿರುವ ಆರ್ಥಿಕ ವಾಸ್ತವತೆಯನ್ನು ಮಾತ್ರ ಹೇಳುತ್ತದೆ. ಪಿತೃಸ್ವಾಮ್ಯದ, ಜಾತಿಪರವಾದ ಬಂಡವಾಳಶಾಹಿ ಸಂಬಂಧಗಳ ಚೌಕಟ್ಟಿನಲ್ಲಿ ನಿರ್ವಚಿಸಲ್ಪಡುವ ಮಹಿಳೆಯರು, ಇನ್ನೂ ಇತರ ಸಮೂಹಗಳ ಬಗ್ಗೆ ಕೂಡಾ ಶೋಷಣೆ ಎಂಬ ಪದವನ್ನು ಹೇಳಲಾಗುತ್ತಿದೆ. ಶ್ರಾಮಿಕ ಶಕ್ತಿಯಲ್ಲಿ ಸ್ತ್ರೀ-ಪುರುಷರಿಬ್ಬರಿಗೂ ನಡೆಯುವುದು ದರೋಡೆ. ಪಿತೃಸ್ವಾಮ್ಯದ ಲೈಂಗಿಕ ಆಧಿಪತ್ಯದಲ್ಲಿ ಮಹಿಳಾ ಅಸ್ತಿತ್ವವನ್ನು ನಿರ್ವಚಿಸುವ ಸಂಬಂಧಗಳಿಂದ ಕೂಡ ಮಹಿಳೆಯರ ಶೋಷಣೆ ನಡೆಯುತ್ತದೆ. ದರೋಡೆ, ಲೈಂಗಿಕ ಶೋಷಣೆಯ ಜೊತೆ ಜಾತಿಪರವಾದ ಶೋಷಣೆ ಆಕೆಯನ್ನು ಜಾತಿಯ ಚೌಕಟ್ಟಿನಲ್ಲಿಡುತ್ತದೆ. ಶೋಷಣೆಯಲ್ಲಿ ದರೋಡೆ ಕೂಡಾ ಒಂದು ಭಾಗ. ಆದರೆ ಶೋಷಣೆ ಮತ್ತಷ್ಟು ಸಂಕೀರ್ಣವಾದ ವಾಸ್ತವಿಕತೆ. ಇದು ಅಧಿಕಾರದ ಇನ್ನೊಂದು ಬದಿ. ಈ ಎರಡೂ ಲೈಂಗಿಕ,

ವರ್ಗ, ಸಮೂಹ, ಜಾತಿ ಮುಂತಾದವುಗಳಿಂದ ಹುಟ್ಟಿ ಬಂದವುಗಳೇ. ಸಮಾಜದಲ್ಲಿ ಲೈಂಗಿಕ ಶ್ರಮವಿಭಜನೆಯಲ್ಲಿನ ಆಧಿಪತ್ಯ ಸಂಬಂಧಗಳನ್ನು ಶೋಷಣೆ ಪ್ರತಿಬಿಂಬಿಸುತ್ತದೆ. ಅದರಿಂದಲೇ ಮಹಿಳೆಯರ ಶೋಷಣೆಯನ್ನು ವರ್ಗದೊಡನೆ ಗುರುತಿಸಿದರೆ ಸರಿ ಹೋಗದೆಂದು, ಆರ್ಥಿಕ ವರ್ಗ ರಚನೆಯನ್ನು ಸಮಾಜದಲ್ಲಿನ ಅಧಿಕಾರ ರಚನೆಯೊಂದಿಗೆ ಸಮಾನಗೊಳಿಸಿದರೆ ಮಾತ್ರ ಸರಿ ಹೋಗುವುದೆಂದು ಯಾರಾದರೂ ಅರ್ಥ ಮಾಡಿಕೊಳ್ಳ ಬಹುದು. ಪಿತೃಸ್ವಾಮ್ಯದಲ್ಲಿ ಸ್ತ್ರೀಯರ ಪರಿಸ್ಥಿತಿಯನ್ನು ರಚನಾತ್ಮಕವಾಗಿಯೂ, ಪರಿಕಲ್ಪನೆಯ ಪರವಾಗಿಯೂ ಗುರುತಿಸಬೇಕು. ವರ್ಗ ವ್ಯವಸ್ಥೆಯಲ್ಲಿ ಲೈಂಗಿಕ ವಿಧಾನ ವನ್ನೂ, ಲೈಂಗಿಕ ವಿಧಾನದಲ್ಲಿ ವರ್ಗ ವ್ಯವಸ್ಥೆಯನ್ನೂ ಅರ್ಥ ಮಾಡಿಕೊಳ್ಳಬೇಕು. ಈ ಎರಡೂ ಬೆರೆತು ಬಂಡವಾಳಶಾಹಿ ಪಿತೃಸ್ವಾಮ್ಯದಲ್ಲಿ (Capitalist Patiarchy) ಮಾನವ ಕಾರ್ಯಕ್ರಮವನ್ನು ತಿಳಿಯಪಡಿಸುತ್ತವೆ. ಆ ಎರಡೂ (ಪರಿಕಲ್ಪನೆ, ರಚನೆ) ಪರಸ್ಪರ ಬೆರೆತಿರುತ್ತವೆ. ಒಂದೊಂದನ್ನೇ ಬಿಡಿ ಬಿಡಿಯಾಗಿ ಅರ್ಥ ಮಾಡಿಕೊಳ್ಳಲಾರವು. ಈ ಪ್ರಶ್ನೆಗಳಿಗೆ ಉತ್ತರಗಳನ್ನು ಹುಡುಕುವಾಗ ಆರ್ಥಿಕ ಪರವಾದ ಅಥವಾ ಲೈಂಗಿಕವಾದ ಭೌತಿಕ ಅಸ್ತಿತ್ವಕ್ಕೂ ಪರಿಕಲ್ಪನೆಗೂ ನಡುವೆಯಿರುವ ಅಡ್ಡಗೋಡೆಯನ್ನು ಒಡೆದು ಹಾಕಬೇಕು. ಏಕೆಂದರೆ ಸಮಾಜದಲ್ಲಿ ಲೈಂಗಿಕ ಶ್ರಮವಿಭಜನೆ ಸ್ತ್ರೀಪುರುಷರಿಗೆ ಬಿಡಿ ಬಿಡಿಯಾಗಿ ವಿಧಿಸಿದ ಕರ್ತವ್ಯಗಳ ಮೇಲೆ ಆಧಾರ ಪಟ್ಟಿರುತ್ತದೆ. ಈ ವಿಧಿಗಳು ಭೌತಿಕ ರೂಪಗಳಲ್ಲಿರುತ್ತವೆ. ಮಿತ್‌ಗಳು, ಭಾವನೆಗಳು ಎಂಬುವು ಪರಿಕಲ್ಪನೆಯ ವಾಸ್ತವಗಳು. ಆ ಎರಡೂ ಸೇರಿಸಿ ಹೆಣೆಯಲ್ಪಟ್ಟವೇ, ಒಂದರೊಡನೊಂದು ಬೆರೆತಿರುವುವೇ.

**ಸಿದ್ಧಾಂತ**

ಯಾವ ಕ್ರಾಂತಿ-ಚಳುವಳಿಗಾದರೂ ಸಿದ್ಧಾಂತ ಪ್ರಧಾನವಾದುದೇ. ಸಿದ್ಧಾಂತ ನಾವು ಎದುರುಗೊಳ್ಳುವ ಸಮಸ್ಯೆಗಳನ್ನು ವಿವರಿಸುತ್ತದೆ. ಸಾಮಾಜಿಕ ಜೀವನವನ್ನು ನಡೆಸುವ ಶಕ್ತಿಗಳನ್ನು ವಿಶ್ಲೇಷಿಸುತ್ತದೆ. ನಾವು ಆಸಕ್ತಿ ತೋರಿಸಬೇಕಾದ, ಕೇಂದ್ರೀಕರಿಸಬೇಕಾದ ಸಮಸ್ಯೆಗಳನ್ನು ನಿರ್ವಚಿಸುತ್ತದೆ. ನಾವು ಅಭಿವೃದ್ಧಿಗೊಳಿಸುತ್ತಿರುವ ರಚನೆಗಳನ್ನು ಲೆಕ್ಕಹಾಕಿ ವಿಮರ್ಶಾ ಸಾಮರ್ಥ್ಯವನ್ನು ನಮಗೆ ನೀಡುತ್ತದೆ. ಆದರೆ ಸಿದ್ಧಾಂತದಲ್ಲಿ ಕಾರ್ಯಕ್ರಮ ಕೂಡಾ ಅಡಗಿರುತ್ತದೆ. ಅಂತೆಯೇ ವಾಸ್ತವಿಕತೆಯನ್ನು ಅರ್ಥ ಮಾಡಿಕೊಳ್ಳುವ ಒಂದು ವಿಧಾನವನ್ನು ಕೂಡಾ ಹೊಂದಿರುತ್ತದೆ. ನಮ್ಮ ಪ್ರಾಪಂಚಿಕ ಅರಿವು ಎಂತಹುದೆಂಬುದು ನಮ್ಮ ಸಿದ್ಧಾಂತದಲ್ಲಿ ಅಡಗಿರುತ್ತದೆ. ಈ ಅರಿವಿನಲ್ಲಿ ಒಂದು ರಾಜಕೀಯ ನಿರ್ಣಯ ಸೇರಿರುತ್ತದೆ.

ಒಟ್ಟಾರೆ ಸ್ತ್ರೀವಾದವೆನ್ನುವುದು ಒಂದು ವಿಶ್ಲೇಷಣಾ ವಿಧಾನ. ಜೀವನವನ್ನು- ರಾಜಕೀಯ ವನ್ನು ಅರ್ಥ ಮಾಡಿಕೊಳ್ಳುವ ಒಂದು ವಿಧಾನ. ಮಹಿಳೆಯರ ಬಗ್ಗೆ ಸಿದ್ಧವಾಗಿರುವ ರಾಜಕೀಯ ಪರಿಹಾರಗಳನ್ನು ನೀಡುವುದಲ್ಲದೆ ಪ್ರಶ್ನೆಗಳನ್ನು ಕೇಳಲು, ಅದಕ್ಕೆ

ಪರಿಹಾರಗಳನ್ನು ಹುಡುಕಲು ಇರುವ ಒಂದು ಮಾರ್ಗ. ಮಹಿಳೆಯರು ಈ ಪದ್ಧತಿಯನ್ನು ಮಹಿಳೆಯರಾಗಿ ತಾವು ಪಡೆದ ಅನುಭವಗಳಿಗೆ ಅನ್ವಯಿಸಿಕೊಳ್ಳುತ್ತಾರೆ. ಅದರೊಂದಿಗೆ ಅವರ ಅಸ್ತಿತ್ವವನ್ನು ಅರ್ಥೈಸುವ ಸಾಮಾಜಿಕ ಅನುಭವವನ್ನು ಪರಿವರ್ತಿಸಿಕೊಳ್ಳುವುದಕ್ಕೆ ಪ್ರಯತ್ನಿಸುತ್ತಾರೆ. ಅನುಭವಗಳನ್ನು ಪರೀಕ್ಷಿಸಿ ಅರ್ಥ ಮಾಡಿಕೊಳ್ಳಲು ಪ್ರಾಧಾನ್ಯತೆಯನ್ನು ಕೊಡುತ್ತಾ ತಮ್ಮ ಪ್ರಜ್ಞೆಯನ್ನು ಬೆಳೆಸುವುದೂ, ಮಹಿಳೆಯರ ಬದುಕನ್ನು ಅರ್ಥೈಸುವ ಕ್ರಿಯೆಗೆ ವ್ಯಕ್ತಿಗತ ಅನುಭವವನ್ನು ಜೋಡಿಸುವುದೂ ಸ್ತ್ರೀವಾದದಲ್ಲಿ ಪ್ರಾಥಮಿಕವಾದ ವಿಧಾನ. ಈ ವಿಶ್ಲೇಷಣೆ ನೆಲದಿಂದ ಪ್ರಾರಂಭವಾಗುತ್ತದೆ. ಬದುಕನ್ನು ಕುರಿತು ಆಲೋಚಿಸುವ ಮೇಧಾವಿಗಳು ಮಾತ್ರವಲ್ಲದೆ ನಮಗಿರುವ ಗ್ರಹಣ ಶಕ್ತಿಯೆಲ್ಲದರೊಡನೆ ಬದುಕನ್ನು ಪರೀಕ್ಷಿಸಲು ಪ್ರಯತ್ನಿಸುತ್ತೇವೆ. ವ್ಯಕ್ತಿಗತವಾದ ಅನುಭವಗಳಿಗೂ ರಾಜಕೀಯ ಸಾಮಾನ್ಯೀಕರಣಕ್ಕೂ ಮಧ್ಯೆ ಸಂಬಂಧವೇರ್ಪಟ್ಟು ಸಾಮಾನ್ಯೀಕರಣ ಅಭಿವೃದ್ಧಿ ಹೊಂದುತ್ತವೆ. ನಮ್ಮ ಗತವನ್ನು, ನಮ್ಮ ಜೀವನವನ್ನು ಈ ರೀತಿಯಾಗಿ ಅರ್ಥ ಮಾಡಿಕೊಳ್ಳುವುದರಿಂದ ನಮ್ಮ ಅನುಭವಗಳೇ ಅಲ್ಲದೆ ನಾವು ಕೂಡ ಬದಲಾಗುತ್ತೇವೆ.

ಪ್ರತಿಯೊಬ್ಬ ಮಹಿಳೆಯೂ ಶಕ್ತಿಯುತವಾದ ಸಿದ್ಧಾಂತವನ್ನು ನಿರ್ಮಿಸಬಲ್ಲ ಮೇಧಾವಿ ಮತ್ತು ಕಾರ್ಯಕರ್ತೆಯೆಂದು ಮಹಿಳಾ ಚಳುವಳಿಯು ನಂಬುತ್ತದೆ. ಆದ್ದರಿಂದಲೇ ಈ ಚಳುವಳಿಯಲ್ಲಿ ಆ ಅರಿವನ್ನು ಹೆಚ್ಚಿಸಿಕೊಳ್ಳುವುದೆಂಬುದು ಬಹಳ ಭಿನ್ನವಾಗಿರುತ್ತದೆ. ಅದು ಆದೇಶಗಳನ್ನು ನೀಡುವುದಾಗಿ, ಅನುಸರಿಸಲು ಯೋಗ್ಯವಾದ ರಾಜಕೀಯ ಮಾರ್ಗಗಳನ್ನು ನೀಡುವುದಾಗಿ ಇರುವುದಿಲ್ಲ. ಇದಕ್ಕೆ ಬದಲಾಗಿ ಅದು ನಮ್ಮ ದೈನಂದಿನ ಜೀವನದಲ್ಲಿ ಸಜೀವ ಸಂಬಂಧವನ್ನು ಹೊಂದಿಯೂ ಆ ಜೀವನದೊಡನೆ ಬೆಳೆಯುತ್ತಾ ನಮ್ಮ ಅರಿವನ್ನು ಹೆಚ್ಚಿಸಿಕೊಳ್ಳಲು ಸಹಾಯ ಮಾಡುತ್ತದೆ. ಈ ಸಿದ್ಧಾಂತದೊಡನೆ ಕಾರ್ಯ ನಿರ್ವಹಿಸುವುದರಿಂದ ನಮ್ಮ ಅಸ್ತಿತ್ವವನ್ನು ಒಂದು ಸಾಮಾಜಿಕ ವ್ಯವಸ್ಥೆಯ ಭಾಗವಾಗಿ ನೋಡಲು ತೊಡಗುತ್ತೇವೆ. ನಮ್ಮ ಸಾಮಾಜಿಕ ಜಗತ್ತನ್ನು ನಾವು ಪರಿವರ್ತಿಸಬಲ್ಲವೆಂಬ ಚಿಂತನೆ ನಮಗೆ ಬಲವನ್ನು ಕೆಲಸ ಮಾಡಬಲ್ಲ ಶಕ್ತಿಯನ್ನು ನೀಡುತ್ತದೆ.

ಆ ವಿಧವಾಗಿ ನಮ್ಮನ್ನು ನಾವು ಹೊಸದಾಗಿ ನಿರ್ವಚಿಸಿಕೊಳ್ಳುವುದು ಆ ಬದಲಾವಣೆಯಲ್ಲಿ ಬಿಡಿಸಲಾಗದ ಭಾಗವಾಗುತ್ತದೆ. ನಮಗೆ ಇತರರೊಡನೆ ಇರುವ ಸಂಬಂಧಗಳು - ಅವರ ಮೇಲೆ ಆಧಾರಪಡುವುದಲ್ಲದೆ ನಮ್ಮನ್ನು, ನಮ್ಮ ನಿರ್ವಚನೆಯನ್ನು ಹೇಗೆ ಬಲಪಡಿಸುತ್ತಿವೆ, ಹೇಗೆ ಈ ಸಂಬಂಧಗಳು ಹೊಸ ಶಕ್ತಿಯನ್ನು ಕೊಡುತ್ತವೆ ಎಂದು ನಾವು ಪ್ರಶ್ನಿಸಿಕೊಳ್ಳಬೇಕು. ನಮ್ಮನ್ನು ನಾವೇ ಬದಲಾಯಿಸಿಕೊಳ್ಳುವುದು, ಸಾಮಾಜಿಕ ವ್ಯವಸ್ಥೆಯನ್ನು ಸಂಸ್ಥೆಗಳನ್ನು ಬದಲಾಯಿಸುವುದು ಎಂಬುದು ಒಂದೇ ವಿಷಯಕ್ಕಿರುವ ಎರಡು ಕೋನಗಳು. ಒಂದು ಕೋನ ಇನ್ನೊಂದು ಕೋನವನ್ನು ಅಗತ್ಯಗೊಳಿಸುತ್ತದೆ. ಬಂಡವಾಳಶಾಹಿ ವ್ಯವಸ್ಥೆಯನ್ನು ಬೇರ್ಪಡಿಸಿದ ಬದುಕು ಎರಡೂ ಆಯಾಮಗಳನ್ನು ಪುನಃ ಸೇರಿಸಲು ಸ್ತ್ರೀವಾದಿ

ಆಚರಣೆಯು ಪ್ರಯತ್ನಿಸುತ್ತಿದೆಂದು ನಮಗೆ ತಿಳಿಯುತ್ತದೆ. ಈ ಉದ್ವೇಗವನ್ನು, ಜ್ಞಾನದೃಷ್ಟಿಯನ್ನು ಜತೆಗೂಡಿಸಲು ಇದು ಪ್ರಯತ್ನಿಸುತ್ತದೆ.

ಮಹಿಳೆಯರು ಪ್ರತ್ಯೇಕಿಸಲ್ಪಟ್ಟವರಂತಲ್ಲದೆ ಸಮಾಜದೊಡನೆ ಕಲೆತು ಬದುಕುವುದಕ್ಕೆ ಎಷ್ಟರಮಟ್ಟಿಗೆ ಸಹಾಯ ಮಾಡಿದೆ ಎನ್ನುವುದರ ಮೇಲೆಯೇ ಸ್ತ್ರೀವಾದದ ಯಶಸ್ಸು ಆಧಾರಪಟ್ಟಿರುತ್ತದೆ.

ಮಹಿಳೆಯರು ತಮ್ಮ ಸೃಜನಾತ್ಮಕ ಶಕ್ತಿಯನ್ನು ಗ್ರಹಿಸುವಂತೆ ಮಾಡುವುದರಲ್ಲಿ, ಅವರ ವಿಮರ್ಶನಾ ಸಾಮರ್ಥ್ಯವನ್ನು ಬೆಳೆಸುವುದರಲ್ಲಿ, ತಮ್ಮ ಭುಶಕ್ತಿಯನ್ನು ಕತ್ತರಿಸುವ ಬಗ್ಗೆ ಭಾವಗಳನ್ನು ಒತ್ತಟ್ಟಿಗಿಟ್ಟು ತಮ್ಮವು ಒಂದು ಹೊಸ ಅರಿವನ್ನು ಏರ್ಪಡಿಸಿಕೊಳ್ಳುವಲ್ಲಿ ಸ್ತ್ರೀವಾದ ಎಷ್ಟರಮಟ್ಟಿಗೆ ಸಹಾಯ ಮಾಡಿದೆ ಎನ್ನುವುದರ ಮೇಲೆ ಅದರ ಯಶಸ್ಸು ನಿಂತಿದೆ.

ಸಮಕಾಲೀನ

# ಮಹಿಳಾ ಶಿಕ್ಷಣ : ಚರ್ಚೆಯ ನೆಲೆಗಳು

ಶಿವಾನಂದ ಎಸ್. ವಿರಕ್ತಮಠ

'ಸ್ತ್ರೀಶಿಕ್ಷಣ'ವನ್ನು ಕುರಿತ ಚರ್ಚೆ ಚಿಂತನೆಯನ್ನೂ ಆರಂಭಿಸುವ ಮೊದಲು ಈ ವ್ಯವಸ್ಥೆಯ ಬಗೆಗಿರುವ ಪೂರ್ವ ಪಕ್ಷ, ಅದರ ಸ್ವರೂಪ ಹಾಗೂ ಅಲ್ಲಿನ ಲಿಂಗತಾರತಮ್ಯದ ನೆಲೆಗಳನ್ನು ಗ್ರಹಿಸಲಾಗಿದೆ. ವಾಸ್ತವವಾಗಿ 'ಸ್ತ್ರೀಶಿಕ್ಷಣ'ದಲ್ಲಿ 'ಸ್ತ್ರೀಗಾಗಿ ಶಿಕ್ಷಣ' ಎಂಬ ಮುಖ್ಯ ಉದ್ದೇಶವೇ ಆಧಾರಕಲ್ಪವಾಗಿದೆ. ಪ್ರಜ್ಞಾರಹಿತವಾದದ್ದು, ತಿಳುವಳಿಕೆಯಿಲ್ಲದಿ ರುವುದು, ಜಾಗ್ರತಿಗೆ ಒಳಗಾಗಬೇಕಾಗಿರುವುದೆಲ್ಲವೂ 'ಸ್ತ್ರೀಸಮೂಹ' ಎಂಬ ಆಶಯವನ್ನು 'ಸ್ತ್ರೀಶಿಕ್ಷಣ' ಪರಿಕಲ್ಪನೆಯೊಳಗೆ ('ಹೆಣ್ಣುಮಕ್ಕಳ ಬುದ್ಧಿ ಮೊಳಕಾಲು ಕೆಳಗೆ' ಎಂಬ ಗಾದೆ ಮಾತು ಈ ಹಿನ್ನೆಲೆಯಲ್ಲಿಯೇ ಸಾಮಾಜಿಕ ಪ್ರಕ್ರಿಯೆಯಲ್ಲಿ ಬಳಕೆಯಾಗುತ್ತಿದೆ ಎಂಬುದನ್ನು ಗಮನಿಸ ಬೇಕು.) ಬಿಂಬಿಸಲಾಗಿದೆ. ಈ ಉದ್ದೇಶಿತ ಬಿಂಬವು ಆಕಾರ ಪಡೆದುಕೊಳ್ಳುವುದು ಮುಂದಿನ ಶೈಕ್ಷಣಿಕ ಪ್ರಕ್ರಿಯೆಯಾಗಿದೆ ಅಷ್ಟೆ. ಈಗಿನಮಟ್ಟಿಗೆ 'ಸ್ತ್ರೀಶಿಕ್ಷಣ'ವೆಂದಾಗ ಸ್ತ್ರೀಯರಿಗಾಗಿ ಶಿಕ್ಷಣ ಎಂಬ ಅರ್ಥವ್ಯಾಪ್ತಿಯೇ ಗಮನಕ್ಕೆ ಬರುತ್ತದೆ. ಈ ಕಾರಣಗಳಿಂದಾಗಿ ನಮ್ಮ ಪಂಚವಾರ್ಷಿಕ ಯೋಜನೆ ಹಾಗೂ ಅವುಗಳ ಅನುಷ್ಠಾನದ ಕಾರ್ಯಕ್ರಮಗಳಲ್ಲೆಲ್ಲ ಮಹಿಳೆಯನ್ನು ದುರ್ಬಲತೆ(Disability)ಯ ಮೂರ್ತರೂಪವನ್ನಾಗಿ ಕಲ್ಪಿಸಿಕೊಳ್ಳಲಾಗಿದೆ. ಈ ಅಸಾಮರ್ಥ್ಯ ಹಾಗೂ ದೌರ್ಬಲ್ಯಕ್ಕೆ ಕಾರಣವಾಗಿರುವ ಸಂಗತಿಗಳನ್ನು ಪತ್ತೆ ಮಾಡುವ ಬದಲಾಗಿ ಪೂರ್ವಕಲ್ಪಿತ ಸಾಮಾಜಿಕ ನಂಬಿಕೆ(Prejudices)ಗಳನ್ನೇ ಮತ್ತೆ ಮತ್ತೆ ಕ್ರಿಯಾಚರಣೆಗೆ ತರಲಾಗುತ್ತಿದೆ. ಈ ಉದ್ದೇಶಕ್ಕಾಗಿ ಸರ್ಕಾರಿ ಯಂತ್ರದ ಮೂಲಕ ಮಹಿಳೆ ಯರ ಸಂರಕ್ಷಣೆಗಾಗಿ ಎಂದು ಕಲ್ಯಾಣಕಾರಿ (Welfare) ಕಾರ್ಯಕ್ರಮಗಳನ್ನು ರೂಪಿಸುವುದು ಮತ್ತು ಅನುಷ್ಠಾನಗೊಳಿಸುವುದು ನಡದೇ ಇದೆ. ಸಮಸ್ಯೆಯ ಮೂಲವನ್ನು ಶೋಧಿಸದೆ ಈ ಏಕಮುಖಿ ಪ್ರಯತ್ನ ಅವ್ಯಾಹತವಾಗಿ ಸಾಗಿದೆ. ಮಹಿಳೆಯ ಅಗತ್ಯಕ್ಕನುಗುಣ ವಾಗಿ ಅವಳ 'Ability' ಮತ್ತು 'Mobility'ಗಳನ್ನು ಗಮನಕ್ಕೆ ತಂದುಕೊಳ್ಳದೆ ಶೈಕ್ಷಣಿಕ ಸಂಸ್ಥೆಯ ಕಾರ್ಯಕ್ರಮಗಳು ಜಾರಿಗೊಳ್ಳುತ್ತಿವೆ.

'ಸ್ತ್ರೀಶಿಕ್ಷಣ'ವನ್ನು ಕುರಿತ ನಮ್ಮ ಸರ್ಕಾರಿ ಯಂತ್ರದ ಕಲ್ಯಾಣಕಾರಿ ಕಾರ್ಯಕ್ರಮದಲ್ಲಿ ಮುಖ್ಯವಾಗಿ ಎರಡು ಬಗೆಯ ಕ್ರಿಯಾರೂಪ ಕಾಣದೊರೆಯುತ್ತದೆ. ಈ ಪ್ರಕ್ರಿಯೆಯಲ್ಲಿ

ಕೊಡುವುದು ಒಂದಾದರೆ, ಪಡೆದುಕೊಳ್ಳುವುದು ಇನ್ನೊಂದು ಆಗಿದೆ. ಕೊಡುವುದು ಯಾವಾಗಲೂ ಕೊಡುಗೈಯಾಗಿ ಮೇಲಿದ್ದು; ಪಡೆದುಕೊಳ್ಳುವುದು ಚಾಚುಗೈಯಾಗಿ ವಿಧೇಯತೆಯಿಂದ ಕೆಳಗೇ ಇದೆ. ಶೈಕ್ಷಣಿಕ ವಲಯದ ಈ ಪ್ರಕ್ರಿಯೆಯಲ್ಲಿ ಕೊಡುವುದೆಲ್ಲ ಪುರುಷ ಪ್ರತಿನಿಧಿತ್ವವಾಗಿಯೂ ಪಡೆದುಕೊಳ್ಳುವುದೆಲ್ಲವೂ ಸ್ತ್ರೀ ಪ್ರತಿನಿಧಿತ್ವವಾಗಿ ಕಾಣಿಸಿಕೊಳ್ಳುತ್ತಿದೆ. ಈ ಒಟ್ಟು ಚಟುವಟಿಕೆಯಲ್ಲಿ 'ದಾನಿ' ಸ್ವರೂಪದ ನೆಲೆ ಇರುವುದು ಗಮನಕ್ಕೆ ಬರುತ್ತದೆ. ಇದನ್ನೇ ರೂಪಕಾತ್ಮಕವಾಗಿ 'ಸ್ತ್ರೀಶಿಕ್ಷಣ ಮಹಿಳೆಗೆ ವರದಾನ' ಎಂಬುದಾಗಿ ಜಾಹೀರುಗೊಳಿಸಲಾಗಿದೆ. 'ದಾನ'ವಾಗಿ ಬರುವುದು ಕೊಡುವವರ ಸಾಮರ್ಥ್ಯ ಹಾಗೂ ಅವರ ಇಚ್ಛೆಗೆ ಸಂಬಂಧಿಸಿರುತ್ತದೆ. ಕೊಡುವವರು ತಮಗೆ ಕೊಡಬೇಕೆನಿಸಿದ್ದನ್ನು ಕೊಡುತ್ತಾರೆಯೇ ಹೊರತು ಪಡೆಯುವವರ ಮತ್ತು ಬೇಡುವವರ ಇಚ್ಛೆ ಹಾಗೂ ಅಗತ್ಯವನ್ನು ಗುರುತಿಸಿ ಕೊಡುವುದಿಲ್ಲ. ಹೀಗಾಗಿ ಕೊಡುವಿಕೆಯನ್ನು ಆಧರಿಸಿ ಪಡೆಯುವಿಕೆ ನಡೆಯುತ್ತದೆ. ಇದೆ ಕಾರಣಕ್ಕಾಗಿ ಕೊಡುವಿಕೆ ಪ್ರಧಾನ ಸ್ಥಾನದಲ್ಲಿಯೂ ಪಡೆಯುವಿಕೆ ಅಧೀನ ಸ್ಥಾನದಲ್ಲಿಯೂ ಇರಬೇಕಾಗುತ್ತದೆ.

'ಮಹಿಳಾ ಶಿಕ್ಷಣ'ದ ಸಂದರ್ಭದಲ್ಲೆಲ್ಲ ಮೇಲೆ ನಿರ್ವಚಿಸಲಾದಂತೆ ಮಹಿಳೆಯನ್ನು ಪಡೆಯುವಿಕೆಯ ಅಧೀನ ಹಾಗೂ ಎರಡನೆಯ ಸ್ಥಾನದಲ್ಲಿ ಇಟ್ಟಿರುವುದರಿಂದ ಅವಳ ಮುಖಾಮುಖಿಯ ಅನುಸಂಧಾನದ ನೆಲೆ ಗೈರುಹಾಜರಾಗಿ ಏಕಮುಖಿಯಾದ ಶಿಕ್ಷಣ ಕ್ರಮ ಜಾರಿಯಾಗುತ್ತಾ ನಡೆದಿದೆ. ಭಾರತೀಯ ಸಂದರ್ಭದಲ್ಲಿ 'ಮಹಿಳಾ ಶಿಕ್ಷಣ' ಬಗೆಗಿನ ಒಟ್ಟು ಪ್ರಕ್ರಿಯೆಗಳ ಹಿಂದೆ ಪಿತೃಪ್ರಧಾನ ವ್ಯವಸ್ಥೆಯ ಹಿಡಿತ ಬಲವಾಗಿದೆ. ಹೀಗಾಗಿ ವಸಾಹತು ಕಾಲಘಟ್ಟದಲ್ಲಿ ಸುಧಾರಣಾವಾದಿ ನಿಲುಗಳು ಹಾಗೂ ವಸಾಹತ್ತೋತ್ತರ ಕಾಲದ ಸರ್ಕಾರಿ ಯೋಜನೆಗಳಲ್ಲೆಲ್ಲ ಈ ಮೇಲಿನ ಪ್ರಮೇಯವೇ ಕಾರ್ಯಪ್ರವೃತ್ತವಾದದ್ದರ ಪರಿಣಾಮವಾಗಿ ಮಹಿಳೆಯು ಕೇವಲ 'ರೀಸಿವರ್ ಎಂಡ್' ಆಗಿ ಕಲ್ಪಿತವಾಗಿದ್ದಾಳೆ. ಈ ಕಾರಣಗಳಿಂದ "ಶೈಕ್ಷಣಿಕ ಸಬಲೀಕರಣ"ದ ಪ್ರಶ್ನೆ ಇನ್ನೂ ಕಗ್ಗಂಟಾಗಿಯೇ ಉಳಿಯುವಂತಾಗಿದೆ.

'ಸ್ತ್ರೀಶಿಕ್ಷಣ'ವನ್ನು ಕುರಿತ ಚಿಂತನೆ ಹಾಗೂ ಕಾರ್ಯಕ್ರಮಗಳ ರೂಪಿಕೆಯ ಪ್ರಕ್ರಿಯೆಯು ವಸಾಹತು ಕಾಲಘಟ್ಟದಿಂದ ಆರಂಭವಾಗಿ ಒಂದು ಶತಮಾನವೇ ಉರುಳಿದರೂ ಅದು ನಿಜವಾದ ಅರ್ಥದಲ್ಲಿ ಮಹಿಳೆಯರ ಅರಿವಿನ ಶೈಕ್ಷಣಿಕ ಸಬಲೀಕರಣಕ್ಕೆ ದಾರಿಯಾಗಿದೆಯಾ ಎಂಬ ಮೇಲಿನ ಪ್ರಶ್ನೆಯನ್ನು ಪರಿಶೀಲನೆಗೆ ಹಚ್ಚಿದರೆ, ತಕ್ಷಣ ನಿರುತ್ತರಿಗಳಾಗುತ್ತೇವೆ. ಇದಕ್ಕೆ ಕಾರಣಗಳು ಹಲವಾರು ಇರಬಹುದು. ಈ ದಿಶೆಯಲ್ಲಿ ರೂಪಿತವಾದ ಕಾರ್ಯಕ್ರಮಗಳು ಹಾಗೂ ಅವುಗಳನ್ನು ಅನುಷ್ಠಾನಗೊಳಿಸುವ ಪ್ರಕ್ರಿಯೆಗಳ ಸಂಬಂಧಗಳಲ್ಲಿ ಸಮಸ್ಯೆ-ಸವಾಲುಗಳಿರಬಹುದು. ಇಲ್ಲಿಯವರೆಗಿನ ಶೈಕ್ಷಣಿಕ ಸಾಧನೆ ಆಂಶಿಕವಾಗಿ ಆಶಾದಾಯಕ ಅನ್ನಿಸಬಹುದು. ಆದರೆ, ಒಟ್ಟಂದದಲ್ಲಿ ನಿರೀಕ್ಷಿತಮಟ್ಟ ತಲುಪುವಲ್ಲಿ ಸಾಧ್ಯವಾಗುತ್ತಿಲ್ಲ ಯಾಕೆ? ಹಾಗಾದರೆ ಸ್ತ್ರೀಶಿಕ್ಷಣ ಕುರಿತ ಸಮಸ್ಯೆಗಳ ಬೇರುಗಳು ನೈಜವಾಗಿ ಎಲ್ಲಿವೆ? - ಈ ಮೊದಲಾದ ಪ್ರಶ್ನೆಗಳನ್ನು ಬಿಡಿಸದೆ ಕೇವಲ ಸುಧಾರಣಾ ರೂಪದ ಪರಿಹಾರ ಕಾರ್ಯಕ್ರಮಗಳಿಂದ ಭ್ರಮೆಗಳನ್ನು ಬಿತ್ತಿದಂತಾಗುತ್ತದೆ ಅಷ್ಟೆ.

'ಮಹಿಳಾ ಜಾಗೃತಿ'ಯನ್ನು ಒಂದು ಕೇಂದ್ರವನ್ನಾಗಿಸಿಕೊಂಡು ಸ್ತ್ರೀಶಿಕ್ಷಣವನ್ನು ಆರಂಭಿಸಲು ಪ್ರೋತ್ಸಾಹಿಸಿದ ರಾಷ್ಟ್ರೀಯ ಹೋರಾಟಗಾರರು; ವಸಾಹತು ಕಾಲಘಟ್ಟ ಹಾಗೂ ವಸಾಹತೋತ್ತರ ಸ್ವತಂತ್ರ ಭಾರತದಲ್ಲಿ ರೂಪಿಸಲ್ಪಟ್ಟ ಕಾರ್ಯಕ್ರಮಗಳು; ಅಂತಾರಾಷ್ಟ್ರೀಯ ಮಟ್ಟದ ವಿಶ್ವಸಂಸ್ಥೆಯಿಂದ ಅನುಮೋದಿತವಾದ ಹಾಗೂ ಭಾರತ ಸರ್ಕಾರದಿಂದ ಸಿಂಧುತ್ವವನ್ನು ಪಡೆದುಕೊಂಡ 'CEDAW' ಒಡಂಬಡಿಕೆ; ಸಂವಿಧಾನ ಕೊಡಮಾಡಿದ ಪ್ರಜಾಸತ್ತಾತ್ಮಕ ಹಕ್ಕುಗಳು ಹಾಗೂ ಸೌಲಭ್ಯಗಳು; ಆಧುನಿಕ ಭಾರತ ಸರ್ಕಾರದ ಪಂಚವಾರ್ಷಿಕ ಯೋಜನೆಗಳು ಮತ್ತು ಅವುಗಳ ಶಿಫಾರಸ್ಸುಗಳು; ಮಹಿಳಾ ಶಿಕ್ಷಣ ಅಭಿವೃದ್ಧಿಯನ್ನು ಉದ್ದೇಶಿಸಿದ ಶೈಕ್ಷಣಿಕ ಕಮಿಷನ್‌ಗಳು ಹಾಗೂ ಅವುಗಳ ವರದಿಗಳು ತಮ್ಮ ತಮ್ಮ ಪಾಲಿನ ಕೆಲಸ ಕಾರ್ಯಗಳನ್ನೇನೋ ಮಾಡಿವೆ. ಅಂತಹ ಶಿಫಾರಸ್ಸುಗಳಲ್ಲಿ ಪ್ರಸ್ತಾಪಿಸಲ್ಪಟ್ಟ ಉಚಿತ ಮಹಿಳಾ ಶಿಕ್ಷಣ, ಸಹಶಿಕ್ಷಣ, ಮಹಿಳಾ ಶಿಕ್ಷಕಿ ಮತ್ತು ದಾದಿಯರ ಅಗತ್ಯ ಪ್ರತಿಪಾದನೆ, ಮಹಿಳೆಯರಿಗಾಗಿ ಸಾಕ್ಷರತಾ ಶಿಕ್ಷಣ, ಮಹಿಳಾ ಸಮಾಖ್ಯ, ಸ್ತ್ರೀಶಕ್ತಿ ಕೇಂದ್ರಗಳ ಮೂಲಕ  ಸಬಲೀಕರಣ, ಕಡ್ಡಾಯ ಪ್ರಾಥಮಿಕ ಶಿಕ್ಷಣ, ಶಿಶುವಿಹಾರ-ಅಂಗನವಾಡಿ ಕೇಂದ್ರಗಳ ವಿಸ್ತರಣೆ, ಮಹಿಳೆಯರ ಉನ್ನತ ಶಿಕ್ಷಣಕ್ಕೆ ಪ್ರೋತ್ಸಾಹ, ಮಹಿಳಾ ವಿಶ್ವವಿದ್ಯಾಲಯಗಳ ಸ್ಥಾಪನೆ - ಹೀಗೆ ಹತ್ತು ಹಲವಾರು ಬಗೆಯಲ್ಲಿ ಸರ್ಕಾರಿ ಯಂತ್ರದ ಮೂಲಕ ನಡೆಸಿಕೊಂಡು ಬಂದ ಸ್ತ್ರೀಪರ ಶೈಕ್ಷಣಿಕ ಕಾರ್ಯಕ್ರಮಗಳ ಮೂಲಕ ಚಾರಿತ್ರಿಕವಾಗಿ ಗಮನಾರ್ಹವಾದ ನಡೆಯನ್ನು ನಡೆಸಲಾಗಿದೆ.

ಈ ಮೇಲಿನ ವಿವರಗಳ ಹಿನ್ನೆಲೆಯಿಂದ ತಿಳಿದು ಬರುವ ಸಂಗತಿ ಏನೆಂದರೆ, 'ಮಹಿಳಾ ಶಿಕ್ಷಣ'ಕ್ಕೆ ಸಂಬಂಧಿಸಿದ ಚರ್ಚೆಗಳನ್ನು ಎರಡು ನಿಟ್ಟಿನಲ್ಲಿ ನಡೆಸಬಹುದೆಂದು ತೋರುತ್ತದೆ. ಮಹಿಳಾಪರ ಉದ್ದೇಶ, ಆಶಯಗಳನ್ನು ಹೊಂದಿದ ಸರ್ಕಾರಿ ಶೈಕ್ಷಣಿಕ ಕಾರ್ಯಕ್ರಮಗಳ ರೂಪಿಕೆ ಹಾಗೂ ಅವು ಅನುಷ್ಠಾನಗೊಂಡ ಬಗೆಯ ಸ್ವರೂಪವನ್ನು ಚಾರಿತ್ರಿಕ ಹಿನ್ನೋಟದಲ್ಲಿ ಪರಿಶೀಲಿಸಿ ಚರ್ಚೆಯನ್ನು ನಡೆಸುವುದು ಒಂದು ಕ್ರಮ. ಮಹಿಳೆಯ ಅಗತ್ಯ ಹಾಗೂ ಅವಳ ಸಾಮರ್ಥ್ಯವನ್ನು ಗ್ರಹಿಸಿ ತಾತ್ವಿಕವಾಗಿ, ಶೈಕ್ಷಣಿಕ ಪರಿಕಲ್ಪನೆಗಳನ್ನೇ ಪುನರ್‌ವ್ಯಾಖ್ಯಾನಕ್ಕೆ ಒಳಪಡಿಸಿ ನಡೆಸುವುದು ಇನ್ನೊಂದು ಕ್ರಮ. ಪ್ರಸ್ತುತ ಟಿಪ್ಪಣಿಯ ಚರ್ಚೆಯಲ್ಲಿ ಎರಡನೆಯ ಮಾದರಿಯನ್ನು ಅನುಸರಿಸಲಾಗಿದೆ.

ಎರಡನೆಯ ಮಾದರಿಯಲ್ಲಿ ಮಂಡಿತವಾಗುವ ಇಲ್ಲಿನ ಮುಖ್ಯ ಚರ್ಚೆಯ ವಿಷಯ-ಸಂಗತಿಗಳು ಮಹಿಳೆಯನ್ನು 'ರಿಸೀವರ್ ಎಂಡ್' ಆಗಿ ಪರಿಕಲ್ಪಿಸದೆ; ಕ್ರಿಯಾತ್ಮಕವಾಗಿ ಅವಳ ತೊಡಗುವಿಕೆಯ ಮಹತ್ವವನ್ನು ಪ್ರತಿಪಾದಿಸುತ್ತಾ ಮಹಿಳಾ ತಿಳುವಳಿಕೆಯ ಪಾತಳಿಯನ್ನು ಪುನರ್‌ವ್ಯಾಖ್ಯಾನಕ್ಕೆ ಒಳಪಡಿಸುತ್ತವೆ. ಪ್ರಸ್ತುತ ಚರ್ಚೆಯನ್ನು ಈ ಕೆಳಗಿನ ಆರೇಳು ಮುಖ್ಯ ಸಂಗತಿಗಳಲ್ಲಿ ಪರಿಶೀಲಿಸುತ್ತಾ, ಅವುಗಳ ಹಿಂದಿರುವ ಅನೌಪಚಾರಿಕ ಮಹಿಳಾ ಶೈಕ್ಷಣಿಕ ನೆಲೆಯನ್ನು ಅನುಸಂಧಾನ ಮಾಡಲು ಇಲ್ಲಿ ಪ್ರಯತ್ನಿಸಲಾಗಿದೆ.

## ೧. ಕಲಿಕಾ ಪ್ರಕ್ರಿಯೆ

'ಶಿಕ್ಷಣ'ವೆಂಬುದು ಕಲಿಕೆಗೆ ಸಂಬಂಧಪಟ್ಟಿರುವ ಸಂಗತಿಯಾಗಿದೆ. ಶಿಕ್ಷಣ ಸ್ವರೂಪದಲ್ಲಿನ ಲಿಂಗತಾರತಮ್ಯವನ್ನು ಪ್ರತಿಪಾದಿಸುವವರು ಮೊದಲು ಅದರ ಮೂಲ ಸೂತ್ರವಾಗಿರುವ 'ಕಲಿಕಾ ಪ್ರಕ್ರಿಯೆ'ಯ ಪರಿಕಲ್ಪನೆ ಹಾಗೂ ಅದರ ಸ್ವರೂಪ ಕುರಿತಂತೆ ಇರುವ ಪೂರ್ವಾಗ್ರಹಗಳನ್ನು ಪರಿಶೀಲಿಸಬೇಕಾಗುತ್ತದೆ. ಅದರ ಪ್ರಕ್ರಿಯೆಯನ್ನು ಪುನರ್‌ವ್ಯಾಖ್ಯಾನಕ್ಕೆ ಒಳಪಡಿಸಿದರೆ, 'ಕಲಿಕೆ' ಎಂಬ ವ್ಯವಸ್ಥೆಯಲ್ಲಿ ಕಲಿಸುವವರು ಹಾಗೂ ಕಲಿಯುವವರನ್ನು ಒಳಗೊಂಡ ಒಂದು ಪ್ರಕ್ರಿಯೆ ಇರುವುದು ಗಮನಕ್ಕೆ ಬರುತ್ತದೆ. ಈ ಪ್ರಕ್ರಿಯೆಯಲ್ಲಿ ಕಲಿಸುವವರು ಯಾರು? ಕಲಿಯುವವರು ಯಾರು? ಎಂಬುದರಿಂದ ಅಲ್ಲಿನ ಲಿಂಗತಾರತಮ್ಯದ ಸ್ವರೂಪ, ಏಣಿಶ್ರೇಣಿಗಳು ಅನಾವರಣಗೊಳ್ಳುತ್ತವೆ. ಆಗ ಇಲ್ಲಿನ ನೀತಿ ನಿರೂಪಣೆಗಳ ನೆಲೆಗಳು ತಟ್ಟನೆ ಗ್ರಹಿಕೆಗೆ ಬರುತ್ತವೆ.

ಸಾಂಪ್ರದಾಯಿಕ (Conventional) ಶಿಕ್ಷಣ ವ್ಯವಸ್ಥೆಯಲ್ಲಿ ಕಲಿಸುವವರು ಪುರುಷರಾಗಿಯೂ, ಕಲಿಯುವವರು ಮಹಿಳೆಯರಾಗಿಯೂ ಇರುವುದರಿಂದಾಗಿ ಕಲಿಸುವವರನ್ನು ಆಧರಿಸಿ ಕಲಿಯುವವರು ಮುಂದುವರಿಯುತ್ತಾರೆ. ಕಲಿಯುವವರ ಅಗತ್ಯಗಳನ್ನಾಗಲೀ ಆಕಾಂಕ್ಷೆಗಳನ್ನಾಗಲೀ ಕಲಿಸುವವರು ಪರಿಗಣನೆಗೆ ತೆಗೆದುಕೊಳ್ಳುವುದಿಲ್ಲ. ಬದಲಾಗಿ ಕಲಿಸುವವರ ಧೋರಣೆಗಳಿಗೆ ಅನುಗುಣವಾಗಿ ಕಲಿಕೆ ಚಾಲ್ತಿಯಲ್ಲಿ ಬಂದಿರುತ್ತದೆ. ಇದರ ಪರಿಣಾಮವಾಗಿ ನಮ್ಮ ಪಂಚವಾರ್ಷಿಕ ಯೋಜನೆಗಳು, ಶೈಕ್ಷಣಿಕ ಅಭಿವೃದ್ಧಿಗಾಗಿ ನಿಯಮಿಸಲ್ಪಟ್ಟ ಕಮಿಶನಗಳ ವರದಿಗಳಲ್ಲಿ, ಕಲ್ಯಾಣಕಾರಿಯಾದ ಕಾರ್ಯಕ್ರಮಗಳನ್ನು ರೂಪಿಸುತ್ತಾ ಸಾಗಲಾಗಿದೆಯೇ ಹೊರತು ಕಲಿಯುವವರ ಆ್ಯಬಿಲಿಟಿ ಮತ್ತು ಮೊಬಿಲಿಟಿಗಳನ್ನು ಪರಿಗಣನೆಗೆ ತೆಗೆದುಕೊಳ್ಳಲು ಸಾಧ್ಯವಾಗಿಲ್ಲ. ಹಾಗಾಗಿ ಕಲಿಯುವರ ಅಗತ್ಯತೆ ಹಾಗೂ ಚಲನಶೀಲತೆಗಳು ಕುಂಠಿತವಾಗಿ ಸಾಗಿವೆ. ಸರ್ಕಾರಿ ಯಂತ್ರದ ಮೂಲಕ ನಡೆಸಲಾಗುತ್ತಿರುವ ಔಪಚಾರಿಕ ಶಿಕ್ಷಣದ ಕಾರ್ಯಕ್ರಮಗಳಲ್ಲಿ ಮಹಿಳಾ ಶಿಕ್ಷಣದ ಮೂಲ ಅಗತ್ಯಗಳು ಪೂರೈಕೆಯಾಗುವುದಕ್ಕಿಂತ ಹೆಚ್ಚಾಗಿ ಶೇಕಡಾವಾರು ಅಂಕಿ ಸಂಖ್ಯಾಶಾಸ್ತ್ರದ ಮಾಹಿತಿ ಪ್ರಧಾನವಾದ ತಿಳಿವಳಿಕೆಯ ದಾಖಲೀಕರಣಕ್ಕಾಗಿ ಕಾರ್ಯ ನಿರ್ವಹಿಸುತ್ತಾ ಸಾಗಲಾಗಿದೆ. ಹೀಗಾಗಿ ಮಹಿಳಾ ಶಿಕ್ಷಣಕ್ಕೆ ಸವಾಲಾಗಿರುವ ಸಮಸ್ಯೆಗಳ ಸೈದ್ಧಾಂತಿಕ ನಿರೂಪಣೆಗಳು ಹಿಂದೆ ಹಿಂದೆ ಸರಿಯಲ್ಪಟ್ಟವು.

ಸ್ಥಿರ ಮಾದರಿಯ ಸಾಮಾಜಿಕ ಮೌಲ್ಯವಾಗಿರುವ ಗಂಡಸಿನ ರಕ್ಷಣೆ-ಅಧೀನತೆಯಲ್ಲಿ ಹೆಂಗಸನ್ನು ಉಳಿಸುವ ಪಠ್ಯಕ್ರಮಗಳನ್ನು ರೂಪಿಸಿ ಸಾಂಪ್ರದಾಯಿಕ ಪುರುಷಪ್ರಧಾನ ವ್ಯವಸ್ಥೆಯ ಮಾದರಿಯನ್ನು ದೃಢೀಕರಿಸುತ್ತಾ ಬರಲಾಯಿತು. ತಾಯಿ, ಗರತಿ, ಹೆಂಡತಿ, ಮಗಳು ಮೊದಲಾದ ರೂಢಿ ಮಾದರಿಗಳನ್ನು ಸಾಮಾಜೀಕರಣದಲ್ಲಿ ಹೇಗಿತ್ತೋ, ಅಂಥದೇ ಬಗೆಯ ಚೌಕಟ್ಟಿನಲ್ಲಿ ಪುನರ್‌ರೂಪಿಸಿ ನೀಡಲಾಯಿತು. ಪಠ್ಯಗಳು, ಬೋಧನಾಕ್ರಮ, ಪರೀಕ್ಷೆಗಳು, ಮೌಲ್ಯಮಾಪನ ವ್ಯವಸ್ಥೆ - ಹೀಗೆ ಇಡೀ ಶೈಕ್ಷಣಿಕ ಸಂಸ್ಥೆಯ ಕಾರ್ಯ ಸ್ವರೂಪವು

ಲಿಂಗತಾರತಮ್ಯವನ್ನು ಅಂತರ್ಗತವಾದ ನೆಲೆಯಲ್ಲಿ ಆವಾಹಿಸಿಕೊಂಡು ಕ್ರಿಯಾರೂಪಕ್ಕೆ ಬಂದಿತು. ಪರಿಣಾಮವಾಗಿ ಶಿಕ್ಷಣದಲ್ಲಿ ಲಿಂಗ ಪೂರ್ವಾಗ್ರಹ ಸ್ಥಿರವಾಯಿತು.

ಅನೌಪಚಾರಿಕವಾದ ನೆಲೆಯಲ್ಲಿ ಮಹಿಳೆ ಎಷ್ಟೇ ಪ್ರಜ್ಞಾವಂತಳಾದರೂ ಶೈಕ್ಷಣಿಕ ದೃಷ್ಟಿಕೋನದಲ್ಲಿ ಅವಳನ್ನು ಕೇವಲ ಅಕ್ಷರ ಕಲಿಕೆಯ ಮಾನದಂಡದಲ್ಲಿ ಅನಕ್ಷರಸ್ಥಳೆಂಬುದಾಗಿ ಗ್ರಹಿಸಲಾಯಿತು. ಅವಳ ಸಾಕ್ಷರತೆಗಾಗಿ ನೂರಾರು ಕಾರ್ಯಕ್ರಮಗಳನ್ನು ಹಾಕಿಕೊಳ್ಳಲಾಯಿತು. 'ಹೆಣ್ಣು ಕಲಿತರೆ ಶಾಲೆಯೊಂದು ತೆರೆದಂತೆ' ಮುಂತಾದ ಹೇಳಿಕೆಗಳನ್ನು ಜಾಹೀರಾತುಗೊಳಿಸಲಾಯಿತು. ವಾಸ್ತವವಾಗಿ ಮಹಿಳೆಗೆ ಅಕ್ಷರ ಕಲಿಸಿ ಸಾಕ್ಷರಳನ್ನಾಗಿಸಬೇಕೆಂಬ ಚಿಂತನೆಯೇ ತಿರುಗು-ಮುರುಗಾಗಬೇಕು. ಅವಳಿಗೆ ಕಲಿಸುವ ಬದಲು ಅವಳಿಂದ ಶಿಕ್ಷಣ ವ್ಯವಸ್ಥೆಯೂ ಕಲಿಯಬೇಕಾದದ್ದು ಸಾಕಷ್ಟಿದೆ ಎಂಬ ಅರಿವನ್ನು ಹೊಂದುವಂತಾಗಬೇಕು. ಏಕಮುಖಿಯಾದ ನೆಲೆಯಲ್ಲಿ ಹೆಣ್ಣನ್ನು ಕೇವಲ ಕಲಿಕಾ ಪ್ರಕ್ರಿಯೆಯ ಕೊನೆಯ ತುದಿಯಲ್ಲಿ ನಿಲ್ಲಿಸಿರುವುದೇ ಅವೈಜ್ಞಾನಿಕವಾಗಿರುವುದು, ಅವೈಚಾರಿಕವಾಗಿರುವುದು ಆಗಿದೆ.

ಇಷ್ಟೊಂದು ದೀರ್ಘ ಚರ್ಚೆಗೆ ಎಳೆಯುತ್ತಿರುವ ಉದ್ದೇಶವಿಷ್ಟೆ. ಮಹಿಳಾ ಶೈಕ್ಷಣಿಕ ನೆಲೆಯಲ್ಲಿನ ಮುಖ್ಯ ಚಿಂತನಾ ಸ್ವರೂಪವು ಈಗಿನ ಪುರುಷ ಕೇಂದ್ರದಿಂದ ಬದಲಾವಣೆಗೊಂಡು ಮಹಿಳಾ ಕೇಂದ್ರಕ್ಕೆ ಬರಬೇಕು. ಭಾಗಿದಾರರು ಒಬ್ಬರು-ಅನುಭೋಗಿಗಳು ಇನ್ನೊಬ್ಬರು ಆಗಿರಕೂಡದು. ಮಹಿಳಾ ಪ್ರಜ್ಞೆಯ ಜಾಗ್ರತಿ ಮತ್ತು ಅರಿವಿನ ಪ್ರಕ್ರಿಯೆಗೆ ಸಂಬಂಧಿಸಿದಂತೆ ಕಲಿಕಾ ಸ್ವರೂಪದ ನೀತಿ ನಿರೂಪಣೆಗಳು ತಿರುಗು ಮುರುಗು ಆಗಬೇಕು. ಅಂದರೆ ಕಲಿಸುವವರು ಮತ್ತು ಕಲಿಯುವವರು ಬೇರೆ ಬೇರೆಯಾಗಿ ಎರಡು ಧ್ರುವಗಳಾಗುವ ಬದಲು ಎರಡೂ ಹಂತಗಳಲ್ಲಿ ಸಂಪೂರ್ಣವಾಗಿ ಮಹಿಳೆಯೇ ತೊಡಗುವಂತಾಗಬೇಕು. ಕೇವಲ ಮಹಿಳೆಯ ಭೌತಿಕ ತೊಡಗುವಿಕೆ ಮಾತ್ರವಾಗಿರದೆ ಮಹಿಳಾ ಸಬಲೀಕರಣದ ಉದ್ದೇಶವನ್ನು ಸದಾ ಇಟ್ಟುಕೊಂಡಿರುವ ಜಾಗ್ರತ ಮಹಿಳೆಯರ ತೊಡಗುವಿಕೆ ಸಾಧ್ಯವಾಗಬೇಕು. ಇಲ್ಲಿ ಮಹಿಳೆಯನ್ನು ಕೇವಲ ರಿಸೀವರ್ ಎಂಡ್ ಆಗಿ ಕಲ್ಪಿಸಬಾರದು. ಅವಳು 'ಪಾರ್ಟಿಸಿಪಂಟ್' ಕೂಡಾ ಆಗಬೇಕು. ಶಿಕ್ಷಣದ ಕಾರ್ಯಕ್ರಮಗಳ ಎಲ್ಲಾ ಹಂತಗಳಲ್ಲಿಯೂ ಅವಳ ಪಾಲ್ಗೊಳ್ಳುವಿಕೆ ಮುಖ್ಯವಾಗಬೇಕು. ಈ ಪಾಲ್ಗೊಳ್ಳುವಿಕೆಯಲ್ಲಿ ಜಾಗ್ರತ ಸ್ಥಿತಿ ಸದಾ ಇರಬೇಕು.

೧. ಶೈಕ್ಷಣಿಕ ಕಾರ್ಯಸೂಚಿ ಹಾಗೂ ನಡಾವಳಿಗಳನ್ನು ರೂಪಿಸುವ ಡಿಸಿಜನ್ ಮೇಕಿಂಗ್‌ನ ಹಂತದಲ್ಲಿ ಅವಳ ಪಾಲುದಾರಿಕೆ ಇರಬೇಕು.
೨. ಯೋಜನೆಗಳು ಕಾರ್ಯಕ್ರಮಗಳಾಗಿ ಅನುಷ್ಠಾನಗೊಳ್ಳುವ ಹಂತದಲ್ಲಿ ಅವಳ ಭಾಗವಹಿಸುವಿಕೆ ಇರಬೇಕು.
೩. ಶೈಕ್ಷಣಿಕ ಸಂಸ್ಥೆಯ ನಿರ್ವಹಣೆಯ ಮುಖ್ಯ ಹಂತಗಳಾದ ಪಠ್ಯ ನಿರ್ಮಾಣ, ಕಲಿಸುವಿಕೆ, ಮೌಲ್ಯಮಾಪನ ಮೊದಲಾದ ಅವಕಾಶಗಳ ಎಲ್ಲಾ ವಲಯಗಳಲ್ಲಿ ಮಹಿಳೆಯ ಸಹಭಾಗಿತ್ವ ಇರಬೇಕು.

೪. ಕೊನೆಯದಾಗಿ ಶಿಕ್ಷಣವನ್ನು ಹೊಂದುವ ಪಾಲು ಪಡೆಯುವಿಕೆಯಲ್ಲಿ ನೇರವಾಗಿ ಭಾಗವಹಿಸಲ್ಪಡಬೇಕು.

ಈ ಎಲ್ಲಾ ಹಂತಗಳಲ್ಲೂ ಮಹಿಳೆ ಅನುಭಾಗಿ-ಸಹಭಾಗಿಯಾಗಿ ಇರುವಂತಾಗಬೇಕು. ಗಾಂಧೀ ಚಿಂತನೆಯಲ್ಲಿ ಇಂಥದೊಂದು ಅಂಶ ಪ್ರತಿಮೆಯಾಗಿ ಬಳಕೆಗೊಂಡಿರುವುದನ್ನು ಗಮನಿಸಬೇಕು. ಗಾಂಧೀ ಹುಟ್ಟು ಹಾಕಿದ 'ಚರಕ'ದ ಪ್ರತಿಮೆಯಲ್ಲಿ ಕಾಣುವಂತೆ ಪ್ರತ್ಯಕ್ಷ ಮಹಿಳಾ ತೊಡಗುವಿಕೆ 'ಮಹಿಳಾ ಶಿಕ್ಷಣ'ದ ಕಾರ್ಯಕ್ರಮವಾಗಬೇಕು. 'ಚರಕ'ದ ಪ್ರಕ್ರಿಯೆಯಲ್ಲಿ 'ಹತ್ತಿ'ಯನ್ನು ಶುದ್ಧೀಕರಿಸಿ ದಾರದ ಎಳೆಗಳನ್ನು ಸಿದ್ಧಪಡಿಸುವುದು, ಆ ಎಳೆಗಳಿಂದ ಲಡಿಗಳನ್ನು ಮಾಡಿಕೊಳ್ಳುವುದು. ಆಮೇಲೆ ಕೊನೆಗೆ ಬಟ್ಟೆ ತಯಾರಿಕೆಯವರೆಗೆ ಕೇವಲ ಒಬ್ಬರ ಭಾಗವಹಿಸುವಿಕೆಯೇ ನಡೆಯುತ್ತದೆ. ಇಲ್ಲಿ ಹತ್ತಿಯಿಂದ ಬಟ್ಟೆ ತಯಾರಾಗುವವರೆಗೆ ಕೈ ಬದಲಾಗುವುದಿಲ್ಲ ಅಷ್ಟೇ ಅಲ್ಲ ಸಿದ್ಧಗೊಂಡ ಬಟ್ಟೆಯ ಬಳಕೆಯೂ ಸೃಷ್ಟಿಸುವ ವ್ಯಕ್ತಿಯ ಉಪಭೋಗಕ್ಕೂ ಸಂಬಂಧಪಟ್ಟಿವೆ. ಈ ಬಗೆಯ ನೆಲೆಯು ಶೈಕ್ಷಣಿಕ ಸ್ವರೂಪದಲ್ಲಿ ಸಾಧ್ಯವಾಗುವಂತಾಗಬೇಕು. ಆದರೆ ಇಂದು ಬಂಡವಾಳಶಾಹಿ ತಂತ್ರಜ್ಞಾನದ ಕಾರ್ಖಾನೆಗಳಿಂದ ಸ್ವಾವಲಂಬಿತನವು ನಾಶವಾಗಿ 'ಏಕರೂಪೀ' ಮಾದರಿ ಜಾರಿಯಾಗುತ್ತಿದೆ. ಇಲ್ಲಿ ಮೊದಲ ಹಂತಗಳು ನಾಶವಾಗಿ ಅನುಭೋಗಿ ನೆಲೆ ಮಾತ್ರ ಉಳಿಯುವಂತಾಗುತ್ತದೆ.

**೨. ಮಹಿಳಾ ಶಿಕ್ಷಣ ಮತ್ತು ಕೌಶಲ್ಯ**

ಎರಡನೆಯ ಶೈಕ್ಷಣಿಕ ವಲಯದ ತಾತ್ತ್ವಿಕ ಮುಖ್ಯ ಸಂಗತಿಯೆಂದರೆ ಅದರ ಕೌಶಲ್ಯಕ್ಕೆ ಸಂಬಂಧಪಟ್ಟಿರುವುದು ಆಗಿದೆ. ಶಿಕ್ಷಣವನ್ನು ಸ್ಥೂಲವಾಗಿ ಔಪಚಾರಿಕ ಮತ್ತು ಅನೌಪಚಾರಿಕವೆಂದು ವಿಂಗಡಿಸಿಕೊಳ್ಳುವ ವ್ಯವಸ್ಥೆಯಲ್ಲಿ ಈ ಅನೌಪಚಾರಿಕ ನೆಲೆಯನ್ನು ಸಂಪೂರ್ಣವಾಗಿ ಇತ್ತೀಚೆಗೆ ನಿರ್ಲಕ್ಷ್ಯಕ್ಕೆ ಗುರಿಪಡಿಸಲಾಗುತ್ತಿದೆ. ಕೃಷಿಯನ್ನು ಕಂಡು ಹಿಡಿದು ಅದನ್ನು ಜೀವಸಹಿತವಾಗಿ ವರ್ತಮಾನಕ್ಕೆ ತಂದವಳು 'ಮಹಿಳೆ' ಎಂಬುದನ್ನು ನಮ್ಮ ಸಾಂಸ್ಕೃತಿಕ ಮಾನವಶಾಸ್ತ್ರೀಯ ಅಧ್ಯಯನದ ಶಾಖೆ ಮೊದಲಾದವು ಶ್ರುತಪಡಿಸಿವೆ. ಇಂದಿಗೂ ಕೃಷಿಯೊಟ್ಟಿಗೆ ಮಹಿಳೆ ನೇರವಾಗಿ ಸಂಬಂಧ ಹೊಂದಿರುವಳಾಗಿದ್ದಾಳೆ. ಆಧುನಿಕತೆಯ ತಂತ್ರಜ್ಞಾನದ ಫಲಿತವಾಗಿ ಕೃಷಿ ಜ್ಞಾನವನ್ನು ಬಂಡವಾಳಶಾಹಿ ಮಾರುಕಟ್ಟೆಯ ವ್ಯಾಪ್ತಿಗೆ ತಂದು ಅಲ್ಲಿನ ಮಹಿಳಾ ತಿಳುವಳಿಕೆಯ ಸ್ಥಾನವನ್ನು ಕಿತ್ತುಕೊಳ್ಳಲಾಗಿದೆ. ಕೃಷಿ ಮಾತ್ರವಲ್ಲದೆ, ಸಾಂಪ್ರದಾಯಿಕ ಗುಡಿ ಕೈಗಾರಿಕೆಗಳು, ಕಸೂತಿ ಡಿಸೈನಿಂಗ್, ಅಡಿಗೆ ಕಲೆ, ಗೃಹವೈದ್ಯ, ಶೂಲಗಿತ್ತಿ ಮೊದಲಾದೆಡೆಗಳಲ್ಲಿ ಮಹಿಳೆಯ ಅನೌಪಚಾರಿಕ ತಿಳುವಳಿಕೆ ಮತ್ತು ಕಾರ್ಯಕ್ಷಮತೆಗಳನ್ನು ಪಕ್ಕಕ್ಕೆ ಸರಿಸಲಾಗುತ್ತಿದೆ. ಹೀಗಿದ್ದೂ ಕೂಡ ನಮ್ಮ ಔಪಚಾರಿಕ ಶಿಕ್ಷಣದ ಯೋಚನಾ ಕ್ರಮದಲ್ಲಿ ಮಹಿಳೆಯ ತಿಳುವಳಿಕೆ ಹಾಗೂ ಅರಿವಿನ ಕೊರತೆಯನ್ನು ನಿರಂತರವಾಗಿ ಮಂಡಿಸುತ್ತಾ ಸಾಗಿವೆ. ಅದಕ್ಕಾಗಿ ಈ ಶೈಕ್ಷಣಿಕ ನೆಲೆಯ ಸ್ವರೂಪವನ್ನೇ ಮೊದಲು ಪ್ರಶ್ನಿಸಬೇಕಾಗುತ್ತದೆ.

ಬ್ರಿಟಿಶ್ 'ವಸಾಹತುಶಾಹಿ' ಕಾಲಘಟ್ಟದಿಂದಲೂ ನಮ್ಮ ಶೈಕ್ಷಣಿಕ ಸಂಸ್ಥೆಗಳು ಮಹಿಳೆಯ ಎಲ್ಲ ಬಗೆಯ ಶೋಷಣೆಗಳಿಗಿರುವ ಮೂಲ ಮಹಿಳಾ ಅನಕ್ಷರತೆ ಹಾಗೂ ಮೌಢ್ಯ ಎಂದು ಬಿಂಬಿಸುತ್ತಾ ಸಾಗಿವೆ. ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಜಾರಿಯಲ್ಲಿರುವ ಮಹಿಳೆಯ ಸಾಮಾಜಿಕ, ಆರ್ಥಿಕ ಪರಾವಲಂಬಿತನವನ್ನು ಶೈಕ್ಷಣಿಕ ಪರಾವಲಂಬಿತನವನ್ನಾಗಿ ಸೃಷ್ಟಿಸಲಾಗಿದೆ. ಅದನ್ನೇ ಇಲ್ಲಿ ಆಚರಿಸಲಾಗುತ್ತಿದೆ.

ಸಾಂಪ್ರದಾಯಿಕ ಮಹಿಳಾ ಕೌಶಲ್ಯವನ್ನು ಕಿತ್ತುಕೊಂಡು ಇಂದು ಅವಳನ್ನೇ ಗ್ರಾಹಕ ಗಳನ್ನಾಗಿ ಮಾಡಿರುವ ಬಂಡವಾಳಶಾಹಿ ನೀತಿ ನಿರೂಪಣೆಗಳನ್ನು ಎಷ್ಟು ವಿವರಿಸಿದರೂ ಸಾಲದು. ಬದಲಾವಣೆ, ಆಧುನಿಕತೆ, ಸೌಂದರ್ಯ ವರ್ಧನ ಮೊದಲಾದ ಕಾರಣಗಳನ್ನು ಜಾಹೀರುಗೊಳಿಸಿ ಇವಕ್ಕೆ ಒಳಗಾಗುವಂತೆ ಮಹಿಳೆಯನ್ನು ಪ್ರೇರೇಪಿಸಿರುವ ನೂರಾರು ವಸ್ತುಸಂಗತಿಗಳ ಮಾತಂತೂ ಹೇರಳವಾಗಿದೆ. ರಂಗೋಲಿ, ಕಸೂತಿ, ಅಡುಗೆ, ಅಲಂಕಾರಿ ಕತೆಗಳು ಈ ಮೊದಲು ಮಹಿಳೆಯ ಸಹಜ ಸಾಧನಗಳಾಗಿದ್ದು; ಇಂದು ಮುಕ್ತ ಮಾರುಕಟ್ಟೆಯ ಸಂಗತಿಗಳಾಗಿ ಬಿಟ್ಟಿವೆ. ಮೂಲ ಸ್ಥಿತಿಯಲ್ಲಿ ಮಹಿಳೆಯ ಕೌಶಲ್ಯವಾಗಿದ್ದ ಈ ತಿಳುವಳಿಕೆಯು ಈಗ ಅವಳಿಂದ ಪ್ರತ್ಯೇಕಿಸಲ್ಪಟ್ಟು ಮತ್ತೆ ಅವಳನ್ನೇ ಗ್ರಾಹಕಳನ್ನಾಗಿಸಿರುವುದು ಸಾಂಸ್ಕೃತಿಕ ಸ್ಥಿತ್ಯಂತರದ ವ್ಯಂಗ್ಯವೆಂದೇ ಹೇಳಬೇಕು. ದೈನಂದಿನ ಕೆಲಸ ಕಾರ್ಯಗಳ ಒತ್ತಡಗಳಲ್ಲಿ ಅಗತ್ಯಕ್ಕೆ ತಕ್ಕಷ್ಟು ಅಲಂಕರಣ-ಒಪ್ಪ-ಓರಣವನ್ನು ಬಳಸುತ್ತಿದ್ದ ಮಹಿಳೆ ಇಂದು ವಾಣಿಜ್ಯೀಕರಣದ ವಿಷವರ್ತುಲದಲ್ಲಿ ಸಿಕ್ಕಿಹಾಕಿಕೊಂಡಿದ್ದಾಳೆ. ಈ ಪ್ರಕ್ರಿಯೆಯೊಳಗೆ ಬಾರದಿದ್ದರೆ ಅವಳನ್ನು ಕೀಳರಿಮೆಗೆ ಗುರಿಪಡಿಸುವ ನೆಲೆಯೂ ಇಲ್ಲಿ ಅಷ್ಟೇ ಪರಿಣಾಮಕಾರಿ ಯಾಗಿದೆ. ಮೂಗಿನ ನೇರಕ್ಕೆ ಎರಡೂ ಕಣ್ಣುಗಳಿಂದ ದೃಷ್ಟಿಯನ್ನು ಕೇಂದ್ರೀಕರಿಸಿ ಕೌಶಲ್ಯದಿಂದ ಇಟ್ಟುಕೊಳ್ಳುವ ಕುಂಕುಮ ಬೊಟ್ಟು, ಪಲ್ಲಟವಾಗಿದೆ. ಹೀಗೆ ಕಳೆದುಕೊಂಡ ಕೇಂದ್ರೀಕೃತ ದೃಷ್ಟಿಕೋನ ಪಡೆಯಬೇಕೆಂದರೆ ಮತ್ತೆ ಯೋಗದ ಔಪಚಾರಿಕ ಶಿಕ್ಷಣಕ್ಕೆ ಹೋಗಬೇಕಾಗುತ್ತದೆ. ಹೀಗೆ ಕೌಶಲ್ಯವನ್ನು ಕಳೆದು ಗ್ರಾಹಕ ಸ್ಥಿತಿಗೆ ತಳ್ಳುವ ಪ್ರಕ್ರಿಯೆ ಹಾಗೂ ಸೌಂದರ್ಯ ವರ್ಧಕಗಳನ್ನು ನಡೆಸುವ ಬ್ಯೂಟಿಪಾರ್ಲರ್‌ಗಳ ಶಿಕ್ಷಣ ಕ್ರಮ ವೇಗವಾಗಿ ಬೆಳೆಯುತ್ತಲೇ ಸಾಗಿದೆ.

ಈ ಸೌಂದರ್ಯ ಬಲವರ್ಧನೆಗಾಗಿ ನಡೆಯುವ ಈ ಒಟ್ಟು ಪ್ರಕ್ರಿಯೆಯು ಫ್ಯಾಶನ್ ಮೇಳಗಳಲ್ಲಿ, ಸೌಂದರ್ಯ ಸ್ಪರ್ಧೆಗಳಲ್ಲಿ ಹಾಗೂ ಇನ್ನಿತರ ಮದುವೆ, ಸಮಾರಂಭ ಮುಂತಾದ ಸಾರ್ವಜನಿಕ ಕಾರ್ಯಕ್ರಮಗಳಲ್ಲೆಲ್ಲ ಅವ್ಯಾಹತವಾಗಿ ಸಾಗುತ್ತಲೇ ಇದೆ. ಇದಕ್ಕಾಗಿ ಮಹಿಳೆಯರನ್ನು ಸಾಲುಗಟ್ಟಿ ನಿಲ್ಲಿಸಲಾಗಿದೆ. ಆದರೆ ಈ ಎಲ್ಲ ಕಾರ್ಯಗಳಿಗೆ ಮಹಿಳೆ ಕಾರಣಳೇ? ನೈಜವಾಗಿ ಇವರ ಹುನ್ನಾರಗಳೇನು? ಯಾರ ಉದ್ದೇಶ ಸಫಲತೆಗೆ ಈ ಚಟುವಟಿಕೆ? ಎಂಬ ಪ್ರಶ್ನೆಗಳನ್ನು ಹಾಕಿಕೊಂಡರೆ ಇದರ ಹಿಂದಿರುವ ತುಡಿತ ಆಶಯಗಳು ಬಯಲಾಗುತ್ತವೆ. ಹುಟ್ಟಿದ ಹೆಂಗೂಸನ್ನು ಬಿಡದೆ 'ಮದುವೆ'ಗಾಗಿ ಸಿದ್ಧಗೊಳಿಸುವ ಸಾಮಾಜಿಕ ವ್ಯವಸ್ಥೆಯಲ್ಲಿ ಹೆಣ್ಣಿಗೆ 'ಗಂಡಿನ' ಆಯ್ಕೆಯೇ ನಿರ್ಣಾಯಕವಾದ

ಸ್ಥಿತಿಯಾಗಿರುತ್ತದೆ. ಇಲ್ಲಿ ಹೆಣ್ಣು ಕೇವಲ ಭೋಗವಸ್ತುವಾಗಿ ಪರಿಗಣಿಸಲ್ಪಡುತ್ತಾಳೆ. ಈ ಎಲ್ಲ ಪ್ರಕ್ರಿಯೆಗಳ ಹಿಂದೆ ಪಿತೃಪ್ರಧಾನ ವ್ಯವಸ್ಥೆಯ ದೃಷ್ಟಿಕೋನವೇ ಕೆಲಸ ಮಾಡುತ್ತದೆ ಎಂದು ಬೇರೆ ಹೇಳಬೇಕಾಗಿಲ್ಲ. ಒಟ್ಟು ಪ್ರಕ್ರಿಯೆಯಲ್ಲಿ ಹೆಣ್ಣಿನ ಖಾಸಗಿಯಾದ 'ಸೌಂದರ್ಯ ಸಾಧನ'ಗಳ ಬಳಕೆಯ ಹಿಂದಿರುವ ಕೌಶಲ್ಯವನ್ನು ಕಿತ್ತುಕೊಂಡು ಅದನ್ನು ಮಾರುಕಟ್ಟೆಯ ಉತ್ಪಾದಿತ ವಸ್ತುವನ್ನಾಗಿ ಮಾರ್ಪಡಿಸಲಾಗಿದೆ. ದೈನಂದಿನ ಬದುಕಿನ ಅಗತ್ಯಕ್ಕಷ್ಟೇ ಬಳಕೆಯಾಗುತ್ತಿದ್ದ ಅಲಂಕರಣ ಇಂದು ವಾಣಿಜ್ಯೀಕರಣಗೊಂಡು ಮಹಿಳೆ ಮಾತ್ರವಲ್ಲದೆ ಪುರುಷರನ್ನೂ ಒಳಗೊಂಡು ಗ್ರಾಹಕ ವಲಯವನ್ನಾಗಿ ಸೃಷ್ಟಿಸಿಕೊಳ್ಳುತ್ತಾ ಬೃಹತ್ ಉದ್ಯಮಗಳ ಸ್ವತ್ತಾಗಿ ಹೋಗಿದೆ. ಮೂಲವಾಗಿ ಈ ಚಟುವಟಿಕೆಗಳ ಹಿಂದೆ ಅಡಗಿದ್ದ ಮಹಿಳಾ ಕೌಶಲ್ಯ ಇಂದು ಸಂಪೂರ್ಣ ನಾಶವಾಗಿ ತಿರುಗಿ ಅದೇ ಮಹಿಳೆಯರಿಗೆ 'ಬ್ಯೂಟಿ ಪಾರ್ಲರ್ ಶಿಕ್ಷಣ' ಎಂಬ ಕಲಿಕಾ ಚಟುವಟಿಕೆಯಾಗಿ ಮಾರ್ಪಟ್ಟಿದೆ.

### ೩. ಜೈವಿಕ ಸೃಷ್ಟಿಶೀಲತೆ

ನೈಸರ್ಗಿಕವಾದ ಅಥವಾ ಜೈವಿಕವಾದ, ಮಾನವಾಭಿವೃದ್ಧಿಯ ಮಹತ್ತರ ಕೊಡುಗೆಯಾದ ಸೃಷ್ಟಿ ಪ್ರಕ್ರಿಯೆಯ ಮಹಿಳಾ ಸಾಮರ್ಥ್ಯವನ್ನು ಸಾಂಪ್ರದಾಯಿಕ 'ತಾಯ್ತನ'ದ ಹೆಸರಲ್ಲಿ ವೈಭವೀಕರಿಸುತ್ತಾ ಅವಳ ಈ ಸೃಷ್ಟಿಶೀಲತೆಯನ್ನು ಹೆಣ್ಣಿನ 'ವಿಧಿ'ಯಾಗಿಸಲಾಗಿದೆ. ಭ್ರೂಣ ವನ್ನು ಗರ್ಭದಲ್ಲಿ ಹೊತ್ತು, ಬೆಳೆಸುವ ಸೃಷ್ಟಿಶೀಲವಾದ ಅವಳ ಪಾರಂಪರಿಕ ಜ್ಞಾನ ಇಂದು ಆಧುನಿಕ 'ಗೈನಾಕಾಲಾಜಿ' ಶಿಕ್ಷಣದ ಭಾಗವಾಗಿದೆ. ತಾಯಿ-ಬಾಣಂತಿ-ಮಗು ಗ್ರಾಹಕ ರಾಗಿದ್ದಾರೆ. ಮೊಲೆಹಾಲು ನಂಜಾಗಿ ಗ್ರೈಪ್‌ವಾಟರ್, ಸೆರಲ್ಯಾಕ್ ಮುಂತಾದ ಮಾರುಕಟ್ಟೆ ವಸ್ತುಗಳು ರಾರಾಜಿಸುತ್ತಿವೆ. ಯಾವ ಸೃಷ್ಟಿಕ್ರಿಯೆಯ ದುಡಿಮೆ ಹಾಗೂ ಅದರ ಹಿಂದಿನ ತಿಳಿವಳಿಕೆಯ ಜಗತ್ತು ಹೆಣ್ಣಿನ ದೈನಂದಿನ ಬದುಕಿನ ಕ್ರಿಯೆಯಾಗಿತ್ತೊ ಅದನ್ನು ಜ್ಞಾನದ ಅಭಿವೃದ್ಧಿಯ ಹೆಸರಲ್ಲಿ ಅವಳಿಂದ ಕಿತ್ತುಕೊಳ್ಳಲಾಗಿದೆ. ಆಧುನಿಕತೆಯ ಸಂಶೋಧನೆಗಳ ಭಾಗವಾಗಿ ವೈದ್ಯಕೀಯ ಶಿಕ್ಷಣ ವಲಯ ಅಭಿವೃದ್ಧಿಗೊಂಡು ಮಹಿಳಾ ಬದುಕಿಗೆ ಸಹಾಯವನ್ನೇನೊ ಮಾಡುತ್ತಿದೆಯಾದರೂ ಒಟ್ಟು ಪರಿಣಾಮವಾಗಿ ಅವಳ ಶೋಷಣೆಯ ಪ್ರಮಾಣದಲ್ಲಿ ಕಡಿಮೆಯಂತೂ ಆಗಿಲ್ಲವೆಂದೇ ಹೇಳಬೇಕಾಗುತ್ತದೆ. ಸಂತಾನ ನಿಯಂತ್ರಣ, ಗರ್ಭ ನಿರೋಧಕಗಳು, ಕುಟುಂಬ ಯೋಜನೆಯ ಒಟ್ಟು ಚಟುವಟಿಕೆಗಳ ಮೂಲಕ ತಕ್ಕಮಟ್ಟಿನ ಸುಧಾರಣೆಗಳು ಜಾರಿಗೊಂಡಿವೆಯಾದರೂ 'ಹೆಣ್ಣು ಭ್ರೂಣ ಹತ್ಯೆ', ಏಡ್ಸ್, ಗರ್ಭಾಶಯ ಕ್ಯಾನ್ಸರ್ ಮುಂತಾದ ಮಾರಕ ಅಪಾಯಗಳೂ ಹೆಚ್ಚಳವಾಗಿ ಸಾಮಾಜಿಕ ಸಮಸ್ಯೆಗಳಾಗಿ ಮಾರ್ಪಟ್ಟಿವೆ.

### ೪. ಅಗಾಧ ನೆನಪಿನ ಶಕ್ತಿಯ ಸಾಹಿತ್ಯ ಸೃಜನಶೀಲತೆ

ಜಾನಪದ ಜಗತ್ತಿನ ಸಾಹಿತ್ಯ ಸೃಜನಶೀಲತೆಯಲ್ಲಿ ಮಹಿಳೆಯ ಕೊಡುಗೆ ಅಪಾರವಾಗಿದೆ. ಕನ್ನಡದ ಸಂದರ್ಭದ ಉದಾಹರಣೆಯೊಂದಿಗೆ ವಿಶ್ಲೇಷಿಸುವುದಾದರೆ ಹಾಡು ಮತ್ತು ಕಥೆಗೆ

ಸಂಬಂಧಪಟ್ಟಂತೆ ಅವಲೋಕನ ಮಾಡಿದರೆ ಅಲ್ಲಿ ಹೆಂಗಸರ ಪಾಲುದಾರಿಕೆ ಎಷ್ಟು ಎಂಬುದು ಮನದಟ್ಟಾಗುತ್ತದೆ. 'ಅಜ್ಜೀ ಕತೆ' ಎಂಬ ಪರಿಕಲ್ಪನೆ ಜಾನಪದ ಸಾಹಿತ್ಯದಲ್ಲಿ ಯಥೇಚ್ಛವಾಗಿ ಬಳಕೆಯಾಗುತ್ತಿರುವುದು ಹೆಂಗಸಿನ ಪಾಲ್ಗೊಳ್ಳುವಿಕೆಯನ್ನು ದೃಢಪಡಿಸುತ್ತದೆ. ಇನ್ನು ಕುಟ್ಟುವ ಬೀಸುವ ಹಾಡುಗಳು, ಹೆಂಗಸರ ಹಾಡುಗಳು ಮುಂತಾದ ಅನೇಕ ಬಗೆಯಲ್ಲಿ ಹೆಂಗಸರ ಸೃಜನಸಾಹಿತ್ಯ ಲಭ್ಯವಾಗಿ ಪ್ರಕಟಿಸಲ್ಪಟ್ಟಿದೆ. ಸಣ್ಣಹಾಡು, ಕಥನಗೀತೆಯಿಂದ ಹಿಡಿದು ಜನಪದ ಮಹಾಕಾವ್ಯದವರೆಗೆ ಇದರ ವ್ಯಾಪ್ತಿ ಇದೆ. ಲಾವಣಿ-ಗೀಗೀ ಸಾಹಿತ್ಯ ಪ್ರಕಾರದಲ್ಲಿ ಯಂತೂ ಹೆಣ್ಣಿನ ಪರವಾಗಿ ಹಾಡುವ, ಕಥನ ಮಾಡುವ ಮತ್ತು ಪುರುಷರೊಡನೆ ವಾಗ್ವಾದ ಮಾಡುವ ಒಂದು ದೊಡ್ಡ ಪರಂಪರೆಯೇ (ಹರದೇಶಿ-ನಾಗೇಶಿ) ಇರುವುದು ಮಹಿಳಾ ಸೃಜನಶೀಲತೆಯ ಅಗಾಧತೆಯನ್ನು ಪರಿಚಯಿಸುತ್ತದೆ. ಹೀಗೆ ಬಹುತೇಕ ಕನ್ನಡ ಜಾನಪದ ಸಾಹಿತ್ಯ ಪ್ರಕಾರಗಳಲ್ಲಿ ಅನೇಕವು ಹೆಣ್ಣಿನಿಂದ ರಚಿಸಲ್ಪಟ್ಟು ಮತ್ತೆ ಅವಳಿಂದಲೇ ಪ್ರಯೋಗಿಸಲ್ಪಡುತ್ತವೆ. ಇದೆಲ್ಲವೂ ಅಮೋಘ ನೆನಪಿನ ಶಕ್ತಿಯಿಂದ ಮೌಖಿಕವಾಗಿಯೇ ನಡೆಯುತ್ತದೆ. ಇನ್ನೂ ಕೆಲವು ಕಡೆ ಆಶುಕವಿತ್ವವಾಗಿ ಬಳಕೆಗೊಳ್ಳುತ್ತದೆ. ಗೀಗೀ ಮತ್ತು ಮಹಾಕಾವ್ಯಗಳು ಇದಕ್ಕೆ ಒಳ್ಳೆಯ ಉದಾಹರಣೆಗಳಾಗಿವೆ.

**೫. ಸ್ಮೃತಿ, ಮಾಹಿತಿ ಮತ್ತು ಜ್ಞಾನ**

ಆಧುನಿಕ ಜಗತ್ತಿನ ಶಿಕ್ಷಣ ಸಂಸ್ಥೆಯಲ್ಲಿ ಈ ಬಗೆಯ ನೆನಪಿನ ಶಕ್ತಿಯನ್ನು ತುಂಬಾ ವಿಚಿತ್ರವಾಗಿ ಬಳಸಲಾಗುತ್ತಿದೆ. 'ನೆನಪು' - ಬಹುತೇಕ ಕಡೆ ಮಾಯವಾಗಿ 'ಕಂಠಪಾಠ'ದ ಕಲಿಕಾ ಪ್ರಕ್ರಿಯೆ ಜಾರಿಯಲ್ಲಿದೆ. ಇನ್ನೂ ಕೆಲವು ಕಡೆ ನೆನಪಿಸಿಕೊಳ್ಳುವ ಬಗೆಗಳು 'ಆಬ್ಜೆಕ್ಟಿವ್' ಮಾದರಿ ಪ್ರಶ್ನೆಗಳಲ್ಲಿ, 'ಇಂಟಲಿಜನ್ಸಿ' ಪರೀಕ್ಷೆಗಳಲ್ಲಿ, ಸಮಯಾಧಾರಿತ ಪರೀಕ್ಷೆಗಳಲ್ಲಿ ಬಳಕೆಗೊಳ್ಳುತ್ತಿವೆ. ಮಾಧ್ಯಮಗಳಲ್ಲಿ ಕಾಣಿಸುವ ಅಂತ್ಯಾಕ್ಷರಿ ಸ್ಪರ್ಧೆ, 'ಕೌನಬನೇಗಾ ಕರಡೊಪತಿ' ಮುಂತಾದೆಡೆಗಳಲ್ಲಿ ಅಗಾಧವಾದ ನೆನಪಿನ ಶಕ್ತಿಯನ್ನು ಭಂಜಿಸಿ, ಗಿಳಿಪಾಠದ ನೆಲೆಗೆ ಕರೆದುಕೊಂಡು ಹೋಗಲಾಗುತ್ತಿದೆ. ಸ್ಟಾರ್ ಟಿ.ವಿ.ಯ ಜನಪ್ರಿಯ ಕಾರ್ಯಕ್ರಮವೊಂದರಲ್ಲಿ ಅಮಿತಾಬ್ ಬಚ್ಚನ್ ಪುರುಷ ಪ್ರತಿಮೆಯ ಮೂಲಕ ಮಾಹಿತಿ ಜ್ಞಾನದ ಸ್ಪರ್ಧೆ 'ಕೌನ್ ಬನೇಗಾ ಕರಡೊಪತಿ' ನಡೆಸಲಾಯಿತು. ಇದಕ್ಕೆ 'ಕರಡೊಪತಿ' ಎಂಬ ಪುರುಷವಾಚಿ 'ಪದರೂಪ', 'ಬಂಡವಾಳ ಗಳಿಕೆಯ ಸ್ವರೂಪ' ಎರಡೂ ಪ್ರಾಪ್ತವಾಗುತ್ತಿತ್ತು. ಇತ್ತೀಚೆಗೆ ಈ ಪ್ರಕ್ರಿಯೆಯನ್ನು ಸಂಕೇತಿಸುವ ಇಂಗ್ಲಿಶ್ ನುಡಿಗಟ್ಟು 'Learn by Earn' ಎಂಬುದು ಎಲ್ಲೆಂದರಲ್ಲಿ ಬಳಕೆಗೊಳ್ಳುತ್ತಿದೆ. ಕಲಿಕೆಯನ್ನು ಗಳಿಕೆಯ ಸಂಬಂಧಿಯಾಗಿ ನಿರ್ವಚಿಸಿಕೊಳ್ಳುವ ಮಾದರಿಗಳು ವೈದ್ಯಕೀಯ, ಇಂಜಿನಿಯರಿಂಗ್ ಮೊದಲಾದ ವೃತ್ತಿ ಶಿಕ್ಷಣದಲ್ಲಿ ಹೇರಳವಾಗಿವೆ. ಒಟ್ಟಾರೆ ನೆನಪಿನ ಶಕ್ತಿಯು ತಿರುಗು-ಮುರುಗಾದ ಪ್ರಕ್ರಿಯೆ ಇದು. ಒಂದೆಡೆ, ಮಾಹಿತಿಯನ್ನು ಜ್ಞಾನವೆಂದು ಬಿಂಬಿಸುವ ಗಿಳಿ ಪಾಠದ ಮಾದರಿಯಾದರೆ; ಇನ್ನೊಂದೆಡೆ, ಈ ಬಗೆಯ ಜ್ಞಾನವನ್ನೇ ಹಣ ಗಳಿಕೆಯ ಸಾಧನವನ್ನಾಗಿ ನಿರ್ವಚಿಸಿಕೊಳ್ಳುವ ಹುಸಿ ಅಭಿವೃದ್ಧಿ ಕಲ್ಪನೆಯ ನೆಲೆಯು ಜಾರಿಯಲ್ಲಿದೆ. ಇನ್ನು ಕಂಪ್ಯೂಟರ್ ತಂತ್ರಜ್ಞಾನದ ಬಳಕೆಯಲ್ಲಿ ನೆನಪಿನ

ಅಗಾಧ ಶಕ್ತಿಯು ಸಂಪೂರ್ಣ ನಾಶವಾಗಿ, ಮಾಹಿತಿ ಸಂಗ್ರಹಣೆ ಹಾಗೂ ಮಾಹಿತಿ ಮೂಲವನ್ನೇ ಜ್ಞಾನದ ಚೌಕಟ್ಟಾಗಿ ಬಿಂಬಿಸುವ - ಒಪ್ಪಿಸುವ ಪ್ರಕ್ರಿಯೆ ಸಮರೋಪಾದಿಯಲ್ಲಿ ನಡೆದಿದೆ. ಇದನ್ನು ನಮ್ಮ ಶೈಕ್ಷಣಿಕ ತಿಳುವಳಿಕೆಯ ಜಗತ್ತು ನಡೆಸುತ್ತಿರುವ ಜ್ಞಾನದ ವ್ಯಂಗ್ಯವೆನ್ನದೆ ಮತ್ತೇನೆಂದು ಹೇಳಬೇಕು.

**೬. ಸಬಲೀಕರಣದ ಮೂಲಕ ವ್ಯಕ್ತಿತ್ವದ ಬಲವರ್ಧನೆ**

ಮಹಿಳೆಯನ್ನು ಅಬಲಳು, ದುರ್ಬಲಳು, ಅಧೀನಳು ಎಂದು ಮುಂತಾಗಿ ಪರಾವಲಂಬಿತನವನ್ನು ಆಚರಿಸುವ - ರೂಢಿಸುವ ಪುರುಷಪ್ರಧಾನ ವ್ಯವಸ್ಥೆಗೆ ಪ್ರತಿಯಾಗಿ ಅವಳ ಆಂತರ್ಯದ 'ಧಾರಣಾಶಕ್ತಿ'ಯ ಮೂಲ ನೆಲೆಯಿಂದ ಸಬಲೀಕರಣದ ನಿರ್ವಚನೆಯಾಗಬೇಕು. ಈ ಮಹಿಳಾ ಸಾಮರ್ಥ್ಯವನ್ನು ಪರಿಗಣಿಸುವ, ಮಾನ್ಯತೆ ಮಾಡುವ ಮಹಿಳಾಪರ ಶಿಕ್ಷಣವನ್ನು ಅಭಿವೃದ್ಧಿಪಡಿಸಬೇಕು. ಮೂಲತಃ ಸಶಕ್ತಳಾದ ಸ್ತ್ರೀಯನ್ನು ಮೇಲಿನಿಂದ ಹೇರುವ ಸಬಲೀಕರಣದ ಕಲ್ಪನೆಯನ್ನು ಮೀರಿ ಅವಳ ಶಕ್ತಿತ್ವವನ್ನು ವ್ಯಕ್ತಿತ್ವದ ಬಲವರ್ಧನೆಯನ್ನಾಗಿ ಮಾರ್ಪಡಿಸಬೇಕು.

ಯಾವ ಅರಿವು ಮಹಿಳೆಯನ್ನು ಕ್ರಿಯಾಶೀಲವಾಗಿ ಬೆಳೆಸಲು ಸಹಕಾರಿಯಾಗುವುದಿಲ್ಲವೊ; ಯಾವುದು ಅವಳ ವ್ಯಕ್ತಿತ್ವ ಬಲವರ್ಧನೆಗೆ ನೆರವಾಗುವುದಿಲ್ಲವೊ ಅದು ಶಿಕ್ಷಣವಾಗಲಾರದು. ನಿಜವಾದ ಶಿಕ್ಷಣದ ಅರಿವು ಮಹಿಳೆಯನ್ನು ಬಿಡುಗಡೆಯತ್ತ ಸಾಗಿಸಬೇಕು. ಅವಳನ್ನು ವಿಮೋಚನೆಯೆಡೆಗೆ ಕೊಂಡೊಯ್ಯಬೇಕು. ಅಧೀನತೆಯಿಂದ ಪ್ರಧಾನತೆಯೆಡೆಗೆ; ಅಧಿಕಾರ ಹೀನಸ್ಥಿತಿಯಿಂದ ಅಧಿಕಾರದೆಡೆಗೆ; ಅಬಲತೆಯಿಂದ ಸಬಲತೆಯೆಡೆಗೆ; ಪರಾವಲಂಬಿತನದಿಂದ ಸ್ವಾವಲಂಬನದೆಡೆಗೆ; ಬಂಧನದಿಂದ ಮುಕ್ತತೆಯೆಡೆಗೆ; ನಿಷ್ಕ್ರಿಯತೆಯಿಂದ ಸಕ್ರಿಯದೆಡೆಗೆ, ಸ್ಥಗಿತತೆಯಿಂದ ಚಲನಶೀಲದೆಡೆಗೆ; ಸಾಂಪ್ರದಾಯಕ ಮೌಢ್ಯತೆಯಿಂದ ಜಾಗ್ರತಿಯೆಡೆಗೆ - ಇವೆಲ್ಲ ಸಾಧ್ಯವಾದರೆ ಶೈಕ್ಷಣಿಕ ಪರಿಕಲ್ಪನೆಯಲ್ಲಿ ಆಚರಿಸಲಾಗುತ್ತಿರುವ 'ಸಬಲೀಕರಣ'ವು ತಂತಾನೆ ಸಾಧ್ಯವಾಗುತ್ತದೆ. ಕೇವಲ ಆರ್ಥಿಕ ಸಬಲೀಕರಣ ಏನೂ ಮಾಡಲಾರದು. ಅಂತಿಮವಾಗಿ ಸಾಮಾಜೀಕರಣದಲ್ಲಿ ಪ್ರಭಾವಿತವಾಗುವ, ಧರ್ಮ ಮತ್ತು ಯಾಜಮಾನ್ಯಗಳಿಂದ ನಿಯಂತ್ರಿತವಾಗುವ, 'ಕುಟುಂಬ-ವಿವಾಹ' ಕೇಂದ್ರಿತ 'ಪೇಟ್ರಿಯಾರ್ಕಿ' ಶಕ್ತಿಗಳು ಸಬಲೀಕರಣವನ್ನು ಆಗುಗೊಳಿಸುವುದಿಲ್ಲ. ಈ ಹೊತ್ತಿನ ಶಿಕ್ಷಣದಲ್ಲಿ ಈ ಅರಿವಿನ ನೆಲೆಗಳು ಕೆಲಸ ಮಾಡುತ್ತಿವೆಯಾ ಎಂಬುದು ನನ್ನ ಮೂಲಭೂತ ಪ್ರಶ್ನೆಯಾಗಿದೆ.

**೭. ಭಾಷೆ-ಪರಿಭಾಷೆ-ನುಡಿ ಸಂವಹನದಲ್ಲಿ ಲಿಂಗನಿರಪೇಕ್ಷತೆ**

ಕಲಿಕೆಯ ಮಾಧ್ಯಮವಾದ ಭಾಷೆಯ ಬಳಕೆಯಲ್ಲಿ ಲಿಂಗನಿರಪೇಕ್ಷ ಗುಣ ಈಗಿನ ಭಾಷಾ ಸ್ವರೂಪದಲ್ಲಿ ಇಲ್ಲವೆಂದೇ ಹೇಳಬೇಕು. ಆದ್ದರಿಂದ ಪರಿಭಾಷೆಯಿಂದ ಹಿಡಿದು ನುಡಿಗಟ್ಟು, ಗಾದೆ, ನಗೆಹನಿಗಳವರೆಗೆ ಭಾಷೆಯಲ್ಲಿ ಬಳಸಲಾಗುತ್ತಿರುವ ಲಿಂಗತಾರತಮ್ಯದ ನೆಲೆಯನ್ನು ಹೋಗಲಾಡಿಸಬೇಕು. ಹೆಣ್ಣು-ಗಂಡಿನ ಶೈಕ್ಷಣಿಕ ನೆಲೆಯನ್ನು ಸಾಂಪ್ರದಾಯಕವಾದ ಆದರ್ಶಗಳ ಮಾದರಿಯಲ್ಲೆ ನಡೆಸಬಾರದು. ಮಹಿಳಾ ವಿರೋಧಿ ದೃಷ್ಟಿ-ಧೋರಣೆಗಳಿಂದ

ರಚಿಸಲ್ಪಟ್ಟಿರುವ ರೂಢಿ-ರಿವಾಜು, ನಂಬಿಕೆ-ಆಚರಣೆ-ಸಂಪ್ರದಾಯಗಳನ್ನು ಹಾಗೂ ಅಲ್ಲಿನ ಮೌಲ್ಯ ವ್ಯವಸ್ಥೆಯನ್ನು ಲಿಂಗನಿರಪೇಕ್ಷವಾಗಿ ನಿರ್ವಚನೆಯಾಗಬೇಕು. ಸಂಸ್ಕೃತಿಯಲ್ಲಿ ಆಚರಿಸಲಾಗುತ್ತಿರುವ ಸ್ಥಿರ ಮಾದರಿಗಳಾದ ತಾಯಿ-ಹೆಂಡತಿ-ಮಗಳು ಎಂಬ ಪಾತ್ರಗಳಾಗಲಿ; ಹೆಂಗಸಿನ ಗುಣಗಳು-ಗಂಡಸಿನ ಗುಣಗಳೆಂಬ ವರ್ಗೀಕರಣವಾಗಲಿ ನಡೆಸಕೂಡದು. ಈ ಎಲ್ಲಾ ಬಗೆಯ ಸಾಮಾಜೀಕರಣವನ್ನೇ ಹೊತ್ತು ಬರುವ ಭಾಷಾ ಸ್ವರೂಪ ಹಾಗೂ ಅದರ ಸಂವಹನದ ನೆಲೆಗಳನ್ನು ಲಿಂಗನಿರಪೇಕ್ಷವಾಗಿ ಮಾರ್ಪಡಿಸಬೇಕು. ಹೆಣ್ಣನ್ನು ಕುರಿತಾಗಿರುವ ಗಾದೆಗಳಲ್ಲಿ, ನುಡಿಗಟ್ಟುಗಳಲ್ಲಿ, ನಗೆಹನಿಗಳಲ್ಲಿ ಬೇರೂರಿರುವ ಲಿಂಗತಾರತಮ್ಯ ನೆಲೆಗಳು ಎಷ್ಟೊಂದು ಆಕ್ರಾಮಕವಾಗಿವೆಯೆಂಬುದನ್ನು ಇತ್ತೀಚೆಗೆ ಮಹಿಳಾ ಅಧ್ಯಯನಗಳಲ್ಲಿ ವಿಶೇಷ ಅಧ್ಯಯನಗಳಿಗೆ ಒಳಪಡಿಸಲಾಗುತ್ತಿದೆ. ಈ ಸಂಶೋಧನೆಗಳ ನೆರವನ್ನು ನಮ್ಮ ಶೈಕ್ಷಣಿಕ ವಲಯವು ಪಡೆದುಕೊಳ್ಳಬೇಕು. 'Sexist Language'ನಿಂದ ಮುಕ್ತವಾಗಿರುವ ಭಾಷಾ ಬಳಕೆಯ ಸಂವಹನದ ನೆಲೆಗಳನ್ನು ಶೈಕ್ಷಣಿಕ ಹಂತದಲ್ಲಿ ಪಾಲಿಸುವಂತಾಗಬೇಕು.

ಈ ಚರ್ಚೆಯ ಟಿಪ್ಪಣಿಯನ್ನು ಮುಕ್ತಾಯ ಮಾಡುವ ಮುನ್ನ ಇಲ್ಲಿನ ಒಟ್ಟು ಚಿಂತನೆಯನ್ನು ಸಮೀಕ್ಷಿಸುವುದಾದರೆ; ಶೈಕ್ಷಣಿಕವಾದ ಪ್ರಕ್ರಿಯೆಯಲ್ಲಿ ಕಲಿಕೆಯ ಹಂತದಿಂದ ಹಿಡಿದ ಭಾಷಾ ಸಂವಹನದ ಹಂತದವರೆಗೆ ಈಗಿರುವ ಸ್ಥಾಪಿತ ಚಿಂತನಾಕ್ರಮ ಹಾಗೂ ಯಥಾವತ್ತಾದ ಪಿತೃಪ್ರಧಾನ ಮೌಲ್ಯ ವ್ಯವಸ್ಥೆಯ ರೂಪ-ರಚನೆಗಳನ್ನು ಪುನರ್‌ವ್ಯಾಖ್ಯಾನಕ್ಕೆ ಒಳಪಡಿಸಬೇಕು. 'ಜಂಡರ್' ಸಂವೇದಿಯಾದ ಗ್ರಹಿಕಾ ಕ್ರಮಗಳನ್ನು ಶೈಕ್ಷಣಿಕ ವಲಯದ ಎಲ್ಲ ಹಂತಗಳಲ್ಲಿ ರೂಢಿಸಬೇಕು. 'ಶಿಕ್ಷಣ ಸಂಸ್ಥೆ' ನಡೆಸುವ ಎಲ್ಲಾ ಬಗೆಯ ನೀತಿ-ನಿರೂಪಣೆಯ ಚಟುವಟಿಕೆಗಳು ಹಾಗೂ ಅವುಗಳ ಅನುಷ್ಠಾನದ ಹಂತಗಳಲ್ಲಿ ಮಹಿಳೆಯ ಭಾಗವಹಿಸುವಿಕೆ ಸಾಧ್ಯವಾಗಬೇಕು. ಹೊಣೆಗಾರಿಕೆ, ಹಕ್ಕುದಾರಿಕೆ ಮತ್ತು ಭಾಗೀದಾರಿಕೆಗಳಲ್ಲಿ ಮಹಿಳೆ ಹೆಚ್ಚೆಚ್ಚು ತೊಡಗುವಂತಾಗಬೇಕು. ಉನ್ನತ ಶಿಕ್ಷಣ ಹಾಗೂ ವಿಶ್ವವಿದ್ಯಾಲಯಗಳ ಮಟ್ಟದಲ್ಲಿ ಮಹಿಳೆಯ ಭಾಗವಹಿಸುವಿಕೆಯ ಪ್ರಮಾಣವು ಏರಿಕೆಯಾಗಬೇಕು. ಈ ಬಗೆಯ ಅರಿವು-ಜಾಗ್ರತಿಯ ಮೂಲಕ ಮಹಿಳೆಗೆ ನಾನು ಏನು, ನಾನು ಯಾರಿಗೆ-ಯಾರಿಗೋಸ್ಕರ ಎಂಬ ಚಿಂತನೆಯ ಬದಲಾಗಿ; ನಾನು ನನಗಾಗಿ, ನನ್ನ ಜೈವಿಕ ಅಗತ್ಯಕ್ಕಾಗಿ, ನನ್ನ ಸೃಜನಶೀಲತೆಗಾಗಿ, ನಾನೇ ಎಲ್ಲವನ್ನೂ ನಿರ್ವಹಿಸುವ ಸಾಮರ್ಥ್ಯದ ಗಳಿಕೆಗಾಗಿ, ಕೊನೆಗೆ ನನ್ನ ಶ್ರೇಯೋಭಿವೃದ್ಧಿಗಾಗಿ ಎಂಬ ತಿಳುವಳಿಕೆ ಸಾಧ್ಯವಾಗುವ ವ್ಯಕ್ತಿತ್ವ ಬಲವರ್ಧನೆಯ ಶಿಕ್ಷಣ ರೂಪಿಸಲ್ಪಡಬೇಕು. ಕೇವಲ ದಾನವಾಗಿ ನೀಡುವ ಅಥವಾ ಮಹಿಳಾ ಪ್ರತಿನಿಧಿತ್ವ ಎಂದು ಆಯ್ಕೆ ಮಾಡುವ 'ಶೈಕ್ಷಣೀಕರಣ' ಆಮೂಲಾಗ್ರ ಬದಲಾಗಬೇಕು. ಆವಾಗ ಮಹಿಳೆಯ ಶೈಕ್ಷಣಿಕ ಸಬಲೀಕರಣದ ಕನಸು ನನಸಾಗಬಹುದು.

# ಶೈಕ್ಷಣಿಕ ನೆಲೆ ಹಾಗೂ ಮಹಿಳಾ ಸಬಲೀಕರಣ

ಬಸವರಾಜ ಸಬರದ

ತೃತೀಯ ಜಗತ್ತಿನ ದೇಶಗಳಲ್ಲಿ ಮಹಿಳಾ ಸಬಲೀಕರಣದ ವಿಷಯದ ಬಗೆಗೆ ಚರ್ಚೆ ಪ್ರಾರಂಭವಾಗಿರುವುದು ಆಶಾದಾಯಕ ಬೆಳವಣಿಗೆಯಾಗಿದೆ. ಹಾಗೆ ನೋಡಿದರೆ ಮಹಿಳೆ ಎಂದೂ ದುರ್ಬಲಳಲ್ಲ. ಆಕೆ ಯಾವಾಗಲೂ ಸಬಲಳು, ಸಾಮರ್ಥ್ಯವುಳ್ಳವಳೂ ಆಗಿದ್ದಾಳೆ. ಮಹಿಳೆಯೆಂದರೆ ಹೊಸ ಸಾಧ್ಯತೆಗಳ ಖಣಿ. ಆದರೆ ಚಾತುರ್ವರ್ಣ ವ್ಯವಸ್ಥೆ ಹಾಗೂ ಯಜಮಾನ ಸಂಸ್ಕೃತಿ, ಶತಮಾನಗಳಿಂದ ಮಹಿಳೆಯನ್ನು ದುರ್ಬಲಗೊಳಿಸುತ್ತಲೇ ಬಂದಿವೆ. ಮಹಿಳೆ ಅಬಲೆ-ದುರ್ಬಲಳು - ಸದಾ ಇನ್ನೊಬ್ಬರ ರಕ್ಷಣೆಯಲ್ಲಿರಬೇಕಾದವಳು ಎಂದು ತಪ್ಪು ಪ್ರಚಾರ ಮಾಡುತ್ತಲೇ ಬಂದಿವೆ. ಮಹಿಳೆ ಕೇಡಿನ ಮೂಲ - ಆಕೆ ಭೋಗದವಸ್ತು ಎಂದು ಹಸಿ ಸುಳ್ಳುಗಳನ್ನು ಹೇಳುತ್ತಲೇ ಬಂದಿವೆ.

ಇಪ್ಪತ್ತನೇ ಶತಮಾನ, ಮಹಿಳಾ ಸಬಲೀಕರಣದ ಕಾರಣಕ್ಕಾಗಿ ಬಹುಮಹತ್ವದ ಕಾಲಘಟ್ಟವಾಗಿದೆ. ಮಹಿಳಾ ಶಿಕ್ಷಣ ಹಾಗೂ ಜಾಗ್ರತಿಯ ಮೂಲಕ ಈ ಶತಮಾನದಲ್ಲಿ ಜಗತ್ತಿನಾದ್ಯಾಂತ ಸ್ತ್ರೀವಾದಿ ಚಳುವಳಿಗಳು ಪ್ರಾರಂಭವಾದವು. ಮಹಿಳಾ ಮಹಾವಿದ್ಯಾಲಯಗಳು, ವಿಶ್ವವಿದ್ಯಾಲಯಗಳು ಮಹಿಳೆಯರಿಗೆ ಉನ್ನತ ಶಿಕ್ಷಣ ನೀಡುವುದರ ಮೂಲಕ ಅವರ ಆಲೋಚನಾ ಕ್ರಮವನ್ನು ಬದಲಿಸಿದವು. ಇಂತಹ ವೈಚಾರಿಕ ನೆಲೆಯಲ್ಲಿ ಬೆಳೆದು ಬಂದ ಮಹಿಳೆಯರು - ಕೆಲವು ಪುರುಷರು, ಸ್ತ್ರೀವಾದಿ ಚಳುವಳಿಗಳು ಹುಟ್ಟಿಕೊಳ್ಳಲು ಕಾರಣರಾದರು. ಈ ಶತಮಾನದಲ್ಲಿ ನಡದೆ ಅನೇಕ ಸಾಂಸ್ಕೃತಿಕ ಚಳುವಳಿಗಳು - ಪ್ರಗತಿಪರ ಚಳುವಳಿಗಳು ಮಹಿಳಾ ಸಬಲೀಕರಣಕ್ಕೆ ಸಂಬಂಧಿಸಿದಂತೆ ಬಹುಮುಖ್ಯವಾದ ಪಾತ್ರ ವಹಿಸಿದವು. ಸ್ತ್ರೀವಾದಿ ಚಳುವಳಿಯೆಂದರೆ ಅದು ಕೇವಲ ಸ್ತ್ರೀಯರು ನಡೆಸುವ ಚಳುವಳಿ ಮಾತ್ರವಲ್ಲ, ಸಮಾಜ ವ್ಯವಸ್ಥೆಯಲ್ಲಿ ಸಮಾನತೆಯನ್ನು ತರಬಯಸುವ ಎಲ್ಲ ಮನಸ್ಸುಗಳ ಹೋರಾಟ. ಹೀಗಾಗಿ ಮಹಿಳಾ ಸಬಲೀಕರಣದ ಕಾರ್ಯದಲ್ಲಿ ಮಹಿಳೆಯರಂತೆ ಪುರುಷರೂ ಆಸಕ್ತಿ ತೋರಿಸಬೇಕಾಗಿದೆ.

ಮಹಿಳಾ ಸಬಲೀಕರಣದ ವಿಷಯ ಬಂದಾಗ ಮೊದಲು ಅದರ ತಾತ್ವಿಕ ನೆಲೆಗಳನ್ನು ಕಂಡುಕೊಳ್ಳುವುದು ಬಹುಮುಖ್ಯವಾದ ಸಂಗತಿಯಾಗುತ್ತದೆ. ಮಹಿಳಾ ಸಬಲೀಕರಣವೆಂದರೆ,

ಈಗಿರುವ ಪುರುಷರ ಸ್ಥಾನಮಾನಗಳಿಗೆ ಅನುಗುಣವಾಗಿ ಮಹಿಳೆಯರನ್ನು ಬಲಪಡಿಸುವುದೆ? ಪುರುಷ ಪ್ರಧಾನ ವ್ಯವಸ್ಥೆಯ ಮಾದರಿಗಳ ಹಿನ್ನೆಲೆಯಲ್ಲಿಯೇ ಮಹಿಳೆಯರನ್ನು ಬೆಳೆಸುವುದೆ? ಅಥವಾ ಸಾಂಸ್ಕೃತಿಕ ಸಂಕಥನಗಳ ನೆಲೆಯಲ್ಲಿ ಜನಪರ ಸಿದ್ಧಾಂತವನ್ನು ಕಟ್ಟಿಕೊಂಡು ಸಮಾನತೆಯ ಆಧಾರದ ಮೇಲೆ ಬೆಳೆಸುವುದೆ? ಎಂಬಂತಹ ಪ್ರಶ್ನೆಗಳ ಕುರಿತು ಮೊದಲು ಚರ್ಚೆ ಪ್ರಾರಂಭವಾಗಬೇಕು. ಆಗ ಮಹಿಳಾ ಸಬಲೀಕರಣದ ವ್ಯಾಪ್ತಿ ಸ್ಪಷ್ಟವಾಗುತ್ತದೆ. ಸಮಾನತೆಯ ತತ್ವವನ್ನು ನಿರ್ಲಕ್ಷಿಸಿ ಮಹಿಳಾ ಸಬಲೀಕರಣವಾದರೆ ಅಷ್ಟೊಂದು ಪ್ರಯೋಜನ ವಾಗಲಾರದು. ಆರ್ಥಿಕ - ಸಾಮಾಜಿಕ - ರಾಜಕೀಯ ಸಮಾನತೆಯ ತಾತ್ವಿಕ ನೆಲೆಯಲ್ಲಿ ಮಹಿಳಾ ಸಬಲೀಕರಣದ ಪ್ರಕ್ರಿಯೆ ಬೆಳೆದುನಿಂತರೆ ಮಾತ್ರ ಸಾರ್ಥಕವಾಗುತ್ತದೆ.

ಚರಿತ್ರೆಯನ್ನು ಗಮನಿಸಿದಾಗ, ಐತಿಹ್ಯಗಳನ್ನು ಅವಲೋಕಿಸಿದಾಗ, ಸಾಂಸ್ಕೃತಿಕ ಸಂಕಥನಗಳನ್ನು ಬಿಚ್ಚಿದಾಗ ಮಹಿಳಾ ಸಾಧ್ಯತೆಗಳು ಸ್ಪಷ್ಟವಾಗುತ್ತವೆ. ಹಿಂದೆ ಅನೇಕ ಮಹಿಳೆಯರು ಸಾಮ್ರಾಜ್ಯವಾಳಿದ್ದಾರೆ, ಉನ್ನತ ಸ್ಥಾನಗಳಲ್ಲಿ ಕಾರ್ಯ ನಿರ್ವಹಿಸಿದ್ದಾರೆ. ಪಾಂಡಿತ್ಯ ಪಡೆದವರಾಗಿದ್ದಾರೆ. ಇಷ್ಟೆಲ್ಲಾ ದೀರ್ಘ ಪರಂಪರೆಯಿರುವ ಮಹಿಳೆ ಇಂದೇಕೆ ದುರ್ಬಲಳಾದಳು? ಆಕೆಯ ಸಬಲೀಕರಣದ ಮಾತು ಈಗೇಕೆ ಬಂತು? ಎಂಬ ಪ್ರಶ್ನೆಗಳನ್ನು ಬಿಡಿಸಿಕೊಂಡಾಗ ಸಬಲೀಕರಣದ ಅರ್ಥವ್ಯಾಪ್ತಿ ಸ್ಪಷ್ಟವಾಗುತ್ತದೆ. ರಾಜನ ಹಾಗೆ ರಾಣಿ ರಾಜ್ಯವಾಳುವುದು, ಪುರುಷನಂತೆ ಮಹಿಳೆ ಕಾರ್ಯ ನಿರ್ವಹಿಸುವುದು ಮುಖ್ಯವಲ್ಲ. ಪುರುಷ ನಡೆದ ದಾರಿಯಲ್ಲಿಯೇ ಮಹಿಳೆ ನಡೆಯಬೇಕೆಂದಲ್ಲ, ಪುರುಷನ ಮಟ್ಟಕ್ಕೆ ಬಂದು ನಿಂತಾಕ್ಷಣ ಸಮಾನತೆ ದೊರೆಯುತ್ತದೆಂಬುದೂ ಅಲ್ಲ. ಲಿಂಗಭೇದ-ವರ್ಗಭೇದ-ವರ್ಣಭೇದವನ್ನು ಅಳಿಸಿ ಹಾಕುವುದು ನಿಜವಾದ ಸಮಾನತೆ. ಇಂತಹ ಸಮಾನತೆಯ ತಾತ್ವಿಕ ನೆಲೆಯನ್ನಳವಡಿಸಿ ಕೊಂಡಾಗ ಮಾತ್ರ ಮಹಿಳಾ ಸಬಲೀಕರಣ ನಿಜವಾದ ಅರ್ಥದಲ್ಲಿ ಪ್ರಾರಂಭವಾಗುತ್ತದೆ.

ಇಂದು ನಮ್ಮೆದುರಿಗೆ ಎರಡು ರೀತಿಯ ಶಿಕ್ಷಣ ಪದ್ಧತಿಗಳಿವೆ: ಶತಮಾನಗಳಿಂದ ಮುಂದುವರೆದುಕೊಂಡು ಬಂದ ನಮ್ಮದೇ ಆದ ಚಾತುರ್ವರ್ಣ ವ್ಯವಸ್ಥೆಯ ಗುರು ಕುಲ ಪದ್ಧತಿ ಒಂದು ಕಡೆಯಿದ್ದರೆ, ಈಗ ಮೂರು ಶತಮಾನಗಳಿಂದ ತೀವ್ರಗೊಂಡಿರುವ ಇಂಗ್ಲೀಷ್ ಶಿಕ್ಷಣ ಪದ್ಧತಿ ಮತ್ತೊಂದೆಡೆ ಇದೆ. ನಮ್ಮ ದೇಶದ ಹಿಂದಿನ ಶಿಕ್ಷಣ ಪದ್ಧತಿ ವರ್ಣಾಶ್ರಮ ಶಿಕ್ಷಣ ಪದ್ಧತಿಯಾಗಿದ್ದು ಅಲ್ಲಿ ಕೇವಲ ಬ್ರಾಹ್ಮಣರಿಗೆ ಹಾಗೂ ಕ್ಷತ್ರಿಯರಿಗೆ ಮಾತ್ರ ಶಿಕ್ಷಣ ಪಡೆಯುವ ಅವಕಾಶವಿತ್ತು. ಶೂದ್ರರು-ದಲಿತರು ಇಂತಹ ಶಿಕ್ಷಣ ಪದ್ಧತಿಯಿಂದ ತುಂಬಾ ದೂರವಿದ್ದರು. ಈ ವಿಷಯದಲ್ಲಿ ಮಹಿಳೆಯರದಂತೂ ತುಂಬಾ ಚಿಂತಾಜನಕ ಸ್ಥಿತಿಯಾಗಿತ್ತು. ಆಗಿನ ಕಾಲದ ಶಿಕ್ಷಣವೆಂದರೆ ವೇದಾಧ್ಯಯನವೇ ಆಗಿತ್ತು. ಲೋಪಾಮುದ್ರಾ, ಘೋಷಾ, ವಿಶ್ವಾವರಾ, ಸುಲಭಾ, ಗಾರ್ಗಿ, ಮೈತ್ರೇಯಿ ಈ ಮೊದಲಾದ ಮಹಿಳೆಯರು ವೇದಾಧ್ಯಯನ ಮಾಡಿದ್ದರೆಂದು ತಿಳಿದು ಬರುತ್ತದೆ. ಮುಂದೆ ಸ್ಮೃತಿಗಳ ಕಾಲಕ್ಕೆ ಲಿಂಗಭೇದ ನೀತಿ ಹೆಚ್ಚುತ್ತಾ ಹೋಯಿತು. ಕೆಲವು ಮಹಿಳೆಯರು ವೇದಾಧ್ಯಯನ ಮಾಡಿದಾಕ್ಷಣ ಎಲ್ಲರಿಗೂ ಶಿಕ್ಷಣದ ಅವಕಾಶವಿತ್ತೆಂದಲ್ಲ. ಕೆಲವು ಮಹಿಳೆಯರಾದರೂ ಆ ಕಾಲದಲ್ಲಿ ವೇದಾಧ್ಯಯನ

ಮಾಡಿರಬಹುದೆಂದು ತಿಳಿದುಕೊಂಡರೂ ಕೂಡ ಅದರಿಂದಾದ ಪ್ರಯೋಜನಗಳೇನು? ಎಂಬುದು ಮುಖ್ಯ ಪ್ರಶ್ನೆ.

"ಎಲ್ಲಾ ಪ್ರಾರ್ಥನೆಗಳೂ ಗಂಡು ಮಗುವಿಗಾಗಿ" - ಎಂದು ಋಗ್ವೇದ ಹೇಳಿದರೆ, "ಹೆಣ್ಣು ಪಾಪಿ, ಗುಲಾಮಳು" ಎಂದು ಭಗವದ್ಗೀತೆ ಹೇಳುತ್ತದೆ. ಲಿಂಗಭೇದ ನೀತಿಯನ್ನು ಹುಟ್ಟು ಹಾಕಿದ ಇಂತಹ ಕೃತಿಗಳನ್ನು ಹೆಣ್ಣು ಓದಿದ್ದಾಳೆ, ವೇದಾಧ್ಯಯನ ಮಾಡಿದ್ದಾಳೆ ಎಂಬುದು ಹೆಮ್ಮೆಯ ವಿಷಯವೆಂದು ಸ್ತ್ರೀವಾದ ಭಾವಿಸುವುದಿಲ್ಲ. ಅಸಮಾನತೆಯನ್ನು ಕಲಿಸುವ ಶಿಕ್ಷಣವನ್ನು ಹೆಣ್ಣು ಓದಿದರೇನು, ಗಂಡು ಓದಿದರೇನು? ಅದರಿಂದ ಅಸಮಾನತೆ ಹೆಚ್ಚಾಗುತ್ತಿದೆಯೇ ಹೊರತು, ಸಮಾನತೆ ಉಂಟಾಗುವುದಿಲ್ಲ. "ನಸ್ತ್ರೀ ಸ್ವಾತಂತ್ರ್ಯಮರ್ಹತಿ" ಎಂಬ ಮನುವಾದವನ್ನು ಯಾರು ಓದಿದರೂ ಅಷ್ಟೆ. ಹೆಣ್ಣು ಸ್ವಾತಂತ್ರ್ಯಕ್ಕೆ ಅರ್ಹಳಲ್ಲವೆಂದು ಸ್ಪಷ್ಟಪಡಿಸಿದ 'ಮನುಶಿಕ್ಷಣವನ್ನು' ಹೆಣ್ಣುಮಕ್ಕಳು ಪಡೆಯುವುದು ಇನ್ನೂ ಅಪಾಯಕಾರಿ. ಇಂತಹ ಅಸಮಾನತೆಯ ಶಿಕ್ಷಣ ನೀತಿಯನ್ನು ತಿರಸ್ಕರಿಸಬೇಕಾಗಿದ್ದ ಮಹಿಳೆಯರೇ ಅದನ್ನು ಓದಿದಾಗ - ಅದರಂತೆ ನಡೆದುಕೊಂಡಾಗ ಪುರುಷಪ್ರಧಾನ ವ್ಯವಸ್ಥೆಗೆ ಇನ್ನೂ ಅನುಕೂಲ ವಾಗುತ್ತದೆ. ಕುರಿ ಕೊಬ್ಬಿದಷ್ಟೂ ಕಟುಕನಿಗೆ ಅನುಕೂಲವಾದಂತೆ; ಮಹಿಳೆ ಇಂತಹ ಲಿಂಗಭೇದ ಶಿಕ್ಷಣವನ್ನು ಪಡೆದಷ್ಟೂ ಆಕೆ ಅಧಃಪತನಕ್ಕೊಳಗಾಗುತ್ತಾಳೆ. ಆದುದರಿಂದ, ಶಿಕ್ಷಣ ಯಾವ ಕಾಲದ್ದು, ಯಾರು ಹೇಳಿದ್ದು, ಯಾರು ಓದಿದ್ದು? ಎಂಬಂತಹ ಪ್ರಶ್ನೆಗಳಿಗಿಂತ ಆ ಶಿಕ್ಷಣ ಜನಪರವಾಗಿದೆಯೇ - ಜನ ವಿರೋಧಿಯಾಗಿದೆಯೇ ಎಂಬುದು ಮುಖ್ಯ ವಾಗಬೇಕು. ಆ ಶಿಕ್ಷಣ ಸಮಾನತೆಯನ್ನು ಕಲಿಸುತ್ತದೆಯೇ ಅಥವಾ ಲಿಂಗಭೇದ ನೀತಿಯನ್ನು ಹೇಳುತ್ತದೆಯೇ ಎಂಬುದು ಬಹುಮುಖ್ಯವಾಗಬೇಕು. ಇಲ್ಲದಿದ್ದರೆ ಮಹಿಳೆಗೂ-ಶಿಕ್ಷಣಕ್ಕೂ-ಸಮಾನತೆಗೂ ಸಂಬಂಧವೇ ಇರುವುದಿಲ್ಲ. ಅಂತಹ ಅಸಮಾನತೆಯ ಶಿಕ್ಷಣವನ್ನು ಯಾರೇ ಪಡೆಯಲಿ, ಹೇಗೆಯೇ ಪಡೆಯಲಿ ಅದರಿಂದ ಹಾನಿಯೇ ಹೊರತು ಲಾಭವಿಲ್ಲ.

ಹಿಂದೂ ಶಿಕ್ಷಣ ಪದ್ಧತಿ ವರ್ಣವ್ಯವಸ್ಥೆಯ ಮೇಲೆ ನಿಂತಿದೆ. ಹೀಗಾಗಿ ವರ್ಣಭೇದ ನೀತಿಯನ್ನುಳಿಸುವುದು, ಬೆಳೆಸುವುದು ಅದರ ಮುಖ್ಯ ಉದ್ದೇಶವಾಗಿದೆ. ಆ ಕಾರಣಕ್ಕಾಗಿಯೇ ಅಲ್ಲಿ ಎಲ್ಲ ವರ್ಗದ ಜನರಿಗೆ, ಎಲ್ಲ ಮಹಿಳೆಯರಿಗೆ ಶಿಕ್ಷಣದ ಅವಕಾಶವಿರಲಿಲ್ಲ. ಕೆಲವರು ಅವಕಾಶ ಪಡೆದುಕೊಂಡರೂ ಕೂಡ, ಅವರಿಗೆ ಭೇದನೀತಿ ಶಿಕ್ಷಣ ಪದ್ಧತಿಯನ್ನು ಪ್ರತಿಭಟಿಸು ವುದಾಗಲಿಲ್ಲ. ಹೀಗೆಂದಾಕ್ಷಣ ಈ ಶಿಕ್ಷಣ ಪದ್ಧತಿಯನ್ನು ಸಾರಾಸಗಟಾಗಿ ತಿರಸ್ಕರಿಸ ಬೇಕೆಂದಲ್ಲ. ಅದರಲ್ಲಿಯೂ ಕೆಲವು ಜೀವಪರ-ಮಹಿಳಾಪರ ವಿಷಯಗಳಿವೆ. ಚರ್ಚೆಯ ಮೂಲಕ - ಸಂಶೋಧನೆಯ ಮೂಲಕ ಅಂತಹ ಪರಂಪರೆಯನ್ನು ಕಟ್ಟಿಕೊಳ್ಳಬಹುದಾಗಿದೆ.

ನಮ್ಮ ಮುಂದಿರುವ ಎರಡನೇ ಮಾದರಿಯೆಂದರೆ, ಇಂಗ್ಲೀಷ್ ಶಿಕ್ಷಣ ಪದ್ಧತಿ. ಚಾತುರ್ವರ್ಣ ಶಿಕ್ಷಣ ಪದ್ಧತಿಗೆ ಪರ್ಯಾಯವಾಗಿ ಬೆಳೆದುಕೊಂಡು ಬಂದ ಇಂಗ್ಲೀಷ್ ಶಿಕ್ಷಣ ಪದ್ಧತಿ ನಮ್ಮ ದೇಶದಲ್ಲಿ ಹೊಸ ಬೆಳವಣಿಗೆಯನ್ನುಂಟು ಮಾಡಿತು. ವೈಜ್ಞಾನಿಕ ಮನೋಭಾವವನ್ನು ಬೆಳೆಸಿತು. ವೈಚಾರಿಕ ನೆಲೆಗಳನ್ನು ಕಟ್ಟಿಕೊಟ್ಟಿತು. ಮಹಿಳೆ ತಲೆಯೆತ್ತಿ ನಿಲ್ಲಲು ಈ ಶಿಕ್ಷಣ ಪದ್ಧತಿ ನೆರವಾಯಿತು. ಈ ಶಿಕ್ಷಣ ಪದ್ಧತಿ ನಮ್ಮಲ್ಲಿ ಬಾರದೇ

ಹೋಗಿದ್ದರೆ, ಪಾಶ್ಚಾತ್ಯರ ವೈಚಾರಿಕ ಚಿಂತನೆ ನಮಗೆ ತಿಳಿಯದೇ ಹೋಗಿದ್ದರೆ, ದಲಿತರು ಮಲ ಹೊರುವುದು ತಪ್ಪುತ್ತಿರಲಿಲ್ಲ, ಮಹಿಳೆಯರು ಮಾರಾಟದ ವಸ್ತುಗಳಾಗುವುದು ಕೊನೆಗೊಳ್ಳುತ್ತಿರಲಿಲ್ಲ. ಈ ಕಾರಣಗಳಿಂದ ಇಂಗ್ಲೀಷ್ ಶಿಕ್ಷಣ ಪದ್ಧತಿಯನ್ನು ಸ್ವಾಗತಿಸಿದ್ದು ತುಂಬ ಸೂಕ್ತವಾದುದ್ದಾಗಿದೆ. ಆದರೆ ಮುಖ್ಯ ಪ್ರಶ್ನೆಯೆಂದರೆ ಪ್ರಾರಂಭದಲ್ಲಿ ಈ ಇಂಗ್ಲೀಷ್ ಶಿಕ್ಷಣ ಪದ್ಧತಿ ಕೂಡಾ ಮೇಲುವರ್ಗದವರಿಗೆ ಮಾತ್ರ ದೊರೆಯಿತು. ದಲಿತರು-ದುಡಿವವರ್ಗ-ಮಹಿಳೆಯರು ಅದರಿಂದ ದೂರವೇ ಉಳಿದಿದ್ದರು. ಆದರೆ ಕಾಲಕ್ರಮೇಣ ಈ ಶಿಕ್ಷಣ ಪದ್ಧತಿ ಇಡೀ ದೇಶವನ್ನೇ ವ್ಯಾಪಿಸಿತು. ಆದರೆ ನಂತರದಲ್ಲಿ ನಮ್ಮಲ್ಲಿ ಕಾನ್ವೆಂಟ್ ಸಂಸ್ಕೃತಿ ಹೆಚ್ಚಾಯಿತೇ ಹೊರತು, ಇಂಗ್ಲೀಷ್ ಶಿಕ್ಷಣದ ಒಳಗಡೆಯಿದ್ದ ವೈಚಾರಿಕತೆ-ಸಮಾನತೆ-ಫಿಲಾಸಫಿಯಂತಹ ವಿಷಯಗಳು ಜನಸಾಮಾನ್ಯರಿಗೆ ತಲುಪಲೇ ಇಲ್ಲ.

ಇಂದು ಕಾನ್ವೆಂಟ್ ಶಿಕ್ಷಣ ಕಮರ್ಷಿಯಲ್ ಆಗಿದೆ. ಷೇಕ್ಸ್‌ಪಿಯರ್‌ನನ್ನು ಓದಲೆಂದಾಗಲಿ, ಟಾಲ್‌ಸ್ಟಾಯ ಚಿಂತನೆಗಳು ತಿಳಿಯಬೇಕೆಂದಾಗಲಿ, ಗಾರ್ಕಿಯ ವೈಚಾರಿಕತೆಯನ್ನು ಅರಿಯಬೇಕೆಂದಾಗಲಿ ಇಂದು ಪಾಶ್ಚಾತ್ಯ ಶಿಕ್ಷಣವನ್ನು ಪಡೆಯುತ್ತಿಲ್ಲ. ಇಂದು ಆ ಶಿಕ್ಷಣದ ಆತ್ಮ ದೂರವಾಗಿ ಅದರ ದೇಹದ ಅಂಗಾಂಗಗಳು ಮಾತ್ರ ನಮ್ಮಲ್ಲುಳಿದುಕೊಂಡಿವೆ. ಇಂದು ತೀವ್ರವಾಗಿ ಬೆಳೆಯುತ್ತಿರುವ ಸಾಫ್ಟ್‌ವೇರ್ ಸಂಸ್ಕೃತಿ ನಮ್ಮ ಮಕ್ಕಳನ್ನು ಕರುಳಬಳ್ಳಿಯ ಸಂಸ್ಕೃತಿಯಿಂದಲೇ ಬೇರ್ಪಡಿಸುವ ಅಪಾಯಗಳಿವೆ.

ಈಗ ನಮ್ಮೆದುರಿಗೆ ಈ ಎರಡು ಶಿಕ್ಷಣ ಪದ್ಧತಿಗಳಿವೆ. ಈ ಎರಡೂ ಶಿಕ್ಷಣ ಪದ್ಧತಿಗಳಲ್ಲಿರುವ ಜನಪರ ನಿಲುವುಗಳನ್ನು ಕಟ್ಟಿಕೊಳ್ಳುತ್ತ, ಸಮಾನತೆಯ ನೆಲೆಗಳನ್ನು ಕಂಡುಕೊಳ್ಳುತ್ತ ಪರ್ಯಾಯವಾದ ಶಿಕ್ಷಣ ಪದ್ಧತಿಯನ್ನು ನಾವಿಂದು ಜಾರಿಗೆ ತರಬೇಕಾಗಿದೆ. ಈ ಪರ್ಯಾಯ ಶಿಕ್ಷಣ ಪದ್ಧತಿಗೆ, ನಮ್ಮ ಬುಡಕಟ್ಟು ಸಂಸ್ಕೃತಿ ಹಾಗೂ ಜಾನಪದ ಸಂಸ್ಕೃತಿ, ಮೂಲ ನೆಲೆಗಳಾಗಬೇಕು. ಶಿಷ್ಟ ಸಂಸ್ಕೃತಿಗಿಂತ ಭಿನ್ನವಾಗಿ ಬೆಳೆದ ಜಾನಪದ ಸಂಸ್ಕೃತಿಯ ಅಂತಃಕರಣದ ಸೆಲೆಗಳು ಇಲ್ಲಿ ಕಾಣಿಸಿಕೊಳ್ಳಬೇಕು. ಶೈಕ್ಷಣಿಕ ಜಾನಪದದ ಮಾದರಿಗಳನ್ನು ಇಲ್ಲಿ ಜೋಡಿಸಿಕೊಳ್ಳಬೇಕು. ಮಾತೃಪ್ರಧಾನ ಪದ್ಧತಿಯ ಸಾಂಸ್ಕೃತಿಕ ಸಂಕಥನಗಳು ನಮ್ಮ ಪರ್ಯಾಯ ಶಿಕ್ಷಣ ಪದ್ಧತಿಗೆ ತಳಪಾಯವಾಗಬೇಕು. ಇಂತಹ ಪರ್ಯಾಯ ಸಂಸ್ಕೃತಿ ಹಾಗೂ ಶಿಕ್ಷಣದ ಮೂಲಕ ಮಾತ್ರ ಮಹಿಳೆಯ ಸಬಲೀಕರಣ ಸಾಧ್ಯವಾಗುತ್ತದೆ. ಇಲ್ಲದೇ ಹೋದರೆ ಬೇವಿನ ಬೀಜವನ್ನು ಬಿತ್ತಿ ಬೆಲ್ಲದ ಫಲವನ್ನು ಕೇಳಿದಂತಾಗುತ್ತದೆ. ತಳ ಸಂಸ್ಕೃತಿಯ ನೆಲೆಗಳನ್ನು ಕಂಡುಕೊಳ್ಳಲಾರದೆ, ಪರ್ಯಾಯ ಶಿಕ್ಷಣಪದ್ಧತಿಯನ್ನು ರೂಪಿಸಿಕೊಳ್ಳಲಾರದೆ ಸಮಾನತೆಯ ಬಗೆಗೆ ಮಾತನಾಡುವುದು ವ್ಯರ್ಥವೆನಿಸುತ್ತದೆ. ಯಜಮಾನ ಸಂಸ್ಕೃತಿಯನ್ನು ವೈಭವೀಕರಿಸುವವರೇ ಮಹಿಳಾ ಸಬಲೀಕರಣ ಕುರಿತು ಮಾತನಾಡುವುದರಿಂದ ಏನು ಪ್ರಯೋಜನ? ಇಂದು ಮಹಿಳೆ ಸಬಲಳಾಗಬೇಕಾದರೆ ಪರ್ಯಾಯ ಶಿಕ್ಷಣ ಪದ್ಧತಿಯನ್ನು ಕಂಡುಕೊಳ್ಳಲೇಬೇಕಾಗಿದೆ.

ಸಂಸ್ಕೃತಿಗೂ ಶಿಕ್ಷಣಕ್ಕೂ ಮಹತ್ವದ ಸಂಬಂಧವಿದೆ. ಸಂಸ್ಕೃತಿಯಿಂದ ಬೇರ್ಪಟ್ಟ ಶಿಕ್ಷಣ ಜೀವವಿಲ್ಲದ ದೇಹದಂತಾಗುತ್ತದೆ. ಮಾತೃಪ್ರಧಾನ ಪದ್ಧತಿಯಲ್ಲಿ ಮತ್ತು ಅದರ ಸಾಂಸ್ಕೃತಿಕ

ಸಂಕಥನಗಳಲ್ಲಿ ಶಿಕ್ಷಣಕ್ಕೂ-ಸಂಸ್ಕೃತಿಗೂ ಇರುವ ಕರುಳಬಳ್ಳಿಯ ಸಂಬಂಧವನ್ನು ಮನಗಾಣ ಬಹುದಾಗಿದೆ.

ಮಾತೃಪ್ರಧಾನ ವ್ಯವಸ್ಥೆಯಲ್ಲಿ ಶಿಕ್ಷಣದ ಉದ್ದೇಶ ಹೇಗೆ ಜೀವಪರವಾಗಿತ್ತೆಂಬುದಕ್ಕೆ ಒಂದು ಉದಾಹರಣೆಯನ್ನು ನೋಡಬಹುದಾಗಿದೆ. ಮಾತೃಪ್ರಧಾನ ವ್ಯವಸ್ಥೆಯಲ್ಲಿ ಹುಟ್ಟಿ ಬಂದ ಏಕಲವ್ಯ ಪಡೆಯಬಯಸುವ ಶಿಕ್ಷಣಕ್ಕೂ, ಪಿತೃಪ್ರಧಾನ ವ್ಯವಸ್ಥೆಯಿಂದ ಬಂದ ಅರ್ಜುನ ಶಿಕ್ಷಣ ಪಡೆಯುವುದಕ್ಕೂ ಬಹುದೊಡ್ಡದಾದ ವ್ಯತ್ಯಾಸವಿದೆ. ಕಾಡಿನಲ್ಲಿ ಕ್ರೂರ ಪ್ರಾಣಿಗಳು ಸಾಧು ಪ್ರಾಣಿಗಳನ್ನು ತಿನ್ನುತ್ತಿದ್ದವು. ಹುಲಿ-ಸಿಂಹದಂತಹ ಪ್ರಾಣಿಗಳು ಜಿಂಕೆ-ಮೊಲದಂತಹ ಪ್ರಾಣಿಗಳನ್ನು ತಿಂದು ಬಿಡುತ್ತಿದ್ದವು. ಇದನ್ನು ನೋಡಿದ ಏಕಲವ್ಯನಿಗೆ ಸಾಧು ಪ್ರಾಣಿಗಳ ಬಗೆಗೆ ಕನಿಕರ ಮೂಡಿತು. ಕ್ರೂರ ಪ್ರಾಣಿಗಳಿಂದ - ಸಾಧು ಪ್ರಾಣಿಗಳನ್ನು ಹೇಗಾದರೂ ರಕ್ಷಿಸಬೇಕೆಂದು ಪಣತೊಟ್ಟ. ಹೀಗೆ ಸಾಧು ಪ್ರಾಣಿಗಳನ್ನು ರಕ್ಷಿಸುವುದಕ್ಕಾಗಿ ಕ್ರೂರ ಪ್ರಾಣಿಗಳನ್ನು ಹಿಂಸಿಸಬಾರದೆಂದು ನಿರ್ಣಯಿಸಿದ. ಅಂತಹ ಬಿಲ್ಲು ವಿದ್ಯೆಯನ್ನು ಪಡೆಯಲು ಕಾತುರನಾದ. ದ್ರೋಣಾಚಾರ್ಯರಿಗೆ ಮಾತ್ರ ಅಂತಹ ಬಿಲ್ಲು ವಿದ್ಯೆ ಗೊತ್ತಿತ್ತು. ಆದರೆ ಕ್ಷತ್ರಿಯನಲ್ಲದ ಏಕಲವ್ಯನಿಗೆ ಅಲ್ಲಿ ಪ್ರವೇಶವಿರಲಿಲ್ಲ. ದೂರದಿಂದಲೇ ನೋಡಿ ಆ ವಿದ್ಯೆಯನ್ನು ಕಲಿತ ಏಕಲವ್ಯ ತನ್ನ ಗುರಿಯನ್ನು ತಲುಪಿದ. ಸಾಧು ಪ್ರಾಣಿಗಳನ್ನು ತಿನ್ನಲು ಬರುತ್ತಿದ್ದ ಕ್ರೂರ ಪ್ರಾಣಿಗಳ ಬಾಯಿಗೆ ಬಾಣ ಬಿಟ್ಟು ಪಂಜರ ನಿರ್ಮಿಸಿ ಬಿಡುತ್ತಿದ್ದ. ಆಗ ಸಾಧು ಪ್ರಾಣಿಗಳು ಓಡಿ ಹೋಗಿ ಪಾರಾಗುತ್ತಿದ್ದವು, ಕ್ರೂರ ಪ್ರಾಣಿಗಳೂ ಆ ಬಾಣದಿಂದ ಸಾಯುತ್ತಿರಲಿಲ್ಲ. ಹಾಗೆ ಅಹಿಂಸೆಯ ಮೂಲಕ ಹಿಂಸೆಯನ್ನು ತಡೆಯುವುದು ಏಕಲವ್ಯನ ಶಿಕ್ಷಣದ ಉದ್ದೇಶವಾಗಿತ್ತು. ಇದಕ್ಕೆ ಮುಖ್ಯಕಾರಣ ಆತ ಮಾತೃಪ್ರಧಾನ ಸಂಸ್ಕೃತಿಯಲ್ಲಿ ಬೆಳೆದು ಬಂದವನಾಗಿದ್ದ.

ಆದರೆ ಇದೇ ಬಿಲ್ಲು ವಿದ್ಯೆಯಲ್ಲಿ ಪಾರಂಗತನಾದ ಅರ್ಜುನನ ಶಿಕ್ಷಣದ ಉದ್ದೇಶವೇ ಬೇರೆಯಾಗಿತ್ತು. ಯಾರು ಏನೇ ಆಗಲಿ ತಾನು ಮಾತ್ರ ಮೂರು ಲೋಕದ ಗಂಡನಾಗ ಬೇಕೆಂಬುದು ಆತನ ಗುರಿಯಾಗಿತ್ತು. ತನ್ನ ದಾರಿಗೆ ಅಡ್ಡ ಬಂದವರನ್ನೆಲ್ಲ ಸಂಹರಿಸುತ್ತಲೇ ಹೋದ. ಕೊನೆಗೆ ಧನುರ್ವಿದ್ಯೆಯಲ್ಲಿ ಪಾರಂಗತನಾಗಿದ್ದ ಏಕಲವ್ಯನ ಹೆಬ್ಬೆರಳನ್ನು ಗುರು ದ್ರೋಣಾಚಾರ್ಯರಿಂದ ಕಿತ್ತುಕೊಂಡ. ಬಿಲ್ಲು ವಿದ್ಯೆಯಲ್ಲಿ ಪರಾಕ್ರಮಿಯೆನಿಸಿ ಮೆರೆದ.

ಇದು ಪಿತೃಪ್ರಧಾನ ಸಂಸ್ಕೃತಿಯಲ್ಲಿ ಬೆಳೆದು ಬಂದವನ ಕತೆ. ಅತಿಯಾದ ಮಹತ್ವಾಕಾಂಕ್ಷೆ, ಜಗತ್ತನ್ನೇ ಗೆಲ್ಲುವ ಕಾತುರ, ಎಲ್ಲರನ್ನೂ ಆಳುವ ಹೆಬ್ಬಯಕೆ, ಹಿಂಸೆ-ಅಹಿಂಸೆ ಮುಖ್ಯವಲ್ಲ ತನ್ನ ಗುರಿ ತಲುಪಬೇಕು - ಇವು ಸಾಮಾನ್ಯವಾಗಿ ಪಿತೃಪ್ರಧಾನ ವ್ಯವಸ್ಥೆಯ ಮೌಲ್ಯಗಳು. ಪ್ರೀತಿ-ಅಂತಃಕರಣ-ತ್ಯಾಗ-ಅಹಿಂಸೆ-ಸೋದರತ್ವ ಇವು ಮಾತೃಪ್ರಧಾನ ವ್ಯವಸ್ಥೆಯ ಮೌಲ್ಯಗಳು. ಹೀಗಾಗಿ ಅರ್ಜುನ ಶಿಕ್ಷಣ ಪಡೆಯುವುದಕ್ಕೂ-ಏಕಲವ್ಯ ಶಿಕ್ಷಣ ಪಡೆಯುವುದಕ್ಕೂ ತುಂಬಾ ವ್ಯತ್ಯಾಸವಿದೆ.

ಶಿಕ್ಷಣವೆಂದರೆ ಕೇವಲ ಅಕ್ಷರ ಕಲಿಯುವುದರಲ್ಲಿ ಶಿಕ್ಷಣಕ್ಕೂ-ಸಂಸ್ಕೃತಿಗೂ-ಬದುಕಿಗೂ ಅವಿನಾಭಾವ ಸಂಬಂಧವಿದೆ. ಭಾರತದ ಅನೇಕ ಬುಡಕಟ್ಟುಗಳಲ್ಲಿ ಅಕ್ಷರ ಕಲಿಸುವ ಶಿಕ್ಷಣ ಇರಲಿಕ್ಕಿಲ್ಲ. ಆದರೆ ಬದುಕನ್ನು ರೂಪಿಸಿಕೊಳ್ಳುವ ಶಿಕ್ಷಣವಿದೆ, ಸಂಸ್ಕೃತಿಯನ್ನು ಉಳಿಸಿ ಕೊಳ್ಳುವ ಶಿಕ್ಷಣವಿದೆ. ಆದುದರಿಂದ ಅವರನ್ನು ಅನಕ್ಷರಸ್ಥರೆಂದು ಕರೆಯಬಹುದೇ ಹೊರತು ಅಶಿಕ್ಷಿತರೆಂದು-ಅಸಂಸ್ಕೃತರೆಂದು ಕರೆಯಲಾಗದು. ಸಂಸ್ಕೃತಿಯ ಮೂಲ ಆಕರಗಳು ಅವರ ಶಿಕ್ಷಣ ಪದ್ಧತಿಯಲ್ಲಿವೆ.

"ನೋಡಿ ತಿಳಿ ಮಾಡಿ ಕಲಿ" - ಇದು ಬುಡಕಟ್ಟು ಜನಾಂಗಗಳ ಶಿಕ್ಷಣ ಪದ್ಧತಿಯಾಗಿದೆ. ಅವರಿಗೆ ಶಿಕ್ಷಣ-ಸಂಸ್ಕೃತಿ-ಸಾಹಿತ್ಯ-ಬದುಕು ಹೀಗೆ ಬೇರೆ ಬೇರೆಯಾಗಿ ಕಾಣುವುದಿಲ್ಲ. ಶಿಕ್ಷಣ ಪಡೆಯಲಿಕ್ಕೆಂದು ಇಷ್ಟು ವರ್ಷ, ಶಿಕ್ಷಣ ಪಡೆದ ಮೇಲೆ ಕೆಲಸ ಮಾಡಲೆಂದು ಇಷ್ಟು ವರ್ಷ ಅವರಲ್ಲಿ ನಿಗದಿಯಾಗಿರುವುದಿಲ್ಲ. ಅವರು ಶಿಕ್ಷಣ ಪಡೆಯುತ್ತಲೇ ದುಡಿಯುತ್ತಿರುತ್ತಾರೆ. ಕಲಿಕೆ-ಗಳಿಕೆ ಅವರಲ್ಲಿ ಏಕಕಾಲದಲ್ಲಿಯೇ ನಡೆದಿರುತ್ತವೆ. ನಮ್ಮ ಹಳ್ಳಿಗಾಡಿನ ಕೈ ಕಸುಬುಗಳಾಗಿರಬಹುದು, ಗುಡಿ ಕೈಗಾರಿಕೆಗಳಾಗಿರಬಹುದು ಇವೆಲ್ಲಾ ಜಾನಪದ ಶಿಕ್ಷಣ ಪದ್ಧತಿಯಿಂದ ಬೆಳದು ಬಂದವುಗಳಾಗಿವೆ. ಜಾನಪದ ವೈದ್ಯ ಪದ್ಧತಿಯನ್ನು ನಿರ್ಲಕ್ಷಿ ಸುವಂತಿಲ್ಲ. ಪರ್ಯಾಯ ಶಿಕ್ಷಣ ಪದ್ಧತಿ ರೂಢಿಸಿಕೊಳ್ಳುವಾಗ ಈ ಎಲ್ಲ ಸಂಗತಿಗಳನ್ನು ಗಮನಿಸಬೇಕಾಗುತ್ತದೆ.

ಹೆಣ್ಣು-ಗಂಡಿನ ನಡುವಿರುವ ಅಸಮಾನತೆ ಅದು ಪ್ರಕೃತಿ ಸಹಜವಾದುದೆಂದು ಯಜಮಾನ ಸಂಸ್ಕೃತಿ ಬಿಂಬಿಸುತ್ತ ಬಂದಿದೆ. ಇದನ್ನು ಒಪ್ಪಿಕೊಂಡ ಸಮಾಜ ವ್ಯವಸ್ಥೆ ಹೆಣ್ಣನ್ನು ಅಬಲೆ-ದುರ್ಬಲಳು-ಸದಾ ಇನ್ನೊಬ್ಬರ ರಕ್ಷಣೆಯಲ್ಲಿರುವವಳೆಂದು ಹೇಳುತ್ತ ಬಂದಿದೆ. ಇಂತಹ ಅಸತ್ಯ ಸಂಗತಿಗಳನ್ನು ವಿರೋಧಿಸುವುದರ ಮೂಲಕ ಪರ್ಯಾಯ ಶಿಕ್ಷಣ ತನ್ನ ತಾತ್ವಿಕ ನೆಲೆಗಳನ್ನು ರೂಢಿಸಿಕೊಳ್ಳಬೇಕು. ಶಿಕ್ಷಣ ಕಲಿಯುವ ಇಬ್ಬರು ಮಕ್ಕಳಲ್ಲಿ ಹೆಣ್ಣು-ಗಂಡು ಎಂಬ ವ್ಯತ್ಯಾಸವನ್ನು ದೊಡ್ಡದಾಗಿ ಬೆಳೆಸುವುದು ಅಪಾಯಕಾರಿ ಯಾದುದಾಗಿದೆ. ಪ್ರಕೃತಿಯಲ್ಲಿ ಎಲ್ಲರೂ ಸಮಾನರು, ಹೀಗೆ ಸಮಾನತೆಯಿಂದ ಬೆಳೆಯುವ ಪರಿಸರವನ್ನು ನಮ್ಮ ಶಿಕ್ಷಣ ಪದ್ಧತಿ ನಿರ್ಮಿಸಬೇಕು. ಗಂಡು ಮಕ್ಕಳನ್ನು ಸ್ವೇಚ್ಛೆಯಿಂದ ಬೆಳೆಸುವುದು, ಹೆಣ್ಣು ಮಕ್ಕಳನ್ನು ಭಯದ ನೆರಳಲ್ಲಿ ತಳ್ಳುವುದು ತಪ್ಪಬೇಕು. ವಿದ್ಯಾವಂತ ತಂದೆ-ತಾಯಿಗಳಲ್ಲಿ ಎಷ್ಟೋ ಜನ ತಮ್ಮ ಗಂಡು ಮಕ್ಕಳಿಗೆ ವೈದ್ಯಕೀಯ-ಸ್ನಾತಕೋತ್ತರ ವೈದ್ಯಕೀಯ ಶಿಕ್ಷಣ ಕೊಡಿಸಿದಂತೆ, ತಮ್ಮ ಹೆಣ್ಣು ಮಕ್ಕಳಿಗೆ ಕೊಡಿಸುವುದಿಲ್ಲ. ಅವಳು ಕೊಟ್ಟ ಮನೆಗೆ ಹೋಗುವವಳೆಂಬ ಭಾವನೆ ಅವರದು.

ಹೀಗೆ ಹೆಣ್ಣು-ಗಂಡು ಪ್ರಕೃತಿ ಸಹಜವಾಗಿ ಅಸಮಾನರೆಂದು ನೋಡುವುದು ಎಷ್ಟು ಅಪಾಯಕಾರಿಯೋ, ಅವರಿಬ್ಬರನ್ನು ಅಸಮಾನತೆಯಿಂದ ಬೆಳೆಸುವುದು ಕೂಡಾ ಅಷ್ಟೇ ಅಪಾಯಕಾರಿಯಾಗಿದೆ. ಶೀಲ-ಪಾತಿವ್ರತ್ಯ-ಸತೀತ್ವದಂತಹ ದೊಡ್ಡ ದೊಡ್ಡ ಸುಳ್ಳುಗಳನ್ನು ಅಮಾಯಕ ಹೆಣ್ಣುಗಳ ಮೇಲೆ ಹೇರಿ, ಅವರು ಸದಾ ಅಂತಹ ಭ್ರಮೆಗಳಲ್ಲಿಯೇ

ಮುಳುಗುವಂತೆ ಮಾಡುವ ಪುರುಷ ಪ್ರಧಾನ ವ್ಯವಸ್ಥೆಯನ್ನು ಭೇದಿಸದ ಹೊರತು ಮಹಿಳೆ ಸಬಲಳಾಗಲಾರಳು. ಸ್ವತಂತ್ರವಾಗಿ ವಿಚಾರ ಮಾಡದ ಹೊರತು ಆಕೆ ಬೆಳೆಯಲಾರಳು. ನಮ್ಮ ಪರ್ಯಾಯ ಶಿಕ್ಷಣ ಇಂತಹ ಬೆಳವಣಿಗೆಯ ಕಡೆಗೆ ಚಿಂತಿಸಬೇಕು.

ಪ್ರತಿ ವ್ಯಕ್ತಿ ಅಥವಾ ಪ್ರತಿ ಜೀವಿಯಲ್ಲಿಯೂ ಹೆಣ್ಣು ಮತ್ತು ಗಂಡು ಗುಣಗಳಿವೆ. ಧೈರ್ಯ-ಪರಾಕ್ರಮ-ಆಕ್ರಮಣನೀತಿ ಗಂಡಿನದೆಂದು, ಸಂಯಮ-ಶೀಲ-ತ್ಯಾಗ-ಸಹನೆ ಹೆಣ್ಣಿನದೆಂದು ಬಿಂಬಿಸಲಾಗಿದೆ. ಇಂತಹ ಭ್ರಮೆಗಳನ್ನು ಮುರಿಯುವುದರ ಮೂಲಕ ಪರ್ಯಾಯ ಶಿಕ್ಷಣ ಬೆಳೆದು ನಿಲ್ಲಬೇಕು.

ಶಿವ ಸಂಸ್ಕೃತಿಯಲ್ಲಿ ಮೂಡಿ ನಿಂತಿರುವ ಅರ್ಧನಾರೀಶ್ವರ ಪರಿಕಲ್ಪನೆ ಹೆಚ್ಚು ವೈಜ್ಞಾನಿಕವಾದುದಾಗಿದೆ. ಅರ್ಧನಾರೀಶ್ವರನಾದ ಶಿವ ಅರ್ಧ ಹೆಣ್ಣು-ಅರ್ಧ ಗಂಡು ಆಗಿದ್ದಾನೆ. ಈ ಪರಿಕಲ್ಪನೆ ಪರ್ಯಾಯ ಸಂಸ್ಕೃತಿ ನಿರೂಪಿಸುವವರಿಗೆ ಮಾದರಿಯಾಗಿದೆ. ಲಿಂಗಭೇದ ನೀತಿಯನ್ನಳಿಸಿ ಸಮಾನತೆಯ ತತ್ವವನ್ನು ಹೇಳುವ ಇಂತಹ ಪರಿಕಲ್ಪನೆಗಳು ಪುರಾಣದಲ್ಲಿರಲಿ - ಇತಿಹಾಸದಲ್ಲಿರಲಿ ಅದನ್ನು ಗುರುತಿಸುವ, ಆ ಮೂಲಕ ಹೊಸ ತಾತ್ವಿಕತೆಯನ್ನು ಕಟ್ಟಿಕೊಳ್ಳುವ ಕಾರ್ಯ ಹೊಸ ಶಿಕ್ಷಣ ಪದ್ಧತಿಯ ಮೂಲಕ ನಡೆಯಬೇಕು.

ಅರ್ಧನಾರೀಶ್ವರ ಪರಿಕಲ್ಪನೆಗಿಂತ ಮುಂದೆ ಹೋದ ಹನ್ನೆರಡನೇ ಶತಮಾನದ ಶಿವಶರಣರು "ಶರಣಸತಿ-ಲಿಂಗಪತಿ" ಎಂದು ಹೇಳಿದರು. ಈ ನುಡಿಯ ಅರ್ಥವ್ಯಾಪ್ತಿ ಬಹುದೊಡ್ಡದು. ಶರಣ ಸತಿಯೆಂದರೆ, ಸತಿಯಾದಾಗಲೇ ಶರಣನಾಗಲು ಸಾಧ್ಯವೆಂದರ್ಥ. ಯಾವುದೇ ವ್ಯಕ್ತಿ ಶರಣನಾಗಬೇಕಾದರೆ ಮೊದಲು ಸತಿಯಾಗಬೇಕು. ಅಂದರೆ ಹೆಣ್ಣಾಗಬೇಕು. ತಾಯಿಯ ಅಂತಃಕರಣ ಹೊಂದಿರಬೇಕು. ಆಗ ಮಾತ್ರ ಶರಣತ್ವ ಲಭಿಸುತ್ತದೆ. ವಿಭೂತಿ-ರುದ್ರಾಕ್ಷಿ ಧರಿಸಿದಾಕ್ಷಣ ಶರಣನಾಗುವುದಿಲ್ಲ; ತಾಯಿಯ ಅಂತಃಕರಣ ಹೊಂದಿದವರು ಮಾತ್ರ ಶರಣರಾಗಲು ಸಾಧ್ಯವೆಂದು ವಚನಕಾರರು ಸ್ಪಷ್ಟಪಡಿಸಿದರು. ಹೀಗೆ ಸತಿಯಾಗಿ-ತಾಯಿಯಾಗಿ-ಅಂತಃಕರಣವುಳ್ಳವರಾಗಿ ಶರಣರಾದವರು ಶಿವನಿಗಿಂತಲೂ ದೊಡ್ಡವರು ಎಂದು ಅವರು ಹೇಳಿದರು. "ಶಿವನಿಗಿಂತ ಶಿವಶರಣನಧಿಕ" ಎಂಬ ಮಾತೂ ಕೂಡ ಮಾತೃಪ್ರಧಾನ ಸಂಸ್ಕೃತಿಯ ಮಹತ್ವವನ್ನೇ ಹೇಳುತ್ತದೆ. ಹೀಗೆ ಪರ್ಯಾಯ ಶಿಕ್ಷಣ ಹಾಗೂ ಪರ್ಯಾಯ ಸಂಸ್ಕೃತಿಯ ಮೂಲಕವೇ ಮಹಿಳಾ ಸಬಲೀಕರಣ ಸಾಧ್ಯವಿದೆ.*

---

* ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾಲಯ, ಬಿಜಾಪುರದಲ್ಲಿ ನಡೆದ ರಾಷ್ಟ್ರೀಯ ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧ, ದಿನಾಂಕ ೩.೧೦.೨೦೦೪.

# ಮೂರನೆಯ ಜಗತ್ತಿನ ರಾಷ್ಟ್ರಗಳಲ್ಲಿ ಮಹಿಳೆ ಮತ್ತು ಶೈಕ್ಷಣಿಕ ಆಯಾಮಗಳು

ಶಾಂತಾ ಅಸ್ಪಿಗೆ

'ಮೂರನೆಯ ವಿಶ್ವ'ದ ಪರಿಕಲ್ಪನೆಯ ಇತಿಹಾಸ ಹಾಗೂ ಆ ಕುರಿತ ವಾಗ್ವಾದ ಸಂವಾದಗಳೇನೇ ಇರಲಿ; ಇಂದು ಈ ಪರಿಕಲ್ಪನೆಯು ಅರ್ಥಶಾಸ್ತ್ರ, ಸಮಾಜಶಾಸ್ತ್ರ, ರಾಜ್ಯಶಾಸ್ತ್ರಾದಿ ವಿಷಯಾಧ್ಯನಗಳಲ್ಲಿ ಮೇಲಿಂದ ಮೇಲೆ ಬಳಕೆಗೊಳ್ಳುತ್ತಿರುವುದು ಸರ್ವವಿದಿತ ಸಂಗತಿಯಾಗಿದೆ. ಆರ್ಥಿಕವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಪ್ರಬಲವಾಗಿರುವ ಇನ್ನೆರಡು ವಿಶ್ವಗಳು ಈ ಜಗತ್ತಿನಲ್ಲಿ ಚಲಾವಣೆಯಲ್ಲಿ ಇವೆ. ಈ ಮೇಲ್ಕಂಡ ವಿಷಯಗಳಲ್ಲಿ ಅಷ್ಟೊಂದು ಪ್ರಗತಿ ಸಾಧಿಸದ, ಹಿಂದುಳಿದಿರುವ ಆದರೂ ಮುಂದುವರಿಯಲು ಪ್ರಯತ್ನಿಸುತ್ತಿರುವ ರಾಷ್ಟ್ರಗಳನ್ನು ಮೂರನೆಯ ವಿಶ್ವವೆಂದು ನಾವು ಮೊಗಮ್ಮಾಗಿ ಅರ್ಥೈಸಬಹುದು.

'ಮೂರನೆಯ ವಿಶ್ವ' ಪರಿಕಲ್ಪಿತ ರಾಷ್ಟ್ರಗಳಲ್ಲಿ : ಬಡತನದ ರೇಖೆಯ ಕೆಳಗಿರುವವರ, ಜನಸಂಖ್ಯೆ ಮಿಗಿಲಾಗಿದೆ. ನಿರುದ್ಯೋಗ ಅನಕ್ಷರತೆಯ ಸಮಸ್ಯೆಗಳು ಭೀಕರವಾಗಿವೆ. ಜಾತಿ, ವರ್ಣ, ವರ್ಗ, ಲಿಂಗತಾರತಮ್ಯಗಳು ಅಜಗಜಾಂತರವಾಗಿವೆ. ಅಜ್ಞಾನ, ಅಂಧಾಚರಣೆ, ಮೌಢ್ಯ ಸಂಪ್ರದಾಯಗಳು ಇಡಿಕಿರಿದಿವೆ. ಜನಸಾಮಾನ್ಯರ ದಿನನಿತ್ಯದ ಬದುಕು ಯಾತನಾಮಯವಾಗಿದೆ. ಸಮಾಜ, ರಾಜ್ಯ, ಧರ್ಮ ಇತ್ಯಾದಿ ಸಂಸ್ಥೆಗಳು ಇಲ್ಲಿ ಕಾರ್ಯ ನಿರ್ವಹಿಸುತ್ತಿವೆಯಾದರೂ; ಜನರ ಬವಣೆ ಹರಿದಿರುವುದಿಲ್ಲ. ಆದಾಗ್ಯೂ ಸಮುದಾಯದ ಕಲ್ಯಾಣ ಕಾರ್ಯಯೋಜನೆಗಳು ಪ್ರಗತಿಯತ್ತ ಧಾಪುಗಾಲು ಹಾಕುತ್ತಿವೆ. ಅಭಿವೃದ್ಧಿಯ ಭರವಸೆಯೊಂದಿಗೆ ಈ ರಾಷ್ಟ್ರಗಳು ಜೀವಿಸುತ್ತಿರುವುದು ಕಂಡು ಬರುತ್ತಿದೆ. ಇದು 'ಮೂರನೆಯ ವಿಶ್ವ'ದ ಒಂದು ಸ್ಥೂಲವಾದ ಸಾಮಾಜಿಕ ಚಿತ್ರಣವಾಗಿದೆ. ಇವುಗಳನ್ನು 'ಮುಂದುವರಿಯುತ್ತಿರುವ ರಾಷ್ಟ್ರ'ಗಳು ಎಂದು ಕೂಡಾ ಕರೆಯಲಾಗುತ್ತದೆ.

ನನ್ನ ಪ್ರಬಂಧದ ವಿಷಯ ವಸ್ತು - "ಮಹಿಳೆ ಮತ್ತು ಶೈಕ್ಷಣಿಕ ಆಯಾಮಗಳು" ಎಂಬುದಾಗಿರುವುದರಿಂದ; ಮೂರನೆಯ ವಿಶ್ವದ ಜನಸಂಖ್ಯೆಯ ಅರ್ಧದಷ್ಟಿರುವ ಮಹಿಳೆಯರ ಸ್ಥಿತಿಗತಿ ಹಾಗೂ ಅವಳ ಚರಿತ್ರೆಯನ್ನು ಕುರಿತು ಒಂದಿಷ್ಟು ಚರ್ಚಿಸುವುದು ಇಲ್ಲಿ ಮುಖ್ಯವೆನಿಸುತ್ತದೆ.

## ಮಹಿಳೆಯರ ವಿಶೇಷತೆ

ಮಹಿಳೆಯು ಪುರುಷನಿಗಿಂತ ವಿಭಿನ್ನ ಹಾಗೂ ವಿಶಿಷ್ಟವಾಗಿದ್ದಾಳೆ. ಹೀಗೆಂದರೆ ಅವಳು ಪುರುಷನಿಗಿಂತ ಕೀಳು, ಕಡಿಮೆ, ಎಂದೇನೂ ಅರ್ಥವಾಗಬೇಕಾಗಿಲ್ಲ. ಅವಳ ಜೈವಿಕ ಹಾಗೂ ದೈಹಿಕ ಸ್ಥಿತಿಗಳು ಮಹಿಳೆಯನ್ನು ಪುರುಷನಿಗಿಂತ ವಿಭಿನ್ನವೆನ್ನುವುದನ್ನು, ವ್ಯಕ್ತಪಡಿಸುತ್ತವೆಯೇ ಹೊರತು; ಕೀಳು ಎಂದು ಎಲ್ಲ. ಗಂಡು ಹೆಣ್ಣು ಮಕ್ಕಳೆರಡು ಆರೇಳು ವರ್ಷಗಳವರೆಗೆ ಒಂದೇ ತೆರನಾಗಿ ವರ್ತಿಸುತ್ತವೆ, ಓಡಾಡುತ್ತವೆ. ಆಟ, ಪಾಠ, ಇತ್ಯಾದಿ ಕ್ರಿಯೆಗಳಲ್ಲಿ ಸಮನಾಗಿ ಪಾಲ್ಗೊಳ್ಳುತ್ತವೆ. ಆದರೆ ಮುಂದೆ ಹೆತ್ತವರು, ಕುಟುಂಬದ ಇನ್ನಿರ ವರ್ಗದವರು, ಸಮುದಾಯದ ಜನತೆ ಹಾಗೂ ಸಮಾಜದ ಸದಸ್ಯರು ಈ ಆಟ, ಓಟ, ಭಾವನೆ, ಆಸಕ್ತಿಗಳನ್ನು ಹೆಣ್ಣು-ಗಂಡಿಗೆ ಪರಸ್ಪರ ಭಿನ್ನವೆಂಬುದನ್ನು ಪದೇ ಪದೆ ಪ್ರಸ್ತಾಪಿಸುತ್ತ; ಅಳು, ನಗು, ಚಿಂತನೆಗಳನ್ನು ಕೂಡ ಸ್ತ್ರೀ-ಪುರುಷರಿಗೆ ಬೇರೆ ಬೇರೆಯಾಗಿ ನಿಗದೀಕರಣಗೊಳಿಸಿ ಮಕ್ಕಳನ್ನು ಬೆಳೆಸುತ್ತಾರೆ. ಹೆಣ್ಣೆಂದರೆ ಸಹನೆ, ತಾಳ್ಮೆ, ಕರುಣೆ, ಉಪಚಾರ, ಹೊಂದಾಣಿಕೆ, ಮೃದು, ಅಂಜುಗುಳಿತನ ಕೋಮಲೆ ಎಂಬಂಥ ಪದಗುಚ್ಛಗಳನ್ನು ಪರಿಚಯಿಸಿ; ಅವುಗಳನ್ನು ಮೌಲ್ಯಗಳೆಂದು ನಂಬಿಸಿ ಹೆಣ್ಣಿನ ಮೇಲೆ ಹೇರಲಾಗುತ್ತದೆ. ಸ್ತ್ರೀ 'ಭಾವನಾಮಯಿ' ಅವಳಿಗೆ ಕಣ್ಣೀರು ಸಹಜವೆಂಬುದನ್ನು ಪ್ರತಿಪಾದಿಸಲಾಗುತ್ತದೆ. ಹೆಣ್ಣು ಎಂದರೆ ಪುರುಷನ ಖಾಸಗಿ ಆಸ್ತಿ, ಭೋಗದ ವಸ್ತು, ಅಡುಗೆ ಮನೆಯ ಆಳು, ಹೆರುವ ಯಂತ್ರ, ಎಂಬರ್ಥಗಳು ಮೂರನೆಯ ವಿಶ್ವದ ರಾಷ್ಟ್ರಗಳಲ್ಲಿ ಜಾರಿಯಲ್ಲಿರುವುದು ದುರಂತ.

ಹೆಣ್ಣು ಕೂಡ ಒಬ್ಬ ವ್ಯಕ್ತಿ, ಆಕೆಗೂ ವ್ಯಕ್ತಿತ್ವವಿದೆ. ಹೊನ್ನು, ಮಣ್ಣು ಇತ್ಯಾದಿ ಸಂಪತ್ತುಗಳ ಜೊತೆಗೆ ಅವಳನ್ನು ಹೋಲಿಕೆ ಮಾಡುವುದು ಅಸಂಬದ್ಧ - ಮಹಿಳೆಯನ್ನು ತ್ಯಾಗದ, ದುಡಿಮೆಯ, ಸೇವೆಯ ಅಪರಾವತಾರ ಎಂಬ ಅಪಕಲ್ಪನೆಗಳನ್ನು ತುಂಬಿ; ಗಂಡಿನ ಬಳಕೆಗೆ ಕಾಲಾನುಕಾಲದಿಂದ ಸಿದ್ಧಗೊಳಿಸಲಾಗಿದೆ. ನಮ್ಮ ಬೌದ್ಧಿಕ ಹಾಗೂ ಶೈಕ್ಷಣಿಕ ವಲಯಗಳು: ಪುರುಷ ಹಿತಾಸಕ್ತಿಯ ಗೃಹಿಕೆಯ ಮಾದರಿಯನ್ನು ಸಮಾಜದಲ್ಲಿ ಪ್ರಚುರ ಪಡಿಸುತ್ತಿವೆ. ಪುರುಷನಿಗೆ ಅನುಕೂಲವಾಗುವಂತೆ, ಸುಖಕ್ಕೆ, ಬಳಕೆಗೆ ವಸ್ತುವಾಗುವಂತೆ ಸ್ತ್ರೀಯನ್ನು ರೂಪಿಸಲಾಗುತ್ತಿದೆ. ಇದನ್ನು ಔಪಚಾರಿಕ, ಅನೌಪಚಾರಿಕ ಶಿಕ್ಷಣ ಸಂಸ್ಥೆಗಳೆರಡೂ ಒಗ್ಗೂಡಿಯೇ ನಡೆಸುತ್ತವೆ. ಗಂಡು ಎಂದಾಗ, ಅಗಾಧ ಬುದ್ಧಿವಂತ, ಧೈರ್ಯಶಾಲಿ, ಮುನ್ನುಗ್ಗುವ ಪ್ರವೃತ್ತಿಯವನೆಂದೂ; ಹೆಣ್ಣು ಎಂದಾಗ ಭಾವನಾಮಯಿ, ಅಳುಮುಂಜಿ, ಪುಕ್ಕಲು, ಎಂಬ ನಂಬಿಕೆಗಳನ್ನು ವ್ಯಾಪಕವಾಗಿ ಬೆಳೆಸಲಾಗಿದೆ. ವಾಸ್ತವದಲ್ಲಿ, ಮುಟ್ಟಾಗುವುದು, ಗರ್ಭಧರಿಸುವುದು, ಹೆರುವುದು, ಹಾಲೂಡಿಸುವುದು ಇಂಥ ಕೆಲವು ಜೈವಿಕ ಕ್ರಿಯೆಗಳನ್ನು ಹೊರತು ಪಡಿಸಿದರೆ; ಹೆಣ್ಣು-ಗಂಡಿನ ಕೆಲಸ ಕಾರ್ಯಗಳಲ್ಲಿ, ಅಭೀಪ್ಸೆ-ಆಶಯಗಳಲ್ಲಿ ಯಾವುದೇ ಪ್ರತ್ಯೇಕತೆ ಇಲ್ಲ. ರಾಜಕೀಯ, ಆರ್ಥಿಕತೆ, ಶಿಕ್ಷಣ, ಸಾಹಿತ್ಯ, ಕಲೆ, ಕ್ರೀಡೆ, ವಿಜ್ಞಾನ, ಇವುಗಳಲ್ಲಿ ಸ್ತ್ರೀ-ಪುರುಷರಿಬ್ಬರಿಗೂ ಸಮಾನ ಆಸಕ್ತಿ ಶಕ್ತಿ ಮತ್ತು ಸಾಮರ್ಥ್ಯಗಳೆಲ್ಲ ಪ್ರಕೃತಿ ಸಹಜವಾಗಿರುತ್ತವೆ. ಒಂದೊಮ್ಮೆ ಹೆಂಗಸಿನ ಕೆಲಸವನ್ನು ಗಂಡಸು

ಮಾಡಿದರೆ ಅದು ಅವನ ದೌರ್ಬಲ್ಯವೆಂದೂ; ಹೇಡಿತನವೆಂದೂ; ಗಂಡಸ್ಸಿನ ಕೆಲಸವನ್ನು ಹೆಂಗಸು ಮಾಡಿದರೆ ಅದು ಅವಳ ಸಾಹಸವೆಂದು ನಂಬಿಸಲಾಗುತ್ತದೆ. ಹಾಗೇ ನೋಡಿದರೆ ಎಲ್ಲರೂ ಎಲ್ಲ ಕೆಲಸವನ್ನು ಮಾಡಬಹುದು. ಅಡುಗೆ ಮನೆಗಾಗಿ ಶಿಕ್ಷಣ, ಮಕ್ಕಳ ಪಾಲನೆ ಪೋಷಣೆಗಾಗಿ ಶಿಕ್ಷಣ ಎಂಬಂಥ ನಂಬಿಕೆಗಳು ಪುರುಷ ಪರ ಪಟ್ಟಭದ್ರ ಹಿತಾಸಕ್ತಿಯಿಂದ ಮೂಡಿ ಬಂದಿವೆ. ಯಾವುದೇ ಕೆಲಸ ಕಾರ್ಯಗಳನ್ನು ಒಂದು ನಿರ್ದಿಷ್ಟ ಜಾತಿ, ವರ್ಣ, ಲಿಂಗಕ್ಕೆ ನಿಗದಿಗೊಳಿಸುವುದು; ಸ್ಥಗಿತ ಸಂಸ್ಕೃತಿಯ ಕೊಳಕುತನವನ್ನು ಪ್ರತಿನಿಧಿಸುತ್ತದೆ. ಹೆಣ್ಣಾಗಲಿ, ಗಂಡಾಗಲಿ ಒಬ್ಬರು ಇನ್ನೊಬ್ಬರ ಬಳಕೆಗೆ ವಸ್ತುವಾಗಬಾರದು. ವಿವಾಹ, ಕುಟುಂಬ, ದಾಂಪತ್ಯ, ಸಂತಾನ, ಸಮಾಜಗಳು ಸ್ತ್ರೀ ಪುರುಷರಿಬ್ಬರಿಗೂ ಸಮಾನ ಅನುಕೂಲಕರವಾಗಿ ಕಟ್ಟಲ್ಪಡಬೇಕು. ಸ್ತ್ರೀ ಸ್ವಾತಂತ್ರ್ಯವೆನ್ನುವುದು ಪುರುಷನ ಸ್ವಾತಂತ್ರ್ಯವನ್ನು ಪೊರತು ಪಡಿಸಿದುದಲ್ಲ. ಪರಸ್ಪರರು ಆತ್ಮಾಭಿಮಾನ ಸ್ವಗೌರವನ್ನು ಹೊಂದಿ ಬಾಳನ್ನು ನಡೆಸಬೇಕು. ಸಹಧರ್ಮಿಣಿ, ಅನುಕೂಲೆ, ಸಹಗಮನ, ಅರ್ಧನಾರೀಶ್ವರ ಇತ್ಯಾದಿ ಪರಿಕಲ್ಪನೆ ಗಳು ಆರೋಗ್ಯ ಪೂರ್ಣ ಸಮಾಜಕ್ಕೆ ತುಂಬಾ ಅಪಾಯಕಾರಿ. ಮಾತು ಕೇಳದ ಮಕ್ಕಳಿಗೆ ಮಿಠಾಯಿಕೊಟ್ಟು ಮನವೊಲಿಸುವಂತೆ ಹೆಣ್ಣನ್ನು ಪ್ರಕೃತಿ, ಭೂಮಾತೆ, ಜಲದೇವತೆ, ಅಂಜನಾ ದೇವಿ ಎಂದೆಲ್ಲ ಶಿರಕ್ಕೇರಿಸುವುದರಲ್ಲಿ ಪುರುಷ ಪರ ಹಿತಾಸಕ್ತಿ ಇದೆ. ಆದರೆ ಇಂಥ ಮಾತುಗಳಿಂದ ಕೂಡಾ ಸ್ತ್ರೀಯು ನೀರು, ಗಾಳಿ, ನೆಲ, ನಿಸರ್ಗದಷ್ಟೆ ಜೀವನಾವಶ್ಯಕ ಪೋಷಕಶಕ್ತಿ ಎಂಬುದು ಸಾಬೀತಾಗುತ್ತಿರುವುದು ಆಕಸ್ಮಿಕವಾದರೂ ನಿಜ ಸಂಗತಿಯಾಗಿದೆ.

ಸ್ತ್ರೀ ಸ್ವಭಾವತಃ ಚಂಚಲೆ ಎಂಬ ಸುಳ್ಳು ಆರೋಪವನ್ನು ಭಾರತೀಯ ಪರಂಪರೆಯಲ್ಲಿ ಕಾಲಾನುಕಾಲದಿಂದ ಮಾಡುತ್ತಾ ಬರಲಾಗಿದೆ. ಹಾಗೆ ನೋಡಿದರೆ ಒಂದರ್ಥದಲ್ಲಿ ಪುರುಷನೇ ಮಹಾ ಚಂಚಲ ಪ್ರವೃತ್ತಿಯವನಾಗಿದ್ದಾನೆ ಎಂದು ಹೇಳಬಹುದಾಗಿದೆ. ಅವನಿಗೆ ಒಂದು ಕಡೆ ಕೂಡುವುದಾಗಲಿ, ಒಂದು ವಸ್ತುವಿನಲ್ಲಿ ಶ್ರದ್ಧೆ-ನಿಷ್ಠೆಯನ್ನು ತಾಳುವುದಾಗಲಿ, ತನ್ನ ಸುಖವನ್ನು ತ್ಯಾಗ ಮಾಡುವುದಾಗಲಿ; ಸುಲಭ ಸಾಧ್ಯವಲ್ಲ ಎಂಬುದಕ್ಕೆ ನಮ್ಮ ಚರಿತ್ರೆ ಪುರಾಣ ವರ್ತಮಾನಗಳಿಂದ ಸಾಕಷ್ಟು ಸಾಕ್ಷಿಗಳು ದೊರೆಯುತ್ತವೆ. ಪುರುಷನಿಗೆ ಒಂದು ಜಾಗದಲ್ಲಿ ಕೂಡುವುದು ಸಾಧ್ಯವಿಲ್ಲವೆನ್ನುವ ಕಾರಣಕ್ಕಾಗಿಯೇ, ಅನುಷ್ಠಾನಗೈಯುವುದು, ತಪಸ್ಸು ಮಾಡುವುದು ಅವನಿಗೆ ಒಂದು ದೊಡ್ಡ ಸಾಧನೆಯಾಗಿರುವುದು ಭಾರತೀಯ ಧರ್ಮ ಶಾಸ್ತ್ರಗಳಿಂದ ನಮಗೆ ತಿಳಿದು ಬರುತ್ತದೆ. ಪುರುಷನಿಗೆ ಸ್ತ್ರೀಯನ್ನು ಬಿಟ್ಟು ಅರೆ ಘಳಿಗೆ ಕೂಡಾ ಇರಲು ಸಾಧ್ಯವಿಲ್ಲವೆಂಬ ಕಾರಣಕ್ಕಾಗಿಯೇ; ಬ್ರಹ್ಮಚರ್ಯವನ್ನು ಮಹಾಸಾಧನ ವೆಂದು ಸಾರಲಾಯಿತು. ಸಾಧು, ಸನ್ಯಾಸಿ, ಬ್ರಹ್ಮಚಾರಿ ಎಂಬ ಪದ ಪುಂಜಗಳು ಪುರುಷನು ಸ್ವತಂತ್ರವಾಗಿ ಜೀವಿಸಲು ಅದೆಷ್ಟು ಅಸಮರ್ಥವೆಂಬುದನ್ನು ತಿಳಿಸುತ್ತವೆ. ಅದಕ್ಕಾಗಿಯೇ ಸ್ತ್ರೀ ಆಧಾರವಿಲ್ಲದೆ ಅವನು ಬದುಕುವುದನ್ನು ಕಲಿಯುವುದೇ ಒಂದು ಯೋಗವೋ, ಧ್ಯಾನವೋ, ತಪಸ್ಸೋ ಎಂದು ಕರೆಯಲ್ಪಟ್ಟಿರುವುದು ಸರ್ವವಿಧಿತ ಸಂಗತಿಯಾಗಿದೆ.

ಈ ಎಲ್ಲ ಕಥೆಗಳು ಏನಾದರೂ ಇರಲಿ, ಆದರೆ ನಮ್ಮ ಪರಂಪರೆಯಲ್ಲಿ ಹೆಣ್ಣನ್ನು ಇನ್ನಿಲ್ಲವೆಂಬಂತೆ ನಿರ್ಲಕ್ಷಿಸಲಾಗಿದೆ. ಅವಳ ಮೇಲೆ ತಪ್ಪು ನಂಬಿಕೆಗಳನ್ನು ಹೇರಲಾಗಿದೆ. ಉದ್ದೇಶ ಪೂರ್ವಕವಾಗಿ ಕಡೆಗಣಿಸಲಾಗಿದೆ. ಹೆಣ್ಣನ್ನು ಹೆಂಡತಿ, ತಾಯಿ, ಸೋದರಿ, ಮಗಳು, ಅತ್ತೆ ಹಾಗೂ ಅಜ್ಜಿ ಎಂಬ ಪಾತ್ರಗಳ ಗೂಟಕ್ಕೆ ಉರುಳು ಹಾಕಲಾಗಿದೆ. ಪುರುಷ ನಿರ್ಮಿಸಿದ ಈ ಪಾತ್ರಗಳನ್ನು ಹೆಣ್ಣು ಅಭಿನಯಿಸುತ್ತಾ, 'ಹೌಸ್‌ವೈಫ್ ಸಿಂಡ್ರೋಮ್'ನಲ್ಲಿ ಒದ್ದಾಡುತ್ತಿದ್ದಾಳೆ. ಹೆಣ್ಣು ಗಂಡಿನ ಅರ್ಧಾಂಗಿ ಅಲ್ಲ, ಅವಳು ತನಗೆ ತಾನೆ ಪರಿಪೂರ್ಣಳು. ಒಂದು ಸ್ವತಂತ್ರ ಜೀವಿ ಹಾಗೂ ವ್ಯಕ್ತಿಯಾಗಿದ್ದಾಳೆ. ಸಂಸಾರದಲ್ಲಿ ಪುರುಷನಿಲ್ಲದೆ ಹೆಣ್ಣು ಪೂರ್ಣಳಾಗುವುದಿಲ್ಲ ಎಂದರೆ, ಹೆಣ್ಣಿಲ್ಲದೇ ಪುರುಷನೂ ಪರಿಪೂರ್ಣನಾಗಲಾರನು. ಹೆಣ್ಣು-ಗಂಡು ಕೂಡಿಯೇ ಈ ಜೀವನ, ಸಮಾಜ, ಚಲಾವಣೆಗೊಳ್ಳುತ್ತದೆ. ಯಾರ ಅಂಗವೂ ಯಾರು ಅಲ್ಲ, ಒಬ್ಬರ ಅರ್ಧಭಾಗ ಇನ್ನೊಬ್ಬರಲ್ಲ. ತಮ್ಮ ತಮ್ಮ ಅಂಗ, ಮನಸ್ಸು, ಭಾವನೆ, ಬುದ್ಧಿಗಳಿಗೆ ತಾವು ತಾವೇ ಹಕ್ಕುದಾರರು, ಅಧಿಕಾರಿಗಳು. ಅದಕ್ಕಾಗಿ ಅರ್ಧಾಂಗಿ, ಅಂಗನೆ ಎಂಬಂಥ ಪದಗಳು ಹೆಣ್ಣಿನ ವಿಷಯದಲ್ಲಿ ಅಸಹ್ಯ ಮತ್ತು ಅವಹೇಳನಕರವೆಂದೇ ಭಾವಿಸಬೇಕಾಗುತ್ತದೆ. ಯಾವ ಕಾರಣಕ್ಕೂ ಮಹಿಳೆಯನ್ನು ಪುರುಷನ ಒಂದು ಬಿಡಿ ಭಾಗವೆಂದು ಪರಿಗಣಿಸದೆ ಇಡಿಯಾದ ವ್ಯಕ್ತಿತ್ವವೆಂದು ಒಪ್ಪಿಕೊಳ್ಳುವುದು ಅರ್ಥಪೂರ್ಣ. ಅವಳು ಕೂಡ ಗಂಡಿನ ಹಾಗೆ ಸ್ವತಂತ್ರ ವ್ಯಕ್ತಿ ಎಂದು ಪರಿಗಣಿತವಾಗಬೇಕು. ಹೆಣ್ಣಿನೊಳಗಣ ವ್ಯಕ್ತಿತ್ವ ಇಡಿಯಾಗಿ ಪ್ರಕಟಗೊಳ್ಳಬೇಕು. ಜೊತೆಗೆ ಪ್ರತಿ ಹೆಂಗಸಿನ ವಿಶಿಷ್ಟ ಗುಣ-ಸಾಮರ್ಥ್ಯಗಳು ವಿಕಾಸಗೊಂಡು ಹೊರಬರುವಂತಾಗಬೇಕು. ಪರಂಪರಾಗತ ಸಮಾಜ ಆರೋಪಿಸಿದ ಗುಣಗಳಿಗೆ ಅವಳು ಬಂಧಿಯಾಗಿ ರೂಪುಗೊಳ್ಳುವಂತಾಗಬಾರದು. ಪ್ರತಿ ಹೆಣ್ಣು ತಾನು ಇಚ್ಛಿಸಿದ ರೀತಿಯಲ್ಲಿ ಪರಿಪೂರ್ಣವಾಗಿ ಬೆಳೆದು ನಿಲ್ಲಬೇಕು. ಈ ಹಿನ್ನೆಲೆಯಲ್ಲಿ ನಮಗೆ ಶಿಕ್ಷಣ ಸಹಾಯಕವಾಗಬೇಕು.

ಇಲ್ಲಿಯವರೆಗಿನ ಮಹಿಳೆಯ ಕುರಿತಾದ ವಿವರಣೆಯು; ಭಾರತೀಯ ಧರ್ಮ, ಪರಂಪರೆ, ಸಮಾಜಗಳ ಹಿನ್ನೆಲೆಯಲ್ಲಿ ಹೇಳಿದ್ದಾಗಿದ್ದರೂ ಕೂಡ; ಇದು 'ಮೂರನೆಯ ವಿಶ್ವ'ದ ರಾಷ್ಟ್ರಗಳ ಸ್ತ್ರೀಯ ಸ್ಥಿತಿ-ಗತಿಯೇ ಆಗಿದೆ. ಏಶಿಯಾ, ಲ್ಯಾಟಿನ್ ಅಮೇರಿಕಾ ಮತ್ತು ದಕ್ಷಿಣ ಆಫ್ರಿಕಾ ಖಂಡದ ಬಹುತೇಕ ರಾಷ್ಟ್ರಗಳಲ್ಲಿ ಮಹಿಳೆಯನ್ನು ಶಸ್ತ್ರವಿದ್ಯೆ, ಅಕ್ಷರಜ್ಞಾನ ಹಾಗೂ ಸಂಪತ್ತಿನ ಒಡೆತನಗಳಿಂದ ವಂಚಿಸಲಾಗಿದೆ. ಸಾಮಾಜಿಕ ಕೆಲಸ ಕಾರ್ಯಗಳಲ್ಲಿ, ಆಡಳಿತ, ರಾಜಕೀಯ ಚಟುವಟಿಕೆಗಳಲ್ಲಿ ಧರ್ಮ ಮತ್ತು ಆರಾಧನೆಯ ಪ್ರಕ್ರಿಯೆಗಳಲ್ಲಿ ಹೆಣ್ಣಿನ ಪ್ರವೇಶವನ್ನು ಉದ್ದೇಶ ಪೂರ್ವಕವಾಗಿ ತಡೆ ಹಿಡಿಯಲಾಗಿದೆ.

ಸಾಮಾಜಿಕ ಸಂಬಂಧದ ನೆಲೆಯಲ್ಲಿರುವ ಹೆಣ್ಣು ಮತ್ತು ಗಂಡು ಎರಡು ಜೀವಿಗಳಿಗೆ ಸಾಮಾಜೀಕರಣದ ಪ್ರಕ್ರಿಯೆಯಲ್ಲಿ ಉದ್ದೇಶ ಪೂರ್ವಕವಾಗಿ ವ್ಯತ್ಯಾಸ ಮಾಡಲಾಯಿತು. ಹೆಣ್ಣಿಗೆ ಮನೆಗೆಲಸ, ಮಕ್ಕಳನ್ನು ಹಡೆಯುವ, ಆರೈಕೆ ಮಾಡುವ ಸಾಮಾಜೀಕರಣವನ್ನು

ಮಾತ್ರ ಕಲಿಸಲಾಯಿತೇ ಹೊರತು; ಗಂಡಿನಂತೆ ವ್ಯಕ್ತಿತ್ವ ವಿಕಸನಕ್ಕೆ ಕಾರಣವಾಗುವ ಆರ್ಥಿಕ, ರಾಜಕೀಯ, ಧಾರ್ಮಿಕ ಚಟುವಟಿಕೆಗಳಿಗೆ ಪೂರಕವಾಗುವಂತಹ ಕೌಶಲ್ಯಗಳನ್ನು ಕಲಿಸು ವುದನ್ನು ವ್ಯವಸ್ಥಿತವಾಗಿ ತಡೆಹಿಡಿಯಲಾಯಿತು. ಜೊತೆಗೆ ಅವಳ ಜೀವ, ಭಾವ, ದೇಹಗಳ ಬಗ್ಗೆ ಇಲ್ಲದ ಅಪಕಲ್ಪನೆಗಳನ್ನು ಸೃಷ್ಟಿಸಿ ಪ್ರಚುರಗೊಳಿಸಲಾಯಿತು. ಮಹಿಳೆ ತನಗೆ ತಾನೇ ಕಡಿಮೆ ಸ್ತರದವಳು ಎಂಬುದನ್ನು ಅವಳಿಗೆ ನಂಬಿಸಲಾಯಿತು. ಪ್ರಸಿದ್ಧ ಸ್ತ್ರೀವಾದಿ ಸಿಮೋನ್ ದಿ ಬೋವಾಳು ಹೇಳಿರುವಂತೆ One is not born a women, one becomes one 'ಯಾರೂ ಜನ್ಮತಃ ಹೆಣ್ಣು ಎಂಬುದಾಗಿ ಹುಟ್ಟು ಪಡೆಯುವುದಿಲ್ಲ. ಆದರೆ ಅನಂತರ ಅವಳನ್ನು ಹೆಣ್ಣಾಗಿ ರೂಪಿಸಲಾಗುತ್ತದೆ' ಎಂಬ ಮಾತು ಸತ್ಯವಾದದ್ದು. ನಿಜವಾಗಲೂ ಪ್ರಕೃತಿ ಸಹಜವಾಗಿರುವ ಸ್ತ್ರೀ ಮರೆಯಾಗಿ, ಶೋಷಕ ಹಿತಾಸಕ್ತಿಗಳಿಗೆ ಅವಶ್ಯವಾದ ಸ್ತ್ರೀಯನ್ನು ಮೂರನೆಯ ವಿಶ್ವದ ರಾಷ್ಟ್ರಗಳಲ್ಲಿ ರೂಪಿಸಲಾಗಿದೆ. ಅಂತೆಯೇ ಹೊನ್ನು, ಮಣ್ಣಿನ ಜೊತೆಗೆ ಹೆಣ್ಣನ್ನು ಒಂದು ವಸ್ತುವನ್ನಾಗಿ ಅಲಂಕಾರಕ್ಕೆ, ಅನುಭೋಗಕ್ಕೆ ಈಡುಮಾಡ ಲಾಯಿತು.

ಒಂದು ಸಮಾಜ ರಚನೆಯಲ್ಲಿ ಮಹಿಳೆಯ ಜೀವನವೂ ಕೂಡ ಹಾಸು ಹೊಕ್ಕಾಗಿ ಹೆಣೆದುಕೊಂಡಿರುವುದರಿಂದ; ಸಾಮಾಜಿಕ ಪರಿವರ್ತನೆಯ ಜೊತೆಗೆ ಅವಳ ಬದುಕು ಕೂಡ ಪರಿವರ್ತನೆಯಾಗಬೇಕು, ಬದಲಾವಣೆಗೊಳ್ಳಬೇಕು ಎಂಬುದು ಆರೋಗ್ಯ ಪೂರ್ಣ ಆಶಯವಾಗಿದೆ.

### ಶಿಕ್ಷಣ

(ಶಿಕ್ಷಣವೆಂದರೆ ಜೀವನ ನಿರ್ವಹಣಾ ತರಬೇತಿ ಎಂಬ ಅರ್ಥವಿದೆ.) ಜೊತೆಗೆ ಅನುಭವವನ್ನು ಪಡೆಯುವುದು, ಅರಿವನ್ನು ವಿಸ್ತರಿಸಿಕೊಳ್ಳುವುದು, ಜೀವನ ಮುಂದುವರಿಕೆ ಗಾಗಿ ಅವಶ್ಯವಿರುವ ಕೌಶಲ್ಯಗಳನ್ನು ಕಲಿತುಕೊಳ್ಳುವುದು ಎಂದು ಪರಿಭಾವಿಸಬಹುದಾಗಿದೆ. ಶಿಕ್ಷಣವು ಅಂತರಂಗದೊಳಗಿರುವ ಸಕಲ ಸಾಮರ್ಥ್ಯಗಳನ್ನು ವಿಕಸನಗೊಳಿಸಿಕೊಳ್ಳುವ ವಿಧಾನವಾಗಿದೆ. ಎಜ್ಯುಕೇಷನ್ ಎಂಬ ಇಂಗ್ಲಿಷ್ ಶಬ್ದದ ಪರ್ಯಾಯ ಪದವಾಗಿ ಬಳಕೆಯಲ್ಲಿರುವ ಶಿಕ್ಷಣ ಎಂಬುದಕ್ಕೆ; ವ್ಯಕ್ತಪಡಿಸುವುದು, ಹೊರತೆಗೆಯುವುದು, ಮೇಲಕ್ಕೆ ಎತ್ತುವುದು, ಅಭಿವ್ಯಕ್ತಗೊಳಿಸುವುದು ಎಂಬರ್ಥಗಳಿವೆ. ಹೀಗೆಂದಾಗ ಮಾನವ ಜೀವಿಯ ಶಾರೀರಕ, ಬೌದ್ಧಿಕ, ಆಧ್ಯಾತ್ಮಿಕ ಸಾಮರ್ಥ್ಯಗಳ ವಿಕಸನ ಮತ್ತು ಪ್ರಕಟಣಗಳನ್ನು ಶಿಕ್ಷಣವೆಂದು ಹೇಳಬಹುದು. ರವೀಂದ್ರನಾಥ ಟ್ಯಾಗೂರವರ ಪ್ರಕಾರ "ಆತ್ಮ ಪ್ರಕಾಶ ಮತ್ತು ಪ್ರೇಮಗಳೆಂಬ ಸ್ಥಿರ ಸಂಪತ್ತನ್ನು ತಂದುಕೊಟ್ಟು, ಮಗುವನ್ನು ಸತ್ಯಸಂದ ಸುಂದರ ಯೋಗ್ಯ ವ್ಯಕ್ತಿಯನ್ನಾಗಿ ಮಾಡುವುದೇ ಶಿಕ್ಷಣವಾಗಿದೆ. 'ಮಾನವನಲ್ಲಿ ಆಗಲೇ ಇರುವ ಪರಿಪೂರ್ಣತೆಯನ್ನು ಪ್ರಕಟಪಡಿಸುವುದೇ ಶಿಕ್ಷಣ' ಎನ್ನುತ್ತಾರೆ ಸ್ವಾಮಿ ವಿವೇಕಾನಂದ ಅವರು.

ಶಿಕ್ಷಣ ಎಂಬುದಕ್ಕೆ 'ಪೋಷಕ' ಎಂಬರ್ಥವಿದೆ. ನಮ್ಮ ಬದುಕಿನ ಆರಂಭದಿಂದಲೇ ನಾವು ಶಿಕ್ಷಣವನ್ನು ಪಡೆಯಲು ತೊಡಗುತ್ತೇವೆ. ಹೆಸರಾಂತ ಶಿಕ್ಷಕ ಹಾಗೂ ತತ್ವಜ್ಞಾನಿ

ರೂಸೋನ ಪ್ರಕಾರ: ಈ ಬದುಕಿನ ಸದ್ ಘಟನೆ ಮತ್ತು ದುರ್ಘಟನೆಗಳೆರಡನ್ನು ಯಾರು ಸಮರ್ಪಕವಾಗಿ ಅರಿಯಬಲ್ಲರೋ, ಅವರು ನಿಜವಾದ ಸುಶಿಕ್ಷಿತರು. ನಿಜವಾದ ಅರ್ಥದಲ್ಲಿ ಶಿಕ್ಷಣವೆಂಬುದು ಕೇವಲ ವಿಷಯ ಸಂಗ್ರಹಣೆಯಲ್ಲ, ನೀತಿಭೋಧೆಯಲ್ಲ, ಘಟನೆಗಳನ್ನು ಕಂಠಪಾಠ ಮಾಡುವುದು ಕೂಡ ಅಲ್ಲ! ಅದು ತನ್ನನ್ನು ತಾನು ಅರಿತು ಇತರರೊಂದಿಗೆ ಬೆರೆತು ಸುಖ-ಸಂತೋಷದಿಂದ ಜೀವನ ನಿರ್ವಹಿಸುವ ಕಲೆಯನ್ನು ಕಲಿಸಿಕೊಡುವುದಾಗಿದೆ. ಇದಕ್ಕೆ ಬೇಕಾಗುವ ಎಲ್ಲ ರೀತಿಯ ತರಬೇತಿಗಳು ಶಿಕ್ಷಣದಿಂದ ದೊರೆಯುವಂತಾಗಬೇಕು. ಸತ್ಯವನ್ನು ಅರಿಯುವುದು ಮತ್ತು ಅದನ್ನು ಅನುಷ್ಠಾನದಲ್ಲಿ ತರುವುದು ನಿಜವಾದ ಶಿಕ್ಷಣದ ಅರ್ಥವಾಗಿದೆಯೆಂದು ಹೇಳಬಹುದು.

ಈ ಹಿನ್ನೆಲೆಯಲ್ಲಿ ಶಿಕ್ಷಣವು ಮಹಿಳೆಯಲ್ಲಿರುವ ವಿಶಿಷ್ಟತೆ ಮತ್ತು ವಿಶೇಷತೆಗಳನ್ನು ಅರಳಿಸುವುದು ಮಾತ್ರವಲ್ಲ; ಆಕೆಗೆ ಅನುಕೂಲವಾಗುವಂತೆ ಅವುಗಳನ್ನು ಅಭಿವೃದ್ಧಿ ಪಡಿಸಬೇಕು. ಸ್ವಂತಿಕೆ, ಸ್ವಾಭಿಮಾನ, ಸಂತೋಷದಾಯಕ ಬದುಕನ್ನು ನಡೆಸುವುದಕ್ಕೆ ಸಹಾಯಕವಾಗಬೇಕು. ಪಾದರಕ್ಷೆಗಳನ್ನು ಧರಿಸಿದ ವ್ಯಕ್ತಿ ಕಲ್ಲು ಮುಳ್ಳುಗಳ ಮೇಲೆ ಹೇಗೆ ಸರಾಗವಾಗಿ ನಡೆಯಬಹುದೋ; ಹಾಗೇ ಶಿಕ್ಷಣದ ರಕ್ಷಾಕವಚ ಧರಿಸಿದವರು ಜೀವನದ ಎಡರು ತೊಡರುಗಳನ್ನು ಸರಾಗವಾಗಿ ನಿಭಾಯಿಸುತ್ತ ಮುನ್ನಡೆಯಬೇಕು. ಪ್ರಸ್ತುತ ಸಂದರ್ಭದಲ್ಲಿ 'ಮೂರನೆಯ ವಿಶ್ವ'ದ ಮಹಿಳೆಯು ಮೊದಲು ತನ್ನನ್ನು ತಾನು ಅರಿತುಕೊಳ್ಳು ವಂತಾಗಬೇಕು. ತನಗೆ ತಾನು ಸಹಾಯಕಳಾಗಬೇಕು. ಅನಂತರ ಇತರರಿಗೆ ತನ್ನನ್ನು ಸರಿಯಾಗಿ ಅರ್ಥಮಾಡಿಸಿಕೊಡಬೇಕು. ಸಮುದಾಯ, ಸಮಾಜಕ್ಕೆ ಸದುಪಯೋಗವಾಗುವಂತೆ ನಡೆದುಕೊಳ್ಳಬೇಕು. ಇದು ಶಿಕ್ಷಣದಿಂದ ಸಾಧ್ಯವಾಗುವಂತಾಗಬೇಕು.

'ಮೂರನೆಯ ವಿಶ್ವ'ದ ದೇಶಗಳಲ್ಲಿ ವಾಸಿಸುವ ಮಹಿಳೆಯ ಸ್ಥಿತಿ ತೀರ ನಿರಾಶಾದಾಯಕ ವಲ್ಲದಿದ್ದರೂ; ಗೌರವ ತರುವ ಸ್ಥಿತಿಯಲ್ಲಂತೂ ಇಲ್ಲ. 'ಹೆಣ್ಣೊಂದು ಕಲಿತರೆ ಶಾಲೆ ಯೊಂದು ತೆರೆದಂತೆ' ಎಂಬ ಉಕ್ತಿಯು ಎಲ್ಲೆಲ್ಲೂ ರಾರಾಜಿಸುತ್ತಿದೆಯಾದರೂ; ಕಲಿಯದ ಹೆಣ್ಣಿನಗೋಳು ಒಂದಾದರೆ; ಕಲಿತ ಹೆಣ್ಣಿನ ಸಂಕಟ ಇನ್ನೂ ಹತ್ತು ಹಲವು ತೆರನಾಗಿರುವುದು ಕಂಡು ಬರುತ್ತದೆ.

ಪ್ರಸ್ತುತ ಪ್ರಬಂಧದ ಚರ್ಚೆಯ ವಿಷಯ 'ಮೂರನೆಯ ಜಗತ್ತಿನ' ರಾಷ್ಟ್ರಗಳಲ್ಲಿ "ಮಹಿಳೆ ಮತ್ತು ಶೈಕ್ಷಣಿಕ ಆಯಾಮಗಳು" ಎಂಬುದಾಗಿದೆ. ಈ ಹಿನ್ನೆಲೆಯಲ್ಲಿ ದಕ್ಷಿಣ ಆಫ್ರಿಕಾ, ಏಷಿಯಾ ಮತ್ತು ಲ್ಯಾಟಿನ್ ಅಮೇರಿಕಾ ಖಂಡದ ರಾಷ್ಟ್ರಗಳಲ್ಲಿ ಬರುವ ಮಹಿಳೆಯರ ಶೈಕ್ಷಣಿಕ ಮಗ್ಗಲುಗಳನ್ನು ಕುರಿತು ಚರ್ಚಿಸಬೇಕಾಗುತ್ತವೆ. ಆದರೆ ನಾನು 'ಮೂರನೆಯ ವಿಶ್ವ'ದಲ್ಲಿ ಬರುವ ಅತ್ಯಂತ ಪ್ರಮುಖ ರಾಷ್ಟ್ರಗಳಲ್ಲಿ ಒಂದಾದ ಭಾರತ ದೇಶವನ್ನು ಇಲ್ಲಿ ಮಾದರಿ ಅಧ್ಯಯನಕ್ಕೆಂದು ಆಯ್ದುಕೊಂಡಿದ್ದೇನೆ. ಮೂಲತಃ ಭಾರತೀಯಳಾದ ನಾನು ಇಲ್ಲಿಯ ಸಮಾಜದ ಸ್ಥಿತಿಗತಿಗಳನ್ನು ಅಧ್ಯಯನ ಮಾಡುತ್ತಿರುವ ವಿದ್ಯಾರ್ಥಿ ಕೂಡಾ ಆಗಿ ದ್ದೇನೆ. ಇದು ನನ್ನ ಮಾದರಿ ಅಧ್ಯಯನಕ್ಕಾಗಿ ಭಾರತವನ್ನು ಆಯ್ಕೆ ಮಾಡಿಕೊಳ್ಳುವುದಕ್ಕೆ

ಇರುವ ಕಾರಣಗಳಲ್ಲಿ ಒಂದಾಗಿದೆ. ಇದರ ಜೊತೆಗೆ ಇನ್ನಿತರ ಕಾರಣಗಳನ್ನು ಹೀಗೆ ಹೇಳಬಹುದಾಗಿದೆ:

೧. ಭಾರತವು ಅಲಿಪ್ತ ರಾಷ್ಟ್ರಗಳ ನೇತೃತ್ವ ಹೊಂದಿದ ದೇಶವಾಗಿದೆ.
೨. ಇದು ಮಿಶ್ರ ಆರ್ಥಿಕ ನೀತಿಯನ್ನು ಹೊಂದಿದೆ.
೩. ಬಹು ಜನಾಂಗೀಯ ಸಮುದಾಯಗಳು ಇಲ್ಲಿ ಒಗ್ಗೂಡಿ ಬದುಕುತ್ತಿವೆ.
೪. ಪ್ರಾದೇಶಿಕವಾಗಿ ಇದೊಂದು ಬಹುದೊಡ್ಡ ರಾಷ್ಟ್ರವಾಗಿದೆ.
೫. ವಿಪುಲವಾದ ಜನಸಂಖ್ಯೆಯನ್ನು ಇದು ಹೊಂದಿದೆ.
೬. ಮಿಶ್ರ ಸಂಸ್ಕೃತಿಯ ಜೀವನ ವಿಧಾನವನ್ನು ಅನುಸರಿಸುವ ಬಹು ಜನ ಸಮುದಾಯಗಳು ಇಲ್ಲಿ ಎಡೆಪಡೆದಿವೆ.

'ಮೂರನೆಯ ವಿಶ್ವ'ದ ರಾಷ್ಟ್ರಗಳಲ್ಲಿರುವ ಮಹಿಳೆಯರ ಪರಿಸ್ಥಿತಿಯಲ್ಲಿ ಅಲ್ಪಸ್ವಲ್ಪ ವ್ಯಾತ್ಯಾಸ; ಅಂಕಿ ಸಂಖ್ಯೆಗಳಲ್ಲಿ ಒಂದಿಷ್ಟು ಏರಿಳಿತಗಳು ಕಂಡುಬರಬಹುದು. ಆದರೆ ಒಟ್ಟಾರೆಯಾದ ಸ್ಥಿತಿಗತಿಯನ್ನು ಗಮನಿಸಿದರೆ ಅಂಥ ಪ್ರಬಲ ಮತ್ತು ವ್ಯಾಪಕ ವ್ಯತ್ಯಾಸ ಕಂಡು ಬರುವುದಿಲ್ಲ. ಹಾಗೆಂದೇ ಭಾರತದ ಮಾದರಿಯು 'ಮೂರನೆಯ ವಿಶ್ವ'ದ ಇನ್ನಿತರ ರಾಷ್ಟ್ರಗಳ ಮಾದರಿಯೂ ಆಗಬಹುದಾಗಿದೆ ಎಂದು ನಾನು ಭಾವಿಸಿದ್ದೇನೆ.

## ಭಾರತೀಯ ಮಹಿಳೆಯ ಶೈಕ್ಷಣಿಕ ಆಯಾಮಗಳು

ಐದು ಸಾವಿರ ವರ್ಷಗಳ ಸುದೀರ್ಘ ಇತಿಹಾಸ ಹೊಂದಿರುವ ಭಾರತವು ಅನೇಕ ಜನಾಂಗಗಳನ್ನು ಒಗ್ಗೂಡಿಸಿಕೊಂಡು ಬದುಕುತ್ತಿರುವ ರಾಷ್ಟ್ರವಾಗಿದೆ. ಅನೇಕ ಭಾಷೆಗಳು, ಸಂಸ್ಕೃತಿಗಳು, ಧರ್ಮಗಳು ಮತ್ತು ಪರಂಪರೆಗಳು ಇಲ್ಲಿ ಕಾಲಾನುಕಾಲದಿಂದ ಜೊತೆಗೂಡಿ ಮುನ್ನಡೆಯುತ್ತಿವೆ. ಇಂಥ ವೈವಿಧ್ಯಮಯವಾದ ಸಮ್ಮಿಶ್ರ ರೀತಿ-ನೀತಿಗಳು ಮತ್ತು ಆರ್ಥಿಕ ಸ್ವರೂಪಗಳು ಜಾರಿಯಲ್ಲಿರುವ ರಾಷ್ಟ್ರದ ಮಹಿಳೆಯರ ಶೈಕ್ಷಣಿಕ ಆಯಾಮಗಳನ್ನು ಕುರಿತು ಇಡಿಯಾಗಿ ಒಂದು ಕಿರು ಪ್ರಬಂಧದಲ್ಲಿ ವಿವರಿಸುವುದು ಸುಲಭ ಸಾಧ್ಯವಲ್ಲ. ಜೊತೆಗೆ ಅದು ವ್ಯವಹಾರಿಕವೂ ಕೂಡ ಅಲ್ಲ. ಅದಕ್ಕಾಗಿ ಭಾರತೀಯ ಸಮಾಜದ ಚಾರಿತ್ರಿಕ ಸ್ಥಿತಿಗತಿಗಳನ್ನು ಗಮನದಲ್ಲಿಟ್ಟುಕೊಂಡು ನಾನು ಇಲ್ಲಿ ಮಹಿಳೆಯ ಶೈಕ್ಷಣಿಕ ಆಯಾಮಗಳನ್ನು ವಿವರಿಸಲು ಮೂರು ಹಂತಗಳನ್ನು ಮಾಡಿಕೊಂಡಿದ್ದೇನೆ.

೧. ಪರಂಪರಾಗತ ಭಾರತದಲ್ಲಿ ಮಹಿಳೆಯರ ಶೈಕ್ಷಣಿಕ ಆಯಾಮಗಳು
೨. ಬ್ರಿಟಿಷ ಆಡಳಿತ ಅವಧಿಯಲ್ಲಿ ಮಹಿಳೆಯರ ಶೈಕ್ಷಣಿಕ ಆಯಾಮಗಳು
೩. ಸ್ವತಂತ್ರ್ಯಾನಂತರದಲ್ಲಿ ಮಹಿಳೆಯರ ಶೈಕ್ಷಣಿಕ ಆಯಾಮಗಳು

ಇಲ್ಲಿ 'ಶೈಕ್ಷಣಿಕ ಆಯಾಮ'ಗಳು ಎಂದಾಗ; ಕಲಿಯುವ ಮತ್ತು ಕಲಿಸುವ ವಿವಿಧ ಹಂತಗಳನ್ನು ಕುರಿತು ಚರ್ಚಿಸುವುದು, ಸಾಕ್ಷರತೆಯನ್ನು ಹೊಂದಿದ ವ್ಯಕ್ತಿಗಳ ಸಂಖ್ಯಾ ಪ್ರಮಾಣವನ್ನು ಪರಿಶೀಲಿಸುವುದು ಡ್ರಾಪೌಟ್‌ಗಳನ್ನು ಕುರಿತು ಅಂಕಿ ಅಂಶಗಳನ್ನು ಕಲೆ

ಹಾಕುವುದಷ್ಟಕ್ಕೇ ನನ್ನ ಪ್ರಬಂಧವನ್ನು ಸೀಮಿತಗೊಳಿಸಿಲ್ಲ. ಊಟದಲ್ಲಿ ಉಪ್ಪಿನ ಕಾಯಿ ಬಳಸುವ ಹಾಗೆ ಅವಶ್ಯವಿದ್ದಷ್ಟು ಅಂಕಿ ಸಂಖ್ಯೆಯನ್ನು ನಾನಿಲ್ಲಿ ಒದಗಿಸುತ್ತೇನೆ. ಆದರೆ ನನ್ನ ಪ್ರಬಂಧದ ಮುಖ್ಯ ದೃಷ್ಟಿ ಇರುವುದು 'ಮೂರನೆಯ ವಿಶ್ವ'ದ ಮಹಿಳೆಯರ ದೈಹಿಕ, ಜೈವಿಕ, ಬೌದ್ಧಿಕ ಮತ್ತು ಅನುಭಾವಿಕ ಆಯಾಮಗಳನ್ನು ಅರಳಿಸುವ ನಿಟ್ಟಿನಲ್ಲಿ. ಇಲ್ಲಿ ನೀಡಲಾಗುತ್ತಿರುವ ಶಿಕ್ಷಣದ ಪಾಲು ಎಂಥದ್ದು ಎಂಬುದನ್ನು ಚರ್ಚಿಸುವುದಾಗಿರುತ್ತದೆ. ನನ್ನ ಮಾದರಿಯಾದ ಭಾರತೀಯ ಸಮಾಜದ ಚರಿತ್ರೆಯಲ್ಲಿ ಮಹಿಳೆಯರಿಗೆ ಮೇಲ್ಕಾಣಿಸಿದ ರೀತಿಯ ಶಿಕ್ಷಣವನ್ನು ಎಷ್ಟರಮಟ್ಟಿಗೆ ಸಮರ್ಪಕವಾಗಿ ಕೊಡಮಾಡಲಾಗಿದೆ? ಸದ್ಯದ ಪರಿಸ್ಥಿತಿ ಹೇಗಿದೆ? ಮುಂದೆ ನಾವೆತ್ತ ಹೋಗಬೇಕಾಗಿದೆ ಎಂಬುದನ್ನು ಚರ್ಚಿಸಲು ನಾನು ತುಂಬ ಆಸಕ್ತಳಾಗಿದ್ದೇನೆ.

ಕಳೆದ ಒಂದು ಶತಮಾನದ ಸ್ಥಿತಿಗತಿಗಳನ್ನು ಒಮ್ಮೆ ಅವಲೋಕಿಸಿದರೆ; ಮಹಿಳೆಯರು ಪಡೆದ ಮತ್ತು ಪಡೆಯುತ್ತಿರುವ ಶೈಕ್ಷಣಿಕ ಪದವಿಗಳ ಪಟ್ಟಿ ಏರಿಕೆ ಕ್ರಮದಲ್ಲಿದೆ ನಿಜ. ಅವಳ ಗೃಹ ಕೃತ್ಯದ ಕೆಲಸ ಕಾರ್ಯಗಳು ಆರ್ಥಿಕ ಸ್ಥಿತಿ-ಗತಿಗಳು ಭಾವನಾತ್ಮಕ, ಬೌದ್ಧಿಕ ಇರುವಿಕೆಗಳಲ್ಲಿ ಅಷ್ಟಿಷ್ಟು-ಸ್ಥಿತ್ಯಂತರಗಳು ಉಂಟಾಗಿವೆ ಎಂಬುದು ನಿಜ. ಆದರೆ ಇವೆಲ್ಲವೂ ನಿರೀಕ್ಷಿತ ಮಟ್ಟದಲ್ಲಿ ಹಾಗೂ ಸರಿಯಾದ ಕ್ರಮದಲ್ಲಿ ಜರುಗುತ್ತಿಲ್ಲ ಎಂಬುದು ಮಾತ್ರ ಖೇದದ ಮತ್ತು ಸತ್ಯದ ಸಂಗತಿಯಾಗಿದೆ. ಮಹಿಳಾ ಸಾಕ್ಷರತಾ ಪ್ರಮಾಣದ ಪಟ್ಟಿಯಲ್ಲಿ ಏರಿಕೆಯಾದಂತೆ, ಅವಳ ಮಾನಸಿಕ, ಬೌದ್ಧಿಕ, ದೈಹಿಕ, ಜವಾಬ್ದಾರಿಗಳು ಮತ್ತಷ್ಟು ಹೆಚ್ಚುತ್ತಿವೆ. ಅದರ ಜೊತೆಗೆ ಅವಳ ರಕ್ತದೊತ್ತಡವು ಕೂಡ ಸಾಕಷ್ಟು ಏರುತ್ತಿದೆ. ನಿಧಾನಿಸಿ ನೋಡಿದರೆ ಮಹಿಳೆಯ ಸ್ಥಿತಿ ಒಂದರ್ಥದಲ್ಲಿ ಬಾಣಲೆಯಿಂದ ಬೆಂಕಿಗೆ ಬಿದ್ದಂತಾಗಿದೆ. ಈ ನನ್ನ ಅಭಿಪ್ರಾಯಗಳಿಗೆ ಸಾಧಾರಗಳನ್ನು ಮುಂದಿನ ವಿವರಣೆಯಲ್ಲಿ ಗಮನಿಸಬಹುದಾಗಿದೆ.

### ೧. ಪರಂಪರಾಗತ ಭಾರತದಲ್ಲಿ ಮಹಿಳೆ ಮತ್ತು ಶೈಕ್ಷಣಿಕ ಆಯಾಮಗಳು

ಭಾರತೀಯ ಸಮಾಜದ ಅಧ್ಯಯನ ಮಾಡುವಾಗ: 'ಪರಂಪರೆಯಲ್ಲಿ ನಾರಿ ನಡೆದು ಬಂದ ದಾರಿ' ಎಂಬುದು ಶಾಲಾ ಕಾಲೇಜುಗಳಲ್ಲಿ ಮೇಲಿಂದ ಮೇಲೆ ಪ್ರಸ್ತಾಪಗೊಳ್ಳುವ ಮಾತು. ಅಲ್ಲೆಲ್ಲ ವೇದ ಕಾಲಿನ ಸಂದರ್ಭದಲ್ಲಿ ಮಹಿಳೆಯರಿಗೆ ಶೈಕ್ಷಣಿಕ ಅವಕಾಶಗಳಿದ್ದವು. ಧಾರ್ಮಿಕ, ಸಾಹಿತ್ಯಿಕ, ತಾತ್ವಿಕ ವಿಷಯಗಳನ್ನು ಕುರಿತು ಪುರುಷರೊಂದಿಗೆ ಅವರು ಮುಕ್ತವಾಗಿ ಚರ್ಚಿಸುವ ಮತ್ತು ಸಾಮಾಜಿಕ ಪ್ರಕ್ರಿಯೆಗಳಲ್ಲಿ ಸಮಾನವಾಗಿ ತೊಡಗುವ ಅವಕಾಶಗಳು ಮಹಿಳೆಯರಿಗೆ ಇದ್ದವು ಎಂಬ ಮಾತು ಮೇಲಿಂದ ಮೇಲೆ ಪ್ರಸ್ತಾಪಗೊಳ್ಳುತ್ತದೆ, ಗಾರ್ಗಿ ಮೈತ್ರೇಯಿ, ಲೋಪಮುದ್ರಾ, ಘೋಷ ಅಂಥವರ ಹೆಸರುಗಳನ್ನು ಸಮಾಜಶಾಸ್ತ್ರಜ್ಞರು ಮೇಲಿಂದ ಮೇಲೆ ಉಲ್ಲೇಖಿಸುತ್ತಾರೆ. ಇಷ್ಟನ್ನು ಹೊರತು ಪಡಿಸಿದರೆ; ಮಧ್ಯಕಾಲೀನ ಇತಿಹಾಸದ ಸಂದರ್ಭದಲ್ಲಿ ಭಕ್ತಿ ಪಂಥದ ಮಹಿಳೆಯರು ಒಂದಿಷ್ಟು ಓದಿಕೊಂಡಂತೆ ತಾತ್ವಿಕ ಚರ್ಚೆ - ಚಿಂತನೆ ನಡೆಸಿದಂತೆ ಕಂಡು ಬರುತ್ತದೆ. ಮೀರಾ, ಮಹಾದೇವಿಯಕ್ಕ ಕಾರಿಕಾಲಮ್ಮ ಯರಂಥ ಕೆಲವರನ್ನು ಇಲ್ಲಿ ಉಲ್ಲೇಖಿಸಬಹುದು. ರಾಜಕುಮಾರಿಯರಿಗೆ ಶಿಕ್ಷಣವನ್ನು

ನೀಡಲಾಗುತ್ತಿತ್ತು ಎಂಬ ಪ್ರಸ್ತಾಪವು ಬರುತ್ತದೆಯಾದರೂ ಅವರಿಗೆ ಲಲಿತ ಕಲೆಗಳಾದ ಸಾಹಿತ್ಯ, ಸಂಗೀತ, ನಾಟಕ ಕಲೆಗಳಲ್ಲಿ ಮಾತ್ರ ತರಬೇತಿ ನೀಡುತ್ತಿದ್ದಂತೆ ಕಂಡು ಬರುತ್ತದೆ. ಇಷ್ಟಾಗಿಯೂ ಕೆಲವರು ಶಸ್ತ್ರವಿದ್ಯೆಯನ್ನು ಆರ್ಥಿಕ ನಿರ್ವಹಣಾ ಕಲೆಯನ್ನು ಕಲಿಯುತ್ತಿದ್ದುದಕ್ಕೆ ಅಲ್ಲಲ್ಲಿ ಪುರಾವೆಗಳು ದೊರೆಯುತ್ತವೆ. ಇಂಥ ಕೆಲವು ಅಪರೂಪದ ಉದಾಹರಣೆಗಳನ್ನು ಹೊರತು ಪಡಿಸಿದರೆ ಇಡಿಯಾಗಿ ಮಹಿಳೆಯರ ಶೈಕ್ಷಣಿಕ ಸ್ಥಿತಿಗತಿಯು ಚಿಂತಾಜನಕವೇ ಆಗಿತ್ತೆಂಬುದು ಗುಟ್ಟಿನ ಸಂಗತಿಯೇನಲ್ಲ.

ಸ್ತ್ರೀ ಮತ್ತು ಪುರುಷರ ಶಕ್ತಿ ಸಾಮರ್ಥ್ಯ ಹಾಗೂ ವೈಶಿಷ್ಟ್ಯಗಳನ್ನು ಕುರಿತು ಚರ್ಚೆ ಪುರಾಣಗಳಲ್ಲಿ, ಜನಪದ ಕಥೆಗಳಲ್ಲಿ, ಮಹಾಕಾವ್ಯಗಳಲ್ಲಿ ಆಗಾಗ ಕಂಡು ಬರುತ್ತಾರೆಯಾದರೂ; ಬದುಕಿನ ವೈವಿಧ್ಯಮಯವಾದ ಎಲ್ಲಾ ರಂಗಗಳಲ್ಲಿ ಸ್ತ್ರೀಗೆ ಸಮಪಾಲಿತ್ತು ಎಂದು ಹೇಳಬರುವಂತಿಲ್ಲ. 'ಮಾತೃದೇವೋಭವ', 'ಅಪುತ್ರಶ್ಯ ಗತಿರ್ನಾಸ್ತಿ', 'ಅಷ್ಟಪುತ್ರ ಸೌಭಾಗ್ಯವತಿ', 'ದೀರ್ಘ ಸುಮಂಗಲೀಭವ' ಮುಂತಾದ ಬಹು ಆಕರ್ಷಕವಾದ ಆಣಿಮುತ್ತುಗಳು ಹೆಣ್ಣಿನ ಪಾಲಿಗೆ ಉರುಲುಗಳೇ ಆಗಿರುವುದು ಎಲ್ಲರ ಅನುಭವಕ್ಕೆ ಬಂದಿರುವಂಥದ್ದು. ಹೆಣ್ಣು - ವಾತ್ಸಲ್ಯಮಯಿ, ಪಾಲನೆ-ಪೋಷಣೆ ಮಾಡುವ ಮಹಾ ತಾಯಿ ಎಂದೆಲ್ಲ ಗಾಳಿ ತುಂಬಿ; ಆಯಾ ಪಾತ್ರಗಳ ಆದರ್ಶಕ್ಕೆ ಅವರು ತನ್ನನ್ನು ತಾನು ಸಿದ್ಧಗೊಳಿಸಿಕೊಳ್ಳುವಂತೆ ಪ್ರೇರೇಪಿಸಲಾಯಿತು. ಇಡೀ ಭಾರತೀಯ ಚರಿತ್ರೆಯ ಒಳಗೆ ಹೆಣ್ಣು ಮಗುವಿಗಾಗಿ ಪ್ರಾರ್ಥಿಸಿದ; ವ್ರತ ಪೂಜೆ ನೇಮಗಳನ್ನು ಕೈಗೊಂಡ ಉದಾಹರಣೆಗಳು ದೊರೆಯುವುದಿಲ್ಲವೆಂದು ಕೇವಲ ಆಕಸ್ಮಿಕವಲ್ಲ... ಹೆಣ್ಣಿಗೆ ದೀರ್ಘಾಯುಷ್ಯವನ್ನು ಹೊಂದು ಎಂದು ಹರಸುವುದರ ಬದಲಾಗಿ; ಗಂಡನಿಗಿಂತ ಮೊದಲೇ ಸತ್ತು ಹೋಗು ಎಂಬರ್ಥದ 'ದೀರ್ಘ ಸುಮಂಗಲೀ ಭವ' ಎಂಬ ಹರಕೆಯ ಮಾತಿನ ನೆನಪು ಬಂದಾಗ; ನನ್ನ ಕರುಳಿಗೆ ಮುಳ್ಳು ಚುಚ್ಚಿದ ಅನುಭವವಾಗುತ್ತದೆ. ಮರ್ಯಾದಾ ಪುರುಷೋತ್ತಮನಾದ ರಾಮಚಂದ್ರದೇವನು ಸೀತೆಯನ್ನು ಕಾಡಿಗಟ್ಟಿದಾಗ; ಲಕ್ಷ್ಮಣನು ಸೀತೆಗೆ ತನ್ನನ್ನು ಕ್ಷಮಿಸೆಂದು ವಿನಂತಿಸುತ್ತಾನೆ. ಅಣ್ಣನ ಆಜ್ಞೆಯನ್ನು ಪರಿಪಾಲಿಸುತ್ತಿದ್ದೇನೆಯೇ ಹೊರತು; ಇದರಲ್ಲಿ ನನ್ನದೇನು ತಪ್ಪಿಲ್ಲವೆಂಬುದು ಸಮಜಾಯಿಷಿ ನೀಡುತ್ತಾನೆ. ಆಗ ಮಹಾ ಪತಿವ್ರತೆಯಾದ ಸೀತಾ ಮಾತೆಯು, ಇದರಲ್ಲಿ ರಾಮಚಂದ್ರನದು ಏನೂ ತಪ್ಪಿಲ್ಲ; ಹೆಣ್ಣಾಗಿ ಹುಟ್ಟಿದ ನನ್ನದೇ ತಪ್ಪು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾಳೆ. ಇದು ಆಗಿನ ಕಾಲದ ರಾಜಕುಮಾರಿ, ಮಹಾರಾಣಿಯೊಬ್ಬಳ ಆದರ್ಶದ ಕನಸಿನ ಹೆಣ್ಣಿನ ಚಿತ್ರಣವೆಂಬುದನ್ನು ನಾವು ಗಮನಿಸಬೇಕು.

ನಮ್ಮ ಜನಪದರಲ್ಲಿಯೂ ಇಂಥ ಉದಾಹರಣೆಗಳು ದಂಡಿ ದಂಡಿಯಾಗಿ ದೊರೆಯುತ್ತವೆ. 'ಅತ್ತೀಯ ಮನಿಯಾಗ ತೊತ್ತಾಗಿ ಇರಬೇಕು, ಹೊತ್ತಾಗಿ ನೀಡಿದರೆ ಉಣಬೇಕು, ತವರಿಗೆ ಹೆಸರು ತರಬೇಕು' ಎಂಬಂಥ ನೀತಿಯನ್ನು ಹೇರಲಾಗಿದೆ. ಒಂದೆಡೆ ಗರತಿಯೊಬ್ಬಳು ಹೀಗೆ ಹಾಡುತ್ತಾಳೆ :

ಹೆಣ್ಣು ಆಗುವುದಕ್ಕಿಂತ ಮಣ್ಣು
ಆಗೋದು ಲೇಸು
ಮಣ್ಣಿನ ಮ್ಯಾಲ ಮರವಾಗಿ
ಇದ್ದರ
ಬಂದವರಿಗೆಲ್ಲ ನೆರಳವ್ವ.

ಈ ಜಾನಪದ ಕವಿತೆಯ ಭಾವವನ್ನು ಗಮನಿಸಿದಾಗ; ಹೆಣ್ಣಿನ ಸ್ಥಿತಿ ಎಂಥದ್ದು, ಅವಳಿಗೆ ಸಿಕ್ಕ ಆದರ್ಶ ಎಂಥದ್ದು; ಕೊಟ್ಟ ತರಬೇತಿ, ಇಟ್ಟ ಆದರ್ಶಗಳು ಏನಾಗಿದ್ದವು ಎಂಬುದರ ಚಿತ್ರಣ ನಮಗೆ ಗೋಚರವಾಗುತ್ತದೆ. ಗಂಡ ಸತ್ತರೆ ಸತಿ ಹೋಗಬೇಕೆನ್ನುವುದು, ಜೀವಂತ ಉಳಿದರೆ ತಲೆಯ ಕೇಶ ಮುಂಡನ ಮಾಡಿಸಿಕೊಂಡು ಬತ್ತಿ ಹೊಸೆಯುತ್ತಾ ಕೂಡಬೇಕೆಂಬಂಥ ಆಚರಣೆಯು ಅವಳ ಹೀನಸ್ಥಿತಿಗೆ ಹಿಡಿದ ಕನ್ನಡಿಯಾಗಿದೆ.

ಹೆಣ್ಣು ಪುರುಷನ ಸವಲತ್ತು, ಸಾನುಕೂಲಗಳಿಗೆ ಸಾಧನ ಎನ್ನುವಂಥ ತರಬೇತಿಯನ್ನೇ (ಅರ್ಥಾತ್ ಶಿಕ್ಷಣವನ್ನೇ) ಚರಿತ್ರೆಯುದ್ದಕ್ಕೂ ನೀಡುತ್ತಾ ಬಂದದ್ದು ಕಂಡು ಬರುತ್ತದೆ. ಅವಳು ತಾನೊಂದು ವ್ಯಕ್ತಿ, ತನಗೆ ತನ್ನದೇ ಆದ ಕನಸುಗಳಿವೆ ಬದುಕು ಭಾವನೆಗಳಿವೆ ಎಂಬುದರ ಅರಿವು ಉಂಟಾಗದ ಹಾಗೆ ಹೆಣ್ಣನ್ನು ಕುಬ್ಜಗೊಳಿಸಿರುವುದು ಸರ್ವವೇದ್ಯ. ಇಂಥ ಸಂಸ್ಕಾರಗಳ ದುಷ್ಪರಿಣಾಮಗಳು ಇಂದಿನವರೆಗೂ ಮುಂದುವರೆದುಕೊಂಡು ಬಂದಿವೆ. ಪ್ರಸ್ತುತ ಆಡಳಿತ ನಡೆಸುತ್ತಿರುವ ಸರಕಾರ ಹಾಗೂ ಸ್ವಯಂ ಸೇವಾ ಸಂಸ್ಥೆಗಳು, ಮಹಿಳಾ ಸಂಘಟನೆಗಳು ಪ್ರಗತಿಪರ ಶಿಕ್ಷಣ ಸಂಸ್ಥೆಗಳು ನಡೆಸುತ್ತಿರುವ ಸಮಾನ ಶಿಕ್ಷಣ ನೀಡುವ ಪ್ರಕ್ರಿಯೆಗೆ ಸಾಕಷ್ಟು ಅಡ್ಡಿ ಆತಂಕಗಳನ್ನು ಒಡ್ಡುತ್ತಿವೆ.

**೨. ಬ್ರಿಟಿಷರ ಕಾಲದಲ್ಲಿ ಮಹಿಳೆ ಮತ್ತು ಶೈಕ್ಷಣಿಕ ಆಯಾಮಗಳು**

ಹೆಣ್ಣಿನ ಗತಕಾಲದ ಬದುಕಿನ ಶೋಧನೆ ಮಾಡಿದಾಗ; ಅವಳು ಯಾವಾಗ ಶಿಕ್ಷಣ ಪಡೆಯುವುದರಿಂದ ವಂಚಿತಳಾದಳೋ, ಅಂದಿನಿಂದಲೇ ಪುರುಷನ ಅಧೀನಕ್ಕೆ ಒಳಗಾದದ್ದು ಕಂಡು ಬರುತ್ತದೆ. ಆದರೆ ವಸಾಹತುಶಾಹಿಯ ಕಾಲಮಾನದಲ್ಲಿ ಶಿಕ್ಷಣದ ಸಾರ್ವತ್ರೀಕರಣ ದಿಂದಾಗಿ; ಮಹಿಳೆಯರ ಬಂಧನದ ಬವಣೆಗಳು ಕೆಲವಾದರೂ ಸಡಿಲವಾದವು ಎಂದು ಹೇಳಬಹುದು. ಉದಾಹರಣೆಗೆ ಬಾಲ್ಯವಿವಾಹ, ಬಹುಪತ್ನಿತ್ವ, ವೇಶ್ಯಾವಾಟಿಕೆಯಂತಹ ಅಮಾನವೀಯ ಸಮಸ್ಯೆಗಳು ಒಂದಿಷ್ಟಾದರೂ ಕಡಿಮೆಯಾದ ಲಕ್ಷಣಗಳು ಆಗ ಕಂಡುಬಂದುವು. ಹೆಣ್ಣು ಕಲಿತು ಮಾಡುವುದಾದರೂ ಏನು? ಎಂಬಂಥ ತಥಾಕಥಿತ ನಂಬಿಕೆ ಸಡಿಲಗೊಂಡು, ಅವಳು ಶಾಲೆ ಕಾಲೇಜುಗಳಿಗೆ ಕಾಲಿಡಲು ಆರಂಭವಾಯಿತು. ಇದರಿಂದಾಗಿ ಅಡುಗೆ ಮನೆಯಲ್ಲೇ ಬಂಧಿಯಾಗಿದ್ದವಳು, ಹೊರಗಿನ ಲೋಕಕ್ಕೆ ತನ್ನನ್ನು ತಾನು ಒಂದಿಷ್ಟಾದರೂ ತೆರೆದುಕೊಳ್ಳುವಂತಾಯಿತು. ಇಡೀ ದೇಶದ ಆಗಿನ ಮಹಿಳಾ ಸಾಕ್ಷರತೆಯ ಪ್ರಮಾಣ ಶೇಕಡಾ ೫ಕ್ಕಿಂತಲೂ ಕಡಿಮೆ ಇತ್ತು ಎಂಬುದನ್ನು ನೆನೆದರೆ ಯಾರ ಮಗ್ಗುಲಿ

ಗಾದರೂ ಮುಳ್ಳು ಚುಚ್ಚಿದ ಅನುಭವವಾಗುತ್ತದೆ. ಕ್ರಿ.ಶ. ೧೮೧೩ರಲ್ಲಿ ಬಂದ ಭಾರತೀಯರ ಚಾರ್ಟರ್ ಕಾಯಿದೆ ಹಾಗೂ ೧೮೨೪ರಲ್ಲಿ ಅಮೇರಿಕನ್ ಮಿಷನ್ ಸಂಸ್ಥೆಯು ಕೈಗೊಂಡ ಕಾರ್ಯ ಚಟುವಟಿಕೆಗಳ ಪರಿಣಾಮವಾಗಿ; ಮಹಿಳೆಯು ಶೈಕ್ಷಣಿಕ ಕ್ಷೇತ್ರದಲ್ಲಿ ದೃಢವಾದ ಹೆಜ್ಜೆಯನ್ನಿಡಲು ಆರಂಭಿಸಿದ್ದು, ಒಂದು ರೋಚಕ ಕಥೆಯಾಗಿದೆ. ೧೮೨೯ರಲ್ಲಿ ४೦೦ ಜನ ಹುಡುಗಿಯರು ಶಾಲೆಗೆ ಸೇರ್ಪಡೆಯಾದದ್ದು ಒಂದು ಸ್ಮರಣಾರ್ಹ ಅಧ್ಯಾಯವೆಂದು ಹೇಳಬಹುದು.

ಮಹಿಳೆಗೆ ಶಿಕ್ಷಣ ನೀಡದಿದ್ದರೆ ಯಾವುದೇ ಬಗೆಯ ಸಾಮಾಜಿಕ ಪ್ರಗತಿಪರ ಕಾರ್ಯ ಯೋಜನೆಗಳು ಅರ್ಥಪೂರ್ಣವಾಗಲಾರವು ಎಂಬುದು ವಾಸ್ತವ ಸಂಗತಿಯಾಗಿದೆ. ಪಶ್ಚಿಮ ಬಂಗಾಳದ ಮಹಾನ್ ಸಮಾಜ ಸುಧಾರಕರಾದ ಈಶ್ವರ ಚಂದ್ರ ವಿದ್ಯಾಸಾಗರ ಅವರು ೧೮೫೧ರಲ್ಲಿ ಬಾಲಿಕಾ ವಿದ್ಯಾಲಯವನ್ನು ಆರಂಭಿಸಿದ್ದು ಒಂದು ಸ್ಮರಣಾರ್ಹ ಸಂಗತಿಯಾಗಿದೆ. ೧೮೫೬ ರಲ್ಲಿ ಶಿಕ್ಷಣಾಧಿಕಾರಿಗಳಾಗಿ ನೇಮಕಗೊಂಡ ಅವರು; ಆ ಸಂದರ್ಭದಲ್ಲಿ ಸುಮಾರು ೩೫ ಶಾಲೆಗಳನ್ನು ಹೆಣ್ಣು ಮಕ್ಕಳಿಗಾಗಿ ಪ್ರಾರಂಭಿಸಿದರು. ೧೮೭೮ರಲ್ಲಿ ಪ್ರಥಮ ಬಾರಿಗೆ ಕಲ್ಕತ್ತಾ ವಿಶ್ವವಿದ್ಯಾಲಯಕ್ಕೆ ಮಹಿಳೆಯೊಬ್ಬಳು ಪ್ರವೇಶ ಪಡೆದದ್ದು ಭಾರತೀಯ ಸ್ತ್ರೀ ಲೋಕದ ಮಹತ್ವದ ಹೆಜ್ಜೆ ಎಂದೇ ಹೇಳಬೇಕು. ೧೮೫೪ರ ಹೊತ್ತಿಗೆ ಸುಮಾರು ೬೨೬ ಬಾಲಕಿಯರ ಶಾಲೆಗಳು ಕಾರ್ಯನಿರ್ವಹಿಸುತ್ತಿದ್ದವು. ಉತ್ತರ ಭಾರತದ ಪಶ್ಚಿಮ ಬಂಗಾಳದಲ್ಲಿ ಮಹಿಳಾ ಪರ ಚಳುವಳಿಯು ತೀವ್ರವಾಗಿದ್ದರೂ ಸಹ; ದಕ್ಷಿಣ ಭಾರತದ ಮಹಾರಾಷ್ಟ್ರದಲ್ಲಿ ಪ್ರಥಮ ಬಾರಿಗೆ ಹೆಣ್ಣು ಮಕ್ಕಳಿಗಾಗಿ ಶಾಲೆ ಆರಂಭವಾದ್ದು ಉಲ್ಲೇಖಾರ್ಹ. ಶಿಕ್ಷಣ ಲೋಕದಲ್ಲಿ ಅಪಾರವಾಗಿ ಪರಿಶ್ರಮಿಸಿದ ಜ್ಯೋತಿಭಾ ಫುಲೆಯವರು ೧೮४८ರಲ್ಲಿ ಕನ್ಯಾಶಾಲೆಯನ್ನು ಪ್ರಾರಂಭಿಸಿದಲ್ಲದೆ ೧೮೫೧ರಲ್ಲಿ ದಲಿತ ಮಹಿಳೆಗಾಗಿ ಮೊದಲ ಬಾರಿಗೆ ಶಾಲೆಯನ್ನು ಆರಂಭಿಸಿದರು. ಮಹಿಳೆ ಎಂಬ ಕಾರಣಕ್ಕಾಗಿ ಅನುಭವಿಸುವ ಸಂಕಷ್ಟಗಳ ಜೊತೆಗೆ ದಲಿತ ಕಾರಣವು ಸೇರಿಕೊಂಡಿರುವುದರಿಂದ; ಕೆಳಜಾತಿಯ ಹೆಣ್ಣುಮಕ್ಕಳು ಇನ್ನಷ್ಟು ಕಷ್ಟ ಕಾರ್ಪಣ್ಯಗಳನ್ನು ಅನುಭವಿಸಬೇಕಾಗಿತ್ತು. ಮೇಲ್‌ಜಾತಿಯ ಹೆಣ್ಣುಮಕ್ಕಳಿಗೆ ಬರುವ ಕಷ್ಟಗಳು ಒಂದು ಕಡೆ ಬಾಯಿ ಇರುವ ಖಡ್ಗದ ಹೊಡೆತಗಳಾಗಿದ್ದರೆ, ದಲಿತ ವರ್ಗದ ಮಹಿಳೆಯರ ಸಂಕಷ್ಟವೂ ಇಬ್ಬಾಯ ಖಡ್ಗದ ಇರಿತವನ್ನು ಅನುಭವಿಸುವ ಸ್ಥಿತಿಯದ್ದಾಗಿತ್ತು ಎಂದು ಹೇಳಬಹುದು. ಇಂಗ್ಲಿಷ್ ಶಿಕ್ಷಣ ಜಾರಿಗೆ ಬಂದ ಮೇಲೂ ಅದರ ಲಾಭವನ್ನು ಪ್ರಮುಖವಾಗಿ ಪಡೆದವರು ಜಾತಿ ವ್ಯವಸ್ಥೆಯ ಮೇಲಿನ ಸ್ತರದವರೇ ಹೊರತು ಕೆಳಸ್ತರದಲ್ಲಿದ್ದವರಲ್ಲ. ಈ ಹಿನ್ನೆಲೆಯಲ್ಲಿ ಆಗ ಸಾವಿತ್ರಿಬಾಯಿ ಫುಲೆಯವರು ಮೊದಲ ಬಾರಿಗೆ ಶಿಕ್ಷಕರಾದದ್ದು ದಲಿತ ಮಹಿಳಾ ವರ್ಗದ ಅಪೂರ್ವ ಸಾಧನೆ ಎಂದು ಹೇಳಬಹುದು.

ಭಾರತೀಯ ಸಂದರ್ಭದಲ್ಲಿ ಸ್ತ್ರೀ ಶಿಕ್ಷಣದ ಹಾಗೂ ಅವಳ ಪರಿವರ್ತನೆಯ ಬಗ್ಗೆ ಪ್ರಸ್ತಾಪ ಮಾಡುವಾಗ ಮಹರ್ಷಿ ಕರ್ವೆಯವರ ಕೊಡುಗೆಯನ್ನು ಸ್ಮರಿಸದಿದ್ದರೆ ಅಂತಹ ಪ್ರಸ್ತಾವನೆಗೆ ಅರ್ಥವೇ ಇರುವುದಿಲ್ಲ. ಶ್ರೀ ಕರ್ವೆಯವರು ತಮ್ಮ ಕುಟುಂಬ ವರ್ಗದ ಹಾಗೂ ಸಮಾಜದ ಎಲ್ಲ ರೀತಿಯ ಸಾಂಪ್ರದಾಯಿಕ ವಿರೋಧಗಳನ್ನು ಧಿಕ್ಕರಿಸಿ; ವಿಧವೆಯೊಬ್ಬಳನ್ನು ಮದುವೆಯಾದದ್ದು ಒಂದು ಐತಿಹಾಸಿಕ ಘಟನೆಯಾಗಿದೆ. ಇದಲ್ಲದೆ ಅವರು ಪುಣೆಯಲ್ಲಿ ೧೯೦೭ರ ಸುಮಾರಿಗೆ ಒಂದು ಮಹಿಳಾ ವಿಶ್ವವಿದ್ಯಾಲಯವನ್ನು ಪ್ರಾರಂಭಿಸಿದರು. ಅದೇ ಸಮದರ್ಭದಲ್ಲಿ ದಿ ಇಂಡಿಯನ್ ಲೇಡಿಜ್ ವಿಜನ್ ಎಂಬುದನ್ನು ಸಂಸ್ಥಾಪಿಸಿದರು ಹಾಗೂ ಭಾರತದಲ್ಲೇ ಮೊಟ್ಟಮೊದಲ ವಿಶ್ವವಿದ್ಯಾಲಯವೆಂಬ ಖ್ಯಾತಿಗೆ ಭಾಜನವಾದ ಎಸ್.ಎನ್.ಡಿ.ಟಿ ಮಹಿಳಾ ವಿಶ್ವವಿದ್ಯಾಲಯದ ಸ್ಥಾಪನೆಗೆ ಅಪಾರವಾದ ಕೊಡುಗೆಯನ್ನು ನೀಡಿದರು. ಇವೆಲ್ಲವೂ ಒಬ್ಬ ಪುರುಷನಿಂದ ಸಾಧ್ಯವಾದದ್ದು ಮಹಿಳಾ ಲೋಕವು ಅಭಿಮಾನ ಪಡುವ ಸಂಗತಿಯಾಗಿದೆ.

ರಾಜಕೀಯವಾಗಿ ಬ್ರಿಟಿಷ್‌ರಿಂದ ಉಂಟಾದ ಕಷ್ಟನಷ್ಟಗಳೇನೇ ಇರಲಿ. ಆದರೆ ಶೈಕ್ಷಣಿಕ ದೃಷ್ಟಿಯಿಂದ ಅವರು ಮಾಡಿದ ಸೇವೆಯನ್ನು ನಾವು ಮರೆಯುವಂತಿಲ್ಲ. ಕ್ರೈಸ್ತ ಮಿಶನರಿಗಳು ಹಾಗೂ ಬ್ರಿಟಿಷ್ ಅಧಿಕಾರಿಗಳು ವರ್ಣ, ವರ್ಗ, ಜಾತಿ, ಲಿಂಗಗಳನ್ನು ಲೆಕ್ಕಿಸದೆ; ಸರ್ವರಿಗೂ ಶಿಕ್ಷಣವನ್ನು ಕೊಡ ಮಾಡುವುದಕ್ಕೆ ಆರಂಭಿಸಿರುವುದನ್ನು ಒಂದು ಕಲ್ಯಾಣ ಘಟನೆ ಎಂದೇ ಸ್ಮರಿಸಬಹುದು. ಇದನ್ನೆಲ್ಲ ಮನಗಂಡು ನಮ್ಮ ಸಂಸ್ಥಾನಗಳನ್ನು ಆಳುವ ಪ್ರಭುಗಳು ಕೂಡಾ ಅಲ್ಲಲ್ಲಿ ಸ್ತ್ರೀ-ಪುರುಷ ಭೇದವಿಲ್ಲದೆ ಶಿಕ್ಷಣವನ್ನು ನೀಡಲು ಮುಂದಾದರು. ಇವರ ಜೊತೆಗೆ ನಮ್ಮ ದೇಶದ ಪುರುಷ ಸುಧಾರಕರು ಮತ್ತು ವಿದ್ಯಾವಂತ ಮಹಿಳೆಯರು ಕೂಡಾ; ಸ್ತ್ರೀಯರ ಶೈಕ್ಷಣಿಕ ಸ್ಥಿತಿಗತಿಯ ಉನ್ನತಿಗೆ ಅಪಾರವಾಗಿ ಶ್ರಮಿಸಿದರು. ಆ ಕಾಲದಲ್ಲಿ ಸಮಾಜ ಸುಧಾರಣಾ ಸಂಸ್ಥೆಗಳೆಂದು ಹೆಸರು ಮಾಡಿದ್ದ, ಬ್ರಹ್ಮ ಸಮಾಜ, ಆರ್ಯ ಸಮಾಜ, ಪ್ರಾರ್ಥನಾ ಸಮಾಜ ಹಾಗೂ ಥಿಯಾಸಫಿಕಲ್ ಸೊಸೈಟಿಯವರು ಕೂಡಾ ಈ ಹಿನ್ನೆಲೆಯಲ್ಲಿ ಸಾಕಷ್ಟು ಪರಿಶ್ರಮಿಸಿದ್ದಾರೆ. ಕರ್ನಾಟಕದವರೇ ಆದ ಪಂಡಿತ ರಮಾಬಾಯಿ ಮತ್ತು ಭಾಗೀರಥಿ ಪುರಾಣಿಕ, ಡಾ. ಆ್ಯನಿಬೆಸೆಂಟ್, ಸಾವಿತ್ರಿಬಾಯಿ ಫುಲೆ, ವಿಮಲಾ ರಣದಿವೆ, ಅಹಲ್ಯಾ ರಂಗಳೇಕರ ಮುಂತಾದ ಸ್ತ್ರೀಯರಲ್ಲದೆ ಮಹಾತ್ಮ ಗಾಂಧೀಜಿ ಮತ್ತು ಡಾ. ಬಿ.ಆರ್. ಅಂಬೇಡ್ಕರ್ ಅವರುಗಳು ಸ್ತ್ರೀಯರ ಸಾಮಾಜಿಕ ಶೈಕ್ಷಣಿಕ ಉನ್ನತಿಗೆ ಮಹತ್ವದ ಕೊಡುಗೆಯನ್ನು ನೀಡಿದ್ದಾರೆ.

**೩. ಸ್ವಾತಂತ್ರ್ಯಾನಂತರದಲ್ಲಿ ಮಹಿಳೆಯರು ಮತ್ತು ಶೈಕ್ಷಣಿಕ ಆಯಾಮಗಳು**

ಭಾರತೀಯರು ಬಹುದಿನಗಳಿಂದ ಕಂಡ ಕನಸಾದ ಸಮಾನತೆಯ ಸ್ವಾತಂತ್ರ್ಯವು ಬಂದಾಗ; ಅದರಲ್ಲಿ ಅನೇಕ ಕನಸುಗಳು ಕೇವಲ ಕನಸುಗಳಾಗಿಯೇ ಉಳಿದವು. ಅವುಗಳಲ್ಲಿ ಶಿಕ್ಷಣದ ಸಾರ್ವತ್ರೀಕರಣದ ಕನಸು ಕೂಡಾ ಒಂದು ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ನಮ್ಮ ಸಂವಿಧಾನವು ಸಮಾನತೆಯನ್ನು ನೀಡಿ ಲಿಂಗಭೇದವನ್ನು ನಿಷೇಧಿಸಿತ್ತಾದರೂ;

ವಾಸ್ತವವಲ್ಲಿ ಸ್ತ್ರೀ ಶಿಕ್ಷಣದಲ್ಲಿ ನಾವೆಣಿಸಿದಷ್ಟು ಪ್ರಗತಿ ಸಾಧಿಸಲಾಗಲಿಲ್ಲ. ನಮ್ಮ ದೇಶದ ಒಟ್ಟು ಜನಸಂಖ್ಯೆಯಲ್ಲಿ; ಮಹಿಳೆಯರು ಸರಿ ಸುಮಾರು ಅರ್ಧದಷ್ಟು ಇದ್ದಾರೆ. ಸ್ತ್ರೀ ಪುರುಷರ ಶಿಕ್ಷಣದ ನಡುವೆ ಸಾಕಷ್ಟು ಅಂತರವಿದೆ. ಮಹಿಳಾ ಸಾಕ್ಷರತೆಯ ಪ್ರಮಾಣ ೧೯೫೧ರಲ್ಲಿ ಶೇಕಡಾ ೮.೮೬ರಷ್ಟಿದ್ದರೆ. ಅದು ೨೦೦೧ರಲ್ಲಿ ಶೇಕಡಾ ೫೪.೧೬ರಷ್ಟಿದ್ದು ಕಂಡು ಬರುತ್ತದೆ. ಆದರೆ ಪುರುಷರ ಸಾಕ್ಷರತೆಯ ಪ್ರಮಾಣವು ೧೯೫೧ರಲ್ಲಿ ೨೭.೧೬ ರಷ್ಟಿದ್ದರೂ; ಅದು ೨೦೦೧ ರಲ್ಲಿ ಶೇಕಡಾ ೭೫.೮೫ ಪ್ರಮಾಣದಲ್ಲಿ ಏರಿರುವುದು ಕಂಡು ಬರುತ್ತದೆ. ಇದನ್ನು ನೋಡಿದರೆ ಈ ಸಮಾಜದಲ್ಲಿ ಶಿಕ್ಷಣ ಅವಕಾಶದ ಬಳಕೆಯಲ್ಲಿ ಲಿಂಗ ತಾರತಮ್ಯವು ಎಷ್ಟರಮಟ್ಟಿಗೆ ಇತ್ತು ಎಂಬುದು ಮನದಟ್ಟಾಗುತ್ತದೆ. ಈ ಮುಂದೆ ನೀಡಿರುವ ಕೋಷ್ಟಕದಿಂದ ಇದನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಬಹುದಾಗಿದೆ.

### ಭಾರತದಲ್ಲಿ ಮಹಿಳೆಯರ ಮತ್ತು ಪುರುಷರ ಶೇಕಡಾವಾರು ಸಾಕ್ಷರತಾ ಪ್ರಮಾಣ

| ವರ್ಷ | ಪುರುಷ | ಮಹಿಳೆ | ದೇಶದ ಒಟ್ಟು ಸಾಕ್ಷರತಾ ಪ್ರಮಾಣ |
|---|---|---|---|
| ೧೯೫೧ | ೨೭.೧೬ | ೮.೮೬ | ೧೮.೩೩ |
| ೧೯೬೧ | ೪೦.೪೦ | ೧೫.೩೫ | ೨೮.೩೧ |
| ೧೯೭೧ | ೪೫.೯೫ | ೨೧.೯೭ | ೩೪.೪೫ |
| ೧೯೮೧ | ೫೩.೪೫ | ೨೮.೪೬ | ೪.೪೭ |
| ೧೯೯೧ | ೬೪.೧೩ | ೩೯.೨೯ | ೫೨.೨೧ |
| ೨೦೦೧ | ೭೫.೮೫ | ೫೪.೧೬ | ೬೫.೩೮ |
| ೨೦೦೧ ಗ್ರಾಮೀಣ | ೭೧.೪೦ | ೪೬.೭೦ | ೫೯.೪೦ |
| ೨೦೦೧ ನಗರ | ೮೬.೭೦ | ೭೩.೨೦ | ೮೦.೩೦ |

ಆಧಾರ : ೨೦೦೧ರ ಜನಗಣತಿ ಪು. ಸಂ. ೨೫೧.

ಸ್ತ್ರೀ ಪುರುಷರ ಸಾಕ್ಷರತೆಯ ಪ್ರಮಾಣದಲ್ಲಿ ವ್ಯತ್ಯಾಸವಿರುವುದಷ್ಟೇ ಅಲ್ಲ ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲೂ; ಸಾಕ್ಷರತೆಯ ಪ್ರಮಾಣದಲ್ಲಿ ಅಗಾಧವಾದ ವ್ಯತ್ಯಾಸಗಳಿರುವುದು ಕಂಡು ಬರುತ್ತದೆ. ನಗರ ಪ್ರದೇಶದಲ್ಲಿ ಸ್ತ್ರೀ ಸಾಕ್ಷರತೆಯ ಪ್ರಮಾಣ ೭೩.೨೦ ರಷ್ಟಿದ್ದರೆ ಅದು ಗ್ರಾಮೀಣ ಪ್ರದೇಶದಲ್ಲಿ ಈ ಪ್ರಮಾಣವು ಶೇಕಡಾ ೪೬.೭೦ರಷ್ಟು ಮಾತ್ರವಿದ್ದದ್ದು ಈ ಮೇಲಿನ ಕೋಷ್ಟಕದಿಂದ ಕಂಡು ಬರುತ್ತದೆ.

ಸಾಕ್ಷರತಾ ಪ್ರಮಾಣದಲ್ಲಿ ಹಾಗೂ ಶಾಲಾ ದಾಖಲಾತಿಯ ಪ್ರಮಾಣದಲ್ಲಿ ಹೆಚ್ಚಳ ಉಂಟಾಗಿರುವುದು ನಿಜ. ಆದರೆ ಈ ಹೆಚ್ಚಳವು ಭಾರತದ ವಿವಿಧ ಭಾಗಗಳಲ್ಲಿ ಸಮಾನವಾಗಿ

ಹಂಚಿಕೆಯಾಗಿಲ್ಲ. ಕೇರಳ ರಾಜ್ಯದಲ್ಲಿ ಅತೀ ಹೆಚ್ಚಿನ (೮೭.೮೬) ಮಹಿಳಾ ಸಾಕ್ಷರತೆಯಿದ್ದರೆ, ಬಿಹಾರ ರಾಜ್ಯದಲ್ಲಿ ಅತ್ಯಂತ ಕಡಿಮೆ (೩೩.೫೭) ಮಟ್ಟದ ಸ್ತ್ರೀ ಸಾಕ್ಷರತೆಯನ್ನು ನಾವು ಕಾಣಬಹುದು. ದೇಶದ ಮಹಿಳಾ ಜನಸಂಖ್ಯೆಯನ್ನು ಅಧಿಕ ಪ್ರಮಾಣದಲ್ಲಿ ಹೊಂದಿರುವ ರಾಜ್ಯಗಳಾದ ಉತ್ತರ ಪ್ರದೇಶ, ಬಿಹಾರ, ರಾಜ್ಯಸ್ಥಾನ ಮುಂತಾದ ರಾಜ್ಯಗಳಲ್ಲಿ ಮಹಿಳೆಯರ ಸಾಕ್ಷರತಾ ಪ್ರಮಾಣವು ಅತ್ಯಂತ ಕೆಳ ಮಟ್ಟದಲ್ಲಿರುವ ಅಂಶವು ಈ ಕೆಳಗಿನ ಕೋಷ್ಟಕದಿಂದ ತಿಳಿದು ಬರುತ್ತದೆ.

ರಾಜ್ಯವಾರು ವ್ಯತ್ಯಾಸವಿರುವ ಸಾಕ್ಷರತಾ ಪ್ರಮಾಣದ ಕೋಷ್ಟಕ

| ರಾಜ್ಯಗಳು | ಒಟ್ಟು ಸಾಕ್ಷರತಾ ಪ್ರಮಾಣ | ಪುರುಷ | ಮಹಿಳೆ |
|---|---|---|---|
| ೧. ಕೇರಳ | ೯೦.೯೨ | ೯೪.೨೦ | ೮೭.೮೬ |
| ೨. ಮಿಜೋರಾಂ | ೮೮.೪೪ | ೯೦.೬೯ | ೮೬.೧೩ |
| ೩. ಲಕ್ಷದ್ವೀಪ | ೮೭.೫೨ | ೯೩.೧೫ | ೮೧.೫೬ |
| ೪. ಗೋವಾ | ೮೨.೩೨ | ೮೮.೮೮ | ೭೫.೫೧ |
| ೫. ದೆಹಲಿ | ೮೧.೮೨ | ೮೭.೩೭ | ೭೫.೦೦ |
| ೬. ಮಹಾರಾಷ್ಟ್ರ | ೭೭.೨೭ | ೮೬.೨೭ | ೬೭.೫೧ |
| ೭. ತಮಿಳುನಾಡು | ೭೩.೪೭ | ೮೨.೩೩ | ೬೪.೫೫ |
| ೮. ಕರ್ನಾಟಕ | ೬೭.೦೪ | ೭೬.೨೯ | ೫೭.೪೫ |
| ೯. ಮಧ್ಯಪ್ರದೇಶ | ೬೪.೧೧ | ೭೬.೮೦ | ೫೦.೨೮ |
| ೧೦. ರಾಜ್ಯಸ್ಥಾನ | ೬೧.೦೩ | ೭೬.೪೬ | ೪೪.೩೪ |
| ೧೧. ಉತ್ತರ ಪ್ರದೇಶ | ೫೭.೩೬ | ೭೦.೨೩ | ೪೨.೯೮ |
| ೧೨. ಬಿಹಾರ | ೪೭.೫೩ | ೬೦.೩೨ | ೩೩.೮೭ |

ಆಧಾರ : ೨೦೦೧ರ ಜನಗಣತಿಯ ಸಾಕ್ಷರತಾ ಪ್ರಮಾಣದ ಮುಖ್ಯಾಂಶಗಳು

ಗ್ರಾಮ ಮತ್ತು ನಗರಗಳಲ್ಲಿ ನಾವು ಅನಕ್ಷರತೆ, ಪ್ರಾಥಮಿಕ, ಮಾಧ್ಯಮಿಕ, ಪ್ರೌಢ ಮತ್ತು ಪದವಿ ಶಿಕ್ಷಣದ ಪ್ರಮಾಣ ನೋಡಿದಾಗ; ನಗರ ಮತ್ತು ಗ್ರಾಮಗಳಲ್ಲಿ ಅಜಗಜಾಂತರ ವ್ಯತ್ಯಾಸವಿರುವುದು ಕಂಡು ಬರುತ್ತದೆ. ಸಾರ್ವತ್ರಿಕ ಶಿಕ್ಷಣದ ಗುರಿ ಸಾಧಿಸಲು ಯೋಜನೆಯನ್ನು ಹಾಕಿಕೊಂಡಿದ್ದರೂ ಕೂಡ ಅದನ್ನು ಪೂರೈಸಲು ಇಂದಿನವರೆಗೂ ಸಾಧ್ಯವಾಗದೇ ಇದ್ದುದು ಈ ಕೆಳಗಿನ ಕೋಷ್ಟಕವನ್ನು ನೋಡಿದಾಗ ತಿಳಿದುಬರುತ್ತದೆ.

## ಗ್ರಾಮೀಣ ಮತ್ತು ನಗರಗಳಲ್ಲಿ ಮಹಿಳೆಯರ ಸಾಕ್ಷರತೆ ಮತ್ತು ಮತ್ತು ಶೈಕ್ಷಣಿಕ ಪ್ರಮಾಣದ ಕೋಷ್ಟಕ

| ಸಾಕ್ಷರತಾ ಪ್ರಮಾಣ | ೧೯೮೩ | | ೧೯೮೮ | | ೧೯೯೪ | |
|---|---|---|---|---|---|---|
| | ಗ್ರಾಮೀಣ | ನಗರ | ಗ್ರಾಮೀಣ | ನಗರ | ಗ್ರಾಮೀಣ | ನಗರ |
| ಅನಕ್ಷರಸ್ಥರು | ೮೬.೨ | ೫೬.೫ | ೮೨.೩ | ೫೧.೮ | ೭೯.೦ | ೪೪.೫ |
| ಪ್ರಾಥಮಿಕ ಹಂತ | ೧೦.೨ | ೧೭.೭ | ೧೨.೦ | ೧೯.೦ | ೧೩.೭ | ೧೭.೭ |
| ಮಾಧ್ಯಮಿಕ ಹಂತ | ೨.೧ | ೬.೩ | ೩.೨ | ೭.೩ | ೩.೯ | ೮.೧ |
| ಪ್ರೌಢ ಹಂತ | ೧.೨ | ೧೧.೬ | ೨.೦ | ೧೨.೩ | ೨.೭ | ೧೫.೧ |
| ಪದವಿ ಹಂತ | ೦.೩ | ೮.೦ | ೦.೪ | ೯.೬ | ೦.೭ | ೧೪.೬ |

ಆಧಾರ : ನ್ಯಾಶನಲ್ ಶಾಂಪಲ್ ಸರ್ವೆ.

ಗ್ರಾಮೀಣ ಪ್ರದೇಶದಲ್ಲಿ ೧೯೮೩ರ ಸುಮಾರಿಗೆ ಶೇಕಡಾ ೮೬.೨ರಷ್ಟು ಜನ ಅನಕ್ಷರಸ್ಥರಾಗಿದ್ದರು. ಇದು ೧೯೯೪ರಲ್ಲಿ, ಅಂದರೆ ಸುಮಾರು ಹನ್ನೊಂದು ವರ್ಷಗಳ ನಂತರವೂ ಕೇವಲ ಅವರ ಅನಕ್ಷರತೆಯ ಮಟ್ಟ ಶೇಕಡಾ ೭ ರಷ್ಟು ಮಾತ್ರ, ಕಡಿಮೆಯಾದದ್ದು ಕಂಡು ಬರುತ್ತದೆ. ಇದರಿಂದ ಗ್ರಾಮೀಣ ಪ್ರದೇಶದ ಬದಲಾವಣೆಗೆ ಅವಶ್ಯವಾಗಿರುವ ಶೈಕ್ಷಣಿಕ ಸ್ಥಿತಿಗತಿ ಚಿಂತಾಜನಕವಾಗಿರುವುದು ನಮಗೆ ಮನದಟ್ಟಾಗುತ್ತದೆ. ಅದೇ ರೀತಿ ಪ್ರಾಥಮಿಕ ಹಂತದಲ್ಲಿ ಕೇವಲ ಶೇಕಡಾ ೨.೧ ರಿಂದ ಶೇಕಡಾ ೩.೯ಕ್ಕೆ ಏರಿದೆ ಅಂದರೆ ಶೇಕಡಾ ೧ರಷ್ಟು ಬದಲಾವಣೆ ಮಾತ್ರ ಆಗಿರುತ್ತದೆಯೆಂಬುದು ಗಮನಾರ್ಹ.

ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣದ ಗತಿಯು ಈ ತೆರನಾಗಿರಬೇಕಾದರೆ - ಪದವಿ ಪಡೆದುಕೊಂಡವರ ಸಂಖ್ಯೆಯು ಗ್ರಾಮಗಳಲ್ಲಿ ಇನ್ನೂ ನಗಣ್ಯವಾಗಿದೆ. ಅದು ಶೇಕಡಾ ೦.೭ರಷ್ಟು ಮಾತ್ರ ಆಗಿದೆ. ಆದರೆ ಇದು ನಗರ ಪ್ರದೇಶದಲ್ಲಿ ಶೇಕಡಾ ೧೪.೬ರಷ್ಟು ಇದ್ದದು ಕಂಡು ಬರುತ್ತದೆ. ಇದರಿಂದ ಹಳ್ಳಿಗಳಿಗೆ ಹೋಲಿಸಿದರೆ ಪಟ್ಟಣದ ಮಹಿಳೆಯರ ಸಾಕ್ಷರತಾ ಪ್ರಮಾಣದಲ್ಲಿನ ಹೆಚ್ಚಳವು ಗೋಚರಿಸುತ್ತದೆ. ಇದು ಸಾಮಾನ್ಯ ಶಿಕ್ಷಣದ ಪ್ರಮಾಣವಾಗಿರುತ್ತದೆ.

ಆದರೆ ನಾವು ವಿಜ್ಞಾನ, ವೈದ್ಯಕೀಯ, ತಾಂತ್ರಿಕ, ಅಭಿಯಾಂತ್ರಿಕ ವಲಯಗಳ ಶೈಕ್ಷಣಿಕ ಸ್ಥಿತಿಗತಿಗಳತ್ತ ನೋಡಿದರೆ ಅದು ತೀರ ಅವಹೇಳನಕರವಾಗಿದ್ದುದು ಕಂಡು ಬರುತ್ತದೆ. ನಗರಗಳಲ್ಲಿ ಮಹಿಳೆಯು ವಿದ್ಯೆಯನ್ನು ಪಡೆದು ಉದ್ಯೋಗವನ್ನು ಹೊಂದಿ ಆರ್ಥಿಕ ಸ್ವಾವಲಂಬಿಯಾಗಿದ್ದಾಳೆ. ಅನೇಕ ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ರಂಗಗಳಲ್ಲಿ ಪ್ರಗತಿಯ ಹೆಜ್ಜೆಯನ್ನಿಡುತ್ತಿದ್ದಾಳೆ.

## ಗಮನಿಸಬೇಕಾದ ಕೆಲವು ತಿರುವುಗಳು

ಮೇಲ್ಕಾಣಿಸಿದ ಅಂಕಿ, ಅಂಶ, ಸಂಖ್ಯಾಭಿವೃದ್ಧಿಗಳನ್ನೆಲ್ಲ ಪರಿಶೀಲಿಸಿದಾಗ; ಹಂತದಿಂದ ಹಂತಕ್ಕೆ ಭಾರತೀಯ ಮಹಿಳೆಯು ಶೈಕ್ಷಣಿಕ ವಿವಿಧ ಆಯಾಮಗಳಲ್ಲಿ ಸುಧಾರಣೆಯಾದಂತೆ ಕಂಡು ಬರುತ್ತದೆ. ಆದರೆ ಅವಳ ಆತ್ಮೋನ್ನತಿಯಾಗಿರುವುದು ಮಾತ್ರ ಗೋಚರವಾಗುವುದಿಲ್ಲ. ಪುರುಷಶಾಹಿ ದಬ್ಬಾಳಿಕೆ ಮತ್ತು ಆಕ್ಟೋಪಸ್ ಹಿಡಿತ ಮತ್ತಷ್ಟು ಬಿಗಿಗೊಳ್ಳುತ್ತಿರುವುದು ಕಂಡು ಬರುತ್ತದೆ. ಮಹಿಳೆಯರ ಬದುಕಿನ ಮೇಲೆ ಬೀಳುತ್ತಿರುವ ಒತ್ತಡ, ದಬ್ಬಾಳಿಕೆ ಮತ್ತು ಹಿಂಸೆಯ ಪ್ರಕರಣಗಳು ಇನ್ನಷ್ಟು ಹೆಚ್ಚುತ್ತಿರುವುದು ನಿಜಕ್ಕೂ ಅಪಾಯಕಾರಿ ಸಂಗತಿಯಾಗಿದೆ. ಶಿಕ್ಷಣವು ವ್ಯಕ್ತಿಯ ಸ್ವಾತಂತ್ರ್ಯ ಮತ್ತು ಸಂತೋಷಗಳೆರಡನ್ನು ಹೆಚ್ಚಿಸಬೇಕು. ಆದರೆ ಇದು ಮಹಿಳೆಯ ಬದುಕಿನಲ್ಲಿ ಮಾತ್ರ ತದ್ವಿರುದ್ಧ ಪರಿಣಾಮಗಳನ್ನುಂಟು ಮಾಡುತ್ತಿರುವುದನ್ನು ಕಂಡಾಗ; ಮನುಷ್ಯ ಜೀವ ಸಹಜವಾಗಿಯೇ ಗಲಿಬಿಲಿಗೊಳಗಾಗುತ್ತದೆ.

ಶಿಕ್ಷಣದಿಂದ ಮಹಿಳಾ ಲೋಕದಲ್ಲಿ ಅರಿವು, ಜಾಗೃತಿ ಹೆಚ್ಚುತ್ತಿದೆ. ನಮ್ಮ ಕಾಯಿದೆ ಕಾನೂನುಗಳು ಮಹಿಳೆಯರ ಹಿತ ರಕ್ಷಣೆಗಾಗಿ ಸಾಕಷ್ಟು ಬೆಂಬಲ ಕೊಡುತ್ತಿವೆ. ಸಂವಿಧಾನವು ಮಹಿಳಾ ಶೋಷಣೆಯನ್ನು ನಿಲ್ಲಿಸುವುದಕ್ಕೆ ಸಮಾನತೆ ಮತ್ತು ಸಂರಕ್ಷಣೆಗಳನ್ನು ಒದಗಿಸುವುದಕ್ಕೆ ಸಾಕಷ್ಟು ಪ್ರೋತ್ಸಾಹ ನೀಡಿದೆ. ಆದರೆ ದಿನನಿತ್ಯ ವೃತ್ತ ಪತ್ರಿಕೆಗಳಲ್ಲಿ ರೇಡಿಯೋ, ದೂರದರ್ಶನಾದಿಗಳಲ್ಲಿ ಮಹಿಳೆಯರ ಮೇಲೆ ಆಗುತ್ತಿರುವ ದೌರ್ಜನ್ಯಗಳ ಕುರಿತು ಸುದ್ದಿಗಳು ದೇಶದ ನಾನಾ ಮೂಲೆಗಳಿಂದ ಬರುತ್ತಲಿವೆ. ಸುಸಂಸ್ಕೃತ ನಾಗರಿಕ ಮನಸ್ಸುಗಳು ಬೆಚ್ಚಿ ಬೀಳುವಂಥ ಹತ್ತು ಹಲವು ಸಮಾಚಾರಗಳನ್ನು ಪ್ರತಿ ಕ್ಷಣ ನಾವು ಕೇಳುತ್ತಿದ್ದೇವೆ. ಶಾಲೆಗೆ ಹೋಗುವ ಬಾಲೆಯರ ಮೇಲೆ ಅತ್ಯಾಚಾರ, ಯುವತಿಯರಿಗೆ ಕೀಟಲೆ-ಕಿರುಕುಳ, ದುಡಿಯುವ ಹೆಂಗಳೆಯರ ಮೇಲೆ ಅತ್ಯಾಚಾರ, ಗೃಹಕೃತ್ಯಗಳಲ್ಲಿ ತೊಡಗಿದ ಮಹಿಳೆಯರ ಮೇಲೆ ದೈಹಿಕ ಮತ್ತು ಮಾನಸಿಕ ಹಿಂಸೆಗಳು ಸರ್ವೇ ಸಾಮಾನ್ಯ ಘಟನೆಗಳೆಂಬಂತಾಗಿದೆ. ಖಾಸಗಿ ಸೇವಾ ಸಂಸ್ಥೆಗಳಲ್ಲಿ, ಸಾಮಾಜಿಕ ರಂಗಗಳಲ್ಲಿ, ಸರ್ಕಾರಿ ಕಚೇರಿಗಳಲ್ಲಿ ಮಾತ್ರವಲ್ಲ: ಕುಟುಂಬದೊಳಗಿನ ಬಂಧು ಬಾಂಧವರಿಂದಲೂ ಮಹಿಳೆಯು ಅನೇಕ ತರಹ ಅನ್ಯಾಯ, ಅತ್ಯಾಚಾರ, ದಬ್ಬಾಳಿಕೆ, ಹಿಂಸೆಗಳಿಗೆ ಒಳಗಾಗುತ್ತಿರುವುದು ಕಂಡು ಬರುತ್ತಿದೆ.

ಹೆಣ್ಣು ಹುಟ್ಟಿನಿಂದ ಸಾಯುವವರೆಗೆ ಮಾತ್ರವಲ್ಲ; ಹುಟ್ಟಿಗಿಂತ ಮೊದಲೇ ಭೇದಭಾವ, ತಾರತಮ್ಯಗಳಿಂದ ಅನ್ಯಾಯಕ್ಕೆ ಬಲಿಯಾಗುತ್ತಿದ್ದಾಳೆ. ನಮ್ಮ ದೇಶದಲ್ಲಿ ಪುತ್ರನಿಗಿರುವ ಪ್ರಾಮುಖ್ಯತೆ ಪುತ್ರಿಗಿಲ್ಲದಿರುವುದು ಸುಸ್ಪಷ್ಟವಾಗಿದೆ. ಹೆಣ್ಣಿನ ತಾಯ್ತನದ ಪರೀಕ್ಷೆ, ಮಗುವಿನ ತಾಯಿಯಾಗುವಲ್ಲಿ ಮಾತ್ರವಲ್ಲ; ಅದು ಗಂಡು ಮಗುವಿನ ತಾಯಿಯಾಗುವುದರಲ್ಲಿ ಇದೆ. ಕೊಡುವ ಹೆಣ್ಣು ಕುಲಕ್ಕೆ ಹೊರಗು, ವರದಕ್ಷಿಣೆ ವರೋಪಚಾರಾದಿಗಳ ಪಿಡುಗು, ಕುಟುಂಬದ ಆರ್ಥಿಕ ಹೊರೆ ಎಂದೆಲ್ಲ ಅವಗಣಿಸಲ್ಪಡುತ್ತಿದ್ದಾಳೆ. ವೈದ್ಯಕೀಯ ಕ್ಷೇತ್ರದಲ್ಲಿ ಆಗ ವೈಜ್ಞಾನಿಕ

ಪ್ರಗತಿಯಿಂದಲೂ ಕೂಡ ಮಹಿಳೆ ದಮನಕ್ಕೊಳಗಾಗುತ್ತಿರುವುದು ಭಯ ಹುಟ್ಟಿಸುವ ಸಂಗತಿಯಾಗಿದೆ. ಭ್ರೂಣ ಪರೀಕ್ಷಾ ಪದ್ಧತಿಯಿಂದ ಸ್ತ್ರೀ ಪುರುಷರ ಪ್ರಮಾಣದಲ್ಲಿ ಆಗುತ್ತಿರುವ ಅಸಮಾನತೆ ಆರೋಗ್ಯ ಪೂರ್ಣ ಲಕ್ಷಣ ಅಲ್ಲ. ಹೆಣ್ಣು ಶಿಶುವಿನ ಹತ್ಯೆ ಮಾತ್ರವಲ್ಲ; ಹೆಣ್ಣು ಭ್ರೂಣಕ್ಕೆ ಬೆಂಕಿ ಇಡುವ ಕಾರ್ಯವು ದಿನೇ ದಿನೇ ಹೆಚ್ಚುತ್ತಿದೆ. ಲತಾಶಹಾ ಎನ್ನುವವರು ಕೈಗೊಂಡ ಅಧ್ಯಯನದಿಂದ ತಿಳಿದು ಬರುವಂತೆ ಪ್ರತಿ ೮೦೦೦ ಗರ್ಭಪಾತಗಳಲ್ಲಿ ೭೯೯೯ ಗರ್ಭಪಾತಗಳು ಹೆಣ್ಣು ಭ್ರೂಣಗಳದ್ದೇ ಆಗಿದೆ ಎಂಬುದು ತಲ್ಲಣಗೊಳಿಸುವ ಸಂಗತಿಯಾಗಿದೆ. ೧೯೭೮-೮೮ರ ಒಂದು ದಶಕದ ಅವಧಿಯಲ್ಲಿ ೭೮,೦೦೦ ಹೆಣ್ಣು ಭ್ರೂಣ ಹತ್ಯೆಯಾಗಿದೆ ಎಂಬುದು ಚಿಂತಾಜನಕ ಸಂಗತಿ. ಲತಾ ಶಹಾ ಅವರು ಗುಜರಾತಿನಲ್ಲಿ ನಡೆಸಿದ ಲಿಂಗ ನಿರ್ಣಯ ಅಧ್ಯಯನದಲ್ಲಿ ಹೆಣ್ಣಿನ ಬಗೆಗೆ ಬೇರು ಬಿಟ್ಟಿರುವ ಪೂರ್ವಾಗ್ರಹ ಅಸಮಾನ ನಿಲುವು ಮತ್ತು ಸ್ತ್ರೀ ಭ್ರೂಣ ನಿರ್ಣಯ ಕೃತ್ಯಗಳಲ್ಲಿ ಸುಶಿಕ್ಷಿತ ಸಭ್ಯ ಪದವೀಧರ ಗೌರವಾನ್ವಿತ ವೈದ್ಯರ ಪಾಲು ಸಾಕಷ್ಟು ಮಟ್ಟಿಗೆ ಇದೆ ಎಂಬುದನ್ನು ನೆನೆದಾಗ ಬಸವಣ್ಣನವರ "ಧರೆ ಹೊತ್ತಿ ಉರಿದರೆ ನಿಲಬಾರದು" ಎಂಬ ಮಾತು ಥಟ್ಟನೆ ನೆನಪಿಗೆ ಬರುತ್ತದೆ. ೧೯೮೦ರಲ್ಲೇ ಸ್ತ್ರೀ ಶಿಶುಹತ್ಯೆ ನಿರ್ಬಂಧನಾ ಕಾಯ್ದೆ ಜಾರಿಗೆ ಬಂದರೂ ಕೂಡಾ; ೧೯೮೨ರಲ್ಲಿ ೩ ಲಕ್ಷ ಹೆಣ್ಣು ಶಿಶುಗಳನ್ನು ಹತ್ಯೆ ಮಾಡಲಾಗಿದೆ. ೧೯೮೩ರಲ್ಲಿ ಈ ಸಂಖ್ಯೆ ೩ ಲಕ್ಷದಿಂದ ೩ ಲಕ್ಷ ೪೫ ಸಾವಿರಕ್ಕೆ ಏರಿರುವುದು ಖೇದ್ಕರ ಸಂಗತಿಯಾಗಿದೆ. ಈ ಎಲ್ಲ ಕಾರಣಗಳಿಂದಾಗಿ ೨೦೦೧ನೇ ಜನಗಣತಿಯ ಪ್ರಕಾರ ಸ್ತ್ರೀಯರ ಪ್ರಮಾಣ ಪುರುಷರಿಗಿಂತ ಗಣನೀಯವಾಗಿ ಇಳಿದಿರುವುದು ಕಂಡು ಬರುತ್ತದೆ. ಕೆಲವು ರಾಜ್ಯಗಳ ಉದಾಹರಣೆಗಳನ್ನು ಈಗ ನೋಡಬಹುದಾಗಿದೆ.

| ರಾಜ್ಯಗಳು | ಪ್ರತಿ ಸಾವಿರ ಪುರುಷರಿಗೆ | ಸ್ತ್ರೀಯರ ಸಂಖ್ಯೆ |
|---|---|---|
| ಒಟ್ಟು ಭಾರತ ದೇಶದಲ್ಲಿ | ೧೦೦೦ | ೯೨೭ |
| ಪಂಜಾಬ | ೧೦೦೦ | ೭೯೩ |
| ಹರಿಯಾಣ | ೧೦೦೦ | ೮೭೫ |
| ಕರ್ನಾಟಕ | ೧೦೦೦ | ೯೭೪ |
| ಗುಲಬರ್ಗಾ | ೧೦೦೦ | ೯೩೫ |

ಈ ಸ್ಥಿತಿಯು ಹೀಗೇ ಮುಂದುವರೆದರೆ ದ್ರೌಪದಿ, ಷಟ್ಪದಿಯರ ಕಾಲ ಬರುವುದು ದೂರವಿಲ್ಲವೆನಿಸುತ್ತದೆ.

ಮದುವೆ ಸ್ವರ್ಗದಲ್ಲಿ ನಿರ್ಧಾರವಾಗುತ್ತದೆ. ಜನುಮಜನುಮಗಳ ಅನುಬಂಧ, ಅದು ಬಿಡಿಸಲಾಗದ ಬ್ರಹ್ಮಗಂಟು ಎಂಬಿತ್ಯಾದಿ ಬಣ್ಣದ ಮಾತುಗಳು ಭಾರತೀಯ ಸಮಾಜದಲ್ಲಿ ಪ್ರಚಲಿತವಾಗಿವೆ. ಆದರೆ ಮದುವೆಯಾದ ಹೆಣ್ಣು ಅತ್ತೆಯ ಮನೆಯಲ್ಲಿ ತೊತ್ತಾಗಿ

ಬಗ್ಗುವುದಕ್ಕೆ, ಕತ್ತೆಯಂತೆ ದುಡಿಯುವುದಕ್ಕೆ ಸಿದ್ಧಗೊಳ್ಳಬೇಕಾಗುತ್ತದೆ. ಮದುವೆಯಾದ ನಂತರ ತಂದೆಯ ಹೆಸರಿಗೆ ಬದಲು ಗಂಡನ ಹೆಸರು, ತವರಿನ ಹೆಸರಿಗೆ ಬದಲು ಪತಿಯ ಮನೆತನದ ಹೆಸರು, ತನ್ನ ಹೆಸರಿಗೆ ಬದಲು ಪಂಚಾಂಗದ ಲೆಕ್ಕಾಚಾರಕ್ಕೆ ಹೊಂದುವ ಹೆಸರುಗಳನ್ನು ಅಂಟಿಸಿಕೊಂಡು; ಒಂದರ್ಥದಲ್ಲಿ 'ಗಂಡು' 'ಗಂಡನ ಮನೆ' ಎಂಬ ಅಂಟು ರೋಗಗಳಿಂದ ಜರ್ಜರಿತಳಾಗಲು ಸಿದ್ಧಗೊಳ್ಳಬೇಕಾಗುತ್ತದೆ. ಮದುವೆಯಾದ ಮೇಲೆ ಅವಳು ಓದು ಬಿಡಬೇಕಾಗಬಹುದು, ಇದ್ದ ನೌಕರಿಗೆ ಹೋಗದಿರಬೇಕಾಗಬಹುದು, ವರದಕ್ಷಿಣೆ ವರೋಪಚಾರಗಳ ಪಿಡುಗಿಗೆ ಈಡಾಗಿ ಸುಟ್ಟು ಬೂದಿಯಾಗಬೇಕಾಗಬಹುದು, ಇಷ್ಟೇ ಅಲ್ಲ; ಒಮ್ಮೊಮ್ಮೆ ದುಶ್ಚಟಗಳ ದಾಸನಾಗಿ ಶವವಾದ ಪತಿಯ ಜೊತೆಗೆ ಚಿತೆಗೂ ಏರಬೇಕಾಗ ಬಹುದು. ಇದು ವಿವಾಹವೆಂಬ ಸಂಸ್ಥೆಯು ಮಹಿಳೆಗೆ ಕೊಡಮಾಡಿದ ಉಡುಗೊರೆ ಎಂದು ಹೇಳಬಹುದು.

ಭಾರತೀಯ ಸಮಾಜದಲ್ಲಿ ಪ್ರತಿ ೧೭ ನಿಮಿಷಕ್ಕೊಂದು ಹೆಣ್ಣಿನ ಬಲಿ ಸದಾವಕಾಲ ನಡೆದೇ ಇರುತ್ತದೆ. ಪ್ರತಿ ವರ್ಷ ೭೦೦೦ ಹೆಣ್ಣುಗಳು ವರಮಹಾಶಯರಿಗೆ ನೀಡುವ ದಕ್ಷಿಣೆಯ ಪಿಡುಗಿಗಾಗಿ ಮಣ್ಣುಗೂಡುತ್ತಿದ್ದಾರೆ. ಕಳೆದ ೪೦ ವರ್ಷಗಳಲ್ಲಿ ೮೦ ಸಾವಿರ ನವ-ವಧುಗಳು ಸ್ಟೋವ್, ಸಿಲೆಂಡರಗ್ಯಾಸ್, ಸೀಲಿಂಗ ಫ್ಯಾನುಗಳಿಗೆ ಅರ್ಪಣೆಗೊಂಡಿದ್ದಾರೆ. ಇದು ನಮ್ಮ ಸುಶಿಕ್ಷಿತ, ಸ್ವತಂತ್ರ್ಯ, ಭವ್ಯ ಪರಂಪರೆಯ ಭಾರತದ ಕಥೆ, ಹೆಣ್ಣಿನ ಕಣ್ಣೀರ ವ್ಯಥೆ.

ಇತ್ತೀಚೆಗಂತೂ ಮಹಿಳೆಯರ ಮೇಲಿನ ದೌರ್ಜನ್ಯಗಳು ವಿಪರೀತ ಹೆಚ್ಚುತ್ತಿವೆ. ಮಹಿಳೆ ಮತ್ತು ಮಕ್ಕಳ ಕಲ್ಯಾಣ ಇಲಾಖೆ ಹೊರತಂದ ಪಟ್ಟಿಯ ಪ್ರಕಾರ:

| ವರ್ಗ | ಮಹಿಳೆಯರ ಮೇಲಿನ ದೌರ್ಜನ್ಯಗಳ ಸಂಖ್ಯೆ |
|---|---|
| ೧೯೮೩ | ೨೩೧೪ |
| ೧೯೮೪ | ೪೫೫೨ |
| ೧೯೮೫ | ೫೧೩೧ |
| ೧೯೮೬ | ೫೨೭೯ |
| ೧೯೮೭ | ೭೦೦೨ |

ಇದೆಲ್ಲವೂ ಮಹಿಳೆಯ ಬಗ್ಗೆ ಇರುವ ಅಪಕಲ್ಪನೆ ಪೂರ್ವಾಗ್ರಹ ಪೀಡಿತ ದೃಷ್ಟಿಕೋನ, ಪುರುಷಪರ ನಿಲುವು ಮತ್ತು ಸ್ವ-ಹಿತಾಸಕ್ತಿಯ ಪಟ್ಟಭದ್ರರ ಹಿಕಮತ್ತುಗಳಿಂದ ನಡೆಯುತ್ತಿದೆ.

ಆಧುನಿಕತೆಯ ಪರಿಣಾಮವಾಗಿ ಶಿಕ್ಷಣದ ಸಾರ್ವತ್ರೀಕರಣ ಮಹಿಳೆಯರ ಛಲಬಿಡದ ಸಾಧನೆಯ ಪರಿಣಾಮಗಳಿಂದಾಗಿ; ಹೆಣ್ಣು ಬದುಕಿನ ಎಲ್ಲ ರಂಗಗಳನ್ನು ಪ್ರವೇಶಿಸುತ್ತಿದ್ದಾಳೆ.

ಅಲ್ಲೆಲ್ಲ ಯಶಸ್ಸು ಸಾಧಿಸಿ ಹೌದು ಹೌದು ಎಂಬಂತೆ ಕಾರ್ಯ ನಿರ್ವಹಿಸುತ್ತಿದ್ದಾಳೆ. ಹೆಣ್ಣಿನ ಕ್ರಿಯಾಶಕ್ತಿ, ನಿರಂತರ ಪರಿಶ್ರಮ ಪ್ರವೃತ್ತಿ, ಗೆಲವು ಸಿಗುವವರೆಗಿನ ಪಟ್ಟು ಬಿಡದ ಸಾಧನೆಗಳನ್ನು ಕಂಡ ಪುರುಷ ಪ್ರಪಂಚ ಅಕ್ಷರಶಃ ಬೆಚ್ಚಿ ಬಿದ್ದಂತೆ ತೋರುತ್ತಿದೆ. ಯಾವುದೇ ಒಂದು ಆಟದಲ್ಲಿ ಸೋಲು ಬರುತ್ತದೆ ಎಂಬುದು ಖಾತ್ರಿಯಾದಾಗ ಪಕ್ಕಗಳು ತಮ್ಮ ಪ್ರತಿಸ್ಪರ್ಧಿಯ ಮೇಲೆ ಹಲ್ಲೆ ನಡೆಸುತ್ತವೆ. ಇಲ್ಲವೆ ತಂಟೆ ತಗಾದೆ ತೆಗೆದು ಆಟವನ್ನೇ ಕೆಡಿಸುತ್ತವೆ. ಈ ರೀತಿಯ ಕ್ರಮ ಅಶಕ್ತ ಹಾಗೂ ಮುಗ್ಧ ಕೈಲಾಗದವರ ಮನೋಸ್ಥಿತಿಯನ್ನು ವ್ಯಕ್ತಪಡಿಸುತ್ತದೆ. ಪ್ರಾಯಶಃ ಗಂಡಸರು ಕೂಡ ಹೆಣ್ಣಿನ ಸಾಧನಾ ಸಾಮರ್ಥ್ಯವನ್ನು ಮೀರಿ ಗೆಲ್ಲುವುದು ಸಾಧ್ಯವಿಲ್ಲವೇನೋ ಎಂಬ ಸ್ಥಿತಿಗೆ ತಲುಪಿದಂತೆ ಕಾಣುತ್ತದೆ. ಅದಕ್ಕಾಗಿ ಹೆಂಗಸರ ವಿರುದ್ಧ ಗಂಡಸರು ಇಲ್ಲದ ಗುಲ್ಲು ಎಬ್ಬಿಸುತ್ತಿದ್ದಾರೆ. ನೇರವಾಗಿ ಗೆಲ್ಲಲಾಗದಾಗ ಹಿಂಸೆ, ಕಿರುಕುಳ, ಶೀಲಭಂಗ, ಚಾರಿತ್ರ್ಯ ವಧೆಯಂಥ ಅಸ್ತ್ರಗಳನ್ನು ಬಳಸುತ್ತಿದ್ದಾರೆ ಎಂದೆನಿಸುತ್ತಿದೆ.

### ಪರಿಹಾರದ ದಾರಿ

ಈಗಾಗಲೇ ಸಾಕಷ್ಟು ಕಾಲ ಸರಿದು ಹೋಗಿದೆ. ಹೆಣ್ಣಿನ ವ್ಯಥೆಯ ಕಥೆಗೆ ಕೊನೆಯಿಲ್ಲದಂತಾಗಿದೆ. ಆದರೆ ನಾವು ಬರೀ ನೋವಿನ ಕಥೆ ಹೇಳಿದರೆ ಸಾಲದು. ಸುಖ ಸಮಾಧಾನದ ಬದುಕಿನತ್ತ ಮುಖ ಮಾಡಿ ಚಲಿಸುವುದು ಮುಖ್ಯ. ಆ ಹಿನ್ನೆಲೆಯಲ್ಲಿ ಸ್ತ್ರೀ ಲೋಕದ ವಿಮುಕ್ತಿಗಾಗಿ ಕೆಲವು ದಿಕ್ಸೂಚಿಗಳನ್ನು ಈಗ ನೀಡಬಹುದಾಗಿದೆ.

ಇಡಿಯಾಗಿ ಬದುಕಿನಲ್ಲಿ ಬದಲಾವಣೆ ಬರಬೇಕೆಂದಾಗ ವ್ಯಕ್ತಿಗಳಿಗೆ ನೀಡುವ ಸಂಸ್ಕಾರ ಮತ್ತು ಶೈಕ್ಷಣಿಕ ನೀತಿಗಳಲ್ಲೂ ಕೂಡ ಬದಲಾವಣೆಗಳುಂಟಾಗಬೇಕು. ಸ್ತ್ರೀ-ಪುರುಷ ಇಬ್ಬರೂ ಪ್ರಕೃತಿಯ ಸಹಜ ಸ್ಥಿತಿಯನ್ನು ಸರಿಯಾಗಿ ಮನಗಾಣಬೇಕು. ಮುಖ್ಯವಾಗಿ ಸಾಮಾಜೀಕರಣ ಮತ್ತು ಶೈಕ್ಷಣೀಕರಣವು ಮಾನವೀಕರಣಗೊಳ್ಳಬೇಕು. ಬರಿ ಅಂಕಿ ಸಂಖ್ಯೆ ಘಟನೆಗಳ ಆಧಾರಿತ ವಿಷಯಗಳನ್ನು ಒಗ್ಗೂಡಿಸುವುದು ಮಾತ್ರವಲ್ಲ; ಆರೋಗ್ಯಪೂರ್ಣ ಜೀವನ ಶೈಲಿಯನ್ನು ರೂಢಿಗೆ ತರಬೇಕು. ವೈಚಾರಿಕತೆ ವೈಜ್ಞಾನಿಕತೆಯನ್ನು ಬೆಳೆಸುವುದರ ಮೂಲಕ ತಾರತಮ್ಯ ಭೇದ ಭಾವಗಳ ಪೂರ್ವಾಗ್ರಹಪರವಾದ ಮೌಢ್ಯಗಳನ್ನು ತೊಡೆದು ಹಾಕಬೇಕು. ಮಹಿಳೆಯರಲ್ಲಿ ಆತ್ಮವಿಶ್ವಾಸವನ್ನು ತುಂಬಬೇಕು. ಅವಳಿಗೆ ಚೈತನ್ಯವನ್ನು ನೀಡಿ, ಕಾರ್ಯ ಸಾಮರ್ಥ್ಯ ಮತ್ತು ಧೈರ್ಯವನ್ನು ಹೆಚ್ಚಿಸುವಂತಾಗಬೇಕು. ಜೀವಪರ ಅದರಲ್ಲೂ ಮಾನವೀಯ ಮಿಡಿತ, ತುಡಿತ ವ್ಯಾಪಕವಾಗಿ ಹರಡಿಕೊಳ್ಳಬೇಕು. ಹೆಣ್ಣು ಮಕ್ಕಳಿಗಾಗಿ ಸಾಮಾಜಿಕೋ-ಆರ್ಥಿಕ ಕಾರ್ಯ ಯೋಜನೆಗಳನ್ನು ಹಾಕಿಕೊಂಡು; ನಿರ್ದಿಷ್ಟ ಕಾಲಮಿತಿಯೊಳಗೆ ಅವುಗಳನ್ನು ಯುದ್ಧೋಪಾದಿಯಲ್ಲಿ ಪೂರೈಸಬೇಕು. ಮಹಿಳೆಯರಿಗೆ ಉದ್ಯೋಗದ ಅವಕಾಶಗಳು ಸಾರ್ವತ್ರೀಕರಣಗೊಳ್ಳಬೇಕು. ವಿಶೇಷವಾಗಿ ಜನಸಂಖ್ಯೆಯು ನಿಯಂತ್ರಣಗೊಳ್ಳಬೇಕು. ಸ್ತ್ರೀ ಭ್ರೂಣಹತ್ಯೆ ಸಂಪೂರ್ಣ ನಿಲ್ಲಬೇಕು. ಮಹಿಳೆಯರ ಉನ್ನತ ಶಿಕ್ಷಣಕ್ಕೆ ವ್ಯಾಪಕ ಬೆಂಬಲ ದಕ್ಕುವಂತಾಗಬೇಕು. ಬಾಲಕಿಯರಿಗೆ ಕೃಷಿ ಕೆಲಸ ಮತ್ತು ಮನೆಗೆಲಸಗಳಲ್ಲಿ ತೊಡಗಿಸುವುದನ್ನು ತಡೆಗಟ್ಟಬೇಕು. ಶಾಲಾ ಕಾಲೇಜುಗಳಿಗೆ ಹುಡುಗಿಯರ ಪ್ರವೇಶ

ಅಧಿಕಗೊಳ್ಳಬೇಕು ಮತ್ತು ಅಲ್ಲಿ ಅವರು ತರಗತಿಯಿಂದ ತರಗತಿಗೆ ಕಲಿತು ಮುಂದೇ ಹೋಗುವಂತಾಗಬೇಕು. ಈಗ ನೀಡುತ್ತಿರುವ ತಥಾಕಥಿತ ಓಬಿರಾಯನ ಕಾಲದ ಶಿಕ್ಷಣದ ರೀತಿಯನ್ನು ಸಂಪೂರ್ಣ ಬದಲಾವಣೆ ಮಾಡಬೇಕು. ವ್ಯಕ್ತಿಯ ದೈಹಿಕ, ಜೈವಿಕ, ಬೌದ್ಧಿಕ, ಅನುಭಾವಿಕ ಆಯಾಮಗಳ ವಿಕಸನಕ್ಕೆ ಕಾರಣವಾಗುವ ರೀತಿಯಲ್ಲಿ; ಪಠ್ಯ, ಬೋಧನೆ, ಕಲಿಕಾ ಪ್ರಕ್ರಿಯೆಗಳನ್ನು ಸಜ್ಜುಗೊಳಿಸಬೇಕು. ಕಟ್ಟು ಕಥೆಗಳನ್ನು ಹೆಣೆದು ಅಪಕಲ್ಪನೆಗಳನ್ನು ತುಂಬುವ ಅನಾರೋಗ್ಯಕರ ಶಿಕ್ಷಣ ಕ್ರಮವು ಸಂಪೂರ್ಣ ನಿಂತು ಹೋಗಬೇಕು. ಆರಂಭದಲ್ಲಿ ಹೇಳಿದ ಹಾಗೆ ಶಿಕ್ಷಣವು ನಿಜವಾದ ಅರ್ಥದಲ್ಲಿ ಪೋಷಕ ಪಾತ್ರವನ್ನು ಹೊಂದಬೇಕು. ಅಂತಃಕರಣ ವಾತ್ಸಲ್ಯ ಗುಣಗಳನ್ನು ತುಂಬಿಕೊಂಡು ಅದು ಮಾನವ ಮುಖಿಯಾಗಬೇಕು.

ಮೇಲ್ಕಾಣಿಸಿದ ರೀತಿಯ ಬದಲಾವಣೆಗಳನ್ನು ತರಲು; ಮೊದಲು ಶಿಕ್ಷಕರು ಮನಸ್ಸು ಮಾಡಬೇಕು. ಸರಕಾರ ಅದಕ್ಕೆ ಸಂಪೂರ್ಣ ಬೆಂಬಲ ಒದಗಿಸಬೇಕು. ಸಾರ್ವಜನಿಕ ಸೇವಾ ಸಂಸ್ಥೆಗಳು ಮಹಿಳಾ ಪರ ಸಂಘಟನೆಗಳು ಹಾಗೂ ದೇಶದ ಸುಶಿಕ್ಷಿತ ಮಹಿಳೆಯರೆಲ್ಲರೂ ಇದನ್ನೊಂದು ವ್ರತದ ಹಾಗೆ ಪರಿಭಾವಿಸಿಕೊಂಡು ಮುನ್ನಡೆಯಬೇಕು. ಅಂದಾಗ ಮಾತ್ರ ಹೆಣ್ಣಿನ ಬದುಕಿನ ಕಣ್ಣೀರು ಕಳೆದು, ಆನಂದ ಭಾಷ್ಪದ ಮುತ್ತುಗಳು ನೆಲಕ್ಕೆ ತಾಗುವಂತಾಗ ಬಹುದು.

# ಕರ್ನಾಟಕದಲ್ಲಿ ಮಹಿಳಾ ಶಿಕ್ಷಣದ ಪ್ರಗತಿ : ಒಂದು ಅವಲೋಕನ

ಗೋವಿಂದರಾಜು

ಪೀಠಿಕೆ

ಶಿಕ್ಷಣ ರಾಷ್ಟ್ರದ ಸರ್ವತೋಮುಖ ಅಭಿವೃದ್ಧಿಗೆ ಆಧಾರ ಸ್ತಂಭವಾಗಿದೆ. ಪ್ರತಿಯೊಂದು ರಾಷ್ಟ್ರದ ಮಾನವ ಸಂಪನ್ಮೂಲದಲ್ಲಿ ಸ್ತ್ರೀಯರ ಪಾತ್ರವು ಅತ್ಯಮೂಲ್ಯವಾದುದು. ಪ್ರಾಚೀನ ಕಾಲದಿಂದ ಮಹಿಳೆ ಶೈಕ್ಷಣಿಕ, ರಾಜಕೀಯ, ಸಾಮಾಜಿಕ, ಧಾರ್ಮಿಕವಾಗಿ ಶೋಷಣೆ ಗೊಳಗಾಗಿದ್ದು ಅಬಲೆಯಂತಿರುವುದು ಕಂಡುಬರುತ್ತದೆ. ೨೧ನೇ ಶತಮಾನದ ಆರಂಭದ ಸಂಧಿಕಾಲದಲ್ಲಿ ಇಂದು ಪುರುಷನಿಗೆ ಸಮನಾಗಿ ಪ್ರಗತಿಯತ್ತ ಸಾಗಿರುವುದಕ್ಕೆ ಅವರಲ್ಲಿರುವ ಅಜ್ಞಾನದ ಕತ್ತಲು ಹೋಗಲಾಡಿಸಿ ಅವರಲ್ಲಿ ಸುಜ್ಞಾನದ ಬೆಳಕು ಚೆಲ್ಲಿರುವ ಶಿಕ್ಷಣವೇ ಕಾರಣ. ಕರ್ನಾಟಕದ ಪ್ರಸ್ತುತ ಮಹಿಳಾ ಶಿಕ್ಷಣದಲ್ಲಿ ಸಾಕಷ್ಟು ಬದಲಾವಣೆಗಳು ಮತ್ತು ಗೊಂದಲಗಳನ್ನು ಕಾಣಬಹುದಾಗಿದೆ. ಇಂದು ಮಹಿಳಾ ಶಿಕ್ಷಣವು ವಿಶಾಲವಾದ ಕಾರ್ಯ ವ್ಯಾಪ್ತಿಯನ್ನು ಹೊಂದಿ ಮಹಿಳೆಯರನ್ನು, ವಿದ್ಯಾವಂತರನ್ನಾಗಿ, ಸಶಕ್ತಿವಂತರನ್ನಾಗಿ, ಉತ್ತಮ ನಾಗರೀಕರನ್ನಾಗಿ ಮಾಡುವಲ್ಲಿ ಅವರ ಮಾನಸಿಕ, ಬೌದ್ಧಿಕ ಮಟ್ಟಕ್ಕೆ ಅನುಗುಣವಾದ ವಿಶೇಷವಾದ ಕಾರ್ಯಕ್ರಮಗಳಡಿಯಲ್ಲಿ ಅವರನ್ನು ಪುರುಷರಿಗೆ ಸರಿಸಮಾನವಾಗಿ ಮತ್ತು ಸಮಾಜದ ಅಭಿವೃದ್ಧಿಗೆ ಪೂರಕವಾದ ಸತ್ಪ್ರಜೆಗಳನ್ನಾಗಿ ಮಾಡುವ ಪ್ರಮುಖ ಉದ್ದೇಶವನ್ನು ಹೊಂದಿದೆ. ಕರ್ನಾಟಕದಲ್ಲಿ ೧೮ನೇ ಶತಮಾನದಿಂದೀಚೆಗೆ ಸ್ತ್ರೀಯರಲ್ಲಿ ಶೋಷಣೆಯಿಂದ ವಿಮುಕ್ತಿಗೊಳ್ಳುವ ಅಲೆಯೆದ್ದು ಶಿಕ್ಷಣ ಪಡೆಯುವಂತಾಯಿತು. ನಂತರ ಮಹಿಳಾ ಶಿಕ್ಷಣ ವ್ಯವಸ್ಥೆ ಮತ್ತು ಅದರ ಸಾಧಕ-ಬಾಧಕಗಳನ್ನು ಕುರಿತು ವಿವಿಧ ಆಯೋಗಗಳು, ವಿವಿಧ ಮಂಡಲಿಗಳು ಹಾಗೂ ಸಮ್ಮೇಳನಗಳು ಚರ್ಚಿಸಿ ಅನೇಕ ಶಿಫಾರಸ್ಸುಗಳನ್ನು ನೀಡಿದ್ದರೂ ಸಹ ಅದರ ಸಫಲತೆ ಕಡಿಮೆ ಎಂದೇ ಹೇಳಬೇಕಾಗುತ್ತದೆ. ಈ ನಿಟ್ಟಿನಲ್ಲಿ ಮಹಿಳಾ ಶಿಕ್ಷಣ ವ್ಯವಸ್ಥೆಯನ್ನು ಉತ್ತಮಪಡಿಸಿ ಯಶಸ್ವಿಗೊಳಿಸಬೇಕಾದರೆ ಅದರ ದೀರ್ಘವಾದ ವಿಮರ್ಶಾತ್ಮಕ ವಿಶ್ಲೇಷಣೆ, ಚಿಂತನೆ, ಸಲಹೆಗಳು ಅವಶ್ಯಕವಾಗಿವೆ. ಈ ಲೇಖನದಲ್ಲಿ ಕರ್ನಾಟಕದಲ್ಲಿನ ಮಹಿಳಾ ಶಿಕ್ಷಣದ ಪ್ರಗತಿಯ ಸೂಕ್ಷ್ಮಾವಲೋಕನ ಮಾಡಿ ಅದರ ಪ್ರಗತಿಗೆ ಶಿಫಾರಸ್ಸುಗಳನ್ನು ಸಲಹೆ ಮಾಡುವ ಪ್ರಯತ್ನ ಮಾಡಲಾಗಿದೆ.

## ಕರ್ನಾಟಕದಲ್ಲಿ ಮಹಿಳಾ ಶಿಕ್ಷಣದ ಬೆಳವಣಿಗೆ

### ಪ್ರಾಚೀನ ಕಾಲ

ಕರ್ನಾಟಕದ ಪ್ರಾಚೀನ ಕಾಲದಲ್ಲಿ ಸ್ತ್ರೀ ಶಿಕ್ಷಣ ಪದ್ಧತಿಯ ಬಗ್ಗೆ ಶಾಸನಗಳಲ್ಲಿ ಉಲ್ಲೇಖಗಳಿರುವುದಿಲ್ಲ. ಆದರೆ ಹಲವಾರು ಸುಶಿಕ್ಷಿತ ಸ್ತ್ರೀಯರ ಉದಾಹರಣೆಗಳಿವೆ. ಅದರಲ್ಲಿ ರಾಜಮನೆತನದ ಅನೇಕ ಸುಕ್ಷಿತ ಸ್ತ್ರೀಯರ ಉದಾಹರಣೆಗಳಿವೆಯೇ ಹೊರತು ಸಾಮಾನ್ಯವರ್ಗದ ಸ್ತ್ರೀಯರ ಉದಾಹರಣೆಗಳು ದೊರಕವುದೇ ಕಷ್ಟ. ಕನ್ನಡದ ಆದಿ ಕವಿ ಪಂಪನ ಆದಿ ಪುರಾಣದಲ್ಲಿ ಆದಿನಾಥನು ತನ್ನ ಬ್ರಾಹ್ಮೀ, ಸೌಂದರಿಯೆಂಬ ಹೆಣ್ಣುಮಕ್ಕಳಿಗೆ ವಿದ್ಯೆ ಕಲಿಸಿದ ಬಗ್ಗೆ ಕಥೆಯಿದೆ. ಈ ಗ್ರಂಥದಲ್ಲಿ ಪಂಪ ಸ್ತ್ರೀಯರ ಶಿಕ್ಷಣದ ಅವಶ್ಯಕತೆ ಕುರಿತು "ಸ್ತ್ರೀಯರಿಗೆ ಶೀಲ ಮತ್ತು ವಿನಯ ಗುಣದೊಡನೆ ವಿದ್ಯೆಯು ಪರಮಾವಶ್ಯಕ. ಇದರಿಂದಲೇ ಅವರು ಜಗತ್ಪಾವನೆಯರಾಗುತ್ತಾರೆ" ಎಂದು ಹೇಳಿರುವುದರಿಂದ ಆದಿಕಾಲದಲ್ಲಿ ಸ್ತ್ರೀ ಶಿಕ್ಷಣದ ಬಗ್ಗೆ ಗೊತ್ತಿರಲಿಲ್ಲವೆಂದು ಹೇಳಲಾಗುವುದಿಲ್ಲ. ಒಟ್ಟಾರೆ ಪ್ರಾಚೀನ ಕಾಲದಲ್ಲಿ ರಾಜಮನೆತನದ ಸ್ತ್ರೀಯರು ನೃತ್ಯ, ಲಲಿತ ಕಲೆಗಳಲ್ಲಿ ಕಲಿತಿರುವುದು ಕಂಡುಬರುತ್ತದೆ. ಸಾಮಾನ್ಯ ವರ್ಗದ ಮಹಿಳೆ ಸುಶಿಕ್ಷಿತ ಸ್ತ್ರೀಯಾಗುವುದಕ್ಕೂ ಅವಕಾಶವಿರಲಿಲ್ಲವೆಂಬುದು ವ್ಯಕ್ತವಾಗುತ್ತದೆ. ೩ನೇ ಶತಮಾನದಲ್ಲಿ ಬನವಾಸಿ ಶಾಸನದ ಪ್ರಕಾರ ಬೌದ್ಧವಿದ್ಯಾಸಂಸ್ಥೆಗಳಿದ್ದವೆಂದು ವಿಹಾರಗಳಲ್ಲಿ ಶಿಕ್ಷಣ ನಡೆಯುತ್ತಿತ್ತು. ರಾಜರಲ್ಲಿ ಶೇ. ೧ರಷ್ಟು ರಾಜಕುಮಾರಿಯರು ವಿದ್ಯಾಭ್ಯಾಸ ಪಡೆಯುತ್ತಿದ್ದರೆನ್ನಬಹುದು. ಇನ್ನೂ ೧೨ ಶತಮಾನದಲ್ಲಿ ಶಿಕ್ಷಣಕ್ಕೆ ಪ್ರೋತ್ಸಾಹ ಸಿಕ್ಕಿ ಅಕ್ಕಮಹಾದೇವಿ, ಸತ್ಯಕ್ಕ ಮುಂತಾದ ಶಿವಶರಣೆಯರು ಇದ್ದರು. ಈ ಶತಮಾನದಲ್ಲಿ ಸಾಮಾನ್ಯ ವರ್ಗದ ಮಹಿಳೆ ಮಹಿಳೆಯರ ಶಿಕ್ಷಣದ ಚಿಲುಮೆಯೊಡೆದಿರುವುದು ಕಂಡು ಬರುತ್ತದೆ. ನಂತರದ ಶತಮಾನಗಳಲ್ಲಿಯೂ ಬಹುತೇಕವಾಗಿ ಮಹಿಳೆಯ ಶಿಕ್ಷಣ ಮನೆಕೆಲಸ ಮತ್ತು ಕಸುಬುಗಳ ತರಬೇತಿಗೆ ಸೀಮಿತವಾಗಿತ್ತು.

### ೧೮ನೇ ಶತಮಾನದ ನಂತರ ಸ್ತ್ರೀ ಶಿಕ್ಷಣ

ರಾಜರು ಆಳ್ವಿಕೆಯಲ್ಲಿದ್ದ ಮೈಸೂರು ಸಂಸ್ಥಾನದಲ್ಲಿ ೧೮ನೇ ಶತಮಾನದಿಂದೀಚೆಗೆ ಮಹಿಳಾ ಶಿಕ್ಷಣ ಆರಂಭವಾಯಿತು. ಕ್ರಿ.ಶ. ೧೮೩೩ರಲ್ಲಿ ಲಂಡನ್ ಮಿಷನ್ ಸಂಸ್ಥೆ ಬಳ್ಳಾರಿಯಲ್ಲಿ ಪ್ರಥಮವಾಗಿ ಒಂದು ಹೆಣ್ಣುಮಕ್ಕಳ ಶಾಲೆಯನ್ನು ಆರಂಭಿಸಿತು. ೧೮೮೨-೮೩ರಲ್ಲಿ ರೋಮನ್ ಕ್ಯಾಥೊಲಿಕ್ ಕಾನ್ವೆಂಟ್ ಹೆಣ್ಣುಮಕ್ಕಳ ಶಾಲೆ ಪ್ರೌಢಶಾಲೆಯಾಯಿತು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅಂದು ಸ್ತ್ರೀ ಶಿಕ್ಷಣ ಸಾಕಷ್ಟು ಜನಪ್ರಿಯಗೊಂಡಿತ್ತು. ೧೮೮೧-೮೨ರಲ್ಲಿಯೇ ೭ ಹೆಣ್ಣುಮಕ್ಕಳ ಶಾಲೆಗಳಿದ್ದು ಇವುಗಳಲ್ಲಿ ೪೬೦ ಹೆಣ್ಣುಮಕ್ಕಳು ಮತ್ತು ಪ್ರಥಮ ದರ್ಜೆ ಕಾಲೇಜಿನಲ್ಲಿ ೯೨ ವಿದ್ಯಾರ್ಥಿನಿಯರು ಓದುತ್ತಿದ್ದರು. ಈ ಜಿಲ್ಲೆಯಲ್ಲಿ ಸೇಂಟ್ ಆಗ್ನೆಸ್ ಕಾಲೇಜನ್ನು ಕಾರ್ಮೆಲೈಟ್ ಸನ್ಯಾಸಿನಿಯರು ಆರಂಭಿಸಿದ್ದರು. ಇದೊಂದೇ ಈ ಜಿಲ್ಲೆಯಲ್ಲಿ ಮಹಿಳೆಯರಿಗಾಗಿದ್ದ ಕಾಲೇಜು ಆಗಿತ್ತು. ಕ್ರಿ.ಶ. ೧೮೪೦ರಲ್ಲಿ ಲಂಡನ್ ಮಿಷನ್‌ರವರು ಬೆಂಗಳೂರಿನಲ್ಲಿ ಕನ್ನಡ ಶಾಲೆಯನ್ನು ಪ್ರಾರಂಭಿಸಿದ ನಂತರವೇ ಮಹಿಳಾ

ಶಿಕ್ಷಣ ಪ್ರಥಮವಾಗಿ ಕಾಣಿಸಿಕೊಂಡಿದ್ದು; ಆಮೇಲೆ ಹಿಂದೂ ಹೆಣ್ಣುಮಕ್ಕಳ ಶಾಲೆ ಬೆಂಗಳೂರಿನಲ್ಲಿ ಪ್ರಾರಂಭಗೊಂಡಿತು. ಕ್ರಿ.ಶ. ೧೮೬೭ರಲ್ಲಿ ೩ ಸರ್ಕಾರಿ ಶಾಲೆಗಳಲ್ಲದೇ ಕೆಲವು ಅನುದಾನ ಪಡೆಯುತ್ತಿದ್ದ ಖಾಸಗಿ ಹೆಣ್ಣುಮಕ್ಕಳ ಶಾಲೆಗಳಿದ್ದವು. ಕೊಡಗಿನಲ್ಲಿ ಬಹಳ ಕಾಲದವರೆಗೆ ಹೆಣ್ಣುಮಕ್ಕಳಿಗೆ ಪ್ರತ್ಯೇಕ ಶಾಲೆಗಳಿರಲಿಲ್ಲ. ೧೮೬೯ರಲ್ಲಿ ಮಡಿಕೇರಿಯ ಸೆಂಟ್ರಲ್ ಸ್ಕೂಲ್‌ನಲ್ಲಿ ೧೨ ಮಕ್ಕಳು ಇದ್ದರು. ಹೆಣ್ಣುಮಕ್ಕಳಿಗೆ ಪ್ರತ್ಯೇಕ ಶಾಲೆಗಳನ್ನು ತೆರೆಯುವ ಪ್ರಯತ್ನಗಳೆಲ್ಲಾ ವಿಫಲಗೊಂಡವು. ಆದರೂ ಮಿಷನರಿಗಳು ಶಾಲೆಗಳನ್ನು ತೆರೆದರು. ಅವುಗಳಲ್ಲಿ ಕೆಲವು ಶಾಖೆಗಳು ಮಕ್ಕಳು ಬರದಿದ್ದರಿಂದ ಮುಚ್ಚಿದವು. ೧೮೮೪-೮೫ರಲ್ಲಿ ಬಾಲಕರ ಶಾಲೆಯಲ್ಲಿ ೫೯ ಬಾಲಕಿಯರು ಓದುತ್ತಿದ್ದು ಅವರ ಹಾಜರಾತಿ ಉತ್ತಮವಾಗಿತ್ತು. ಕ್ರಿ.ಶ. ೧೮೭೯-೮೦ರಷ್ಟೊತ್ತಿಗೆ ಇವುಗಳ ಸಂಖ್ಯೆ ೧೨ಕ್ಕೆ ಏರಿತು. ಈ ಸಂದರ್ಭದಲ್ಲಿ ಮತ್ತೆ ಮೈಸೂರು ಸಂಸ್ಥಾನದ ರಾಜ್ಯದ ಆಡಳಿತ ರಾಜಮನೆತನದ ವಶಕ್ಕೆ ಬಂದ ನಂತರ ಸ್ತ್ರೀಯರ ಶಿಕ್ಷಣವು ಉತ್ತಮಗೊಂಡಿತು.

ಕ್ರಿ.ಶ. ೧೮೮೧ರಲ್ಲಿ ಮಹಾರಾಣಿ ಹೆಣ್ಣುಮಕ್ಕಳ ಶಾಲೆಯು ಮೈಸೂರಿನಲ್ಲಿ ಸ್ಥಾಪಿತವಾಗಿ ಅದು ಮುಂದೆ ೧೮೯೧ರಲ್ಲಿ ಸರ್ಕಾರಿ ಶಾಲೆಯಾಯಿತು. ೧೯೦೩ರಲ್ಲಿ ಬಳ್ಳಾರಿ ನಗರ ಸಭೆ ನಡೆಸುತ್ತಿದ್ದ ಪ್ರಾಥಮಿಕ ಶಾಲೆ ಮಿಡ್ಲ್‌ಸ್ಕೂಲ್ ಆಗಿ ನಂತರ ಪ್ರೌಢಶಾಲೆಯಾಗಿ ಮಾರ್ಪಟ್ಟಿತು. ಮುಸ್ಲಿಂ ಮಹಿಳೆಯರಿಗಾಗಿ ಬಳ್ಳಾರಿಯಲ್ಲಿ ಒಂದು ಮಿಡ್ಲ್‌ಸ್ಕೂಲ್ ಇತ್ತು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೧೯೧೨ರಲ್ಲಿ ಮಂಗಳೂರಿನಲ್ಲಿ ಒಂದು ಹೆಣ್ಣುಮಕ್ಕಳ ಪ್ರಾಥಮಿಕ ಶಾಲೆಯನ್ನು ಆರಂಭಿಸಲಾಯಿತು. ಅದು ಮುಂದೇ ಸರ್ಕಾರಿ ಹೆಣ್ಣುಮಕ್ಕಳ ಸೆಕಂಡರಿ ಶಾಲೆಯಾಗಿ ಮಾರ್ಪಾಡಾಯಿತು. ಆಗಿನ ಕಾಲದಲ್ಲಿದ್ದ ಪ್ರೌಢ ಶಾಲೆಗಳೆಂದರೆ ಮಂಗಳೂರಿನ ಸೇಂಟ್ ಆಗ್ನೆಸ್ ಪ್ರೌಢಶಾಲೆ ಮತ್ತು ಉಡುಪಿಯ ಸಿಸಿಲಿಯ ಹೆಣ್ಣುಮಕ್ಕಳ ಪ್ರೌಢ ಶಾಲೆ. ೧೯೦೪ರಲ್ಲಿ ಭಾರತ ಸರ್ಕಾರದ ಸ್ತ್ರೀ ಶಿಕ್ಷಣ ಪ್ರೋತ್ಸಾಹ ಯೋಜನೆಯಿಂದ ೧೯೦೮-೧೦ರ ಅವಧಿಗೆ ವಿರಾಜಪೇಟೆ, ಅಮ್ಮತ್ತಿ, ಎಳಕೇರಿ, ಕುಂದ ಮತ್ತು ಪಾರಾಣೆಗಳಲ್ಲಿ ಬಾಲಕಿಯರಿಗೆ ಪ್ರಾಥಮಿಕ ಶಾಲೆಗಳನ್ನು ತೆರೆದರು. ೧೯೦೯ರಲ್ಲಿ ಮಡಿಕೇರಿಯಲ್ಲಿ ಅನುದಾನ ಪಡೆಯುವ ಒಂದು ಶಾಲೆ ಆರಂಭವಾಯಿತು. ಅದೇ ವರ್ಷ ಅನೇಕ ಕಡೆಗಳಲ್ಲಿ ಹೆಣ್ಣುಮಕ್ಕಳ ಶಾಲೆಗಳು ಪ್ರಾರಂಭವಾದವು. ಕ್ರಿ.ಶ. ೧೯೧೮ರ ವೇಳೆಗೆ ಕರ್ನಾಟಕ ರಾಜ್ಯದಲ್ಲಿ ಸುಮಾರು ೨೪,೦೦೦ ಹೆಣ್ಣುಮಕ್ಕಳು ಶಾಲೆಗಳಲ್ಲಿ ಅಭ್ಯಾಸ ಮಾಡುತ್ತಿದ್ದರು. ಕ್ರಿ.ಶ. ೧೯೨೨ರಲ್ಲಿ ಮಿಡ್ಲ್‌ಸ್ಕೂಲು ಮತ್ತು ಹೈಸ್ಕೂಲುಗಳ ಪಠ್ಯವಸ್ತುವಿನಲ್ಲಿ ಸುಧಾರಣೆ ಮಾಡಿ ಗೃಹವಿಜ್ಞಾನ, ಚಿತ್ರಕಲೆ, ಬ್ರಷ್ ಕೆಲಸ, ಸಂಗೀತ, ಹೊಲಿಗೆ, ಕಸೂತಿ, ರೋಗಿಗಳ ಶುಶ್ರೂಷೆ ಮುಂತಾದ ಹೆಣ್ಣುಮಕ್ಕಳಿಗೆ ಒಲವಿರುವ ಈ ವಿಷಯಗಳನ್ನು ಪಠ್ಯವಿಷಯಗಳಲ್ಲಿ ಅಳಡಿಸಲಾಯಿತು. ಮುಂದೇ ೧೯೩೭ರಲ್ಲಿ ಎಸ್.ಎಸ್.ಎಲ್.ಸಿ. ಶಿಕ್ಷಣ ಯೋಜನೆಯಲ್ಲಿ ಸುಧಾರಣೆಯಾಗಿ ಪಾಕಶಾಸ್ತ್ರ, ಬಟ್ಟೆಯನ್ನು ಒಗೆಯುವ ಕಲೆ, ಗೃಹಣಿಯಾದವಳು ಮನೆಯನ್ನು ಉತ್ತಮವಾಗಿ ನೋಡಿಕೊಳ್ಳುವ ಕಲೆ, ಕಸೂತಿ ಕೆಲಸ, ಸಂಗೀತ ಮತ್ತು ಚಿತ್ರಕಲೆಯನ್ನು ಗೃಹಕಲೆಯ

ವಿಭಾಗದ ವಿಷಯಗಳಾಗಿ ಸೇರಿಸಿ ಇವೆಲ್ಲಾ ವಿಷಯಗಳನ್ನು ಐಚ್ಛಿಕ ವಿಷಯಗಳಾಗಿ ಮಾಡಲಾಯಿತು. ಪದವೀಧರ ಉಪಾಧ್ಯಾಯನಿಯರನ್ನು ಹೊಸ ದಿಲ್ಲಿಯ ಲೇಡಿ ಇರ್ವಿನ್ ಕಾಲೇಜಿಗೆ ತರಬೇತಿಗಾಗಿ ಕಳಿಸುವ ವ್ಯವಸ್ಥೆಯನ್ನು ಮಾಡಲಾಯಿತು. ಸರ್ಕಾರ ಆರ್ಥಿಕ ಮುಗ್ಗಟ್ಟಿನಿಂದಾಗಿ ಕೊಡಗಿನಲ್ಲಿ ೧೯೩೯ರಲ್ಲಿ ೯ ಸರ್ಕಾರಿ ಶಾಲೆಗಳನ್ನು ಮುಚ್ಚಿಸಿತು. ೧೯೩೧-೩೨ರಲ್ಲಿ ಜಿಲ್ಲೆಯಲ್ಲಿ ೭ ಹೆಣ್ಣುಮಕ್ಕಳ ಪ್ರೌಢಶಾಲೆಗಳಿದ್ದು; ಅವುಗಳಲ್ಲಿ ೨,೪೭೪ ಮತ್ತು ೧೩೪ ಪ್ರಾಥಮಿಕ ಶಾಲೆಗಳಿದ್ದು ೧೦,೫೩೯ ಹಾಗೂ ಬಾಲಕರ ಶಾಲೆಯಲ್ಲಿ ೧೯,೦೭೮ ಹೆಣ್ಣುಮಕ್ಕಳು ಓದುತ್ತಿದ್ದರು. ೧೯೩೦ರಲ್ಲಿ ಬೀದರವಲ್ಲಿದ್ದ ಹೆಣ್ಣುಮಕ್ಕಳ ಶಾಲೆಯು ಮಿಡ್ಲ್‌ಸ್ಕೂಲ್ ಆಯಿತು. ಕಲ್ಬುರ್ಗಿಯಲ್ಲಿ ಸ್ತ್ರೀಯರಿಗೆ ಒಂದು ಶಿಕ್ಷಕಿಯರ ತರಬೇತಿ ಶಾಲೆಯಿತ್ತು. ಈ ಪ್ರದೇಶದ ಹೆಣ್ಣುಮಕ್ಕಳ ಶಿಕ್ಷಣವನ್ನು ಮುಖ್ಯವಾಗಿ ಮಿಷನರಿ ಸಂಸ್ಥೆಗಳಿಂದ ಅಭಿವೃದ್ಧಿ ಹೊಂದಿತು. ೧೯೪೬-೪೭ರಲ್ಲಿ ಹೆಣ್ಣುಮಕ್ಕಳ ಪ್ರೌಢಶಾಲೆಗಳ ಸಂಖ್ಯೆ ೧೬ಕ್ಕೆ ಏರಿತು. ಅವುಗಳಲ್ಲಿ ೪,೭೦೩ ವಿದ್ಯಾರ್ಥಿನಿಯರಿದ್ದರು. ೧೮೮೭ರಲ್ಲಿ ಸೇಂಟ್‌ಮೇರಿ ಕಾನ್ವೆಂಟ್ ಆರಂಭವಾಗಿ ಅದು ೧೯೫೭ರಲ್ಲಿ ಇದು ಬಾಲಕ-ಬಾಲಕಿಯರು ಇಬ್ಬರಿಗೂ ಪ್ರವೇಶವಿದ್ದ ಪ್ರೌಢ ಶಾಲೆಯಾಯಿತು.

ಕ್ರಿ.ಶ. ೧೯೪೦ರವರೆಗೆ ಬಾಲಕ-ಬಾಲಕಿಯರಿಗೆ ಮಿಡ್ಲ್‌ಸ್ಕೂಲ್ ಮತ್ತು ಪಬ್ಲಿಕ್ ಪರೀಕ್ಷೆ ಒಂದೇ ರೀತಿಯಿತ್ತು. ಆಮೇಲೆ ಬಾಲಕಿಯರಿಗೆ ತಮ್ಮದೆಯಾದ ಪರೀಕ್ಷೆ ನಡೆಸಲು ಶಾಲೆಗಳಿಗೆ ಅನುಮತಿ ಕೊಡಲಾಯಿತು. ಮಿಡ್ಲ್‌ಸ್ಕೂಲ್ ಹಂತದಲ್ಲಿ ಹೆಣ್ಣುಮಕ್ಕಳಿಗೆ ಪಬ್ಲಿಕ್ ಪರೀಕ್ಷೆ ಅಥವಾ ಶಾಲಾ ಪರೀಕ್ಷೆಗಳಲ್ಲಿ ಒಂದನ್ನು ಆರಿಸಿಕೊಳ್ಳುವ ಸ್ವಾತಂತ್ರ್ಯವನ್ನು ಕೊಡಲಾಯಿತು. ೧೯೪೮-೪೯ರಲ್ಲಿ ಒಟ್ಟು ೧,೯೦,೮೪೧ ಹೆಣ್ಣುಮಕ್ಕಳು ಶಾಲೆಗಳಲ್ಲಿ ಓದುತ್ತಿದ್ದರು. ೧೯೫೧-೫೨ರಷ್ಟೊತ್ತಿಗೆ ೨,೭೧,೧೭೨ ಹೆಣ್ಣುಮಕ್ಕಳು ಶಾಲೆಗಳಲ್ಲಿ ಅಧ್ಯಯನ ಮಾಡುತ್ತಿದ್ದರು. ಈ ಸಂದರ್ಭದಲ್ಲಿ ಒಂದೇ ತರಗತಿಯಲ್ಲಿ ಕೊಳೆಯುತ್ತಿದ್ದ ಮತ್ತು ಮಧ್ಯದಲ್ಲಿ ಶಾಲೆಯನ್ನು ಬಿಡುತ್ತಿದ್ದ ಗಂಡು ಮಕ್ಕಳ ಸಂಖ್ಯೆಗಿಂತ ಹೆಣ್ಣುಮಕ್ಕಳ ಸಂಖ್ಯೆಯು ಜಾಸ್ತಿಯಾಗಿತ್ತು. ೧೯೫೧-೫೨ರ ಅವಧಿಯಲ್ಲಿ ಹೆಣ್ಣುಮಕ್ಕಳಿಗಾಗಿ ಪ್ರತ್ಯೇಕವಾಗಿ ಮೂವತ್ತಾರು ಪ್ರೌಢಶಾಲೆಗಳಿದ್ದವು. ಅವುಗಳಲ್ಲಿ ೧೨,೧೯೫ ಹೆಣ್ಣುಮಕ್ಕಳು ಮತ್ತು ಸಹಶಿಕ್ಷಣವಿದ್ದ ಪ್ರೌಢಶಾಲೆಗಳಲ್ಲಿ ೨,೩೯೮ ಹೆಣ್ಣುಮಕ್ಕಳು ಓದುತ್ತಿದ್ದರು. ಇದೇ ಅವಧಿಯಲ್ಲಿ ಹೆಣ್ಣು ಮಕ್ಕಳಿಗಾಗಿ ೩ ಕಾಲೇಜುಗಳಿದ್ದು, ೨,೩೪೬ ವಿದ್ಯಾರ್ಥಿಗಳಿದ್ದರು. ಅವರಲ್ಲಿ ೧೪೨ ವಿದ್ಯಾರ್ಥಿನಿಯರು ವೃತ್ತಿ ಶಿಕ್ಷಣವನ್ನು ಪಡೆಯುತ್ತಿದ್ದರು. ಮೈಸೂರಿನ ಶಿಕ್ಷಕಿಯರ ಕಾಲೇಜು (೧೮೮೮), ಜೆನಾನಾ ನಾರ್ಮಲ್ ಶಾಲೆ (೧೯೧೬) ಮತ್ತು ಬೆಂಗಳೂರಿನ ಸೇಕ್ರೆಡ್ ಹಾರ್ಟ್ಸ್ ಹೆಣ್ಣುಮಕ್ಕಳ ಶಾಲೆ (೧೯೪೭)ಗಳೆಂಬ ಮೂರು ಶಿಕ್ಷಕಿಯರ ತರಬೇತಿ ಸಂಸ್ಥೆಗಳಿದ್ದವು. ಇವುಗಳಲ್ಲಿ ಜೆನಾನಾ ನಾರ್ಮಲ್ ಶಾಲೆಯಲ್ಲಿ ಉರ್ದು ಶಿಕ್ಷಕಿಯರಿಗೆ ತರಬೇತಿ ಕೊಡಲಾಗುತ್ತಿತ್ತು. ಹಾಗೆಯೇ ಮಹಾರಾಣಿ ಶಿಕ್ಷಕಿಯರ ತರಬೇತಿ ಸಂಸ್ಥೆಯಲ್ಲಿ ಶಿಶುವಿಹಾರಗಳ ಶಿಕ್ಷಕಿಯರಿಗೆ ತರಬೇತಿಯನ್ನು ಕೊಡುತ್ತಿದ್ದ ಒಂದು ತರಗತಿ ಇತ್ತು. ಇದು ೧೯೪೬-೪೭ರಲ್ಲಿ

ಪ್ರಾರಂಭವಾಗಿ ೧೯೫೩ರಲ್ಲಿ ಅದನ್ನು ಮುಚ್ಚಲಾಯಿತು. ಮೈಸೂರಿನ ಸ್ತ್ರೀಯರ ವೃತ್ತಿಶಿಕ್ಷಣ ಶಾಲೆ, ಹಾಸನದ ಮೆಥಡಿಸ್ಟ್ ಮಿಷನ್ ಅನಾಥಾಲಯ ಮತ್ತು ಚನ್ನಪಟ್ಟಣದ ಕೈಗಾರಿಕಾ ಶಾಲೆಗಳು ಹೆಣ್ಣುಮಕ್ಕಳಿಗಾಗಿ ವೃತ್ತಿಶಿಕ್ಷಣವನ್ನು ಕೊಡುತ್ತಿದ್ದವು. ಹೆಚ್ಚು ವಯಸ್ಸಾದ ಹೆಂಗಸರಿಗೆ ಅವರ ಮನೆಗಳಲ್ಲಿಯೇ ಶಿಕ್ಷಣವನ್ನು ಕೊಡುವ ಒಂದು ಯೋಜನೆ ತರಲಾಗಿತ್ತು. ಇದನ್ನು ಮಂಗಳೂರಿನಲ್ಲಿ ೧೯೧೧-೧೬ರಲ್ಲಿ ಅಳವಡಿಸಿ ಪರೀಕ್ಷಿಸಲಾಯಿತು. ತುಮಕೂರಿನಲ್ಲಿ ಕೆಲವು ವರ್ಷಗಳ ಕಾಲ ಜಾರಿಯಲ್ಲಿದ್ದು, ೧೯೧೪-೧೯೧೫ರಲ್ಲಿ ನಿಂತು ಹೋಯಿತು. ೧೯೧೫-೧೬ರಲ್ಲಿ ೪ ಕಡೆ ತರಗತಿಗಳನ್ನು ನಡೆಸುತ್ತಿದ್ದು, ಆಗ ೮೭ ಸ್ತ್ರೀಯರು ಶಿಕ್ಷಣ ಪಡೆಯುತ್ತಿದ್ದರು. ಮುಂದೆ ೧೯೧೮-೧೯ರ ವೇಳೆಗೆ ಅವರ ಸಂಖ್ಯೆ ಕ್ರಮವಾಗಿ ೧೭ ರಿಂದ ೨೯೭ ಆಯಿತು. ಆನಂತರ ಕ್ಷೀಣಿಸುತ್ತ ಹೋಯಿತು.

ಕ್ರಿ.ಶ. ೧೯೨೫ರಲ್ಲಿ ಮೈಸೂರು ಮಹಿಳಾ ಸಮ್ಮೇಳನವು ನಡೆಯಿತು. ಇದರಿಂದ ಮಹಿಳಾ ಶಿಕ್ಷಣದ ಪ್ರಚಾರಗೊಂಡಿತು. ಅಲ್ಲದೇ ಬೆಂಗಳೂರಿನ ಮಹಿಳಾ ಸೇವಾ ಸಮಾಜ, ಮೈಸೂರಿನ ವನಿತಾ ಸಮಾಜಗಳು ಸ್ತ್ರೀ ಶಿಕ್ಷಣಕ್ಕಾಗಿ ಉತ್ತಮ ಮಾರ್ಗದರ್ಶನ ಮಾಡಿದವು. ಆಗ ಮೈಸೂರು ವಯಸ್ಕರ ಶಿಕ್ಷಣ ಸಮಿತಿಯು ಮಹಿಳೆಯರಿಗಾಗಿ ನಂಜನಗೂಡು ಮತ್ತು ಕೆಂಗೇರಿಗಳಲ್ಲಿ ಎರಡು ವಿದ್ಯಾಪೀಠಗಳನ್ನು ಸ್ಥಾಪಿಸಿ ಹೆಚ್ಚು ವಯಸ್ಸಾದ ಸ್ತ್ರೀಯರಿಗೆ ಅಕ್ಷರವನ್ನು ಕಲಿಸುವ ಅವಕಾಶ ಕಲ್ಪಿಸಿತ್ತು.

ಕ್ರಿ.ಶ. ೧೮೫೫ಕ್ಕಿಂತ ಮುಂಚೆ ಬೆಳಗಾವಿ ವಲಯದಲ್ಲಿ ಲಂಡನ್ ಮಿಷನ್ ಸಂಸ್ಥೆಯು ನಡೆಸುತ್ತಿದ್ದ ಕೆಲವು ಬಾಲಕಿಯರ ಶಾಲೆಗಳಿದ್ದವು. ೧೮೫೭-೫೮ರಲ್ಲಿ ದೇಶ ಭಾಷಾ ಶಾಲೆಗಳ ಶಿಕ್ಷಕರು ತಮ್ಮ ಶಾಲೆಗಳಲ್ಲಿ ಹೆಣ್ಣುಮಕ್ಕಳಿಗೆ ತರಗತಿಗಳನ್ನು ನಡೆಸುವಲ್ಲಿ ಯಶಸ್ವಿಯಾದವರಿಗೆ ಬಹುಮಾನ ಕೊಡುವ ಯೋಜನೆಗಳನ್ನು ಮುಂಬೈ ಸರ್ಕಾರ ಜಾರಿಗೆ ತಂದಿತ್ತು. ೧೮೬೬-೬೭ರ ಅವಧಿಯಲ್ಲಿ ಧಾರವಾಡ ಜಿಲ್ಲೆಯಲ್ಲಿ ೫, ವಿಜಾಪುರ ಜಿಲ್ಲೆಯಲ್ಲಿ ೫ ಮತ್ತು ಉತ್ತರ ಕನ್ನಡ ಜಿಲ್ಲೆಯಲ್ಲಿ ಎರಡು ಬಾಲಕಿಯರ ಶಾಲೆಗಳನ್ನು ಆರಂಭಿಸಲಾಯಿತು. ಇವುಗಳಲ್ಲಿ ಕ್ರಮವಾಗಿ ೨೧೩, ೧೩೪ ಮತ್ತು ೪೫ ವಿದ್ಯಾರ್ಥಿಗಳಿದ್ದರು. ೧೮೬೭-೬೮ರಲ್ಲಿ ಮುಂಬೈ ಸರಕಾರವು ಕರ್ನಾಟಕದಲ್ಲಿ ಕೆಲವು ಶಾಲೆಗಳನ್ನು ಸ್ಥಾಪಸಿದ್ದು ಆಗ ೨೩ ಶಾಲೆಗಳಿದ್ದು, ಅವುಗಳಲ್ಲಿ ೭೭೪ ವಿದ್ಯಾರ್ಥಿನಿಯರಿದ್ದರು. ೧೮೮೧-೮೨ರಲ್ಲಿ ಈ ವಿಭಾಗದಲ್ಲಿ ೪೭ ಶಾಲೆಗಳಿದ್ದು ೨,೫೯೫ ಹೆಣ್ಣುಮಕ್ಕಳು ಓದುತ್ತಿದ್ದರು. ೧೮೯೫-೯೬ರಲ್ಲಿ ಧಾರವಾಡದ ಸ್ಥಳೀಯ ಮಂಡಲಿಯು ಮಹಿಳೆಯರ ಶಿಕ್ಷಣ ತರಬೇತಿ ಸಂಸ್ಥೆಯನ್ನು ತೆರೆದು ಅದನ್ನು ೧೯೦೭-೦೮ರಲ್ಲಿ ಇದು ಪೂರ್ಣ ಪ್ರಮಾಣದ ಸರ್ಕಾರದ ಶಿಕ್ಷಣ ಕಾಲೇಜಾಯಿತು. ೧೯೧೩ರ ಹೊತ್ತಿಗೆ ಮುಂಬೈ ಪ್ರಾಂತ್ಯದಲ್ಲಿ ೪ ಕನ್ನಡ ಜಿಲ್ಲೆಗಳಲ್ಲಿ ಒಟ್ಟು ೧೮೯ ಹೆಣ್ಣುಮಕ್ಕಳ ಶಾಲೆಗಳಿದ್ದು, ಅವುಗಳಲ್ಲಿ ಒಟ್ಟು ೧೧,೪೯೦ ವಿದ್ಯಾರ್ಥಿನಿಯರಿದ್ದರು. ಆಗ ಎಲ್ಲಾ ಶಾಲೆಗಳಲ್ಲಿದ್ದ ವಿದ್ಯಾರ್ಥಿನಿಯರ ಒಟ್ಟು ಸಂಖ್ಯೆ ೧೭,೦೦೦ಕ್ಕೂ ಜಾಸ್ತಿಯಿತ್ತು. ೧೯೨೧-೨೨ರ ವೇಳೆಗೆ ಒಟ್ಟು ಶಾಲೆಗಳ ಸಂಖ್ಯೆ ೨೭೯ ಇದ್ದು, ೧೬,೯೨೬ ಹೆಣ್ಣುಮಕ್ಕಳು ಓದುತ್ತಿದ್ದರು.

೧೯೨೪ರಲ್ಲಿ ಹೆಣ್ಣುಮಕ್ಕಳಿಗಾಗಿ ಒಂದು ಪ್ರತ್ಯೇಕ ವರ್ನಾಕ್ಯುಲರ್ ಫೈನರ್ ಪರೀಕ್ಷೆಯನ್ನು ನಡೆಸುವ ಪರೀಕ್ಷೆ ಮಾಡಿತು. ನಂತರ ಸರ್ಕಾರ ಹೆಣ್ಣುಮಕ್ಕಳಿಗೆ ಮದುವೆಯ ವಯಸ್ಸನ್ನು ಹೆಚ್ಚಿಸಿತು. ಇದರಿಂದ ಬಾಲಕಿಯರು ಶಾಲೆಗಳಿಗೆ ಬರುವ ಸಂಖ್ಯೆಯು ಹೆಚ್ಚಾಯಿತು. ೧೯೪೦-೪೧ರಲ್ಲಿ ಮತ್ತೆ ಪ್ರಾಥಮಿಕ ಶಿಕ್ಷಣ ಗಂಡುಮಕ್ಕಳಿಗಿದ್ದಂತೆ ಹೆಣ್ಣುಮಕ್ಕಳಿಗೂ ೮ ವರ್ಷಗಳಾಯಿತು. ೧೯೪೮ರಲ್ಲಿ ಬಾಲಕಿಯರ ಪ್ರತ್ಯೇಕ ಪರೀಕ್ಷೆ ವ್ಯವಸ್ಥೆ ರದ್ದಾಯಿತು. ನಂತರ ಎಲ್ಲಾ ಹೆಣ್ಣುಮಕ್ಕಳು ಶಾಲೆಗಳಲ್ಲಿ ಭಾಷೆ, ಗಣಿತ ಜೊತೆಗೆ ಹೊಲಿಗೆ ಮತ್ತು ಚಿತ್ರಕಲೆಗಳನ್ನು ಕಲಿಸುವ ವ್ಯವಸ್ಥೆ ಇತ್ತು. ಕೆಲವು ಶಾಲೆಗಳಲ್ಲಿ ಗೃಹವಿಜ್ಞಾನ, ಹಿಂದೂಸ್ತಾನಿ ಸಂಗೀತ ಕಲಿಸಲಾಯಿತು. ೧೯೪೭ರಷ್ಟೊತ್ತಿಗೆ ಹೆಣ್ಣು ಮಕ್ಕಳಿಗೆ ೪೦೨ ಪ್ರಾಥಮಿಕ ಶಾಲೆಗಳಿದ್ದು; ಅವುಗಳಲ್ಲಿ ೪೪,೨೮೫ ಹೆಣ್ಣುಮಕ್ಕಳು ಓದುತ್ತಿದ್ದು; ಅವರಲ್ಲಿ ೩,೪೪೩ ಬಾಲಕಿಯರು ಮೇಲಿನ ತರಗತಿಗಳಲ್ಲಿ ಅಧ್ಯಯನ ಮಾಡುತ್ತಿದ್ದರು.

ಕರ್ನಾಟಕ ರಾಜ್ಯದಲ್ಲಿ ೧೯೫೬-೫೭ರಲ್ಲಿ ೧,೫೪೮ ಮಹಿಳಾ ಶಿಕ್ಷಣ ಸಂಸ್ಥೆಗಳಿದ್ದು ಅವುಗಳಲ್ಲಿ ೨,೦೩,೬೮೦ ವಿದ್ಯಾರ್ಥಿನಿಯರು ಮತ್ತು ಸಹ ಶಿಕ್ಷಣ ಸಂಸ್ಥೆಗಳಲ್ಲಿ ೪,೮೯,೨೪೨ ವಿದ್ಯಾರ್ಥಿನಿಯರು ಓದುತ್ತಿದ್ದರು. ೧೯೬೧ರಲ್ಲಿ ಇಡೀ ರಾಜ್ಯಕ್ಕೆ ಸ್ತ್ರೀ ಶಿಕ್ಷಣದಲ್ಲಿ ಕೊಡಗು ಭಾಗವು ಆಗ್ರ ಸ್ಥಾನದಲ್ಲಿತ್ತು. ೧೯೮೦-೮೧ರಲ್ಲಿ ರಾಜ್ಯದಲ್ಲಿ ೫೦೫ ಹೆಣ್ಣುಮಕ್ಕಳ ಕಿರಿಯ ಪ್ರಾಥಮಿಕ ಶಾಲೆಗಳೂ, ೭೬೦ ಹೆಣ್ಣುಮಕ್ಕಳ ಹಿರಿಯ ಪ್ರಾಥಮಿಕ ಶಾಲೆಗಳೂ, ೭೭ ಬಾಲಕಿಯರ ಪ್ರೌಢ ಶಾಲೆಗಳೂ ಮತ್ತು ೧೧ ಮಹಿಳಾ ಜೂನಿಯರ್ ಕಾಲೇಜುಗಳೂ ಇದ್ದವು. ಆಗ ಕ್ರಮವಾಗಿ ಪ್ರಾಥಮಿಕ ಶಾಲೆಗಳಲ್ಲಿ ೩.೦೧ ಲಕ್ಷ, ಸಹ ಶಿಕ್ಷಣವಿದ್ದ ಪ್ರಾಥಮಿಕ ಶಾಲೆಗಳಲ್ಲಿ ೧೮.೩೯ ಲಕ್ಷ, ಪ್ರೌಢ ಶಾಲೆಗಳಲ್ಲಿ ಒಟ್ಟು ೨,೪೭,೦೩೯ ಬಾಲಕಿಯರಿದ್ದರು. ೧೯೭೯-೮೦ರಲ್ಲಿ ಕಲೆ, ವಿಜ್ಞಾನ ಮತ್ತು ವಾಣಿಜ್ಯ ವಿಷಯಗಳ ಸ್ನಾತಕ, ಸ್ನಾತಕೋತ್ತರ ಮತ್ತು ಡಾಕ್ಟರೇಟ್ ತರಗತಿಗಳಲ್ಲಿ ೩೯,೨೫೩ ಮಹಿಳೆಯರು ಹಾಗೂ ಶಿಕ್ಷಣ, ಇಂಜಿನಿಯರಿಂಗ್, ವೈದ್ಯಕೀಯ ಮುಂತಾದ ವೃತ್ತಿಶಿಕ್ಷಣ ಕಾಲೇಜುಗಳಲ್ಲಿ ೨೪,೬೯೧ ಮಹಿಳೆಯರು ಅಧ್ಯಯನ ಮಾಡುತ್ತಿದ್ದರು.

ಭಾರತ ಸರ್ಕಾರದ ೧೯೮೬ರ ಹೊಸ ರಾಷ್ಟ್ರೀಯ ಶಿಕ್ಷಣ ನೀತಿಯಲ್ಲಿ ಮಹಿಳಾ ಶಿಕ್ಷಣವನ್ನು ಪ್ರಧಾನ ಅಂಶವಾಗಿ ಪರಿಗಣಿಸಿ ಪ್ರೋತ್ಸಾಹಿಸಿದ್ದರಿಂದ ಕರ್ನಾಟಕದಲ್ಲಿ ಹೆಣ್ಣುಮಕ್ಕಳ ದಾಖಲಾತಿ ಮತ್ತು ಹಾಜರಾತಿ ಹಾಗೂ ಸ್ತ್ರೀಯರ ಸಾಕ್ಷರತೆಗೆ ಕಾಳಜಿ ವಹಿಸಿ ಹೆಣ್ಣುಮಕ್ಕಳ ಪ್ರಾಥಮಿಕ ಶಿಕ್ಷಣಕ್ಕೆ ವಿಶೇಷ ಆದ್ಯತೆ ಕಲ್ಪಿಸಲಾಯಿತು. ಪ್ರಾಥಮಿಕ ಶಾಲಾ ಶಿಕ್ಷಕರಲ್ಲಿ ಮಹಿಳಾ ಶಿಕ್ಷಕಿಯರ ನೇಮಕ, ಅಗತ್ಯವಿರುವ ಕಡೆ ಪ್ರಾಥಮಿಕ ಶಾಲೆಗಳ ಸ್ಥಾಪನೆ, ಗ್ರಾಮೀಣ ಬಾಲಕಿಯರಿಗೆ ಹಾಜರಾತಿ, ಶಿಷ್ಯವೇತನ ಮುಂತಾದ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದಲ್ಲದೇ ಖಾಸಗಿ ಮತ್ತು ಸರಕಾರದ ಸಂಸ್ಥೆಗಳು ಪ್ರೌಢ ಶಿಕ್ಷಣ ಮತ್ತು ಕಾಲೇಜು ಶಿಕ್ಷಣದಲ್ಲಿ ಮಹಿಳಾ ಶಿಕ್ಷಣಕ್ಕೆ ಆದ್ಯತೆ ನೀಡಿ ಪ್ರತ್ಯೇಕ ಶಾಲೆ-ಕಾಲೇಜುಗಳು ಮತ್ತು ಸಹ ಶಿಕ್ಷಣ ಕಾಲೇಜುಗಳು ವಿಸ್ತರಿತವಾದವು. ಉನ್ನತ ಶಿಕ್ಷಣದಲ್ಲಿ ಮಹಿಳೆಯರಿಗೆ

ಪ್ರೋತ್ಸಾಹ ದೊರೆಯಿತು. ನಂತರದ ದಿನಗಳಲ್ಲಿ ಕರ್ನಾಟಕ ಸರ್ಕಾರವು ಮಹಿಳಾ ಶಿಕ್ಷಣ ಸುಧಾರಿಸುವಲ್ಲಿ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. ಅವುಗಳಲ್ಲಿ ಪ್ರಮುಖ ವಾದುವುಗಳೆಂದರೆ

೧. ೬ ರಿಂದ ೧೪ ವರ್ಷದ ಹೆಣ್ಣುಮಕ್ಕಳಿಗೆ ಉಚಿತ ಶಿಕ್ಷಣ

೨. ಉಚಿತ ಸಮವಸ್ತ್ರ, ಪಠ್ಯಪುಸ್ತಕ, ಸಲಕರಣೆಗಳು (ಬ್ಯಾಗುಗಳು)

೩. ಮಧ್ಯಾಹ್ನ ಉಪಹಾರ ಯೋಜನೆ

೪. ಬಾಲಕಿಯರಿಗೆ ಹಾಜರಾತಿ ಶಿಷ್ಯವೇತನ

೫. ವಿದ್ಯಾರ್ಥಿ ವೇತನ

೬. ವಸತಿ ಶಾಲೆ ಮತ್ತು ವಸತಿ ನಿಲಯಗಳು

೭. ಮಹಿಳಾ ಕಾನೂನು ಪದವೀಧರರಿಗೆ ಧನಸಹಾಯ ಯೋಜನೆ

೮. ಬಾಲಿಕಾ ಸಮೃದ್ಧಿ ಯೋಜನೆ

೯. ಮಹಿಳೆಯರಿಗಾಗಿ ಪ್ರತ್ಯೇಕ ಕೋರ್ಸ್ ಮತ್ತು ತರಬೇತಿಗಳು

೧೦. ಸಹ ಶಿಕ್ಷಣದಲ್ಲಿ ಅವಕಾಶ

೧೧. ಬಾ ಬಾಲೆ ಶಾಲೆಗೆ

೧೨. ಮೀಸಲಾತಿ

ಈ ಮೇಲ್ಕಂಡ ಸೌಲಭ್ಯಗಳನ್ನು ಸ್ತ್ರೀಯರ ಶೈಕ್ಷಣಿಕ ಅಭಿವೃದ್ಧಿಗೆ ಹಮ್ಮಿಕೊಂಡಿರುವುದಲ್ಲದೇ ಇದಕ್ಕೆ ಪೂರಕವಾದ ಅಂಗನವಾಡಿ, ಶಿಶುಪಾಲನಾ ಕೇಂದ್ರಗಳ ಸೌಲಭ್ಯ, ಸಮಗ್ರ ಶಿಶು ಅಭಿವೃದ್ಧಿ ಯೋಜನೆ ಮುಂತಾದವುಗಳಿದ್ದು; ಇತ್ತೀಚೆಗೆ ಶಿಕ್ಷಣ ಮತ್ತು ಉದ್ಯೋಗ ದಲ್ಲಿ ಮೀಸಲಾತಿ ವಿಸ್ತರಣೆ ಮತ್ತು ಪದವಿಪೂರ್ವದ ಶಿಕ್ಷಣದವರೆಗೆ ಮಹಿಳೆಯರಿಗೆ ಉಚಿತ ಶಿಕ್ಷಣ ನೀಡುವ ಯೋಜನೆಯನ್ನು ಮಾಡಿದ್ದು; ಅವು ಮುಂದೆ ಜಾರಿಯಲ್ಲಿ ಬರಬಹುದು. ಹೀಗೆ ಕರ್ನಾಟಕ ಸರ್ಕಾರ ಮಹಿಳೆಯರಿಗಾಗಿ ವಿವಿಧ ಶೈಕ್ಷಣಿಕ ಸೌಲಭ್ಯಗಳನ್ನು ಕಲ್ಪಿಸಿದ್ದರಿಂದ ಕರ್ನಾಟಕದಲ್ಲಿ ೨೦ನೇ ಶತಮಾನದಷ್ಟೊತ್ತಿಗೆ ೫೧,೨೬೩ ಹಿರಿಯ ಮತ್ತು ಕಿರಿಯ ಪ್ರಾಥಮಿಕ ಶಾಲೆಗಳಲ್ಲಿ ೭೪,೦೧೪,೧೦೦ ಹೆಣ್ಣು ಮಕ್ಕಳು ಮತ್ತು ೮,೫೮೨ ಪ್ರೌಢ ಶಾಲೆಗಳಲ್ಲಿ ೮,೯೯,೩೫೭ ಬಾಲಕಿಯರು ಹಾಗೂ ೨,೦೪೨ ಪದವಿಪೂರ್ವ ಕಾಲೇಜುಗಳಲ್ಲಿ ೬,೪೦,೩೭೫ ವಿದ್ಯಾರ್ಥಿಗಳಿದ್ದು; ಇವರಲ್ಲಿ ಸುಮಾರು ಶೇ. ೪೦ರಷ್ಟು ಬಾಲಕಿಯರು ಇದ್ದಾರೆ. ಅಲ್ಲದೆ ೧೮೭ ಪಾಲಿಟೆಕ್ನಿಕ್, ೧,೨೮೯ ಇಂಜಿನಿಯರಿಂಗ್ ಕಾಲೇಜು, ೨೪ ವೈದ್ಯಕೀಯ, ೫೯ ಭಾರತೀಯ ವೈದ್ಯಪದ್ಧತಿ, ೩೭ ದಂತ ಶಿಕ್ಷಣ, ೯೭೧ ಪದವಿ ಕಾಲೇಜು, ೪೫೬ ಕೈಗಾರಿಕಾ ತರಬೇತಿ ಶಾಲೆ, ೭೦ ಬಿ.ಇಡಿ. ಕಾಲೇಜುಗಳು, ೧೮೦ ಡಿ.ಎಡ್. ಕಾಲೇಜುಗಳು, ೧೬ ವಿಶ್ವವಿದ್ಯಾಲಯಗಳಲ್ಲಿ ಹೆಣ್ಣು ಮಕ್ಕಳು ಶಿಕ್ಷಣ ಪಡೆಯುತ್ತಿದ್ದಾರೆ. ಹೀಗೆ ೧೮ನೇ ಶತಮಾನದಿಂದ ೨೦ನೇ ಶತಮಾನದವರೆಗೆ ಕರ್ನಾಟಕದ ಮಹಿಳಾ ಶಿಕ್ಷಣ ಪ್ರಗತಿಯತ್ತ ಸಾಗಿರುವುದನ್ನು ಕಾಣಬಹುದು.

## ಮಹಿಳೆ ಮತ್ತು ಪುರುಷರ ಸಾಕ್ಷರತಾ ಪ್ರಮಾಣದಲ್ಲಿನ ವ್ಯತ್ಯಾಸಗಳು

| ವರ್ಷ | ಒಟ್ಟು | ಸಾಕ್ಷರತಾ ಪ್ರಮಾಣ | | ವ್ಯತ್ಯಾಸಗಳು |
|---|---|---|---|---|
| | | ಪುರುಷ | ಮಹಿಳೆ | |
| ೧೯೬೧ | ೨೯.೮೦ | ೪೨.೨೯ | ೧೬.೭೦ | ೨೫.೫೯ |
| ೧೯೭೧ | ೩೬.೮೩ | ೪೮.೫೧ | ೨೪.೫೫ | ೨೩.೯೬ |
| ೧೯೮೧ | ೪೬.೨೧ | ೫೮.೭೩ | ೩೩.೦೭ | ೨೫.೫೬ |
| ೧೯೯೧ | ೫೬.೦೪ | ೬೭.೨೬ | ೪೪.೩೪ | ೨೨.೯೨ |
| ೨೦೦೧ | ೬೭.೦೪ | ೭೬.೨೯ | ೫೭.೪೫ | ೧೮.೮೪ |

ಈ ಮೇಲಿನ ಕೋಷ್ಟಕವನ್ನು ಅವಲೋಕಿಸಿದಾಗ ರಾಜ್ಯಮಟ್ಟದಲ್ಲಿ ೧೯೬೧ ರಿಂದ ೧೯೯೧ರವರೆಗೆ ಪುರುಷ ಹಾಗೂ ಮಹಿಳೆಯರ ಸಾಕ್ಷರತಾ ಪ್ರಮಾಣದಲ್ಲಿ ಸ್ವಲ್ಪ ಹೆಚ್ಚುಕಮ್ಮಿ ಅರ್ಧ ಭಾಗದಷ್ಟು ವ್ಯತ್ಯಾಸವಿದೆ. ೧೯೯೧ ರಿಂದ ೨೦೦೧ನ್ನು ಗಮನಿಸಿದಾಗ ಪುರುಷ ಮತ್ತು ಸ್ತ್ರೀಯರ ನಡುವಿನ ಅಂತರ ಕಡಿಮೆಯಾಗಿದೆ. ಇದರಿಂದ ತಿಳಿಯುವುದೇನೆಂದರೆ, ಸಾಕ್ಷರತಾ ಪ್ರಮಾಣದ ಇಳಿಕೆಗೆ ಇರುವ ಕಾರಣಗಳಲ್ಲಿ ಬದಲಾವಣೆಯಾಗಿದ್ದು; ಶಿಕ್ಷಣದಿಂದ ಮಹಿಳೆಯು ಸಾಮಾಜಿಕವಾಗಿ ಬದಲಾವಣೆಯಾಗಿರುವುದು ಸಂತೋಷದ ಸಂಗತಿಯಾದರೂ ಇಂದು ಇನ್ನೂ ಶೇ. ೪೨.೦೬ರಷ್ಟು ಮಹಿಳೆಯರನ್ನು ಶಿಕ್ಷಣದ ಮುಖ್ಯವಾಹಿನಿಗೆ ತರಲು ಸಾಧ್ಯವಾಗಿಲ್ಲ. ಅದಕ್ಕೆ ಕಾರಣ ಮೂಲಭೂತ ಸೌಕರ್ಯಗಳ ಕೊರತೆ ಉದಾ: ೫೧,೨೬೩ ಪ್ರಾಥಮಿಕ ಶಾಲೆಗಳ ಪೈಕಿ ೬,೨೭೧ ಶಾಲೆಗಳಲ್ಲಿ ಹೆಣ್ಣುಮಕ್ಕಳಿಗೆ ಪ್ರತ್ಯೇಕವಾದ ಶೌಚಾಲಯಗಳಿವೆ. ೮,೫೮೨ ಪ್ರೌಢ ಶಾಲೆಗಳ ಪೈಕಿ ೮೭೪ ಶಾಲೆಗಳಲ್ಲಿ ಹೆಣ್ಣುಮಕ್ಕಳಿಗೆ ಪ್ರತ್ಯೇಕವಾದ ಶೌಚಾಲಯಗಳಿವೆ. ಅಲ್ಲದೆ ಬಡತನ, ಹೆಣ್ಣುಮಕ್ಕಳ ಅಪವ್ಯಯ, ನಿಲುಗಡೆ, ಸಣ್ಣಮಕ್ಕಳ ಪಾಲನೆ, ಯೋಗ್ಯವರ ಹುಡುಕಲು ಕಷ್ಟ. ಪರಿಪೂರ್ಣವಾಗಿ ಅಳಿಯದ ಪುರುಷ ಪ್ರಧಾನ ಸಮಾಜ ಮುಂತಾದ ಕಾರಣಗಳಿಂದ ಸಾಕ್ಷರತಾ ಪ್ರಮಾಣ ನಿಗದಿತ ಮಟ್ಟಕ್ಕೆ ತಲುಪಿಲ್ಲ.

ಕರ್ನಾಟಕದ ಮಹಿಳಾ ಶಿಕ್ಷಣ ಬೆಳೆದುಬಂದ ಇತಿಹಾಸ ಮತ್ತು ಪ್ರಗತಿಯನ್ನು ಅವಲೋಕಿಸಿದಾಗ ಮಹಿಳಾ ಶಿಕ್ಷಣದ ಪ್ರಗತಿಯು ಗಣನೀಯವಾಗಿ ಹೆಚ್ಚುತ್ತಾ ಬಂದಿದ್ದರೂ ಸಹ ಪುರುಷರ ಮತ್ತು ಸ್ತ್ರೀಯರ ಜನಸಂಖ್ಯೆಯ ಪ್ರಮಾಣಕ್ಕೆ ಹೋಲಿಸಿ ನೋಡಿದಾಗ ಅದು ಹಿಮ್ಮುಖದಲ್ಲಿರುವುದು ಕಂಡು ಬರುತ್ತದೆ. ಅಲ್ಲದೇ ಸ್ತ್ರೀಯರನ್ನು ಸಂಪೂರ್ಣ ಸಾಕ್ಷರರನ್ನಾಗಿ, ಸಶಕ್ತರನ್ನಾಗಿ, ಸುಶಿಕ್ಷಿತರನ್ನಾಗಿ ಮಾಡುವಲ್ಲಿ ವಿವಿಧ ಯೋಜನೆಗಳನ್ನು ಕಾರ್ಯಗತಗೊಳಿಸಿದಾಗ್ಯೂ ಸಹ ಸಂಪೂರ್ಣ ಯಶಸ್ವಿ ಪಡೆಯಲು ಸಾಧ್ಯವಾಗಿಲ್ಲ.

ಆದ್ದರಿಂದ ಮಹಿಳಾ ಶಿಕ್ಷಣ ವ್ಯವಸ್ಥೆ, ಪಠ್ಯಕ್ರಮ, ಐಚ್ಛಿಕ ವಿಷಯ, ವೃತ್ತಿ ತರಬೇತಿ, ಅವರ ಬೌದ್ಧಿಕ-ಮಾನಸಿಕ ಮಟ್ಟ, ಅವರ ಸಾಮಾಜಿಕ ಸ್ಥಾನಮಾನ, ಪ್ರಸ್ತುತ ಸಮಾಜ ಇವುಗಳನ್ನು ಗಮನದಲ್ಲಿರಿಸಿಕೊಂಡು ಉತ್ತಮಮಟ್ಟದಲ್ಲಿ ನಮ್ಮ ರಾಜ್ಯದ ಮಹಿಳಾ ಶಿಕ್ಷಣ ಸುಧಾರಿಸುವಲ್ಲಿ ವಿಮರ್ಶಾತ್ಮಕ ಚಿಂತನೆ, ಸೂಕ್ತ ಸಲಹೆ ಅಥವಾ ಶಿಫಾರಸ್ಸುಗಳು ಅವಶ್ಯಕತೆಯಿದೆ.

**ಮಹಿಳಾ ಶಿಕ್ಷಣದ ಸುಧಾರಣೆಗೆ ಶಿಫಾರಸು ಅಥವಾ ಸಲಹೆಗಳು**

೧. ಬಹುಮಂದಿ ಮಹಿಳೆಯರು ಪೌಷ್ಠಿಕ ಆಹಾರದ ಕೊರತೆಯಿಂದ ನರಳುವವರು ಮತ್ತು ಸುಮಾರು ಮೂರರಲ್ಲಿ ಎರಡು ಭಾಗ ಮಹಿಳೆಯರು ಹೆಚ್ಚಾಗಿ ರಕ್ತಹೀನತೆ, ದೇಹದೌರ್ಬಲ್ಯಗಳಿಂದ ಕೂಡಿದ್ದು, ಸಾಕಷ್ಟು ಅಂತರವಿಲ್ಲದ ಗರ್ಭಧರಿಸುವಿಕೆ, ಬಾಣಂತನದಿಂದ ಹೆಚ್ಚು ಮಂದಿ ಮಹಿಳೆಯರು ಸಾವಿಗೆ ತುತ್ತಾಗುತ್ತಿರುವರಲ್ಲದೆ, ಹೆಣ್ಣುಮಕ್ಕಳ ಶಿಶುಮರಣದ ಪ್ರಮಾಣ ಹೆಚ್ಚುತ್ತಿರುವುದನ್ನು ತಪ್ಪಿಸಲು ಮತ್ತು ಪ್ರಾಥಮಿಕ ಶಿಕ್ಷಣದ ಪ್ರವೇಶದಲ್ಲಿ ಗಂಡುಮಕ್ಕಳಿಗಿಂತ ಹೆಣ್ಣುಮಕ್ಕಳ ಸಂಖ್ಯೆ ಕಡಿಮೆಯಿರುವುದನ್ನು ಹೋಗಲಾಡಿಸಲು ಈಗಾಗಲೇ ಜಾರಿಯಲ್ಲಿರುವ ಸಮಗ್ರ ಶಿಶು ಅಭಿವೃದ್ಧಿ ಯೋಜನೆಯನ್ನು ಇನ್ನೂ ವಿಸ್ತರಿಸಿ ಅದನ್ನು ಕಡ್ಡಾಯವಾಗಿ ವ್ಯವಸ್ಥಿತ ರೀತಿಯಲ್ಲಿ ಕಾರ್ಯಗತಗೊಳಿಸುವಲ್ಲಿ ಕಠಿಣ ಕ್ರಮಗಳನ್ನು ತೆಗೆದುಕೊಂಡು ಮಹಿಳೆ ಮತ್ತು ಮಕ್ಕಳ ಆರೋಗ್ಯ ಹಾಗೂ ಶಿಶುಶಿಕ್ಷಣಕ್ಕೆ ಹೆಚ್ಚಿನ ಪ್ರಾಧಾನ್ಯತೆ ಕೊಡಬೇಕು.

೨. ಪ್ರೌಢ ಶಾಲಾ ಹಂತದಲ್ಲಿ ಐಚ್ಛಿಕ ವಿಷಯಗಳಾದ ಗಣಿತ, ವಿಜ್ಞಾನ, ಸಮಾಜ ವಿಜ್ಞಾನಗಳ ಜೊತೆ ಮಹಿಳೆಯರಿಗೆ ಒಲವಿರುವ ಹೊಲಿಗೆ ತರಬೇತಿ, ಪಾಕಶಾಸ್ತ್ರ, ಸಂಗೀತಶಾಸ್ತ್ರ, ಅಲಂಕಾರಶಾಸ್ತ್ರ, ಲಲಿತಕಲೆಗಳ ವಿಜ್ಞಾನ, ಕಸೂತಿ ಕಲೆ, ಕಂಪ್ಯೂಟರ್ ತರಬೇತಿ, ಗೃಹವಿಜ್ಞಾನ, ಗೃಹ ಉಪಕರಣಗಳ ತರಬೇತಿ ಮತ್ತು ರಿಪೇರಿ ಕಲೆ ಮುಂತಾದ ಪ್ರಸ್ತುತ ಸಮಾಜಕ್ಕೆ ಅಗತ್ಯವಿರುವ ಐಚ್ಛಿಕ ವಿಷಯಗಳನ್ನು ಸೇರ್ಪಡಿಸಿ ಅವರ ಆಯ್ಕೆಗೆ ಅವಕಾಶ ಕಲ್ಪಿಸಿ ಸೂಕ್ತ ತರಬೇತಿ ನೀಡಿ ಸಶಕ್ತರನ್ನಾಗಿ ಮಾಡಬೇಕು.

೩. ಆಧುನಿಕ ಶಿಕ್ಷಣ ವ್ಯವಸ್ಥೆ ಸಂಕೀರ್ಣಗೊಳ್ಳುತ್ತಿದ್ದು, ಮಹಿಳೆಯರಲ್ಲಿ ಕಾಲೇಜು-ಉನ್ನತ ಶಿಕ್ಷಣದ ಕಲಾ ವಿಭಾಗದಲ್ಲಿ ಹೆಚ್ಚಿನ ವಿದ್ಯಾರ್ಥಿನಿಯರು ಅಭ್ಯಸಿಸುತ್ತಿದ್ದು, ವಿಜ್ಞಾನ, ವಾಣಿಜ್ಯ ಇತರೆ ವಿಭಾಗಗಳಲ್ಲಿ ಕಡಿಮೆಯಿರುವುದು ಸಾಮಾನ್ಯ ಸಂಗತಿ. ಇದಕ್ಕೆ ಕಾರಣ ಗ್ರಾಮೀಣ ಪ್ರದೇಶಗಳಲ್ಲಿ ಹೆಚ್ಚು ಪದವಿ ಕಾಲೇಜುಗಳಿಲ್ಲ. ಈಗಾಗಲೇ ಇರುವ ಅಲ್ಪ ಕಾಲೇಜುಗಳಲ್ಲಿ ಕಲೆ ಮತ್ತು ವಾಣಿಜ್ಯ ವಿಭಾಗಗಳಿದ್ದು, ವಿಜ್ಞಾನ ಇತರೆ ವಿಭಾಗಗಳಿಲ್ಲದಿರುವುದು ಇನ್ನೂ ಉನ್ನತ ಶಿಕ್ಷಣದ ಪರಿಪೂರ್ಣ ಸೌಲಭ್ಯದ ಕೊರತೆಯಿಂದಾಗಿ ಗ್ರಾಮೀಣ ಮಹಿಳೆಯರು ಹೆಚ್ಚಾಗಿ ಉನ್ನತ ಶಿಕ್ಷಣ ದಿಂದ ವಂಚಿತರಾಗುತ್ತಿದ್ದಾರೆ. ಆದ್ದರಿಂದ ಮಹಿಳೆಯರ ಶಿಕ್ಷಣದ ಸಮಸ್ಯೆಗಳನ್ನು ಗಂಭೀರವಾಗಿ, ಕೂಲಂಕುಶವಾಗಿ ತಿಳಿದು ಅವರ ಅಗತ್ಯಕ್ಕೆ ತಕ್ಕಂತೆ ಶಿಕ್ಷಣ ಒದಗಿಸಲು

ಮತ್ತು ಮಹಿಳೆಯರಿಗೆ ಸಾಮಾನ್ಯ ವಿಷಯಗಳ ಜೊತೆಗೆ ಅವರಿಗೆ ಒಲವಿರುವ ಸಂಗೀತ ಕಲೆ, ನೃತ್ಯಕಲೆ, ನಾಟಕ ಕಲೆ, ಚಿತ್ರ ಕಲೆ, ಗೃಹವಿಜ್ಞಾನ, ಪಾಕಶಾಸ್ತ್ರ, ಅಲಂಕಾರಶಾಸ್ತ್ರ ಮುಂತಾದವುಗಳಿಗೆ ಪ್ರತ್ಯೇಕ ವಿಭಾಗಗಳನ್ನು ತೆರೆದು ಶಿಕ್ಷಣ, ವೈದ್ಯಕೀಯ, ಇಂಜಿನಿಯರಿಂಗ್ ವೃತ್ತಿಶಿಕ್ಷಣ ತರಬೇತಿ ಪ್ರತ್ಯೇಕವಾಗಿ ನೀಡಲು, ಹೆಣ್ಣುಮಕ್ಕಳ ಶಿಕ್ಷಣವನ್ನು ಸುವ್ಯವಸ್ಥಿತವಾಗಿ ನಿರ್ವಹಿಸಲು, ಅವರಿಗೆ ಪ್ರತ್ಯೇಕವಾದ ದೂರದ ಶಿಕ್ಷಣ, ಅಂಚೆ ತೆರೆಪಿನ ಶಿಕ್ಷಣ, ಮುಕ್ತ ಶಿಕ್ಷಣಗಳನ್ನು ನೀಡಿ ಅವರ ಸಂಪೂರ್ಣ ಶೈಕ್ಷಣಿಕ ಅಭಿವೃದ್ಧಿಯನ್ನು ಸಾಧಿಸಬೇಕಾದರೆ ಈಗಾಗಲೇ ಉತ್ತರ ಕರ್ನಾಟಕದ ಕೇಂದ್ರ ಸ್ಥಳದಲ್ಲಿ ಮಹಿಳಾ ವಿಶ್ವವಿದ್ಯಾಲಯವನ್ನು ಸ್ಥಾಪಿಸಿರುವಂತೆ ದಕ್ಷಿಣ ಕರ್ನಾಟಕದ ಕೇಂದ್ರ ಸ್ಥಳದಲ್ಲಿ ಮತ್ತೊಂದು ವಿಶ್ವವಿದ್ಯಾಲಯ ಸ್ಥಾಪಿಸಿ ಅವರ ಶಿಕ್ಷಣದ ಅಭಿವೃದ್ಧಿ ಸುಗುಮವಾಗುವಂತೆ ಮಾಡಬೇಕು.

೪. ಬಾಲಕ-ಬಾಲಕಿಯರ ಶಿಕ್ಷಣ ಕ್ರಮದಲ್ಲಿ ಲಿಂಗ ತಾರತಮ್ಯವನ್ನು ಹೋಗಲಾಡಿಸಲು ಬಾಲಕಿಯರಿಗೆ ಹೆಚ್ಚು ಪ್ರತ್ಯೇಕ ಶಾಲೆಗಳನ್ನು ಮತ್ತು ವಸತಿ ಶಾಲೆಗಳನ್ನು ತೆರೆಯಬೇಕು.

೫. ಸಹ ಶಿಕ್ಷಣ ಎಲ್ಲಾ ಹಂತಗಳಲ್ಲಿರಬೇಕು. ಅಲ್ಲಿ ಸ್ತ್ರೀಯರ ಸ್ಥಾನಮಾನ, ಘನತೆ, ಗೌರವಗಳಿಗೆ ಚ್ಯುತಿ ಬಾರದಂತೆ ಕ್ರಮಗಳನ್ನು ಕೈಗೊಳ್ಳುವುದರ ಜೊತೆಗೆ ವಿಶೇಷವಾಗಿ ಗ್ರಾಮೀಣ ಪ್ರದೇಶದ ಎಲ್ಲಾ ಸಹ ಶಿಕ್ಷಣ ಶಾಲೆಗಳಲ್ಲಿ ಕಡ್ಡಾಯವಾಗಿ ಮಹಿಳೆಯರಿಗೆ ಪ್ರತ್ಯೇಕ ಶೌಚಾಲಯಗಳನ್ನು ನಿರ್ಮಿಸಬೇಕು.

೬. ಸ್ತ್ರೀಯರಲ್ಲಿ ಜಾಗೃತಿ ಮತ್ತು ಶಿಕ್ಷಣ ಪಡೆದು ಸಬಲಳಾಗಬೇಕೆಂಬ ಮನಸ್ಸನ್ನು ಸಿದ್ಧಗೊಳಿಸದೆ ಯೋಜನೆಗಳಿಂದ ಪ್ರಯೋಜನವಾಗುವುದಿಲ್ಲ. ಅಲ್ಲದೆ ಸ್ತ್ರೀಯರಿಗೆ ಸೂಕ್ತ ಶಿಕ್ಷಣ ಮತ್ತು ವೃತ್ತಿ ಮಾರ್ಗದರ್ಶನ ನೀಡುವ ಪ್ರತ್ಯೇಕವಾದ ಕೇಂದ್ರಗಳಿಲ್ಲದಿರುವುದರಿಂದ ಮಹಿಳೆಯರು ಶಿಕ್ಷಣ ಮತ್ತು ಉದ್ಯೋಗದಿಂದ ವಂಚಿತರಾಗುತ್ತಿದ್ದಾರೆ. ಆದ್ದರಿಂದ ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ಪ್ರತಿಯೊಂದು ಹೋಬಳಿ ಮಟ್ಟದಲ್ಲಿ ಅಥವಾ ಕನಿಷ್ಟ ಪಕ್ಷ ತಾಲ್ಲೂಕ್ ಮಟ್ಟದಲ್ಲಾದರೂ ಮಹಿಳೆಯರಿಗೆ ಶಿಕ್ಷಣ ಮತ್ತು ವೃತ್ತಿ ಮಾರ್ಗದರ್ಶನದ ಕೇಂದ್ರಗಳನ್ನು ಸ್ಥಾಪಿಸಬೇಕು.

೭. ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳಲ್ಲಿ ಸಹಶಿಕ್ಷಣದ ಅವಕಾಶವಿದ್ದರೂ ಸಹ ಹೆಣ್ಣುಮಕ್ಕಳ ಸಂಖ್ಯೆ ಈ ತರಬೇತಿ ಸಂಸ್ಥೆಗಳಲ್ಲಿ ಬಹಳ ವಿರಳವಾಗಿರುವುದರಿಂದ ಮಹಿಳೆಯರಿಗೆ ವೃತ್ತಿಶಿಕ್ಷಣ ತರಬೇತಿ ನೀಡಿ ಸ್ವಾವಲಂಬಿಗಳನ್ನಾಗಿ ಬೆಳೆಸಲು ಸರ್ಕಾರಿ ಬಾಲಕಿಯ ವೃತ್ತಿ ತರಬೇತಿ ಸಂಸ್ಥೆಗಳನ್ನು ಪ್ರತಿಯೊಂದು ಹೋಬಳಿ ಮಟ್ಟದಲ್ಲಿ ಒಂದೊಂದು ಸಂಸ್ಥೆಯನ್ನು ಪ್ರಾರಂಭಿಸಬೇಕು.

೮. ಕೃಷಿ ವಿಶ್ವವಿದ್ಯಾನಿಲಯಗಳು ಈಗಾಗಲೇ ಮಹಿಳೆಯರಿಗೆ ಕೆಲವೊಂದು ತರಬೇತಿಗಳನ್ನು ನೀಡುತ್ತಿದೆಯಾದರೂ ಜೇನು, ಕೋಳಿ, ಮೊಲ ಸಾಕಣಿಕೆ, ಹೈನುಗಾರಿಕೆ, ಹಣ್ಣುಗಳ ಸಂರಕ್ಷಣೆ, ಬೇಕರಿ ತರಬೇತಿ ಮುಂತಾದ ಇಂದಿನ ಸಮಾಜಕ್ಕೆ

ಅಗತ್ಯವಿರುವ ವಿವಿಧ ಕೈಗಾರಿಕಾ ಮೂಲ ತರಬೇತಿಗಳಿಗೆ ಪ್ರತ್ಯೇಕ ವಿಭಾಗ ತೆರೆದಿಲ್ಲ. ಆದ್ದರಿಂದ ಪ್ರತ್ಯೇಕ ವಿಭಾಗವನ್ನು ತೆರೆದು ಶಾಲೆ ಬಿಟ್ಟ ಮಕ್ಕಳಿಗೆ ಮತ್ತು ಈಗಾಗಲೇ ತರಬೇತಿ ಪಡೆದ ಕ್ಷೇತ್ರದ ಬದಲು ಇನ್ನಿತರ ಕ್ಷೇತ್ರದಲ್ಲಿ ಉದ್ಯೋಗದಲ್ಲಿರುವ ಮಹಿಳೆಯರಿಗೆ ಅಗತ್ಯವಿರುವ ಅಲ್ಪಾವದಿ ತರಬೇತಿಯನ್ನು ಅವರಿಗೆ ಅಗತ್ಯವೆನಿಸಿದಾಗ ಪಡೆಯುವ ಅವಕಾಶ ಕಲ್ಪಿಸುವಂತಾಗಬೇಕು.

೯. ಅಂಗವಿಕಲ ಹೆಣ್ಣುಮಕ್ಕಳಿಗೆ ಸಹಶಿಕ್ಷಣದಲ್ಲಿ ಅವಕಾಶ ಕಲ್ಪಿಸುವುದರ ಜೊತೆಗೆ ಅವರಿಗೆ ವಿಶೇಷ ಸೌಲಭ್ಯ ಒದಗಿಸಬೇಕು ಮತ್ತು ಹೆಚ್ಚು ಅಂಗವಿಕಲ ಮಹಿಳೆಯರಿರುವ ಕಡೆ ಅಥವಾ ತಾಲ್ಲೂಕ್ ಮಟ್ಟದಲ್ಲೊಂದೊಂದು ಪ್ರತ್ಯೇಕ ಅಂಗವಿಕಲ ಹೆಣ್ಣುಮಕ್ಕಳ ವಸತಿ ಶಾಲೆಗಳನ್ನು ತೆರೆಯಬೇಕು.

೧೦. ಹೆಣ್ಣುಮಕ್ಕಳು ಪ್ರೌಢಶಾಲಾ ಹಂತ ತಲುಪುವುದಕ್ಕಿಂತ ಮುಂಚೆ ಅಥವಾ ತಲುಪಿದ ನಂತರ ಋತುಮತಿಯಾಗುವ ಸ್ವಾಭಾವಿಕ ದೈಹಿಕ ಕ್ರಿಯೆಯನ್ನು ಹೊಂದಿರುವುದರಿಂದ ಮತ್ತು ಈ ಸಂದರ್ಭದಲ್ಲಿ ಪೂರ್ವತಾರುಣ್ಯದ ಸಮಸ್ಯೆಗಳನ್ನು ಎದುರಿಸುವುದರಿಂದ ಈ ಹಂತದಲ್ಲಿ ಅವರಿಗೆ ಸೂಕ್ತ ಮಾರ್ಗದರ್ಶನ ಮತ್ತು ಸಲಹೆ ಅಗತ್ಯ. ಇದು ದೊರಕದೇ ಹೋದರೆ ಅವರು ಅನೈತಿಕ ಚಟುವಟಿಕೆಯಲ್ಲಿ ತೊಡಗಬಹುದು ಅಥವಾ ತಮ್ಮ ಸಮಸ್ಯೆಗಳನ್ನು ಸ್ವತಂತ್ರವಾಗಿ ಹೇಳಿಕೊಳ್ಳದೇ ವೇದನೆಯನ್ನು ಅನುಭವಿಸುತ್ತಾರೆ. ಅಲ್ಲದೇ ಇಂದು ಏಡ್ಸ್ ಹೆಮ್ಮಾರಿಯಂತೆ ಆವರಿಸಿದೆ. ಆದ್ದರಿಂದ ಪ್ರೌಢಶಾಲಾ ಹಂತದಲ್ಲಿ ಆರೋಗ್ಯ ಮತ್ತು ಏಡ್ಸ್/ಲೈಂಗಿಕ ಶಿಕ್ಷಣಗಳನ್ನು ಪ್ರತ್ಯೇಕವಾಗಿ ನೀಡಬೇಕು.

೧೧. ದಲಿತ, ಹಿಂದುಳಿದ ಮತ್ತು ಅಲ್ಪಸಂಖ್ಯಾತರ ಗ್ರಾಮೀಣ ಮಹಿಳೆಯರಿಗೆ ಹೆಚ್ಚಾಗಿ ಪ್ರತ್ಯೇಕ ವಿಶೇಷ ಶೈಕ್ಷಣಿಕ ಸೌಲಭ್ಯ ಮತ್ತು ಪ್ರವೇಶಾವಕಾಶಗಳನ್ನು ಶಿಕ್ಷಣದ ಎಲ್ಲಾ ಹಂತಗಳಲ್ಲಿ ಕಡ್ಡಾಯವಾಗಿ ವಿಸ್ತರಿಸಿ ಅವರ ಶೈಕ್ಷಣಿಕ ಅಭಿವೃದ್ಧಿಯನ್ನು ಸಾಧಿಸುವಂತಾಗಬೇಕು.

೧೨. ಗ್ರಾಮೀಣ ಪ್ರದೇಶ ಮತ್ತು ಹಿಂದುಳಿದ ಜಿಲ್ಲೆಗಳಲ್ಲಿ ಅಗತ್ಯಕ್ಕೆ ತಕ್ಕಂತೆ ಮತ್ತು ನಿಯಮಿತ ಅಂತರದಲ್ಲಿ ಶಾಲೆಗಳನ್ನು ಪ್ರಾರಂಭಿಸಿಲ್ಲದ ಸ್ಥಳಗಳಲ್ಲಿ ಪ್ರಾರಂಭಿಸಬೇಕು. ಈ ಶಾಲೆಗಳಿಗೆ ಶಿಕ್ಷಕರು ಮತ್ತು ಉತ್ತಮ ಶೈಕ್ಷಣಿಕ ಸೌಲಭ್ಯಗಳನ್ನು ಕಡ್ಡಾಯವಾಗಿ ಒದಗಿಸಬೇಕು.

೧೩. ತಾಂತ್ರಿಕ ಮತ್ತು ಮಾಹಿತಿ ತಂತ್ರಜ್ಞಾನ ಶಿಕ್ಷಣದಲ್ಲಿ ಸ್ತ್ರೀಯರಿಗೆ ಅವಕಾಶ ಹೆಚ್ಚಾಗಿದ್ದರೂ ಸಹ ಇದು ಗ್ರಾಮೀಣ ಪ್ರದೇಶದ ಸ್ತ್ರೀಯರಿಗೆ ಇದು ತಲುಪಿಲ್ಲ. ಆದ್ದರಿಂದ ಅವರಿಗೆ ತಲುಪಿಸುವಲ್ಲಿ ಮತ್ತು ಸ್ತ್ರೀಯರಿಗೆ ಇನ್ನೂ ಹೆಚ್ಚಿನ ಅವಕಾಶ ಕಲ್ಪಿಸಲು ವಿಶೇಷ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕು.

೧೪. ಮಹಿಳೆಯರಲ್ಲಿ ಹೆಚ್ಚು ಮಂದಿ ಇಲಾಖೆಗಳ ಆಡಳಿತಾಧಿಕಾರಿಯಾಗಿ ಕಾರ್ಯ ನಿರ್ವಹಿಸುವಲ್ಲಿ ಸ್ತ್ರೀಯರು ವಿವಿಧ ಸಮಸ್ಯೆಗಳನ್ನು ಎದುರಿಸಲು ಸಾಧ್ಯವಿಲ್ಲವೆಂಬ ಭೀತಿಯಿದೆ. ಅರ್ಹತೆಯಿದ್ದರೂ ಸಹ ಅಧಿಕಾರವನ್ನು ವಹಿಸಿಕೊಳ್ಳುವಲ್ಲಿ ಹಿಂಜರಿಯುತ್ತಾರೆ ಮತ್ತು ಕೆಲವು ಮಹಿಳೆಯರು ಅಧಿಕಾರವಹಿಸಿಕೊಂಡಾಗಲೂ (ಉದಾ: ಗ್ರಾಮಪಂಚಾಯಿತಿ ಅಧ್ಯಕ್ಷೆ) ಅವರು ಗಂಡ ಅಥವಾ ಸಂಬಂಧಿಕ ಪುರುಷ ಹೇಳಿದಂತೆ ಕೇಳುವ ಕೈ ಗೊಂಬೆಯಾಗಿರುತ್ತಾರೆ. ಆದ್ದರಿಂದ ಅವರಲ್ಲಿ ಸ್ವತಂತ್ರವಾಗಿ ನಿರ್ಭೀತಿಯಿಂದ ನಾಯಕತ್ವ ನಿರ್ವಹಿಸುವಂತೆ ಮಾಡಲು ಶಿಕ್ಷಣದ ಜೊತೆಗೆ ಅಧಿಕಾರ ವಹಿಸಿಕೊಳ್ಳುವ ಪೂರ್ವದಲ್ಲಿ ನಾಯಕತ್ವದ ಅಲ್ಪಾವಧಿ ತರಬೇತಿಯನ್ನು ನೀಡಿ ಅವರಿಗೆ ವಿಶೇಷ ರಕ್ಷಣೆಯನ್ನು ಒದಗಿಸಬೇಕು.

೧೫. ಮಹಿಳೆಯರಿಗೆ ವಕೀಲ, ಶಿಕ್ಷಕಿ, ಡಾಕ್ಟರ್, ವಿಜ್ಞಾನಿ, ಇಂಜಿನಿಯರ್, ಸಾಹಿತಿ, ರಾಜಕಾರಣಿ, ಪೊಲೀಸ್ ಇನ್ಸ್‌ಪೆಕ್ಟರ್ ಮುಂತಾದ ವೃತ್ತಿಗಳಲ್ಲಿ ಇನ್ನೂ ಹೆಚ್ಚಾಗಿ ಪುರುಷರ ಪ್ರಮಾಣಕ್ಕೆ ಸಮಾನಾಗಿ ಕಾರ್ಯನಿರ್ವಹಿಸುವ ಉತ್ಸಾಹ ಮತ್ತು ಸೂಕ್ತ ಸಾಮರ್ಥ್ಯವನ್ನು ಬೆಳೆಸಲು ಅರ್ಹತೆಯಿರುವ ಸ್ತ್ರೀಯರಿಗೆ ವಿಶೇಷ ತರಬೇತಿಯನ್ನು ನೀಡಬೇಕು. ವಿಶೇಷವಾಗಿ ಇಂದು ವಿಜ್ಞಾನ ಕ್ಷೇತ್ರದಲ್ಲಿ ಸ್ತ್ರೀಯರಿಗೆ ವಿಜ್ಞಾನಿಗಳಾಗುವ ಅವಕಾಶ ಕಲ್ಪಿಸಿ ಪುರುಷರಿಂದ ಯಾವುದೇ ಶೋಷಣೆಯಾಗದಂತೆ ಕಠಿಣ ಕ್ರಮಗಳನ್ನು ಜಾರಿಗೊಳಿಸಿ ಮಹಿಳೆಯರು ವಿಜ್ಞಾನಿಗಳಾಗುವಂತೆ ಪ್ರೋತ್ಸಾಹಿಸಬೇಕು.

೧೬. ಶಿಕ್ಷಣ ಪಡೆದ ಕೆಲವು ಸ್ತ್ರೀಯರಲ್ಲಿ ಸಹಜವಾಗಿ ಸಮಾಜ ಸೇವೆ ಮಾಡುವ ಮನೋಭಾವನೆ ಇದ್ದರೂ ಸಹ ಅವರು ಈ ಸಮಾಜದಲ್ಲಿ ಅಂಥ ಕಾರ್ಯದಲ್ಲಿ ಸ್ತ್ರೀ ಭಾಗವಹಿಸುವುದು ತುಂಬಾ ಕಷ್ಟ ಮತ್ತು ಸಮಾಜದಲ್ಲಿ ಅಂತವರಿಗೆ ಯಾವುದೇ ರಕ್ಷಣೆ ಇಲ್ಲದ ಕಾರಣ, ಸಂಪ್ರದಾಯದ ಬಿಗಿಮುಷ್ಠಿಯಿಂದಾಗಿ ಅವರು ಸಾಮಾನ್ಯ ಜೀವನಕ್ಕೆ ಹೊಂದಿಕೊಳ್ಳುತ್ತಾರೆ. ಇದರಿಂದ ಸಮಾಜಕ್ಕೆ ಅವರಿಂದಾಗುವ ಸೇವೆ ಮತ್ತು ಸಮಾಜದ ಅಭಿವೃದ್ಧಿಗೆ ಧಕ್ಕೆಯುಂಟಾಗುತ್ತಿದೆ. ಆದ್ದರಿಂದ ಅಂತಹ ಮಹಿಳೆಯರಿಗೆ ಸೂಕ್ತ ರಕ್ಷಣೆ, ತರಬೇತಿ ನೀಡುವ ಒಂದು ಮಹಿಳಾ ಮಂಡಳಿಯನ್ನು ಶಿಕ್ಷಣ ಕ್ಷೇತ್ರಕ್ಕೆ ಹೊಂದಿಕೊಂಡಂತೆ ಕರ್ನಾಟಕದಲ್ಲಿ ಸ್ಥಾಪಿಸಬೇಕು.

**ಉಪಸಂಹಾರ**

ಕರ್ನಾಟಕದಲ್ಲಿ ಮಹಿಳಾ ಶಿಕ್ಷಣವು ೧೯ನೇ ಶತಮಾನದಿಂದೀಚೆಗೆ ಪ್ರಾರಂಭಗೊಂಡು ಅನೇಕ ಯೋಜನೆ, ಕಾರ್ಯಕ್ರಮಗಳ ಬದಲಾವಣೆಗಳೊಂದಿಗೆ ಇಂದಿನವರೆಗೆ ಬೆಳವಣಿಗೆಯಾಗುತ್ತಾ ಸಾಗುತ್ತಿದೆ. ಇದನ್ನು ಗಮನಿಸಿದಾಗ ಮೊದಲಿನಿಂದಲೂ ಇಂದಿನವರೆಗೆ ಗಣನೀಯವಾಗಿ ಅಭಿವೃದ್ಧಿ ಹೊಂದುತ್ತಿದೆಯಾದರೂ ಪುರುಷರ ಮತ್ತು ಸ್ತ್ರೀಯರ ಒಟ್ಟು ಸಂಖ್ಯೆ ಪ್ರಮಾಣಕ್ಕೆ ಹೋಲಿಸಿದರೆ ಅವರ ಸಾಕ್ಷರತೆ ಪ್ರಮಾಣ ಹಿಮ್ಮುಖದಲ್ಲಿರುವುದು ಕಂಡು ಬರುತ್ತಿದೆ. ಇದನ್ನು ಹೋಗಲಾಡಿಸಲು ಸರ್ಕಾರ ವಿವಿಧ ಯೋಜನೆಗಳನ್ನು

ಇದುವರೆಗೂ ಹಮ್ಮಿಕೊಂಡಿದ್ದರೂ ಸಂಪೂರ್ಣ ಯಶಸ್ಸನ್ನು ಪಡೆಯಲು ಸಾಧ್ಯವಾಗಿಲ್ಲ. ಇದಕ್ಕೆ ಕಾರಣ ಮತ್ತು ಪರಿಹಾರೋಪಾಯಗಳನ್ನು ಕಂಡುಕೊಳ್ಳುವುದು ಇಂದು ಅಗತ್ಯವಿದೆ. ಈ ನಿಟ್ಟಿನಲ್ಲಿ ಪುರುಷ ಮತ್ತು ಸ್ತ್ರೀಯರ ನಡುವಿನ ಅಂತರ ಕಡಿಮೆ ಮಾಡಬೇಕು. ಅಗತ್ಯವಿರುವ ಕಡೆ ಬಾಲಕಿಯರಿಗೆ ಪ್ರತ್ಯೇಕವಾದ ಶಾಲೆ-ಕಾಲೇಜುಗಳನ್ನು ಸ್ಥಾಪಿಸಬೇಕು. ಸ್ತ್ರೀಯರಿಗೆ ಪ್ರತ್ಯೇಕವಾಗಿ ವೃತ್ತಿಶಿಕ್ಷಣ ಮತ್ತು ತಾಂತ್ರಿಕ ಶಿಕ್ಷಣ ನೀಡಲೇಬೇಕು. ಅಂಗವಿಕಲ ಮಕ್ಕಳಿಗೆ ವಿಶೇಷ ಸೌಲಭ್ಯ ಮತ್ತು ಅಗತ್ಯವಿದ್ದಲ್ಲಿ ಪ್ರತ್ಯೇಕ ಶಾಲೆ ಸ್ಥಾಪಿಸಬೇಕು. ದಲಿತ, ಹಿಂದುಳಿದ ಮತ್ತು ಅಲ್ಪಸಂಖ್ಯಾತ ಮಹಿಳೆಯರಿಗೆ ವಿಶೇಷ ಸೌಲಭ್ಯ ಒದಗಿಸಬೇಕು. ಗ್ರಾಮೀಣ ಪ್ರದೇಶದ ಮಹಿಳೆಯರಿಗೆ ಪ್ರತ್ಯೇಕ ವಿಶೇಷ ಸೌಲಭ್ಯ ಮತ್ತು ಅವರ ಅಗತ್ಯಕ್ಕೆ ತಕ್ಕಂತೆ ಶಾಲಾ-ಕಾಲೇಜುಗಳನ್ನು ಸ್ಥಾಪಿಸಬೇಕು. ಸಹ ಶಿಕ್ಷಣವು ಎಲ್ಲಾ ಹಂತದಲ್ಲಿರಬೇಕು ಮತ್ತು ಅಲ್ಲಿ ಹೆಣ್ಣುಮಕ್ಕಳ ಸ್ಥಾನಮಾನ, ಗೌರವ, ಘನತೆಗೆ ಧಕ್ಕೆ ಬಾರದಂತೆ ವ್ಯವಸ್ಥೆ ಮಾಡಬೇಕು. ಹಿಂದುಳಿದ ಜಿಲ್ಲೆಗಳ ಶಿಕ್ಷಣ ಸುಧಾರಿಸಬೇಕು. ಪ್ರೌಢಶಾಲಾ ಹಂತದಲ್ಲಿ ವೃತ್ತಿಶಿಕ್ಷಣಕ್ಕೆ ಅವಕಾಶ ನೀಡಬೇಕು ಮತ್ತು ಲೈಂಗಿಕ ಶಿಕ್ಷಣ ಒದಗಿಸಬೇಕು. ಅವರಿಗೆ ಸೂಕ್ತ ಶಿಕ್ಷಣ ಮತ್ತು ಮಾರ್ಗದರ್ಶನ ನೀಡುವ ಕೇಂದ್ರಗಳನ್ನು ಸ್ಥಾಪಿಸಬೇಕು. ಸ್ತ್ರೀಯರಿಗೆ ಪ್ರತ್ಯೇಕವಾದ ದೂರಶಿಕ್ಷಣ, ಅಂಚೆ ತೆರಪಿನ ಶಿಕ್ಷಣ, ಮುಕ್ತ ಶಿಕ್ಷಣ ಒದಗಿಸಬೇಕು. ವೃತ್ತಿಶಿಕ್ಷಣದ ಅಲ್ಪಾವಧಿ ತರಬೇತಿ ಸಂಸ್ಥೆಗಳನ್ನು ಸ್ಥಾಪಿಸಬೇಕು. ಈ ಎಲ್ಲಾ ಕಾರ್ಯಗಳನ್ನು ವ್ಯವಸ್ಥಿತವಾಗಿ, ನಿರ್ದಿಷ್ಟವಾಗಿ, ಸುಗಮವಾಗಿ ನಿರ್ವಹಿಸಲು ಮತ್ತು ಮಹಿಳಾ ಶಿಕ್ಷಣದ ಸಮಸ್ಯೆಗಳನ್ನು ಮನಗಂಡು ಸರಳವಾಗಿ ಪರಿಹರಿಸಿ ಮಹಿಳಾ ಶಿಕ್ಷಣದ ಆಡಳಿತ ನಿರ್ವಹಣೆ ಸುಭದ್ರಗೊಳ್ಳಬೇಕಾದರೆ ಕರ್ನಾಟಕ ರಾಜ್ಯದಲ್ಲಿ ದಕ್ಷಿಣ ಕರ್ನಾಟಕದ ಕೇಂದ್ರ ಸ್ಥಳದಲ್ಲಿ ಮತ್ತೊಂದು ವಿಶ್ವವಿದ್ಯಾಲಯವನ್ನು ಸ್ಥಾಪಿಸಿ ಮಹಿಳಾ ಶಿಕ್ಷಣದ ಪ್ರಗತಿಗೆ ನಾಂದಿ ಯಾಗಬೇಕು.

ಒಂದು ದೇಶದ ಅಥವಾ ರಾಜ್ಯದ ಸಂಸ್ಕೃತಿ ಮತ್ತು ನಾಗರೀಕತೆಗಳ ಮಟ್ಟವು ಆ ದೇಶದ ಸ್ತ್ರೀಯರ ಸ್ಥಾನಮಾನ ಮತ್ತು ಸ್ವಾತಂತ್ರ್ಯವನ್ನು ಪ್ರತಿಬಿಂಬಿಸುತ್ತದೆ. ಆದ್ದರಿಂದ ಸಮಾಜದ ಅಭಿವೃದ್ಧಿಯಲ್ಲಿ ಸ್ತ್ರೀಯರ ಪಾತ್ರವು ಬಹಳ ಪ್ರಮುಖವಾದುದು. ಈ ನಿಟ್ಟಿನಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಪುರುಷರಷ್ಟೇ ಇರುವ ಸ್ತ್ರೀ ಸಮೂಹದ ಪ್ರಗತಿಯಲ್ಲಿ ಸ್ತ್ರೀ-ಪುರುಷರ ನಡುವಿನ ಅಂತರವನ್ನು ಕಡಿಮೆ ಮಾಡಿ ಅವರ ಶಿಕ್ಷಣವನ್ನು ಸುಧಾರಣೆ ಮಾಡುವಲ್ಲಿ ಈ ಮೇಲ್ಕಂಡ ಅಂಶಗಳನ್ನು ಗಂಭೀರವಾಗಿ ಚಿಂತಿಸಿ ಅವುಗಳನ್ನು ಕಾರ್ಯರೂಪಕ್ಕೆ ತರುವಲ್ಲಿ ರಾಜ್ಯ ಮತ್ತು ಕೇಂದ್ರ ಸರಕಾರಗಳು ಮುಂದಾಗಬೇಕು. ಆಗ ಸ್ತ್ರೀಯರ ಶಿಕ್ಷಣದ ಪ್ರಗತಿ ಸಾಧ್ಯ.

**ಆಧಾರ ಗ್ರಂಥಗಳು**

೧. ಸೂರ್ಯನಾಥ ಯು. ಕಾಮತ್ (೧೯೮೬) ಕರ್ನಾಟಕ ಗ್ಯಾಸೆಟೀಯರ್ ಸಂ. ೩, ಕರ್ನಾಟಕ ಸರ್ಕಾರ.

೨. ಮಹಿಳಾ ಅಭಿವೃದ್ಧಿಯಲ್ಲಿ ಸಾಕ್ಷರತೆ : ಹಸೀನಾ ಹೆಚ್.ಕೆ., ಜನಪದ ಜುಲೈ-೨೦೦೪, ಪು. - ೧೭ ರಿಂದ ೧೯.
೩. ಬೆಂಗಳೂರು ಕರ್ನಾಟಕ ಅಂಕಿ-ಅಂಶಗಳ ಕಿರುನೋಟ : ರಾ.ನಂ. ಚಂದ್ರಶೇಖರ ಮತ್ತು ರಾ. ಪ್ರಭುಶಂಕರ, ಹೊಸತು, ಮೇ-೨೦೦೪, ಪು. - ೫೫ ರಿಂದ ೫೯.
೪. ಕರ್ನಾಟಕದ ಜನಗಣತಿ - ೨೦೦೧.
೫. ಶೈಕ್ಷಣಿಕ ಅಂಶಗಳ ಪಕ್ಷಿನೋಟ - ೨೦೦೨-೦೩, ಸಾರ್ವಜನಿಕ ಶಿಕ್ಷಣ ಇಲಾಖೆ, ಕರ್ನಾಟಕ ಸರ್ಕಾರ.
೬. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಯೋಜನೆಗಳ ಕೈಪಿಡಿ - ೨೦೦೧.
೭. ದೀಕ್ಷಿತ ಜಿ.ಎಸ್. (೧೯೭೦) : ಪ್ರಾಚೀನ ಕರ್ನಾಟಕ ಶಿಕ್ಷಣ ಕ್ರಮ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಗ್ರಹಿಕೆ

# ದಲಿತ ಮಹಿಳಾ ಪರಿಕಲ್ಪನೆ

ಮೊಗಳ್ಳಿ ಗಣೇಶ್

ಬೌದ್ಧಿಕವಾದ ಕಥನಗಳಲ್ಲಿ ಮಹಿಳಾ ಸಮಾಜಕ್ಕೆ ಅವಕಾಶ ಸಾಧ್ಯವಾಗುತ್ತಿರುವುದು ಇತ್ತೀಚೆಗೆ ಅಷ್ಟೆ. ಕಟ್ಟುವ ಹಾಗೂ ಕೆಡಹುವ ಎರಡೂ ಕೆಲಸಗಳನ್ನು ಪುರುಷ ಸಮಾಜ ತಾನೇ ಮಾಡಿಕೊಳ್ಳುತ್ತ ಬಂದಿದ್ದು; ಸ್ತ್ರೀ ಲೋಕದ ಎಲ್ಲ ಬಗೆಯ ಚಿಂತನೆಯನ್ನು ತಡೆದಿದ್ದರಿಂದ ಮಹಿಳಾ ಪರಂಪರೆಗಳನ್ನೆಲ್ಲ ಅಪಮೌಲ್ಯಗೊಳಿಸಿದೆ. ಸಾಮಾಜಿಕ ವ್ಯವಸ್ಥೆಯನ್ನು ಮಾನವೀಯ ಸಂಬಂಧಗಳಿಂದ ಕಟ್ಟುವ ಪ್ರಾಥಮಿಕವಾದ ಎಲ್ಲ ಕಾರ್ಯಗಳನ್ನು ಮಾಡುವವರೇ ಮಹಿಳೆಯರು. ಪುರುಷ ಸಮಾಜವು ಸಮಾಜದ ಹೊರಗಿನ ರೂಪವನ್ನು ರೂಪಿಸಬಲ್ಲದು. ಸಮಾಜದ ಆಂತರಿಕ ವ್ಯವಸ್ಥೆಯು ಮಹಿಳೆಯರ ಅನಿವಾರ್ಯತೆಯಿಂದಲೆ ವಿಕಾಸಗೊಳ್ಳುವುದು. ಪುರುಷ ಮತ್ತು ಮಹಿಳೆಯರ ಸಾಂಸ್ಕೃತಿಕ ಹಾಗೂ ಧಾರ್ಮಿಕ ನೆಲೆಗಳು ಸಂಕೀರ್ಣವಾದ ಮೌಲ್ಯವ್ಯವಸ್ಥೆಯನ್ನು ರೂಪಿಸಿಕೊಂಡಿವೆ. ಆಧುನಿಕೋತ್ತರ ಜಗತ್ತಿನಲ್ಲಿ ಈ ಎರಡೂ ವ್ಯವಸ್ಥೆಗಳ ಮೂಲಕ ಅವರ ಗತಕಾಲದ ಜೊತೆಗೆ ವರ್ತಮಾನವನ್ನು ಸಮೀಕರಿಸಿ ಭವಿಷ್ಯವನ್ನು ನಿರ್ಧರಿಸಬೇಕಾಗುತ್ತದೆ.

ಕನ್ನಡದ ಸಂದರ್ಭದಲ್ಲಿ ಅಥವಾ ಭಾರತದ ವ್ಯಾಪ್ತಿಯಲ್ಲಿ ದಲಿತ ಮಹಿಳಾ ಪರಿಕಲ್ಪನೆಯನ್ನು ನಿರೂಪಿಸಿಕೊಳ್ಳಬೇಕಾದದ್ದು ಇಪ್ಪತ್ತೊಂದನೆ ಶತಮಾನದ ಸಾಂಸ್ಕೃತಿಕ ರಾಜಕಾರಣದ ಅನಿವಾರ್ಯತೆ. ಅಖಂಡವಾದ ಮಹಿಳಾ ನೆಲೆಯಿಂದಲೆ 'ದಲಿತ ಮಹಿಳೆ'ಯನ್ನು ವ್ಯಾಖ್ಯಾನಿಸುವ ಅಗತ್ಯವಿಲ್ಲ. ಭಾರತೀಯ ಸಮಾಜ ತನ್ನ ಧಾರ್ಮಿಕತೆಯಲ್ಲಿ ಅಖಂಡತ್ವವನ್ನು ಪ್ರತಿಪಾದಿಸಬಲ್ಲದು. ಅಧಿಕಾರ ರಚನೆಯಲ್ಲಿ ಅಖಂಡವಾದ ಏಕಾಕೃತಿಯಲ್ಲಿ ಅದು ತನಗೆ ಬೇಕಾದಂತೆ ಮೌಲ್ಯಗಳನ್ನು ವೃದ್ಧಿಸಿಕೊಳ್ಳಬಲ್ಲದು. ಅಖಂಡ ಪ್ರಜ್ಞೆಯನ್ನು ಸದಾ ಮುರಿಯುವಲ್ಲಿಯೆ ಜಾತಿಗಳು ಕ್ರಿಯಾಶೀಲವಾಗಿರುತ್ತವೆ. ಸಮಷ್ಟಿಯಾದ ಲಿಂಗಸಂಬಂಧಗಳು ಕೂಡ ಭಾರತೀಯ ಸಮಾಜದಲ್ಲಿ ಇಲ್ಲ. ಲಿಂಗ ಸಂಬಂಧವೂ ಜಾತಿಯ ಕೂಪದಿಂದಲೆ ನಿರೂಪಿಸಲ್ಪಡುತ್ತದೆ. ಇನ್ನು ಲೈಂಗಿಕ ಶೋಷಣೆಯಂತೂ ಜಾತಿಯ ಅಧಿಕೃತ ಹಕ್ಕುದಾರಿಕೆಯಿಂದ ಯಾವ ತಡೆಯೂ ಇಲ್ಲದಂತೆ ಸಾಮಾಜಿಕ ಹಾಗೂ ಧಾರ್ಮಿಕ ಒಪ್ಪಿಗೆಯ ಮೇರೆಗೇ

ನಡೆಯುತ್ತಿರುತ್ತದೆ. ಜಾತಿ ಪದ್ಧತಿಯು ಭಾರತೀಯ ಮಹಿಳಾ ಲೋಕವನ್ನು ಹೇಯವಾಗಿ ಸೀಳಿದೆ. ಮಹಿಳೆಯರ ಸ್ವಾತಂತ್ರ್ಯವನ್ನು ಜಾತಿ ಬಹಳ ಸುಲಭವಾಗಿ ತುಂಡರಿಸಬಲ್ಲದು. ವರ್ಣಾಶ್ರಮ ಮೌಲ್ಯಗಳೆಲ್ಲವು ಜಾತಿಯ ಹಾಗೂ ಪುರುಷ ಸೂತಕದಿಂದಲೆ ಮಹಿಳೆಯರನ್ನು ಅಸ್ಪೃಶ್ಯರನ್ನಾಗಿಸಿವೆ. ಆದರೆ ದಲಿತ ಮಹಿಳೆಯರನ್ನು ಅವು ಮತ್ತೂ ಕ್ರೂರವಾಗಿ ದಂಡಿಸ ಬಲ್ಲವು. ಮೇಲು ಜಾತಿಯ ಮಹಿಳೆಯರಿಗೆ ಪುರುಷಶಾಹಿಯು ತನ್ನ ಖಾಸಗೀ ಆಸ್ತಿ ಎಂಬಂತೆ ರಕ್ಷಣೆಯನ್ನು ಕೊಡಬಲ್ಲದು. ವಾಸ್ತವದಲ್ಲಿ ಮೇಲು ಜಾತಿಯ ಮಹಿಳೆಗೆ ಅಂತಹ ರಕ್ಷಣೆಯೂ ಬೇಲಿಯೆ. ಆದರೂ ಕೂಡ ಕೆಲವೊಂದು ನೆಲೆಯಲ್ಲಿ ಉನ್ನತ ಜಾತಿಯ ಕಾರಣಕ್ಕೆ ಅಂತಹ ಮಹಿಳೆಯರಿಗೆ ಸಾಮಾಜಿಕವಾದ ಅವಕಾಶಗಳು ಇರುವುದರಿಂದ ಶೋಷಣೆಯನ್ನು ಎಲ್ಲ ಜಾತಿಯ ಪುರುಷರು ಹೇರಲಾಗದು. ದಲಿತ ಮಹಿಳೆಯರ ಮೇಲೆ ಸಮಾಜದ ಎಲ್ಲ ಮೇಲ್‌ಜಾತಿಗಳೂ ಅಧಿಕಾರ ಚಲಾಯಿಸಬಲ್ಲವು. ಅಲ್ಲದೆ ಅದೇ ಮೇಲು ಜಾತಿಯ ಮಹಿಳೆಯರೂ ದಲಿತ ಮಹಿಳೆಯ ಮೇಲೆ ಅವಕಾಶ ಸಿಕ್ಕಲ್ಲೆಲ್ಲ ಮೇಲರಿಮೆಯ ಕಲ್ಪಿತ ಸ್ಥಾನಮಾನಗಳಿಂದ ಒಡತಿಯಾಗಿ ನಿರ್ದೇಶಿಸಬಲ್ಲರು.

ಊಳಿಗಮಾನ್ಯ ಸಮಾಜದ ಹಳೆಯ ಮೌಲ್ಯಗಳು ಜಾತಿ ಪದ್ಧತಿಯಲ್ಲಿ ಆಳವಾಗಿ ಬೇರು ಬಿಟ್ಟ ಕಾರಣದಿಂದಲೂ ದಲಿತ ಮಹಿಳೆಯ ಅಸ್ತಿತ್ವವನ್ನು ಮೇಲುಜಾತಿಯ ಸ್ತ್ರೀಯರ ಮೂಲಕ ಗುರುತಿಸಿಕೊಳ್ಳಲು ಬರುವುದಿಲ್ಲ. ಲೈಂಗಿಕವಾಗಿ ನಿರಂತರ ಶೋಷಣೆಗಾಗಿಯೆ ಕೆಲವೊಂದು ಸಮುದಾಯಗಳ ಸ್ತ್ರೀಲೋಕವನ್ನೆ ದೇವದಾಸಿಯರನ್ನಾಗಿಸಿಕೊಂಡ ಊಳಿಗಮಾನ್ಯ ಸಮಾಜವು ದೇವರ ಹೆಸರಲ್ಲೆ ಲೈಂಗಿಕ ಆಕ್ರಮಣಗಳನ್ನು ನಡೆಸುತ್ತದೆ. ಮೇಲುಜಾತಿಯ ಸ್ತ್ರೀಯರಿಗೆ ಕುಟುಂಬದ ಚೌಕಟ್ಟಿನಲ್ಲಿ ಆ ಜಾತಿಯ ಒಳಾವರಣದಲ್ಲಿ ಲೈಂಗಿಕ ಶೋಷಣೆ ಹೆಚ್ಚಿದ್ದರೆ ದಲಿತ ಮಹಿಳೆಯರ ಮೇಲಿನ ಲೈಂಗಿಕ ಹಲ್ಲೆಗಳಿಗೆ ಇಡೀ ಪುರುಷ ಸಮಾಜವೆ ಪೈಪೋಟಿ ನಡೆಸಬಲ್ಲದು ಹಾಗೂ ದಿಗ್ವಿಜಯ ಪಡೆದು ಬೀಗಬಲ್ಲದು. ಸ್ತ್ರೀ ದೈವಗಳನ್ನೆ ಲೈಂಗಿಕ ಶೋಷಣೆಗೆ ಸೃಷ್ಟಿಸಿಕೊಂಡ ಊಳಿಗಮಾನ್ಯ ಪುರುಷ ಸಮಾಜವು ವೈದಿಕ ಧರ್ಮದಷ್ಟೆ ಕ್ರೂರವಾಗಿ ದಲಿತ ಮಹಿಳೆಯರನ್ನು ಹಿಂಸಿಸಿದೆ. ಇಂತಹ ಮೌಲ್ಯಗಳು ಹಳೆಯ ಕಾಲದವಾಗಿದ್ದರೂ ಅವು ಈ ಕಾಲದಲ್ಲಿ ಜೀವಂತವಾಗಿವೆ.

ದಲಿತ ಮಹಿಳೆಯರು ಸಾಂಸ್ಕೃತಿಕವಾಗಿ ಮಾತ್ರ ಒಂದಿಷ್ಟು ಅಭಿವ್ಯಕ್ತಿಯನ್ನು ಮೌಖಿಕ ಪರಂಪರೆಯಲ್ಲಿ ಸಾಧಿಸಿದ್ದಾರೆ. ಆ ಸಾಂಸ್ಕೃತಿಕ ಅಭಿವ್ಯಕ್ತಿ ಕೂಡ ನಿರ್ಣಾಯಕವಾದದ್ದಲ್ಲ. ರಮ್ಯ ರೋಧನ ಅವರ ಅಭಿವ್ಯಕ್ತಿಯಾಗಿದ್ದು ಮೌಖಿಕ ಪರಂಪರೆಯಲ್ಲಿ ದಲಿತ ಮಹಿಳೆಯರ ಅಸಂಖ್ಯಾತ ಕಥನಗಳು ಕಾಲದ ಅಲೆಯಲ್ಲಿ ತೇಲಿಹೋಗಿವೆ. ವರ್ತಮಾನದ ಸಮಾಜದಲ್ಲಿ ದಲಿತ ಮಹಿಳೆಯರು ಯಾವ ಬಗೆಯಲ್ಲು ದೊಡ್ಡ ಸಮಾಜದ ಜಾತಿ ರಾಜಕಾರಣದಲ್ಲು ಆರ್ಥಿಕ ವ್ಯವಸ್ಥೆಯಲ್ಲು ತಮ್ಮನ್ನು ಗುರುತಿಸಿಕೊಳ್ಳಲಾರರು. ಮಹಿಳಾವಾದ ಎಂಬ ಬೃಹತ್ ಚೌಕಟ್ಟು ಮೇಲು ನೋಟಕ್ಕೆ ಘನವಾಗಿದ್ದರೂ ಅದರ ಆಶಯ ಮತ್ತು ಸಮಸ್ಯೆಗಳು ಮಹಿಳಾ ಸಮಾಜದ ಕೆಲವರ ಮುಖವಾಣಿಯಾಗಿ ಮಾತ್ರ ಕಂಡು ಬೇರೆ ಬೇರೆ ಮಹಿಳಾ

ಸಂವೇದನೆಯನ್ನು ಅವು ಕಸಿದುಕೊಳ್ಳುತ್ತಿರುತ್ತವೆ. ಎಲ್ಲ ಮಹಿಳೆಯರು ಅಪಮಾನಿತರೇ ಎಂದು ಒಪ್ಪಿಕೊಂಡರು ಎಲ್ಲರ ಅಪಮಾನಗಳು ಒಂದೇ ಆಗಿಲ್ಲ. ಎಲ್ಲ ಮಹಿಳೆಯರ ಮೇಲೆ ಪುರುಷಾಧಿಪತ್ಯವು ಆಧಿಪತ್ಯ ಸಾಧಿಸಿದೆ ಎಂದಾಗಲೂ ಎಲ್ಲ ಮಹಿಳೆಯರ ಮೇಲೆ ಅದರ ಅಧಿಕಾರವು ಒಂದೇ ಬಗೆಯಲ್ಲಿಲ್ಲ. ದಲಿತ ಮಹಿಳೆಯರ ಮೇಲಿನ ಅಪಮಾನವನ್ನು ಪ್ರಶ್ನಿಸುವುದಕ್ಕೂ ಅವಕಾಶವಿಲ್ಲ. ವೇಶ್ಯೆಯಾಗಿರಬೇಕಾದದ್ದು ಆಕೆಯ ಕರ್ತವ್ಯ ಎಂದು ಸಮಾಜದ ಪುರುಷಾಧಿಕಾರವು ಅಲಿಖಿತ ಶಾಸನವನ್ನು ಹೇರುವಾಗ 'ಒಡತಿ'ಯಾದವಳು ಕಲ್ಪಿತ ಅಧಿಕಾರವನ್ನು ಪಡೆದಿದ್ದರೂ ಅಷ್ಟರ ಮಟ್ಟಿಗೆ ಆಕೆ ಎರಡಲುಗಿನ ಕತ್ತಿಯಿಂದ ಪಾರಾಗಬಲ್ಲಳು. ಪ್ರತಿ ಹಂತದಲ್ಲೂ ದಲಿತ ಮಹಿಳೆಗೆ ಅಪಮಾನವೆ ಮಾನ. ಜಾಡಮಾಲಿ ಕೆಲಸ ಮಾಡುವ ದಲಿತ ಮಹಿಳೆಯು ಯಾವುದೇ ಕಾರಣಕ್ಕೂ ಸಮಾಜದ ಮೇಲು ಜಾತಿಯ ಮಹಿಳೆಯ ಆವರಣಕ್ಕೆ ಪ್ರವೇಶಿಸಲು ಸಾಧ್ಯವಾಗುವುದಿಲ್ಲ. ಅಧಿಕಾರದ ತಡೆಗೋಡೆಗಳು ಆಕೆಯನ್ನು ನಿರ್ಣಾಯಕವಾಗಿ ಕೆಳಗುರಳಿಸಬಲ್ಲವು. ತಪ್ಪಿಸಿಕೊಳ್ಳಲು ಮೇಲು ಜಾತಿಯ ಮಹಿಳೆಯರಿಗೆ ಮೇಲು ಜಾತಿಯ ಪುರುಷಶಾಹಿಯು ಕಿರು ಅವಕಾಶಗಳನ್ನು ನೀಡಿದೆ. ಈ ಅವಕಾಶ ತಾತ್ಕಾಲಿಕವಾಗಿರಲೂಬಹುದು. ಆದರೆ ಶೋಷಣೆಯ ತೀವ್ರತೆಯಿಂದ ಬಚಾವಾಗಿ ಉಳಿಯಲು ಇದರಿಂದ ಸಾಧ್ಯ. ಬ್ರಾಹ್ಮಣ ಮಹಿಳೆಯು ತನ್ನೆಲ್ಲ ಧಾರ್ಮಿಕ ಕೋಟೆಯ ನರಕದಿಂದ ಬಳಲುವುದು ಅಮಾನವೀಯವಿದ್ದರೂ ದಲಿತ ಮಹಿಳೆಯು ಇಡೀ ಸಮಾಜದ ವ್ಯಾಪ್ತಿಯಲ್ಲಿ ಹಿಂಸೆಗೆ ತನ್ನನ್ನು ತಾನು ಒಪ್ಪಿಸಿಕೊಳ್ಳುವುದು ಕ್ರೌರ್ಯದ ಸ್ವರೂಪವನ್ನು ಹಾಗೂ ಅವರ ಅಸ್ತಿತ್ವದ ನೆಲೆಯನ್ನು ಸ್ಪಷ್ಟವಾಗಿ ತೋರುತ್ತಿದೆ. ಬ್ರಾಹ್ಮಣ ಮಹಿಳೆ ಮತ್ತು ದಲಿತ ಮಹಿಳೆಯು ಜೈವಿಕವಾಗಿ ಒಂದೆ ಆಗಿದ್ದರೂ, ಅವರ ಭಾವನೆಗಳು ಸಾಮ್ಯತೆಯನ್ನು ಪಡೆದಿದ್ದರೂ ಅವರು ಎದುರಿಸಬೇಕಾದ ಸವಾಲುಗಳು ಬೇರೆ ಬೇರೆ. ಶೋಷಣೆಯ ಪ್ರಮಾಣದಲ್ಲು ಅಂತರವಿದೆ. ಸಮಾಜವು ಅವರನ್ನು ಶೋಷಿಸುವ ಕ್ರಮದಲ್ಲು ವ್ಯತ್ಯಾಸವಿದೆ. ಅಂತೆಯೆ ಅವರವರ ಸಾಂಸ್ಕೃತಿಕ ಲೋಕಗಳೂ ಬೇರೆಯೆ ಆಗಿವೆ. ದಲಿತ ಮಹಿಳೆಯರನ್ನು ಪ್ರಧಾನ ಮಹಿಳೆಯರ ಜೊತೆಗಿಟ್ಟು ವಾಖ್ಯಾನಿಸಿದರೆ ಅದು ಕೂಡ ಬೌದ್ಧಿಕ ಶೋಷಣೆಯೆ. ಅಪಮೌಲ್ಯಗಳ ಸಂತೆಯಾಗಿರುವ ಭಾರತೀಯ ಸಮಾಜಶಾಸ್ತ್ರಗಳು ಭಿನ್ನವಾದ ಸ್ವೋಪಜ್ಞ ನೆಲೆಗಳಲ್ಲಿ ಪ್ರಾಮಾಣಿಕವಾಗಿರಬೇಕಾದರೆ ಪ್ರತಿಯೊಂದು ಲಿಂಗ, ಜಾತಿ, ವರ್ಗಗಳ ಧಾರ್ಮಿಕ ಆರ್ಥಿಕ ರಾಜಕೀಯ ಸಮಸ್ಯೆಗಳನ್ನು ಹೊಸ ಕಾಲದ ಅವಕಾಶದಲ್ಲೆ ಅವುಗಳಿಗಿರುವ ಸವಾಲು ಗಳ ಕ್ರಮದಲ್ಲೆ ಅಧ್ಯಯನ ಮಾಡಬೇಕಾಗುತ್ತದೆ.

ಲಿಂಗ ಶೋಷಣೆಗೂ ಜಾತಿಗೂ ಅಂತರ್ ಸಂಬಂಧಗಳನ್ನು ತೇಲಿಸಿಬಿಡಬಾರದು. ಎಲ್ಲರ ಸಾಮಾಜಿಕ ಸ್ಥಾನಮಾನಗಳು ಪೂರ್ಣವಾಗಿಯೆ ಪರಿಸ್ಕರಿಸಲ್ಪಡಬೇಕಾಗಿದೆ. ದಲಿತ ಮಹಿಳೆಯ ಪರಿಕಲ್ಪನೆಯು ಅಖಂಡ ಮಹಿಳಾ ಪ್ರಜ್ಞೆಯನ್ನು ಭಗ್ನಗೊಳಿಸುವಂತದಲ್ಲ. ಹಾಗೆ ನೋಡಿದರೆ ಭಾರತದ ಯಾವ ಕಾಲದಲ್ಲು ಅಖಂಡ ಮಹಿಳಾ ಪ್ರಜ್ಞೆ ಎಂಬುದು ಇರಲೇ ಇಲ್ಲ. ಹಾಗೆ ಇರುವುದೂ ಅಸಾಧ್ಯ. ಅಖಂಡ ಮಹಿಳೆ ಎನ್ನುವುದು ಪುರುಷ ಪ್ರಭುತ್ವದ ಮುಂದೆ ಎಂದೂ

ಕಳೆದುಹೋಗಿದೆ. ಆದಿಮ ಕಾಲಘಟ್ಟದಲ್ಲಿ ಮಾತೃ ಮೌಲ್ಯ ವ್ಯವಸ್ಥೆಯಲ್ಲಿ ಅಂತಹ ಸಾಮಾಜಿಕ ನಂಬಿಕೆ ಇದ್ದಿರಬಹುದು. ಅದು ಕೂಡ ತಾತ್ಕಲಿಕ ವಾದುದಾಗಿತ್ತು. ಸಂಸ್ಕೃತಿಯ ವಿಕಾಸದಲ್ಲಿ ಪುರುಷ ಮತ್ತು ಮಹಿಳೆಯರ ಎರಡೂ ವಿಶ್ವಾತ್ಮಕ ನಂಬಿಕೆಗಳು ಕೂಡಿಯೆ ಮುಂದೆ ಹಲವು ನೆಲೆಯ ಅಂತರ, ತಾರತಮ್ಯ ವೈರುಧ್ಯಗಳು ಬೆಳೆದದ್ದು. ವಿಭಿನ್ನ ಚಹರೆಯ ಗುಂಪುಗಳು ಕವಲಾಗಿ ಸಾಮೂಹಿಕವಾಗಿ ಸಾಗುವಾಗ ಮಾತೃ ಪಿತೃ ಎರಡೂ ಲಿಂಗಸಂಬಂಧಿ ಮೌಲ್ಯಗಳು ಸಾಮ್ಯ ಒಪ್ಪಂದವನ್ನು ಮಾಡಿಕೊಂಡದ್ದರ ಸಂಕೇತವಾಗಿಯೆ ಕುಟುಂಬದ ರಚನೆ ಈಗ ಬೇರೆ ಅಸ್ತಿತ್ವದಲ್ಲಿ ಇರುವುದು. ಇಂತಹ ಪ್ರಾಥಮಿಕ ಘಟಕಕ್ಕೆ ಜಾತಿಯ ಸಂಬಂಧಗಳು ಬೆಸೆದುಕೊಂಡ ನಂತರಕ್ಕೆ ಲಿಂಗ ತಾರತಮ್ಯಗಳು ಇನ್ನಷ್ಟು ಬಲಗೊಂಡಿವೆ. ದಲಿತ ಮಹಿಳೆ ಈ ಬಗೆಯ ಎಲ್ಲ ಹಂತಗಳಲ್ಲು ಇಕ್ಕಟ್ಟನ್ನು ಎದುರಿಸಿ ಉಳಿದುಕೊಂಡಿದ್ದಾಳೆ. ಆಕೆಯ ಅಸ್ತಿತ್ವವನ್ನು ಸರಳವಾದ ಪುರುಷಾಕೃತಿಯ ತಾರತಮ್ಯದಿಂದ ನಿರ್ಧರಿಸಿದರೆ ಆಧುನಿಕ ಜಗತ್ತಿನಲ್ಲಿ ಸೂಕ್ತವಾದ ಅವಕಾಶವೆ ಆಕೆಗೆ ತಪ್ಪಿಹೋಗುವ ಸಂಭವ ಇರುತ್ತದೆ.

ಬ್ರಾಹ್ಮಣ್ಯದ ತಂತ್ರವು ದಲಿತ ಮಹಿಳೆಯನ್ನು ನೇರವಾಗಿ ಬಲಿಪಶುವನ್ನಾಗಿಸಿದ್ದರೂ ಆ ಕೃತ್ಯವನ್ನು ಅದು ತಾನೇ ಮಾಡದೆ ಊಳಿಗಮಾನ್ಯ ಜಾತಿಗಳ ಮೂಲಕ ಅದನ್ನು ಮಾಡಿಸುತ್ತದೆ. ಹಿಂಸೆಯ ತತ್ವ ಹಿಂದೂ ಧರ್ಮದ್ದಾಗಿದ್ದರೂ ಅದರ ಕ್ರೌರ್ಯಾಚರಣೆಯನ್ನು ಯಶಸ್ವಿಯಾಗಿ ನಿರ್ವಹಿಸುವುದು ಮಧ್ಯಮ ಜಾತಿಗಳದೇ ಆಗಿರುವುದರಿಂದ ಜಾತಿಯ ಉದ್ದಕ್ಕು ವಕ್ರದಂಡ ನ್ಯಾಯಗಳು ಸೇರಿಕೊಂಡಿವೆ. ಬ್ರಾಹ್ಮಣ್ಯವು ಹಸುವಿನಂತೆ ಕಂಡರೂ ಅದರ ವ್ಯಾಘ್ರ ಮುಖ ಹೊರ ಜಗತ್ತಿಗೆ ಗೋಚರವಾಗುವುದಿಲ್ಲ. ಈ ಬಗೆಯ ವ್ಯಾಘ್ರತೆ ಯನ್ನು ವೇದಗಳ ಸಾಮ್ರಾಜ್ಯ ತಗ್ಗಿಸುತ್ತಾ ಬಂದಂತೆಲ್ಲ ಊಳಿಗಮಾನ್ಯ ಮಧ್ಯಮ ಜಾತಿಗಳ ಸಾಮ್ರಾಜ್ಯಗಳು ಜಾತಿ ಬಲದಿಂದ ಇಡೀ ಸಮಾಜವನ್ನು ತಮ್ಮ ತೆಕ್ಕೆಗೆ ತೆಗೆದುಕೊಂಡು ಆ ಮೂಲಕ ವೈದಿಕ ವ್ಯವಸ್ಥೆಯನ್ನು ನಾಚಿಸುವಂತೆ ಕ್ರೌರ್ಯವನ್ನು ಮೆರೆದು ದಲಿತ ಮಹಿಳೆಯರನ್ನು ಬೆತ್ತಲೆಗೊಳಿಸಿದೆ. ಊಳಿಗಮಾನ್ಯ ವ್ಯವಸ್ಥೆಯು ಮೇಲು ಜಾತಿಗಳ ಮೇಲೆ ತಮ್ಮ ಪ್ರಭಾವವನ್ನು ಬೀರಲು ಸಾಧ್ಯವಿರಲಿಲ್ಲ. ಎಲ್ಲ ಕೆಳಜಾತಿಗಳ ಮೇಲೆ ಎಲ್ಲ ಬಗೆಯ ಆಳ್ವಿಕೆಯನ್ನು ನಡೆಸಿರುವ ಭೂಮಾಲೀಕ ಜಾತಿಗಳು ವಿಶೇಷವಾಗಿ ದಲಿತ ಮಹಿಳೆಯರ ಅಧಿಕಾರದ ನೆಲೆಗಳನ್ನು ಸದೆ ಬಡಿದಿವೆ. ಜನಪದ ಸಂಸ್ಕೃತಿಯ ವಿಕಾಸದಲ್ಲಿ ನಿಚ್ಚಳವಾಗಿ ಇದು ಕಾಣುತ್ತದೆ.

ಮಧ್ಯಕಾಲೀನ ಪ್ರಭುತ್ವದ ಚರಿತ್ರೆಯು ಇಂತಹ ಸ್ಥಿತಿಗೆ ಬಲವಾದ ಅವಕಾಶಗಳನ್ನು ಕಂಡುಕೊಂಡಿತ್ತು. ಗ್ರಾಮದೈವಗಳ ನೆಲೆಯಲ್ಲಿ ದಲಿತ ಮಹಿಳಾ ಸಮಾಜವು ತನಗೆ ಬೇಕಾದ ಸಾಂಸ್ಕೃತಿಕ ಪರಿಸರವನ್ನು ನಿರ್ಮಿಸಿಕೊಂಡಿತ್ತು. ಆ ಬಗೆಯ ಪರಿಸರದಲ್ಲಿ ಅದು ತನ್ನ ಅಸ್ತಿತ್ವವನ್ನು ಕಾಯ್ದುಕೊಂಡಿತ್ತು. ಹೊರಗಿನ ಆಕ್ರಮಣಗಳನ್ನು ಎದುರಿಸಲು ಹಾಗೂ ತನ್ನನ್ನು ತಾನೆ ಸಂತೈಸಿಕೊಳ್ಳಲು ಗ್ರಾಮದೈವ ಪರಂಪರೆಯಿಂದ ಸಾಧ್ಯವಾಗಿತ್ತು. ಊಳಿಗಮಾನ್ಯ ವ್ಯವಸ್ಥೆಯು ವೈದಿಕ ಶಾಹಿಯ ಯಾವ ದೈವಗಳ ಮೇಲು ಆಕ್ರಮಣ ಮಾಡಲಿಲ್ಲ. ಬದಲಿಗೆ

ಅಂತಹ ದೈವಗಳ ಜೊತೆ ಸಂಧಾನ ಮಾಡಿಕೊಂಡು ತನ್ನ ಪುರುಷ ದೈವಗಳನ್ನು ಸ್ಥಳೀಯವಾಗಿ ವಿಸ್ತರಿಸಿಕೊಂಡಿತು. ಗ್ರಾಮದೈವಗಳು ಪ್ರಧಾನವಾಗಿ ಸ್ತ್ರೀ ಕೇಂದ್ರಿತವಾದಂತವು. ಇವನ್ನೆಲ್ಲ ಊಳಿಗಮಾನ್ಯ ಪುರುಷ ವ್ಯವಸ್ಥೆಯು ತನ್ನ ಅಧಿಕಾರ ವ್ಯವಸ್ಥೆಯ ಸಂರಕ್ಷಣೆಗೆ ತಕ್ಕಂತೆ ರೂಪಿಸಿಕೊಂಡು ಎಲ್ಲ ಪುರುಷ ದೈವಗಳು ಗ್ರಾಮದೈವಗಳ ಮೇಲೆ ದಿಗ್ವಿಜಯ ಸಾಧಿಸಿ ಭೂಮಾಲೀಕರ ಸವಲತ್ತುಗಳನ್ನು ಕಾದಿವೆ.

ದಲಿತ ಮಹಿಳೆಯರಿಗಿದ್ದ ಗ್ರಾಮದೈವಾಚರಣೆಗಳು ಪುರುಷ ಸಮಾಜದ ಮುಂದೆ ಸೋತದ್ದರಿಂದ, ವೀರಭದ್ರ, ಹನುಮಂತ, ಮೈಲಾರ, ಮಾದೇಶ್ವರ, ಮಂಟೇಸ್ವಾಮಿ, ಜುಂಜಪ್ಪ ತರದ ಅನೇಕ ಪುರುಷ ಪ್ರಧಾನ ಸಾಂಸ್ಕೃತಿಕ ನಾಯಕರಿಂದ ಮತ್ತೆ ಪುರುಷಾಕೃತಿಯ ಆಚರಣೆ ಹಾಗೂ ಮೌಲ್ಯಗಳೆ ಪುನರುಜ್ಜೀವನಗೊಳ್ಳಲು ಕಾರಣವಾಗಿದೆ. ಅಧಿಕಾರ ರಹಿತವಾದ ಸ್ತ್ರೀ ದೈವಗಳೆಲ್ಲ ಪುರುಷ ದೈವಗಳ ಮುಂದೆ ಬೆದರುಗೊಂಬೆಯಂತೆ ಕಾಣುತ್ತವೆ. ವೈದಿಕ ಪರಂಪರೆಯಲ್ಲಿ ಹೇಗೆ ಪ್ರಾಚೀನ ಕಾಲದ ಹಂತಗಳಲ್ಲಿ ಮೇಲು ಜಾತಿಗಳ ಸ್ತ್ರೀಯರ ಅಧಿಕಾರವನ್ನು ತುಂಡು ಮಾಡಲಾಯಿತೊ ಹಾಗೆಯೆ ಮಧ್ಯಕಾಲೀನ ಪ್ರಭುತ್ವದ ವಾತಾವರಣದಲ್ಲಿ ದಲಿತ ಮಹಿಳೆಯರ ಎಲ್ಲ ಬಗೆಯ ದೈವಾಚರಣೆಗಳನ್ನು ಅಪಮೌಲ್ಯಗೊಳಿಸಿ ಆ ಸ್ತ್ರೀಯರಿಗಿದ್ದ ಕನಿಷ್ಠ ಅಭಿವ್ಯಕ್ತಿಯನ್ನು ಕಿತ್ತುಕೊಳ್ಳುವಂತೆ ಪುರುಷ ಮೌಲ್ಯಗಳನ್ನು ಪ್ರತಿಷ್ಠಾಪಿಸಲಾಗಿದೆ. ಈ ಅಂಶವನ್ನು ಆಧುನಿಕ ಯುಗದಲ್ಲಿ ದಲಿತ ಮಹಿಳಾ ಪರಿಕಲ್ಪನೆಯನ್ನು ವಿಶ್ಲೇಷಿಸುವಾಗ ಗಮನಿಸಲೇಬೇಕು. ದಲಿತ ಮಹಿಳೆಯರಿಗೆ ಪೂರ್ವದಲ್ಲೆ ಹಿಂಸಾತ್ಮಕ ಮೌಲ್ಯಗಳು ದಂಡಿಸಿ ಆಕೆಯನ್ನು ದಾಸ್ಯಕ್ಕೆ ನೂಕಿದ್ದವು. ಅಂತದರಲ್ಲು ಗ್ರಾಮದೈವಗಳ ಮೂಲಕ ಬುಡಕಟ್ಟು ದೈವಾರಾಧನೆಯ ಮೂಲಕ ದಲಿತ ಮಹಿಳೆಯರು ತಮ್ಮ ಅಭಿವ್ಯಕ್ತಿಯ ಅಸ್ತಿತ್ವದ ಸ್ಥಾನವನ್ನು ರೂಪಿಸಿಕೊಂಡಿದ್ದರು. ಮಧ್ಯಯುಗದ ವೀರಪ್ರಧಾನ ದಾಹವು ಗ್ರಾಮದೈವಗಳನ್ನೆಲ್ಲ ಒಂದೇ ಏಟಿಗೆ ಹೊಡೆದುರುಳಿಸಿದ ಮೇಲೆ ಗ್ರಾಮದ ದಲಿತ ಆಚರಣೆಗಳಾಗಲಿ ಆ ಸ್ತ್ರೀಯರ ಚಹರೆಗಳಾಗಲಿ ತಮ್ಮ ತನವನ್ನು ಕಳೆದುಕೊಂಡು ಭೂಮಾಲೀಕ ವರ್ಗದ ವೈಭವೀಕರಣವನ್ನು ಪ್ರತಿನಿಧಿಸುವ ಕಥನಗಳಾಗಿ ಬೆಳೆದವು. ಅಂದರೆ ನಿರ್ಣಾಯಕವಾದ ಆಘಾತವನ್ನು ಸಾಂಸ್ಕೃತಿಕವಾಗಿಯು ಆರ್ಥಿಕವಾಗಿಯು ಮುಖ್ಯವಾಗಿ ಮಾನಸಿಕವಾಗಿಯು ಊಳಿಗಮಾನ್ಯ ಪುರುಷ ಸಮಾಜವು ದಲಿತ ಮಹಿಳೆಯರನ್ನು ತನ್ನ ದಾಸ್ಯಕ್ಕೆ ಅಳವಡಿಸಿಕೊಂಡಿತು.

ಇಂತಲ್ಲಿಯೆ ದೇವದಾಸಿ ಪರಂಪರೆಯಾಗಲಿ, ಅಂತಹ ಲೈಂಗಿಕ ಸೇವೆಯ ಹಲವು ವಿಧಗಳಾಗಲಿ ಬೆಳೆದು ಬಂದದ್ದು. ವೈದಿಕ ಪರಂಪರೆಯಿಂದ ತಪ್ಪಿಸಿಕೊಂಡು ರೂಪಿಸಿಕೊಂಡಿದ್ದ ಸ್ತ್ರೀ ಸಂಕೇತ ಪ್ರತಿಮೆಗಳನ್ನೆ ಊಳಿಗಮಾನ್ಯ ವ್ಯವಸ್ಥೆಯು ದಾಳವಾಗಿ ಬಳಸಿಕೊಂಡು ಅಂತಹ ಮಹಿಳೆಯ ದೈವಗಳಿಂದಲೆ ಮಹಿಳೆಯರನ್ನು ತನ್ನ ಅಗತ್ಯಕ್ಕೆ ಬಳಸಿಕೊಂಡಿದೆ. ಎಲ್ಲಮ್ಮ, ಸಿರಿಯಂತಹ ಜನಪದ ಆಚರಣೆಗಳಲ್ಲಿ ಈ ತಂತ್ರವನ್ನು ಅಳೆಯಬಹುದು. ಈ ಬಗೆಯಲ್ಲಿ ಸಾಗಿ ಬಂದ ದಲಿತ ಮಹಿಳೆ ವೈದಿಕ ಪರಂಪರೆಯಿಂದ ಸಾಗಿ ಬಂದ ಮಹಿಳೆಗಿಂತ

ಸಾಂಸ್ಕೃತಿಕವಾದ ಪ್ರತಿರೋಧ ಶಕ್ತಿಯಲ್ಲಿ ತುಂಬ ಗಟ್ಟಿಗಳು. ಹಾಗೆಯೆ ತನ್ನ ಒಟ್ಟು ಸಮಸ್ಯೆಗಳಲ್ಲಿ ಸಂಕೀರ್ಣವಾದ ಹಲವು ಮಗ್ಗುಲುಗಳನ್ನು ಹೊಂದಿದವಳು. ವೇದಗಳು ದಲಿತ ಮಹಿಳೆಯರನ್ನು ನೇರವಾಗಿ ಹೊರಗೆ ಹಾಕದೆ ಹೋಗಿದ್ದರು ಅವರ ಬಗ್ಗೆ ಕ್ರೂರವಾದ ನಿಯಮಗಳನ್ನು ರೂಪಿಸಿದ್ದು ಮನುಧರ್ಮಶಾಸ್ತ್ರವೇ, ಸಾರಾಸಗಟಾಗಿ ಎಲ್ಲ ಮಹಿಳೆಯರನ್ನು ಮನು ದಂಡಿಸುತ್ತಾನೆ ಎಂಬುದು ನಿಜವಿದ್ದರೂ ಆತನ ನಿಯಮಗಳು ಕಾಲಾನಂತರದಲ್ಲಿ ಜಾತಿಯ ಹಾಗೂ ಪುರುಷನ ಭಿತ್ತಿಯಲ್ಲಿ ಬೆರೆತು ದಲಿತ ಮಹಿಳೆಯ ಮೇಲೆ ಉಗ್ರವಾದ ಕ್ರಮಗಳನ್ನು ಕೈಗೊಂಡಿವೆ. ಸತಿ ಸಹಗಮನದಷ್ಟೆ ಕ್ರೂರವಾದ ಪದ್ಧತಿ ಬೆತ್ತಲೆ ಸೇವೆ ಅಸ್ಪೃಶ್ಯತೆಯಿಂದ ದಲಿತ ಮಹಿಳಾ ಲೋಕವನ್ನು ಸ್ವತಃ ದಲಿತರ ಪುರುಷ ಲೋಕವೂ ಕೀಳಾಗಿ ಕಾಣುವುದಿದೆ. ವಸ್ತು ಸ್ಥಿತಿ ಹೀಗಿರುವಲ್ಲಿ ದಲಿತ ಮಹಿಳೆಯರನ್ನು ವರ್ತಮಾನದ ಪ್ರಧಾನ ಸಮಸ್ಯೆಗಳಲ್ಲಿ ಬೆರೆಸಿಬಿಟ್ಟರೆ ಅವರ ಧ್ವನಿಗೆ ಯಾವ ಅವಕಾಶವೂ ಸಾಧ್ಯವಾಗದೇ ಹೋಗುತ್ತದೆ.

ಆಫ್ರಿಕಾದ ಕಪ್ಪು ಮಹಿಳೆಯರ ತಿಳುವಳಿಕೆಯನ್ನು ಗಮನಿಸಿ. ವರ್ಣತಾರತಮ್ಯದಿಂದ ಕಪ್ಪು ಮಹಿಳೆಯರು ಬಿಳಿಯ ಮಹಿಳೆಯರಿಂದಲು ನರಕ ಅನುಭವಿಸಿದವರೇ. ತಾಯ್ತನ ಎಲ್ಲ ಮಹಿಳೆಯರಿಗೆ ಒಂದೇ ಆಗಿದ್ದರೂ ಎಲ್ಲ ತಾಯಂದಿರ ಮಕ್ಕಳು ಒಂದೇ ಅರ್ಥದಲ್ಲಿ ಮಕ್ಕಳೆನಿಸಿಕೊಳ್ಳದೆ ಹುಟ್ಟುತ್ತಲೆ ಆಯಾ ತಾಯಂದಿರ ಜಾತಿ ವರ್ಣ ವರ್ಗಗಳಿಂದ ಗುರುತಿಸಲ್ಪಡುತ್ತಾರೆ. ಎಲ್ಲ ನಾರಿಯರಿಗೂ ಅಗಾಧವಾದ ತಾಳ್ಮೆ ವಿಶ್ವಾಸ ಪ್ರೀತಿ ಅಂತಃ ಕರಣವಿದ್ದರೂ ಈ ಮೌಲ್ಯಗಳು ಸಾಮಾಜಿಕ ನೆಲೆಯಲ್ಲಿ ಗಡಿಗಳನ್ನು ಹಾಕಿಕೊಂಡಿರುತ್ತವೆ. ದಲಿತ ಮಹಿಳೆಯರ ಬಗ್ಗೆ ಉದಾರವಾಗಿ ಮಾತನಾಡುವುದು ಸುಲಭ. ಆದರೆ ಅಂತಹ ಮಹಿಳೆಯರ ಸವಾಲುಗಳಿಗೆ ನಿಜವಾಗಿ ಹೋರಾಡಲು ಭಾರತೀಯ ಸಮಾಜದ ಮೇಲು ಜಾತಿಗಳು ಎಷ್ಟು ರೀತಿಯಲ್ಲಿ ತೊಡಗಬಹುದು ಎಂಬುದು ಪ್ರಶ್ನೆಯಾಗಿಯೆ ಉಳಿಯುತ್ತದೆ. ದಲಿತ ಮಹಿಳೆಯ ಪರಿಕಲ್ಪನೆಯನ್ನು ವರ್ತಮಾನದಲ್ಲಿ ಪರಿಶೀಲಿಸಿ ಆಕೆಯನ್ನು ಪ್ರಧಾನ ಮಹಿಳಾ ಸಮಾಜದ ಆಕಾರಕ್ಕೆ ತಕ್ಕಂತೆ ಹೊಂದಿಸಿದಾಗಲೂ ದಲಿತ ಮಹಿಳೆಗೆ ಅನ್ಯಾಯ ವಾಗುವ ಸಾಧ್ಯತೆ ಇರುತ್ತದೆ.

ಭಾರತೀಯ ಮಹಿಳೆ ಎನ್ನುವುದೆ ಅಮೂರ್ತವಾದ ಅಲೌಕಿಕ ಕಲ್ಪನೆ. ಹೇಗೆ ಭಾರತೀಯರೆಲ್ಲ ಒಂದೇ ಎಂದು ಹೇಳಲು ಬರುವುದಿಲ್ಲವೊ ಅಂತೆಯೆ ಎಲ್ಲ ಮಹಿಳೆಯರು ಒಂದೇ ಆಗಿರುವುದಿಲ್ಲ. ಮಹಿಳಾ ಸಮಾಜವೂ ಜಾತಿಯ ಶ್ರೇಣಿಯಲ್ಲೆ ವಿಕಾಸವಾಗಿದೆ. ಧರ್ಮ ಇಲ್ಲೆಲ್ಲ ತನ್ನ ಅವತಾರಗಳನ್ನು ಎತ್ತಿ ಆಯಾ ಕಾಲದ ರೂಪ ವಿರೂಪಗಳನ್ನು ಬಲಪಡಿಸಿದೆ. ಹೀಗಾಗಿ ಮಹಿಳೆಯ ಸ್ಥಿತಿ ಕೂಡ ಪಲ್ಲಟವಾಗುತ್ತಲೆ ತನ್ನ ಸೀಮಿತ ವ್ಯಾಪ್ತಿಯ ಒಳಗೇ ಪರ್ಯಾಯಗಳನ್ನು ಹುಡುಕುವಂತಾಗಿದೆ. ದಲಿತ ಮಹಿಳಾಲೋಕ ವಾಸ್ತವದಲ್ಲಿ ಅತ್ಯಂತ ಕಿರಿದಾದುದು. ಆದರೆ ಬಾವನಾತ್ಮಕ ಲಹರಿಗಳಲ್ಲಿ ಆಚರಣೆಯ ಸ್ವಭಾದಲ್ಲಿ ದಲಿತ ಮಹಿಳೆಯು ವಿಶ್ವಾತ್ಮಕವಾದ ನಂಬಿಕೆಗಳನ್ನು ಕಟ್ಟಿಕೊಂಡಿದ್ದಾಳೆ. ಬಹುಪಾಲು ಎಲ್ಲ

ಮಹಿಳೆಯರು ಇಂತದೇ ಕಿರಿದಾದ ಅವಕಾಶದಲ್ಲಿ ಹಿರಿದಾದ ಭಾವಲೋಕವನ್ನು ಕಟ್ಟಿಕೊಳ್ಳುತ್ತಾರೆ. ಆದರೆ ಅವರವರ ಮೇಲಿನ ಶೋಷಣೆಯ ಸ್ವರೂಪ, ಪ್ರಮಾಣಗಳ ದಾರಿಯಲ್ಲಿ ಅವರ ಅಭಿವ್ಯಕ್ತಿ ಮತ್ತು ಅಸ್ತಿತ್ವ ಬೇರೆಯಾಗಿ ಬಿಡುತ್ತವೆ.

ದಲಿತ ಮಹಿಳೆಯ ಬಗೆಗಿನ ವ್ಯಾಖ್ಯಾನ ಅನೇಕರಿಗೆ ಪರಿಮಿತವಾಗಿ ಕಾಣಬಹುದು. ದಲಿತ ಮಹಿಳೆಯ ಸ್ಥಾನಮಾನಗಳನ್ನು ಮೇಲು ಜಾತಿಯ ಮಹಿಳೆಯರು ಪ್ರತಿನಿಧಿಸುವುದು ಅಸಾಧ್ಯ. ಭಾವನಾತ್ಮಕವಾಗಿ ಮಹಿಳೆಯರನ್ನು ಒಂದು ಎಂದು ಹೇಳಿದ ಮಾತ್ರಕ್ಕೆ ಅವರ ಎಲ್ಲ ಸಮಸ್ಯೆಗಳು ಒಂದೇ ಆಗಿರುವುದಿಲ್ಲ. ದೇವದಾಸಿಯ ಶಾಪಕ್ಕೆ ಒಳಗಾದ ದಲಿತ ಮಹಿಳೆಯು ಕೇಳುವ ಸ್ವಾತಂತ್ರ್ಯವೆ ಬೇರೆ, ನಗರದ ಸುಶಿಕ್ಷಿತ ಮಧ್ಯಮ ವರ್ಗದ ಮೇಲು ಜಾತಿಯ ನೌಕರಸ್ತ ಮಹಿಳೆ ಕೇಳುವ ಸ್ವಾತಂತ್ರ್ಯವೆ ಬೇರೆ. ಇಬ್ಬರ ಮೇಲು ಪುರುಷ ಸಮಾಜ ಅಧಿಕಾರ ಸಾಧಿಸಿದ್ದರೂ ಇಬ್ಬರ ಸ್ಥಾನಗಳು ಬೇರೆ ಬೇರೆ. ಮನೆಕೆಲಸ ಮಾಡುವ ನಗರದ ಹೆಣ್ಣು ಮಗಳ ಕಷ್ಟಗಳಿಗೂ ದೊಡ್ಡ ಕಛೇರಿಯಲ್ಲಿ ನೌಕರಿ ಮಾಡುವ ಸ್ತ್ರೀಯ ಕಷ್ಟಗಳಿಗೂ ಅಂತರವಿದೆ. ದಲಿತ ಮಹಿಳೆಯರಿಗೆ ಪ್ರತ್ಯೇಕವಾದ ಮೀಸಲಾತಿಯನ್ನು ನೀಡಬೇಕು ಎಂದು ಪ್ರತಿಪಾದಿಸುವುದರಲ್ಲು ದಲಿತ ಮಹಿಳೆಯ ಅಸ್ತಿತ್ವದ ಒತ್ತಾಯವಿದೆ. ಎಲ್ಲ ಮಹಿಳೆಯರಿಗು ಸಮನಾಗಿ ಇಂತಿಷ್ಟು ಮೀಸಲಾತಿಯನ್ನು ಒಟ್ಟಾಗಿಯೆ ನೀಡಿ ಬಿಟ್ಟಾಗಲು ಅದು ನ್ಯಾಯದ ಹೆಸರಿನ ಅನ್ಯಾಯ.

ದಲಿತ ಮಹಿಳೆಗೆ ತಲೆಯ ಮೇಲೆ ಒಂದು ಸೂರು ಸಿಕ್ಕಿದ್ದರೆ ಸಾಕಿತ್ತು. ಅಲೆಮಾರಿಯಾಗಿದ್ದ ಎಷ್ಟೋ ದಲಿತ ಸಮುದಾಯಗಳ ಮಹಿಳೆಯರಿಗೆ ಇವತ್ತಿಗೂ ಮಹಿಳಾ ನ್ಯಾಯದ ಶ್ರೀಕಾರಗಳೂ ತಿಳಿದಿಲ್ಲ. ಆಧುನಿಕತೆಯ ಜೊತೆ ಹೊಂದಾಣಿಕೆ ಮಾಡಿಕೊಂಡ ಸವರ್ಣೀಯ ಮಹಿಳೆಯರು ಉನ್ನತ ಸ್ಥಾನಮಾನಗಳನ್ನು ಪಡೆದುಕೊಂಡಿರುವಲ್ಲಿಯೆ ದಲಿತ ಮಹಿಳೆಯರು ಇನ್ನೂ ಬೀದಿಯಲ್ಲೆ ನಿಂತಿದ್ದಾರೆ. ದಲಿತ ಮಹಿಳೆಯರ ಸಮಸ್ಯೆಗಳಿಗೆ ಉನ್ನತ ಮಹಿಳೆಯರು ಹೇಗೆ ಸ್ಪಂದಿಸುತ್ತಾರೆ ಎಂಬುದನ್ನು ನಿತ್ಯವೂ ಗಮಿಸಬಹುದು. ಮಹಿಳಾ ಮೀಸಲಾತಿಯ ಸಂದರ್ಭದಲ್ಲಿ ಇಡೀ ಪುರುಷ ರಾಜಕಾರಣವು ಹೇಗೆ ಅಂತಹ ನ್ಯಾಯದ ಅವಕಾಶವನ್ನು ಏಕರೂಪದಲ್ಲಿ ವಿರೂಪಗೊಳಿಸಲು ತಂತ್ರ ರೂಪಿಸುತ್ತದೆ ಎಂಬುದನ್ನು ಗಮನಿಸಿದರೆ, ದಲಿತ ಮಹಿಳೆಯರ ವಾಸ್ತವ ಸ್ಥಿತಿಯು ಅರ್ಥವಾದೀತು. ಈ ಮೀಸಲಾತಿ ಕೂಡ ಪುರುಷ ರಾಜಕಾರಣಕ್ಕೆ ಬೆಂಬಲವಾಗಿರಲಿ ಎಂಬಂತೆ ಅದನ್ನು ಬಲಪಂಥೀಯರು ತಿರುಚುವುದಿದೆ. ದಲಿತ ಮಹಿಳೆಯರಿಗೆ ಮೀಸಲಾಗುವ ಜಿಲ್ಲಾ ಹಾಗೂ ಮಂಡಲ ಪಂಚಾಯ್ತಿಯ ಅಧ್ಯಕ್ಷ ಸ್ಥಾನಗಳು ಸಹ ಪುರುಷಾಧಿಪತ್ಯದಲ್ಲಿ ಕೈ ಜಾರಿ ಹೋಗುತ್ತಿರುತ್ತವೆ.

ಇಂತಲ್ಲಿ ದಲಿತ ಮಹಿಳೆಯು ಏಕಕಾಲಕ್ಕೆ ಹಲವಾರು ಹಂತಗಳಲ್ಲಿ ಈ ಸಮಾಜದ ಜೊತೆ ಮುಖಾಮುಖಿಯಾಗಬೇಕಿದೆ. ತನ್ನ ಮೇಲಿರುವ ಜಾತಿಗಳ ಹೊಡೆತಗಳನ್ನು ಆಕೆ ಸಹಿಸಿಕೊಳ್ಳುವುದರ ಜೊತೆಗೆ ಆ ಎಲ್ಲ ಜಾತಿಗಳ ಪುರುಷಾಧಿಪತ್ಯವನ್ನು ಹೊರಬೇಕು. ಅಷ್ಟೇ ಅಲ್ಲದೆ ಜಾತಿ ಶ್ರೇಣಿಯ ಮಹಿಳಾ ಸಮಾಜದ ಜೊತೆಯೂ ಸ್ಪರ್ಧಿಸಬೇಕು. ಇಷ್ಟಾದ

ಮೇಲೆ ತನ್ನ ಜಾತಿಯ ಪುರುಷರ ಹಿಡಿತವನ್ನು ಬಿಡಿಸಿಕೊಳ್ಳಲು ಒಪ್ಪಂದಗಳನ್ನು ಮಾಡಿಕೊಳ್ಳಬೇಕು. ಈ ಪರಿಯ ಸವಾಲು ಭಾಗಶಃ ಕಪ್ಪು ಮಹಿಳೆಯರಿಗೂ ಇಲ್ಲ. ವರ್ಣದ್ವೇಶದ ತಾರತಮ್ಯವನ್ನು ಎದಿರಿಸುವ ಕಪ್ಪು ಮಹಿಳೆಗೆ ಜಾತಿಗಳ ಬರ್ಜಿಗಳು ತಿವಿಯುವುದಿಲ್ಲ. ಜಾತಿ ಮತ್ತು ಪುರುಷ ಎಂಬ ಎರಡು ಅಲುಗಿನ ಕತ್ತಿಯ ಜೊತೆ ಸೆಣಸುವ ದಲಿತ ಮಹಿಳೆಯು ಆಧುನಿಕೋತ್ತರ ಜಗತ್ತಿನ ಹೊರ ಆಕ್ರಮಣಗಳಿಗೂ ಒಳಗಾಗಬೇಕು. ಇಷ್ಟೊಂದು ಸಂಕೀರ್ಣ ಸ್ಥಿತಿಯಲ್ಲಿ ದಲಿತ ಮಹಿಳೆಯರನ್ನು ಪ್ರಧಾನ ಮಹಿಳೆಯ ಚಿಂತನೆಗಳು ಆ ಬಗೆಯ ಹೋರಾಟಗಳು ತಮ್ಮ ಅಗತ್ಯದ ಕ್ರಮದಲ್ಲಿ ಬಂಡಾವಳವಾಗಿಸಿಕೊಳ್ಳುವುದೂ ಇದೆ. ದಲಿತ ಮಹಿಳೆಯರ ಬಗ್ಗೆ ಅಧ್ಯಯನ ಮಾಡುವ ಅವರ ಜೀವನ ಕ್ರಮ ಸುಧಾರಿಸುವ ನೆಪದಲ್ಲಿ ಸರ್ಕಾರ ಹಾಗೂ ಸರ್ಕಾರೇತರ ಸಂಸ್ಥೆಗಳು ಕೋಟಿಗಟ್ಟಲೆ ಹಣದ ಲೆಕ್ಕವನ್ನು ತೋರಿಸುತ್ತ ತಾವು ಸುಖವಾಗಿರುತ್ತವೆ. ದಲಿತ ಮಹಿಳಾ ಪರಿಕಲ್ಪನೆ ಕೂಡ ಪರರ ಮಾತಿನ ಬಂಡವಾಳವಾಗಿ ಅಪವ್ಯಾಖ್ಯಾನಕ್ಕೂ ಗುರಿಯಾಗುತ್ತಿದೆ.

ದಲಿತ ಮಹಿಳೆ ಸಮಾಜದ ಕೊನೆಯ ಮಹಿಳೆ. ಸಮಾಜದ ಎಲ್ಲ ಬಗೆಯ ಅಧಿಕಾರಗಳು ಅವಳನ್ನು ನಿಯಂತ್ರಿಸಲು ತೊಡಗುತ್ತವೆ. ಸಮಾಜದ ದಾಸಿ ಎಂದೇ ಆಕೆಗೆ ಇದ್ದ ಪದವಿ ಹಾಗೂ ಅದೇ ಪದವಿಯು ಆಧುನಿಕೋತ್ತರ ಭಾರತದಲ್ಲಿ ಪರಿಷ್ಕಾರಗೊಂಡು ತನ್ನ ಅಸ್ತಿತ್ವವನ್ನು ಹುಡುಕಿಕೊಳ್ಳಲು ತೊಡಗಿರುವ ಶಕ್ತಿ. ಒಂದು ಕಾಲಕ್ಕೆ ಕಾಳಿಯ ಅವತಾರವಾಗಿದ್ದ ಆಕೆಯು ಅಪಮೌಲ್ಯಗೊಳ್ಳುತ್ತ ಎಲ್ಲಮ್ಮನಾಗಿ ಮಾರಮ್ಮನಾಗಿ ಕ್ಷುದ್ರ ದೈವವಾಗಿ ಕೊನೆಗೆ ದೈವದ ಬೆದರು ಗೊಂಬೆಯಾಗಿ ಸಾಗಿ ಬಂದಿರುವ ದಲಿತ ಮಹಿಳೆಯು ಅಂಬೇಡ್ಕರ್ ಅವರ ಸಂವಿಧಾನದ ಕಾರಣವಾಗಿ ಎಚ್ಚೆತ್ತುಕೊಳ್ಳುತ್ತಿರುವುದು ಚಾರಿತ್ರಿಕವಾದ ಅನಿವಾರ್ಯ. ದಳಿತ ಮಹಿಳೆ ಎಂಬ ನುಡಿಗಟ್ಟು ದಲಿತ ಸಮಾಜದ ಸಾಧ್ಯತೆಯ ರೂಪಕವೂ ಹೌದು, ಅಂತೆಯೆ ಗತಕಾಲದ ಸಾಂಸ್ಕೃತಿಕ ಪ್ರತಿರೋಧವನ್ನು ವಿಸ್ತರಿಸಿಕೊಂಡ ಆಧುನಿಕೋತ್ತರ ಕಾಲದ ಬೌದ್ಧಿಕ ಸಂಕೇತವು ಹೌದು.

ದಲಿತ ಮಹಿಳಾ ಪರಿಕಲ್ಪನೆಯು ಪುರುಷಾಧಿಪತ್ಯವನ್ನು ಮಾನವೀಕರಣಗೊಳಿಸುವ ವೈಚಾರಿಕ ಧ್ವನಿಯಾಗಿಯೂ ಕಾಣುತ್ತದೆ. ಲಿಂಗಸಂಬಂಧಿ ತಾರತಮ್ಯಗಳನ್ನು ಮಾತ್ರವೆ ಅದು ನಿರ್ವಹಿಸುವ ತಿಳುವಳಿಕೆಯಲ್ಲ. ಅದರಾಚೆಗಿನ ಮಾನವ ಸಂಬಂಧಗಳನ್ನು ಬೆಸೆಯುವ ಆಶಯದಲ್ಲಿ ದಲಿತ ಮಹಿಳಾ ವೈಚಾರಿಕತೆಗೆ ವಿಶೇಷ ಆಸ್ಥೆಯಿದೆ. ಪುರುಷ ವಿರೋಧಿಯಾದ ಧ್ವನಿಗಿಂತಲು ಪುರುಷ ಸಮಾಜವನ್ನು ಹೇಗೆ ಅಂತಃಕರಣಕ್ಕೆ ಒಳಪಡಿಸಬಹುದು ಎಂಬುದರ ಕಡೆಗೆ ಅದರ ಗಮನವಿದೆ. ಮೌಖಿಕ ಪರಂಪರೆಯ ಉದ್ದಕ್ಕು ಹೇಗೆ ಪುರುಷಾಧಿಪತ್ಯವನ್ನು ತಾಯ್ತನಕ್ಕೆ ಅಳವಡಿಸುವುದು ಎಂಬ ದೊಡ್ಡ ಯತ್ನವಿದೆ. ದಲಿತ ಮಹಿಳೆ ತನ್ನ ಕುಟುಂಬದ ರಚನೆಯಲ್ಲಿ ಭೌತಿಕವಾದ ಅಧಿಕಾರವನ್ನು ಹೊಂದಿಲ್ಲದಿದ್ದರೂ ಇಡೀ ಕುಟುಂಬದ ಅಸ್ತಿತ್ವಕ್ಕೆ ಬೇಕಾದ ನಿರ್ವಹಣೆಯು ಆಕೆಯ ಪಾಲಿಗೇ ಇರುತ್ತದೆ. ಆಧುನಿಕೋತ್ತರ ಭಗ್ನ ಕುಟುಂಬಗಳಲ್ಲಿ ಇಂತಹ ಹೊಣೆಯು ಸೀಮಿತಗೊಂಡಿದ್ದರು ಈಗಲೂ ಗ್ರಾಮೀಣ ವ್ಯವಸ್ಥೆಯಲ್ಲಿ ಇಂತಹ ಭಾವನೆಗಳಿಗೆ ದಲಿತ ಕುಟುಂಬಗಳಲ್ಲಿ ಅವಕಾಶವಿದೆ.

ದಲಿತ ಮಹಿಳೆಯ ವೈಚಾರಿಕತೆಯನ್ನು ಅವರ ಸಾಂಸ್ಕೃತಿಕ ನೆಲೆಯಿಂದಲೆ ಭಾವಿಸಬೇಕು. ಮಾರ್ಕ್ಸ್‌ವಾದ, ಅಂಬೇಡ್ಕರ್ ವಾದಗಳಿಂದ ದಲಿತ ಮಹಿಳಾ ನಿರ್ವಚನವನ್ನು ವಿಸ್ತರಿಸಲು ಪುನರ್ ಸೃಷ್ಟಿಸಿಕೊಳ್ಳಲು ಸಾಧ್ಯವಿದೆ. ದಲಿತ ಮಹಿಳೆಯರ ಸಮಸ್ಯೆಗಳನ್ನು ಪ್ರತ್ಯೇಕವಾಗಿ ಪರಿಶೀಲಿಸಿದ ಮಾತ್ರಕ್ಕೆ ಸಾಮಾನ್ಯ ಮಹಿಳಾ ವಾದಕ್ಕೆ ಅಪಮಾನ ಮಾಡಿದಂತಲ್ಲ. ದಲಿತ ಮಹಿಳೆಯರ ಪರವಾಗಿ ಚಿಂತಿಸಿದ ಕೂಡಲೆ ಇದು ಮಹಿಳಾ ಶಕ್ತಿಯನ್ನು ಛಿದ್ರಗೊಳಿಸುವ ಪುರುಷ ರಾಜಕಾರಣದ ಸಂಚು ಎಂದು ವಿಪ್ರ ಮಹಿಳಾ ಚಿಂತಕಿಯರು ಹತಾಶೆಯಿಂದ ವ್ಯೆಪರಚಿಕೊಳ್ಳುತ್ತಿರುತ್ತಾರೆ. ಅವರ ಮಹಿಳಾ ಕಾಳಜಿ ಎಷ್ಟೋ ಬಾರಿ ಅಕಡೆಮಿಕ್ ಬಂಡವಾಳ ದಿಂದ ಗುಪ್ತವಾಗಿ ವೈದಿಕ ಮಹಿಳಾ ಯಾಜಮಾನ್ಯವನ್ನು ಪ್ರತಿಪಾದಿಸುತ್ತಿರುತ್ತದೆ. ಮಹಿಳಾ ಚಿಂತನೆಯಲ್ಲು ಯಾಜಮಾನ್ಯ ಮತ್ತು ಸವರ್ಣೀಯತೆ ನಾಜೂಕಾಗಿ ಬೆರೆತಿರುತ್ತದೆ. ದಲಿತ ಮಹಿಳೆಯರ ಹೆಸರಿನಲ್ಲಿ ತಲೆ ಎತ್ತಿರುವ ಅಸಂಖ್ಯ ಎನ್.ಜಿ.ಒ.ಗಳು ಕೂಡ ದಲಿತ ಮಹಿಳಾವಾದದ ವಾರಸುದಾರರಾಗಿರುತ್ತಾರೆ. ಇಂತಹ ಬೌದ್ಧಿಕ ಯಾಜಮಾನ್ಯವನ್ನು ಪರೋಕ್ಷವಾಗಿ ಚಲಾಯಿಸುವ ಹಲವಾರು ಮಹಿಳಾ ವಾದಿಗಳು ಮಂಡಿಸುವ ಹಕ್ಕೊತ್ತಾಯ ಗಳಲ್ಲಿ ದಲಿತ ಮಹಿಳೆಯರ ಯಾವ ಸಂವೇದನೆಯು ಕಾಣುವುದಿಲ್ಲ. ಎಷ್ಟೋ ಸುಶಿಕ್ಷಿತ ಮಹಿಳೆಯರ ಚಿಂತನೆಗಳು ಅಗತ್ಯವಾಗಿ ದಲಿತ ಮಹಿಳೆಯರ ಸಬಲೀಕರಣಕ್ಕೆ ಬೇಕು. ದಲಿತ ಮಹಿಳಾವಾದ ಸವರ್ಣೀಯ ಮಹಿಳೆಯರ ವಿರುದ್ಧದ ದನಿಯಲ್ಲ. ಬೇರೆ ಬೇರೆ ಜಾತಿಯ ಎಲ್ಲ ಮಹಿಳೆಯರ ಸಮಷ್ಠಿ ಶಕ್ತಿಯ ಜೊತೆಯಲ್ಲೆ ದಲಿತ ಮಹಿಳೆಯರು ಅನುಸಂಧಾನಗೊಳ್ಳ ಬೇಕಾದದ್ದಿದೆ. ಪ್ರತ್ಯೇಕವಾದ ಬೌದ್ಧಿಕ ಅವಕಾಶದಿಂದ ದಲಿತ ಮಹಿಳೆ ತನ್ನ ಅಸ್ತಿತ್ವವನ್ನು ಧ್ವನಿಸಲು ರೂಪಿಸಲು ಸಾಧ್ಯ, ಪ್ರಾಥಮಿಕವಾದ ಸಮಸ್ಯೆಗಳು ಬಗೆಹರಿದ ನಂತರವೆ ಬಿಡಿ ಬಿಡಿಯಾದ ಮಹಿಳಾ ಅನನ್ಯತೆಗಳು ಒಟ್ಟಾಗಲು ಸಾಧ್ಯವಾಗುವುದು. ದಲಿತ ಮಹಿಳಾ ಸಮಾಜದ ಮೇಲಿನ ಶೋಷಣೆಯನ್ನು ನುಡಿಸುವ ಮೂಲಕವೆ ಒಟ್ಟು ಮಹಿಳೆಯರ ಸಂಕಟವನ್ನೂ ನಿರೂಪಿಸಬಹುದು. ಶೋಷಣೆಗೆ ಈಡಾದ ತನ್ನ ಗುರುತನ್ನು ಸ್ಪಷ್ಟವಾಗಿ ನಿಷ್ಠೂರವಾಗಿ ಅದರ ಎಲ್ಲ ವಿರೂಪಗಳಿಂದ ತೋರಲು ಮತ್ತು ಅದಕ್ಕೆ ತಕ್ಕ ಪರ್ಯಾಯ ಗಳನ್ನು ಹುಡುಕಿಕೊಳ್ಳಲು ಅನಿವಾರ್ಯವಾಗಿ ಭಿನ್ನ ಅನನ್ಯತೆಯು ದಲಿತ ಮಹಿಳೆಗೆ ಬೇಕು. ಹೀಗೆ ಭಿನ್ನ ಅನನ್ಯತೆಯು ಸವರ್ಣೀಯ ಮಹಿಳಾ ಹಕ್ಕೊತ್ತಾಯಗಳಿಗೆ ಎದುರಾಗುವ ಅವಕಾಶವಿದ್ದರೂ ಅದು ಆ ಮಹಿಳೆಯರ ವಿರುದ್ಧದ ಹೋರಾಟವಲ್ಲ. ಒಂದು ವಿರೂಪದ ಗಾಯಗೊಂಡ ಸಮಾಜದ ಲೋಪವನ್ನು ತೋರುವಾಗ ಅದಕ್ಕೆ ನೇರ ಹೊಣೆಗಾರರಾಗದೆ ಇದ್ದರೂ ಆರೋಪಕ್ಕೆ ಒಳಪಡಬೇಕಾಗುತ್ತದೆ. ಇದು ಸಮಾಜದ ಸ್ವಾಸ್ಥದ ಕ್ರಮದಲ್ಲಿ ನ್ಯಾಯದ ಕಾರಣಕ್ಕಾಗಿ ಅನಿವಾರ್ಯ.

ಇದುವರೆಗು ದಲಿತರು ಪರರ ಅನನ್ಯತೆಯನ್ನೆ ತನ್ನ ಅನನ್ಯ ಮೌಲ್ಯ ಎಂದು ಒಪ್ಪಿಕೊಂಡು ಬಂದಿರುವುದು ಸಾಕು. ತನ್ನ ನಿಜವಾದ ಅನನ್ಯತೆಯನ್ನು ಶೋಧಿಸಿಕೊಳ್ಳಲು ಪ್ರತ್ಯೇಕವಾದ ಬಹುರೂಪಿ ಹೋರಾಟಗಳು ಮುಖ್ಯ. ಗುಂಪಿನ ಚಹರೆಗಳೆಲ್ಲವು ಕಲ್ಪಿತವಾದವು ಹಾಗೆಯೆ ಏಕಾಕಾರಿಯಾದದ್ದು. ಹೋರಾಟಕ್ಕೆ ಗುಂಪು ಬೇಕಿದ್ದರೂ ಆ ಗುಂಪು ಹಲವು ಗುಂಪುಗಳ

ಒಂದು ಗುಂಪಾಗಿದ್ದರೆ ಅದು ಪ್ರಜಾಪ್ರಭುತ್ವದ ಕ್ರಮದಲ್ಲಿ ತಮಗೆ ಬೇಕಾದ ಅವಕಾಶಗಳನ್ನು ಪಡೆದುಕೊಳ್ಳುವುದಕ್ಕೆ ತೊಡಕಾಗುತ್ತದೆ. ಬಲಿಷ್ಠವಾದ ಒಂದು ಗುಂಪಿನ ದನಿಯು ಉಳಿದೆಲ್ಲ ಗುಂಪುಗಳ ದನಿಯಾಗಿ ಅವರ ನಿಜವಾದ ದನಿಯೆ ಕರಗಿ ಹೋಗುತ್ತದೆ. ಜಾತಿನಿಷ್ಠ ಸಮಾಜ ದಲ್ಲಿ ಚರಿತ್ರೆಯ ಉದ್ದಕ್ಕೂ ಇಂತಹ ಏಕಾಕೃತಿಯ ದೊಡ್ಡಣ್ಣನ ದನಿಯು ದುರ್ಬಲರೆಲ್ಲರ ದನಿಯನ್ನು ನುಂಗಿಕೊಂಡಿದೆ. ಆಧುನಿಕೋತ್ತರ ಭಾರತದಲ್ಲಿ ಈಗ ತಾನೆ ಅಂಚಿನ ಸಮುದಾಯಗಳು ತಮ್ಮ ಅಂತರಾಳದ ಮೌನವನ್ನೆಲ್ಲ ಒಗ್ಗೂಡಿಸಿ ಹೊಸ ಬಗೆಯ ನುಡಿಗಟ್ಟಿ ಗಾಗಿ ತಯಾರಾಗುತ್ತಿವೆ. ಇಂತಲ್ಲಿ ದಲಿತ ಮಹಿಳಾ ಧ್ವನಿಯು ವಿಶಿಷ್ಟವಾದದ್ದು. ದಲಿತ ಮಹಿಳೆಯ ಪರಿಕಲ್ಪನೆಯನ್ನು ಜಾತಿ ಸೂಚಕದಲ್ಲಿ ಪರಿಭಾವಿಸಿದರೆ ಅದು ಕೂಡ ಬೌದ್ಧಿಕ ಅಸ್ಪೃಶ್ಯತೆಯೇ. ದಲಿತ ಮಹಿಳೆ ಎಂದ ಕೂಡಲೆ ಸನಾತನವಾದ ಮನಸ್ಸು ತನ್ನ ಹಳೆಯ ವಿರೂಪಗಳ ಅರ್ಥಕೋಶದಿಂದಲೆ ಅದರ ವಿವರಗಳನ್ನು ಭಾವಿಸುತ್ತದೆ. ಭಾರತೀಯ ಸಮಾಜದ ಇಂತಹ ವಿಪರ್ಯಾಸದಲ್ಲಿ ಭಾವನೆಗಳ ಜೊತೆ ಒಬ್ಬರನ್ನೊಬ್ಬರು ಸಂಧಿಸುವ ಸ್ಪಂದಿಸುವ ಅಂತರ್ಗತಿಸಿಕೊಳ್ಳುವ ಅವಕಾಶಗಳು ತುಂಬ ಕಡಿಮೆ.

ಈ ಬಗೆಯಲ್ಲಿ ದಲಿತ ಮಹಿಳೆಯರ ಅಗತ್ಯಗಳನ್ನು ಸಂಧಿಸಬೇಕಾಗುತ್ತದೆ. ಭಾವನೆಗಳು ಬೆಟ್ಟಿಯಾಗದೆ ಒಣ ವಿಚಾರಗಳಲ್ಲಿ ಬೆಟ್ಟಿಯಾಗುವ ಬೌದ್ಧಿಕತೆಯು ಯಾವ ರೀತಿಯಲ್ಲೂ ಭವಿಷ್ಯಕ್ಕೆ ಅನ್ವಯವಾಗಲಾರದು. ಜಾತ್ಯತೀತವಾದ ಅವಕಾಶಗಳೆಲ್ಲ ಜಾತಿಗೆ ಮರಳುವಂತೆ ಜಾತಿಯ ಪರಿಸರ ಹದಗೆಡುತ್ತಿರುವಾಗ ದಲಿತ ಮಹಿಳಾ ಪರಿಕಲ್ಪನೆಯನ್ನು ಎಚ್ಚರದಿಂದ ಪರಿಭಾಸಬೇಕಾಗುತ್ತದೆ. ದಲಿತ ಸಾಹಿತ್ಯ, ದಲಿತ ಚಿಂತನೆ, ದಲಿತ ರಾಜಕಾರಣದಂತಹ ಪರಿಕಲ್ಪನೆಗಳನ್ನು ಸನಾತನ ಮನಸ್ಸು ಭಿನ್ನವಾಗಿ ಹೊಸದೊಂದು ಅಭಿವ್ಯಕ್ತಿಯ ಸಾಧ್ಯತೆಯಲ್ಲಿ ಪರಿಭಾವಿಸುವುದಿಲ್ಲ. ದಲಿತ ಮಹಿಳೆಯರ ಅಸ್ತಿತ್ವವು ಇಡೀ ದೇಶದ ಅಸ್ತಿತ್ವದ ಒಂದು ಭಾಗ.

ದಲಿತ ಮಹಿಳಾವಾದ ಎನ್ನುವುದು ಈಗ ತಾನೆ ಆರಂಭವಾಗಿದೆ. ಅದಕ್ಕೆ ಖಚಿತವಾದ ಸೈದ್ಧಾಂತಿಕ ತಳಹದಿ ನಿಖರಗೊಂಡಿಲ್ಲ. ಸ್ವತಃ ದಲಿತ ಮಹಿಳೆಯರೆ ನಿರೂಪಿಸಬೇಕಾದ ಈ ಬೌದ್ಧಿಕ ಕಥನಕ್ಕೆ ತಕ್ಕ ಲೇಖಕಿಯರು ಇನ್ನೂ ಸಾಧ್ಯವಾಗಿಲ್ಲ. ಇಂತಹ ವೈಚಾರಿಕ ಪರಿಕಲ್ಪನೆಗಳನ್ನು ನಿರ್ಮಿಸುತ್ತಿರುವವರು ಕೂಡ ಪರೋಕ್ಷವಾಗಿ ದಲಿತ ಲೇಖಕರೇ. ಮಹಿಳೆಯರ ಎಲ್ಲ ಬಗೆಯ ಅಂತರಾಳವನ್ನು ಬಿಂಬಿಸಲು ಪುರುಷರಿಗೆ ಸಾಧ್ಯವಿಲ್ಲದಿದ್ದರೂ ಅಂತಹ ಯತ್ನಕ್ಕೆ ತೊಡಗುವುದರಿಂದ ಸ್ವತಃ ಪುರುಷ ಪ್ರಧಾನ ಭಾಷಿಕ ವಿನ್ಯಾಸಗಳು ಅನಿವಾರ್ಯವಾಗಿ ತಮ್ಮ ಸ್ವರೂಪವನ್ನು ಬದಲಿಸಿಕೊಳ್ಳಬೇಕಾಗುತ್ತದೆ. ಅಂಬೇಡ್ಕರ್ ವಾದದಲ್ಲಿ ದಲಿತ ಮಹಿಳಾ ವಾದಕ್ಕೆ ಬೇಕಾದ ಹಲವು ವೈಚಾರಿಕ ರೂಪಕಗಳು ಸಿಗಬಲ್ಲವು. ಸ್ವತಃ ದಲಿತ ಸಂಘರ್ಷ ಸಮಿತಿಯು ದಲಿತ ಮಹಿಳಾ ಕಲಾ ಮಂಡಲಿಯ ಪ್ರತ್ಯೇಕ ಶಾಖೆಯನ್ನೆ ಆರಂಭಿಸಿತ್ತಾದರೂ ಆ ಪ್ರಯೋಗವು ವಿಫಲಗೊಂಡಿತ್ತು. ೧೯೯೯ರಲ್ಲಿ ಕನ್ನಡ ವಿಶ್ವವಿದ್ಯಾಲಯ ದಲಿತ ಅಧ್ಯಯನ ಪೀಠದಿಂದ ಮೊದಲ ಭಾರಿಗೆ 'ದಲಿತ ಮಹಿಳಾ ಚಿಂತನೆ'

ಎಂಬ ಎರಡು ದಿನಗಳ ವಿಚಾರ ಸಂಕಿರಣವನ್ನು ಆಯೋಜಿಸಿದ ನಂತರಕ್ಕೂ ದಲಿತ ಮಹಿಳಾ ಚಿಂತನೆಯ ಬಗ್ಗೆ ವಿಶೇಷವಾದ ಒಲವುಗಳು ಕಂಡು ಬರುತ್ತಿವೆ. ಇಂತಹ ದಲಿತ ಮಹಿಳೆಯ ಚಿಂತನೆಯು ಸಮಗ್ರ ಮಹಿಳಾ ಶಕ್ತಿಯನ್ನು ಹಲವು ಬೌದ್ಧಿಕ ಹಾಗೂ ಮಾನವೀಯ ಕಥನಗಳನ್ನು ವಿಸ್ತರಿಸಲು ಅನಿವಾರ್ಯವಾದುದಾಗಿದೆ.

ದಲಿತರು ತಮ್ಮ ಅಸ್ತಿತ್ವದ ಕಾರಣಕ್ಕಾಗಿ ವಿಭಿನ್ನದನಿಯನ್ನು ಹೊರಡಿಸಿದ ಕೊಡಲೆ ಅದಕ್ಕೆ ಹತ್ತಾರು ಬಗೆಯ ಟೀಕೆಗಳು ಎದುರಾಗುತ್ತವೆ. ಮಹಿಳೆಯರ ಒಳ ಮೀಸಲಾತಿಯ ಸಂದರ್ಭದಲ್ಲು ಉಗ್ರವಾದ ರಾಜಕೀಯ ಹುನ್ನಾರಗಳು ನಡೆಯುತ್ತವೆ. ದೇಶದ ಅತ್ಯುನ್ನತ ಪ್ರಾತಿನಿಧಿಕ ನೆಲೆಯಾದ ಲೋಕ ಸಭೆಯಲ್ಲೆ ದಲಿತ ಮಹಿಳೆಯರ ಒಳ ಮೀಸಲಾತಿಗೆ ಸಂಬಂಧಿಸಿದಂತೆ ವಿರೋಧಗಳು ಕೇಳಿಬರುತ್ತವೆ. ನಮ್ಮ ಸಮಾಜಗಳ ನೈತಿಕ ಪ್ರಜ್ಞೆಯು ಹೇಗೆ ಆಲೋಚಿಸುತ್ತದೆ ಎಂಬುದನ್ನು ಇವೆಲ್ಲ ಸೂಚಿಸುತ್ತವೆ. ದಲಿತ ಮಹಿಳಾ ವಾದಕ್ಕೂ ಪರಂಪರೆಯನ್ನು ಕಟ್ಟಿಕೊಳ್ಳಬಹುದು. ಈ ಬೌದ್ಧಿಕ ಪರಿಕಲ್ಪನೆ ಇತ್ತೀಚಿನ ಯತ್ನವಾದರೂ ಅಂತಹ ವಿಮುಕ್ತಿಯ ನ್ಯಾಯದ ಸಂವೇದನೆಯು ಪ್ರಾಚೀನವಾದುದು. ತನ್ನ ಬಹುರೂಪಿ ಆಚರಣೆಗಳಲ್ಲಿ ಮಹಿಳೆಯರು ಬಿಡುಗಡೆ ಪಡೆಯಲು ಇನ್ನಿಲ್ಲದಂತೆ ಯತ್ನಿಸಿದ್ದಾರೆ. ದಲಿತ ಮಹಿಳೆಯ ಮೌಲ್ಯವ್ಯವಸ್ಥೆಯು ವಿಶೇಷವಾಗಿ ಮಾತೃ ಮೌಲ್ಯವ್ಯವಸ್ಥೆಗೆ ಸಂಬಂಧಪಡುತ್ತದೆ. ಮಾತೃ ಮೌಲ್ಯಗಳು ಪುರುಷ ವ್ಯವಸ್ಥೆಯನ್ನು ಆಳುವ ಕಾರಣಕ್ಕೆ ಹುಟ್ಟಿಕೊಂಡವಲ್ಲ. ನಿಸರ್ಗದ ಆರಾಧನೆಯಲ್ಲಿ ತನ್ನ ಪರಿಸರದ ಜೊತೆ ಗಾಢವಾದ ವಿಶ್ವಾಸವನ್ನು ಪಡೆದು ಸಾಮಾಜಿಕವಾದ ಸಾವಯವ ಸಂಬಂಧಗಳನ್ನು ಅದು ಬೆಸೆಯುವಂತದಾಗಿತ್ತು. ಆ ಕಾರಣದಿಂದಲೆ ಪುರುಷನನ್ನು ಸ್ತ್ರೀ ದೈವಗಳು ದ್ವೇಷದಿಂದ ಕಾಣುವುದಿಲ್ಲ. ಆದರೆ ಅದೇ ಪುರುಷ ದೈವಗಳು ಎಲ್ಲ ಚಹರೆಯ ಸ್ತ್ರೀಯರನ್ನು ದಾಸ್ಯಕ್ಕೆ ಇಟ್ಟುಕೊಳ್ಳುತ್ತವೆ. ಇಲ್ಲವೇ ನಿರಾಕರಿಸುತ್ತವೆ. ದಲಿತ ಮಹಿಳೆಯ ಅಸ್ತಿತ್ವದ ಹೋರಾಟದ ಗುರುತುಗಳನ್ನು ಕಂಡುಕೊಳ್ಳಲು ದಾರಿ ಇದೆಯಾದರೂ ಆ ಬಗೆಯ ದಾರಿಯು ಈ ಹೊತ್ತಿನ ದಲಿತ ಮಹಿಳೆಯ ಸವಾಲುಗಳಿಗೆ ಪರೋಕ್ಷವಾಗಿ ಸಂಬಂಧಪಡುತ್ತವೆ. ಈ ಬಗೆಯ ಹಿನ್ನಲೆಗಳಲ್ಲಿ ದಲಿತ ಮಹಿಳೆಯ ಗುಣ ಸ್ವಭಾವಗಳನ್ನು ತಾತ್ವಿಕವಾಗಿ ಈ ಮುಂದಿನಂತೆ ವಿಶ್ಲೇಷಿಸಬಹುದು.

### ರಮ್ಯ ರೋಧನ

ದಲಿತ ಮಹಿಳೆ ತನ್ನ ದುರಂತವನ್ನೆ ರಮ್ಯವಾಗಿ ವೈಭವೀಕರಿಸಿಕೊಂಡು ಹಾಡುತ್ತ ಆ ಒಡಲ ಕಿಚ್ಚಿನ ಪ್ರದರ್ಶನದಲ್ಲೆ ಸಾಮಾಜಿಕವಾದ ಆಕ್ರಂಧನವನ್ನು ಮಾಡುತ್ತಾಳೆ. ಮೌಖಿಕ ಪರಂಪರೆಯಲ್ಲಿ ಇಂತಹ ಸ್ವಭಾವದ ರಮ್ಯ ರೋಧನವು ದಟ್ಟವಾಗಿದೆ. ತನ್ನ ಬಲಿದಾನದ ಮೌಲ್ಯಗಳನ್ನೆ ಬಹುರೂಪಗಳಲ್ಲಿ ಆದರೆ ಒಂದೇ ಆಕೃತಿಯ ಆಶಯದಲ್ಲಿ ಹಾಡುವ ದಲಿತ ಮಹಿಳೆಯು ಶೋಷಣೆಯನ್ನು ನೇರವಾಗಿ ಖಂಡಿಸುವುದಿಲ್ಲ. ಬದಲಿಗೆ ಆ ಶೋಷಣೆಯನ್ನೆ ಒಪ್ಪಿ ಹಾಡುತ್ತಲೆ ಆ ದುರಂತ ಪ್ರಜ್ಞೆಯನ್ನು ಸುಖಾಂತದಲ್ಲೊ ಶಾಪಾಶಯದಲ್ಲೊ ಬಿಂಬಿಸುವುದಿದೆ. ಇದು ಬಹುಪಾಲು ಎಲ್ಲ ಮಹಿಳೆಯರ ನಡತೆ. ದಲಿತ ಮಹಿಳೆಯರು

ಇಂತಹ ಕಥನಗಳನ್ನು ಕಟ್ಟುತ್ತಲೇ ತಮ್ಮನ್ನು ತಾವೆ ಸಾಂತ್ವನ ಮಾಡಿಕೊಳ್ಳುತ್ತ ರಮ್ಯವಾಗಿ ಪ್ರತಿರೋಧಿಸುತ್ತಾರೆ. ಕುಟುಂಬದ ಸಂಕಷ್ಟವನ್ನೆಲ್ಲ ಮಹಿಳೆಯರು ನಿರಾಕರಿಸುವುದು ಈ ಬಗೆಯ ನಿರೂಪಣೆಗಳಲ್ಲೆ.

ರಮ್ಯ ರೋಧನಕ್ಕೆ ವಿಶೇಷವಾದ ಅರ್ಥಗಳಿವೆ. ದುರಂತವನ್ನು ರಮ್ಯವಾಗಿ ಭಾವಿಸುವುದು ಅಸಾಮಾನ್ಯ ಪ್ರತಿಭಟನೆ. ಅಹಿಂಸೆಯ ಪರಮ ಧ್ವನಿ ಅದು. ಶೋಷಿಸುವ ಶಕ್ತಿಯನ್ನು ಅಂತಃಕರಣಕ್ಕೆ ಅನುಸಂಧಾನಿಸುವ ಕ್ರಮ ಅದು. ನೊಂದವರ ಒಡಲ ಕಿಚ್ಚು ಅದು. ಅಭಿವ್ಯಕ್ತಿಯ ಆದಿಮ ಸ್ವಭಾವ ಅದು. ಅಸಹಾಯಕತೆಯ ಆಕ್ರಂಧನದಲ್ಲೂ ಅಸ್ತಿತ್ವವನ್ನು ಪಾಡುವ ಬದುಕು ಅದು. ಈ ರಮ್ಯ ರೋಧನವು ದುಃಖಾಂತ ಕಥನ ಗೀತೆಗಳಲ್ಲಿ ಸಾಗಿಬಂದಿದ್ದು ಇವತ್ತಿಗೂ ದಲಿತ ಮಹಿಳೆಯರ ರಮ್ಯ ರೋಧನವು ಪುರುಷ ವ್ಯವಸ್ಥೆಯಲ್ಲಿ ಸದಾ ಪ್ರತಿಧ್ವನಿಸುತ್ತಲೆ ಇರುತ್ತದೆ. ರಮ್ಯತೆಗೂ ರೋಧನಕ್ಕೂ ಸಂಬಂಧವೇ ಇಲ್ಲದಿದ್ದರೂ ದಲಿತ ಮಹಿಳೆ ಅವರೆಡರ ವೈರುಧ್ಯದಲ್ಲಿ ತನ್ನ ನಿಜವಾದ ಪ್ರತಿಭಟನೆಯ ಪಿಸುಮಾತನ್ನೂ ಮೌನಾರ್ಥವನ್ನು ತುಂಬಿರುತ್ತಾಳೆ. ಇಂತಹ ರಮ್ಯ ರೋಧನವು ಮಹಿಳೆಯರ ಎಲ್ಲ ಅಂತರ್ ದನಿಯನ್ನು ಪ್ರತಿನಿಧಿಸಬಲ್ಲದು. ರಮ್ಯವಾದ ಯಾವ ರಾಗಗಳೂ ಇಲ್ಲದ ಬದುಕಿನಲ್ಲಿ ದುಃಖಾಂತ ಗೀತವನ್ನೆ ರಮ್ಯ ನಾದದಲ್ಲಿ ದಣಿದ ಮಾತಿನ ಲಯದಲ್ಲಿ ಗತಕಾಲದ ಹಿಂಸೆಯ ಎಲ್ಲ ಸ್ಮೃತಿಗಳನ್ನು ವರ್ತಮಾನದ ಸ್ಥಿತಿಗೆ ಹೊಂದಿಸಿಕೊಂಡು 'ಮುಕ್ತಿ' ಸಿಗುವುದೆಂಬ ಸ್ವರ್ಗ ಭಾವದಲ್ಲಿ ಬದುಕುವುದು ಅತ್ಯಂತ ಕ್ರೂರವಾದ ಸ್ಥಿತಿ. ದಲಿತ ಮಹಿಳೆಯರ ಜೈವಿಕತೆಯಲ್ಲೆ ಇಂತಹ ಅನುಭವಗಳು ಬೆರೆತು ಬಂದಿವೆ. ಈ ಬಗೆಯ ರಮ್ಯ ದುರಂತ ದಲ್ಲಿರುವ ದಲಿತ ಮಹಿಳೆಯ ಮುಂದೆ ನೂರಾರು ಸಮಸ್ಯೆಗಳಿವೆ. ಇಪ್ಪತ್ತೊಂದನೆ ಶತಮಾನದಲ್ಲು ದಲಿತ ಮಹಿಳೆಯು ತನ್ನ ನೋವು ನುಂಗಿ ಪರರ ಸುಖದ ಕಥನಗಳನ್ನು ಕೇಳುತ್ತ ಆಧುನಿಕೋತ್ತರ ಜಗದ ಮಾಯೆಗಳ ಮುಂದೆ ವರ್ತಮಾನದ ನರಕವನ್ನು ಮುಂದೂಡುತ್ತಿರುತ್ತಾಳೆ.

ಹೊಸಕಾಲದ ಪರಿಭಾಷೆಗಳಲ್ಲಿ ಇಂತಹ ರಮ್ಯ ರೋಧನದ ಮಾನಸಿಕ ಸ್ಥಿತಿಯನ್ನು ಗ್ರಹಿಸಬೇಕು. ಹಿಂಸೆಯನ್ನು ನಿರಾಕರಿಸಲು ಹಿಂಸೆಯನ್ನು ತಾವೇ ಹೇರಿಕೊಳ್ಳುವ ವರ್ತನೆಯು ಆದಿಮವಾದದ್ದು. ಕೊಂದುಕೊಳ್ಳುವ ಮನಸ್ಥಿತಿಯ ಪ್ರತಿಭಟನೆ ಈಗಲೂ ಮಹಿಳಾ ಸಮಾಜದಲ್ಲಿ ದಟ್ಟವಾಗಿದೆ. ಇದರಿಂದಲೆ ರಮ್ಯವಾಗಿ ಸಾವನ್ನು ಪರ್ಯಾಯ ಎಂದು ಸೋಲಿನಲ್ಲಿ ಎಲ್ಲ ಮಹಿಳೆಯರು ಭಾವಿಸುವುದು. ಶೋಷಣೆಯನ್ನು ಇಂತಹ ಕ್ರಮದಲ್ಲು ಪ್ರತಿಭಟಿಸುವ ಮಹಿಳೆಯರ ಪೈಕಿ ದಲಿತ ಮಹಿಳೆಯರು ಕೊಂಚ ಮಟ್ಟಿಗೆ ಧೈರ್ಯಸ್ಥರೇ. ದುರಂತವನ್ನು ಸುಖಾಂತದಲ್ಲಿ ಹಾಡಿಕೊಳ್ಳುತ್ತಲೆ ಆ ರಮ್ಯರೋಧನವನ್ನೆ ಮತ್ತೊಂದು ಅಭಿವ್ಯಕ್ತಿಯನ್ನಾಗಿಯು ಆಕೆ ಮಾಡಿಕೊಂಡಿದ್ದರಿಂದ ಮೌಖಿಕ ಪರಂಪರೆಯಲ್ಲಿ ದಲಿತ ಮಹಿಳೆಯ ದಟ್ಟ ಚಹರೆಗಳಿವೆ.

**ಮೌಖಿಕ ಸ್ವಾತಂತ್ರ್ಯ**

ದಲಿತ ಪರಂಪರೆಯಲ್ಲಿ ಮೌಖಿಕ ಕಥನಗಳು ವಿಕಾಸವಾಗಿದ್ದೆ ಮಹಿಳೆಯರಿಂದ. ತನ್ನೆಲ್ಲ ಸಂಕಷ್ಟವನ್ನು ಹಾಡಿಕೊಳ್ಳಲು ದಲಿತ ಮಹಿಳೆಗೆ ಮೌಖಿಕವಾದ ಸ್ವಾತಂತ್ರ್ಯವಿತ್ತು. ಇದು ಸೃಜನಶೀಲವಾದುದಾಗಿತ್ತು. ತನ್ನ ಪರಿಸರದ ನರಕದಿಂದ ತಪ್ಪಿಸಿಕೊಳ್ಳಲು ಇದ್ದ ಬಹುಮುಖ್ಯ ಮಾಧ್ಯಮಗಳಲ್ಲಿ ಹಾಡುವುದೂ ಒಂದಾಗಿತ್ತು. ಈ ಬಗೆಯ ಸ್ವಾತಂತ್ರ್ಯವು ಯಾವುದನ್ನೂ ನೇರವಾಗಿ ಪ್ರಶ್ನಿಸುವಂತಿರಲಿಲ್ಲ. ಅನೇಕ ಬಾರಿ ಅದು ಪುರುಷನ ಅವತಾರಗಳಿಗೆ ಮಣಿದು ಅಂತಹ ಕಥನಗಳನ್ನೆ ಹಾಡಬೇಕಾಗುತ್ತಿತ್ತು. ಕೌಟುಂಬಿಕವಾದ ರಮ್ಯರಾಗಗಳನ್ನು ಹಾಡಿ ಕೊಂಡು; ಭಾವುಕವಾದ ಮುಗ್ಧ ಲೋಕದ ಸುಖವನ್ನು ಪುನರ್‌ಭಾವಿಸಿಕೊಳ್ಳಲು ಮೌಖಿಕ ಪರಂಪರೆಯಲ್ಲಿ ಮಹಿಳೆಯರಿಗೆ ಅವಕಾಶವಿತ್ತು. ಸಮಾಜದ ಯಾವ ನೆಲೆಯಲ್ಲು ಸ್ವಾತಂತ್ರ್ಯ ಇಲ್ಲದಿದ್ದಾಗ ಮಹಿಳೆಯರು ಕುಟುಂಬದ ಮಾತೃ ಮೌಲ್ಯಗಳನ್ನು ಬಿಂಬಿಸುವ ಅಸಂಖ್ಯಾತ ಹಾಡುಗಳನ್ನು ಕಟ್ಟಿಕೊಂಡಿರುವುದು ಮೌಖಿಕ ಪರಂಪರೆಯ ದಾರಿಯಿಂದಲೆ.

ತನ್ನ ಹಾಗೂ ತನ್ನದಲ್ಲದ ಎರಡೂ ಬಗೆಯ ಚಹರೆಗಳನ್ನು ಮೌಖಿಕ ಸ್ವಾತಂತ್ರದಲ್ಲಿ ದಲಿತ ಮಹಿಳೆಯು ಬಿಂಬಿಸಿದ್ದಾಳೆ. ಮೌಖಿಕ ಸ್ವಾತಂತ್ರ್ಯ ಎಂದರೆ ತನ್ನ ಭಾವನೆಗಳನ್ನು ಹಾಡಿನ ರೂಪದಲ್ಲಿ ಸೃಜನಶೀಲವಾದ ರೂಪಕ ಕ್ರಮದಲ್ಲಿ ಧ್ವನಿತಾರ್ಥದ ಸಂಕೇತಗಳಲ್ಲಿ ಅಸ್ತಿತ್ವವನ್ನು ನಿರೂಪಿಸುವ ಕಥನ. ಈ ಕಥನದಲ್ಲಿ ಪ್ರತಿಭಟನೆಗಿಂತಲೂ ಗಾಢವಾದ ವಿಷಾದವೂ ಅಡಗಿದೆ. ಮೌಖಿಕವಾದ ಇಂತಹ ಅಭಿವ್ಯಕ್ತಿಯಿಂದಾಗಿ ದಲಿತ ಮಹಿಳೆ ಮಾನಸಿಕ ವಾಗಿ ನಿರಾಳವಾಗುತ್ತಲೆ ಪ್ರತಿರೋಧ ಶಕ್ತಿಯನ್ನು ಕಾಯ್ದುಕೊಂಡಿದ್ದಾಳೆ. ಈ ಬಗೆಯ ಗುಣ ಈ ಹೊತ್ತಿನ ದಲಿತ ಮಹಿಳೆಯರ ಭಾವಕೋಶದಲ್ಲಿದೆ. ಹಿಂದುಳಿದ ವರ್ಗದ ಮಹಿಳೆಯರು ಕೂಡ ಇಂತದೆ ಅಂತರ್‌ಶಕ್ತಿ ಸಂಚಯದಲ್ಲಿ ಭಾಗಿಯಾದವರೇ. ಗ್ರಾಮಗಳು ವಿಕಾಸಗೊಂಡು ಊಳಿಗಮಾನ್ಯ ಸಮಾಜಗಳು ಆಕ್ರಮಣಶೀಲವಾದಾಗ ಮೌಖಿಕ ಪರಂಪರೆಯು ಹಲವಾರು ಕವಲುಗಳಾಗಿ ವಿಸ್ತರಿಸಿದೆ. ಈ ಬಗೆಯ ಯತ್ನಗಳಲ್ಲಿ ಹೆಚ್ಚು ಕ್ರಿಯಾಶೀಲವಾದ ಹೊಣೆಗಾರಿಕೆಯನ್ನು ದಲಿತ ಮಹಿಳೆಯರು ನಿರ್ವಹಿಸಿದ್ದಾರೆ. ಇಪ್ಪತ್ತೊಂದನೆ ಶತಮಾನದ ದಲಿತ ಮಹಿಳೆಯರ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಭಿನ್ನ ನೆಲೆಯು ಸಾಧ್ಯ. ಪರಂಪರೆಯಿಂದ ಬಂದ ಮೌಖಿಕ ಸ್ವಾತಂತ್ರ್ಯವು ಈ ಹೊತ್ತಿನ ಪ್ರತಿಭಟನೆ ಹಾಗೂ ಹೊಸ ಬಗೆಯ ಅಭಿವ್ಯಕ್ತಿಗಳಿಗೆ ಪೂರಕವಾಗಬಲ್ಲದು. ಮೌಖಿಕವಾದ ಇಂತಹ ಸ್ವಾತಂತ್ರ್ಯವೇ ಇರದಿದ್ದರೆ ದಲಿತ ಮಹಿಳೆಯರ ದನಿಯೇ ಉಡುಗಿ ಹೋಗುತ್ತಿತ್ತು. ವಾಕ್ ಸ್ವಾತಂತ್ರ್ಯವಿದ್ದೂ ದನಿಯಿಲ್ಲದಂತೆ ಆಗಿರುವ ದಲಿತ ಮಹಿಳೆಯರ ಅಭಿವ್ಯಕ್ತಿಯು ಸ್ಥಳೀಯವಾದ ಸಾಂಸ್ಕೃತಿಕವಾದ ಹಾಗೆಯೆ ಸೃಜನಶೀಲವಾದ ಶೋಧಗಳಿಂದ ತಮ್ಮ ಅಸ್ತಿತ್ವವನ್ನು ರೂಪಿಸಿ ಕೊಳ್ಳಬೇಕು. ಆ ಮೂಲಕ ಹೇಳಿಕೊಳ್ಳಲಾಗದ ಎಲ್ಲ ಕಥನಗಳನ್ನು ನಿರ್ವಹಿಸಿಲು ಸಾಧ್ಯ.

## ಮೌನ ಆಚರಣೆ

ಪುರುಷ ಧ್ವನಿಯ ಗದ್ದಲದಲ್ಲಿ ಬಹುಪಾಲು ಎಲ್ಲ ಮಹಿಳೆಯರ ದನಿಯೂ ಉಡುಗಿ ಗಾಢವಾದ ವಿಷಾದದ ಮೌನವು ಪರಂಪರೆಗಳಲ್ಲಿ ಮಡುಗಟ್ಟಿದೆ. ಮೌಖಿಕ ಪರಂಪರೆಯಲ್ಲಿ ಮಹಿಳೆಯರಿಗೆ ಹಾಡಿಕೊಳ್ಳಲು ಸ್ವಾತಂತ್ರ್ಯವಿತ್ತೇ ಹೊರತು ಪ್ರಶ್ನಿಸುವ ಅಧಿಕಾರವಿರಲಿಲ್ಲ. ಏಷ್ಟೆಲ್ಲ ರಮ್ಯ ರೋಧನವನ್ನು ಮಾಡಬಹುದಿತ್ತೆ ಹೊರತು ಅದರಿಂದ ವಿಮುಕ್ತಿಯೇ ಇಲ್ಲ ಎಂಬಷ್ಟು ಕಠಿಣ ಪರಿಸರದಲ್ಲಿ ಧ್ವನಿ ಹೊರಡಿಸಿದರೂ ಆ ಧ್ವನಿಯಲ್ಲಿ ದಲಿತ ಮಹಿಳೆ ತನ್ನ ನೇರವಾದ ಅಂತರಂಗವನ್ನು ತೋಡಿಕೊಳ್ಳಲು ಆಗುತ್ತಿರಲಿಲ್ಲ. ಇಂತಹ ಸ್ಥಿತಿಯಲ್ಲಿ ಮಹಿಳೆಗೆ ಇದ್ದ ಏಕೈಕ ದಾರಿ ಎಂದರೆ ಮೌನಾರ್ಥದ ಆಚರಣೆಗಳೆ. ಮೌನದ ಮೂಲಕವೆ ಜನಪದ ಪರಂಪರೆಯಲ್ಲಿ ಮಹಿಳೆಯರು ಅರ್ಥಗಳನ್ನು ಪರಿಣಾಮಕಾರಿಯಾಗಿ ವ್ಯಕ್ತಪಡಿಸ ಬಲ್ಲವರಾಗಿದ್ದರು. ಮೌನಕೂಡ ಬಹುದೊಡ್ಡ ಶಕ್ತಿಯೆ. ಮೌನ ಹೊರಡಿಸುವ ಆಸ್ಫೋಟವು ಅತಿಶಯವಾದುದು. ನಿಶ್ಯಬ್ಧದ ಏಕಾಂತ ಕೂಡ ಎಂತದೆ ಅಧಿಕಾರವನ್ನು ಅಲುಗಾಡಿಸಲ್ಲದು. ಬಹುಪಾಲು ಎಲ್ಲ ಮಹಿಳೆಯರು ಮೌನವ್ರತದಲ್ಲಿ ತಮ್ಮ ಅಂತರಂಗದ ಪಿಸುಮಾತುಗಳನ್ನು ಸ್ವಗತದಲ್ಲಿ ಹಾಡಿಕೊಂಡು ಕನಸಿನಲ್ಲೆ ಕರಗಿದ್ದಾರೆ. ಇಂತಹ ದಾರಿಯಲ್ಲಿ ದಲಿತ ಮಹಿಳೆ ಆಚರಣೆಗಳಲ್ಲಿ ತೋರುವ ಪ್ರತಿರೋದವು ವಿಚಿತ್ರವಾದುದು.

ಮಧ್ಯಯುಗದ ಊಳಿಗಮಾನ್ಯ ವ್ಯವಸ್ಥೆಯು ಗ್ರಾಮದೈವಗಳ ಅಸ್ತಿತ್ವವನ್ನು ಭಗ್ನಪಡಿಸಿ ಮಹಿಳೆಯರ ಆಚರಣೆಗಳನ್ನೆಲ್ಲ ಪುರುಷಾಕೃತಿಗೆ ರೂಪಾಂತರಿಸಿದ್ದರಿಂದ ವಿಶೇಷವಾಗಿ ದಲಿತ ಮಹಿಳೆಯರು ಅತ್ತ ಮಾರಮ್ಮ ಊರಮ್ಮರಂತಹ ಶಕ್ತಿ ದೈವಗಳಲ್ಲು ಉಳಿಯಲಾರದೆ ಇತ್ತ ಪುರುಷ ದೈವಗಳಲ್ಲೂ ಅಸ್ಥಿತ್ವ ಕಾಣದೆ ತನ್ನನ್ನು ತಾನೆ ದಂಡಿಸಿಕೊಳ್ಳುವಂತಹ ಉಗ್ರ ಆಚರಣೆಗಳಿಗೂ ಒಳಪಟ್ಟಿದ್ದಾರೆ. ಈ ಹಂತದಲ್ಲಿಯೆ ಬೂತ ಪಿಶಾಚಿಗಳನ್ನು ಬಿಡಿಸುವಂತಹ ಅಸ್ಪೃಶ್ಯ ದೈವಗಳು ಹುಟ್ಟಿಕೊಂಡದ್ದು. ಮೈಮೇಲೆ ದೆವ್ವ ಬರುವಂತಹ ಹಾಗೂ ಆ ಬಗೆಯ ದುಷ್ಟಶಕ್ತಿಗಳನ್ನು ಕೂಡಾ ಆರಾಧಿಸುವಂತಹ ವಿಪರ್ಯಾಸಗಳು ಮಹಿಳೆಯರಿಗೆ ಇದರಿಂದಲೆ ಉಂಟಾದದ್ದು. ಇದು ದಲಿತ ಮಹಿಳೆಯ ಸುಪ್ತ ಪ್ರಜ್ಞೆಯ ಮೇಲೆ ಗಾಢವಾದ ಪರಿಣಾಮವನ್ನು ಉಂಟು ಮಾಡಿದ್ದು ಇಂದಿಗೂ ಬೂತ ಪಿಶಾಚಿಗಳು ಮೈಮೇಲೆ ಬರುತ್ತವೆಂದು ನಂಬಿ ಅದಕ್ಕೆ ಸಂಬಂಧಿಸಿದ ಆಚರಣೆಗಳು ನಡೆಯುತ್ತಲೆ ಇವೆ. ಭೂತ ಪಿಶಾಚಿಗಳನ್ನು ಮೈಮೇಲೆ ಆವಾಹಿಸಿಕೊಳ್ಳುವುದು ಆಚರಣಾತ್ಮಕವಾದ ಪ್ರತಿಭಟನೆಯೆ. ಈಗಲೂ ಹಳ್ಳಿಗಾಡಿನ ಸಮಾಜ ದಲ್ಲಿ ಇಂತಹ ಪ್ರತಿರೋಧವು ಇದೆ. ಪುರುಷ ದೈವಗಳ ವಿರುದ್ಧವಾದ ಇಂತಹ ವರ್ತನೆಯು ಸಮಾಧಾನ ಪಡೆದುಕೊಳ್ಳುವುದು ಎಲ್ಲಮ್ಮ, ಗಾಳೆಮ್ಮರಂತಹ ಬೂತ ಬಿಡಿಸುವ ದೈವಗಳ ಮೂಲಕವೆ. ಕರಾವಳಿಯಲ್ಲಿರುವ ಭೂತಾರಾಧನೆಯಲ್ಲು ಇಂತಹ ಗುಣವಿದೆ. ಸಿರಿ ಆಚರಣೆ ಗಳಲ್ಲಿ ಕೆಳ ಸಮುದಾಯಗಳ ಮಹಿಳೆಯರು ಪುರುಷ ಸಮಾಜದ ಬಗ್ಗೆ ತಮ್ಮ ನಿಲುವನ್ನು ವ್ಯಕ್ತಪಡಿಸುವ ಕ್ರಮವು ಇದೇ ಸ್ವಭಾವದ್ದು. ದಲಿತ ಮಹಿಳೆಯರ ಮನಸ್ಸಿನ ಸುಪ್ತ ಸ್ತರದಲ್ಲಿ ಸಾಂಸ್ಕೃತಿಕವಾದ ಅನೇಕ ಬಗೆಯ ವೈರುಧ್ಯಗಳು ಪುರುಷಶಾಹಿಯ ನೆಲೆಯಿಂದ ಬೆಳೆದಿದ್ದು

ಇಂದಿಗೂ ದಲಿತ ಮಹಿಳೆಯ ಮನಸ್ಸು ಛಿದ್ರಗೊಂಡಿದ್ದು ಅದು ಹತ್ತಾರು ಆಚರಣೆಗಳಿಂದ ತನ್ನನ್ನು ತಾನು ಸಂತೈಸಿಕೊಳ್ಳುತ್ತದೆ. ಎಲ್ಲಮ್ಮನ ಜಾತ್ರೆಯಲ್ಲು ಕೂಡ ದಲಿತ ಮಹಿಳೆಯರ ಹಲವಾರು ಪ್ರತಿರೋಧದ ಸ್ತರಗಳು ಆಚರಣೆಗಳ ಮೂಲಕವೆ ವ್ಯಕ್ತವಾಗುತ್ತಿರುತ್ತವೆ.

ಇಂತಹ ಹಿನ್ನೆಲೆಯ ದಲಿತ ಮಹಿಳಾ ಸಮಾಜವು ಆಧುನಿಕ ಜಗತ್ತನ್ನು ಬಳಸಿಕೊಂಡು ಬಂದು ಅದರ ಜೊತೆ ಮುಖಾಮುಖಿ ಯಾಗುತ್ತಿರುವಲ್ಲಿಯು ಅವರ ಸುಪ್ತ ಪ್ರಜ್ಞೆಯನ್ನು ಮತ್ತಷ್ಟು ಹದಗೆಡಿಸುವ ಕ್ರಮಗಳಿವೆ. ಗ್ರಾಮೀಣ ಸಮಾಜದ ಬಹುಪಾಲು ತಳ ಸಮುದಾಯ ಗಳ ಮಹಿಳೆಯರಲ್ಲೆಲ್ಲ ಇಂತಹ ಭಗ್ನಸ್ಥಿತಿಯ ಮನಸ್ಸು ಬೇರೆ ಬೇರೆ ರೂಪಗಳಲ್ಲಿ ವ್ಯಕ್ತವಾಗುತ್ತಿರುತ್ತದೆ. ಬಾನಾಮತಿ ಹಾಗೂ ಆ ಬಗೆಯ ಎಷ್ಟೋ ಮೂಢನಂಬಿಕೆಗಳು ಇಂತದರಿಂದಲು ಹುಟ್ಟಿಕೊಳ್ಳುತ್ತವೆ. ದಲಿತ ಮಹಿಳೆಯರ ಇಂತಹ ಆಚರಣೆಗಳಿಂದ ಬೆಳೆದು ಬಂದಿರುವ ದಲಿತ ಮಹಿಳಾ ಮನಸ್ಸು ತನ್ನ ಅಸ್ತಿತ್ವಕ್ಕಾಗಿ ನಿರ್ಮಲವಾದ ಸ್ವಚ್ಛಂದವಾದ ಮಾನಸಿಕ ವಾತಾವರಣಕ್ಕಾಗಿ ತೊಡಗಿದೆ. ಈ ನಿಟ್ಟಿನಲ್ಲಿ ದಲಿತ ಮಹಿಳೆಯ ಮನಸ್ಸಿನ ಆಚರಣೆಯ ಪ್ರತಿರೋಧವನ್ನು ಆಧುನಿಕ ಜಗತ್ತಿನ ವಿಮುಕ್ತಿಯ ಕ್ರಮದಲ್ಲಿ ಜತನವಾಗಿ ಪರಿಭಾವಿಸಿ ಪರ್ಯಾಯವನ್ನು ಕಂಡುಕೊಳ್ಳಬೇಕಾಗಿದೆ. ಮಧ್ಯಕಾಲೀನ ಊಳಿಗಮಾನ್ಯ ಸಮಾಜದ ಪುರುಷ ವ್ಯವಸ್ಥೆಯ ಹಿಂಸೆಯನ್ನು ಸಹಿಸಲಾರದೆ ದಲಿತ ಮಹಿಳೆಯರು ಈ ಬಗೆಯ ವಿಚಿತ್ರ ವರ್ತನೆಗಳಿಗೆ ಆಘಾತಗಳಿಗೆ ಈಡಾಗಬೇಕಾಯಿತು.

ಮಹಿಳೆಯರಿಗೆ ಅಭಿವ್ಯಕ್ತಿಯ ಅವಕಾಶಗಳೆಲ್ಲ ಮುಚ್ಚಲ್ಪಟ್ಟಾಗಲು ಇಂತಹ ನಡವಳಿಕೆಗಳ ತಲೆದೋರುತ್ತವೆ. ನೆನ್ನೆಯ ಎಷ್ಟೋ ಆಘಾತಗಳು ಇಂದಿನ ವರ್ತನೆಯ ಮೇಲೆ ಪರಿಣಾಮ ಉಂಟು ಮಾಡುತ್ತಿರುತ್ತವೆ. ದಲಿತ ಮಹಿಳೆಯರ ಆಚರಣೆಗಳಲ್ಲೆಲ್ಲ ಕಳೆದುಕೊಂಡಿದ್ದರ ಭಾವವು ಇಣುಕಿ ಹೋಗಿರುತ್ತದೆ. ಮಂಗಳೂರು ಭಾಗದ ದಲಿತ ಮಹಿಳೆ ಯರು ಹೆಚ್ಚಾಗಿ ಆಚರಿಸುವ ಸಿರಿ ಜಾತ್ರೆಯ ಸಂದರ್ಭದಲ್ಲಿ ಕಳೆದು ಹೋದದ್ದರ ಭಾವನೆಯು ಅಲ್ಲಿನ ಆಚರಣೆಗಳಲ್ಲಿ ದಟ್ಟವಾಗಿ ಕಾಣುತ್ತಿರುತ್ತದೆ. ಆಧುನಿಕ ಜಗತ್ತಿನಲ್ಲು ದಲಿತ ಮಹಿಳೆ ಯರು ಪಡೆದುಕೊಳ್ಳುವುದಕ್ಕಿಂತ ಕಳೆದು ಕೊಳ್ಳುತ್ತಿರುವುದೆ ಹೆಚ್ಚು. ಬೃಹತ್ ನಗರಗಳಲ್ಲಿ ಕಳೆದು ಹೋಗುವ ದಲಿತ ಮಹಿಳೆಯರ ಅಸ್ತಿತ್ವಕ್ಕೆ ಲೆಕ್ಕವೇ ಇಲ್ಲ. ಇಂತಲ್ಲಿ ದಲಿತ ಮಹಿಳೆಯರ ಆಚರಣಾತ್ಮಕವಾದ ಪ್ರತಿರೋಧದ ನೆಲೆಗಳು ಮಹತ್ವದ ಸಂಕೇತಗಳನ್ನು ಅರ್ಥ ಸೂಚಿಗಳನ್ನು ನಿರೂಪಿಸುತ್ತಿರುತ್ತವೆ.

**ಜಾತ್ಯತೀತ ತಾಯ್ತನ**

ದಲಿತರ ಬಹುದೊಡ್ಡ ಆಕ್ರಂಧನದಲ್ಲಿ ಜಾತ್ಯತೀತ ಕನಸು ಕೂಡಾ ಒಂದಾಗಿದೆ. ದಲಿತ ಮಹಿಳೆಯರಿಗು ಇದು ಸಮಾನ ಆಶಯವೆ. ಜಾತಿಯ ಹೊಡೆತದಿಂದ ಬಿಡಿಸಿಕೊಳ್ಳುವ ಅವರ ಹಂಬಲವು ಪ್ರಧಾನ ಸಮಾಜಗಳ ಕಣ್ಣಿಗೆ ಕಾಣುವುದೇ ಇಲ್ಲ. ಜಾತಿ ಸಮಸ್ಯೆಯು ದಲಿತ ಸಮಾಜದ ಪುರುಷರಿಗೆ ಮಾತ್ರ ಹೆಚ್ಚಿನ ಹಿಂಸೆಯನ್ನು ನೀಡುತ್ತದೆ ಎಂದು ಭಾವಿಸುವವರಿದ್ದಾರೆ. ದಲಿತ ಮಹಿಳೆಯ ಮೇಲಿನ ಲೈಂಗಿಕ ಲಾಲಸೆಗಾಗಿ ಮೇಲು ಜಾತಿಗಳು

ಆಕೆಯನ್ನು ದುರ್ಬಳಕೆ ಮಾಡಿಕೊಳ್ಳಬಲ್ಲವು. ಇಂತಲ್ಲಿ ಅಸ್ಪೃಶ್ಯತೆ ಆ ಕ್ಷಣದಲ್ಲಿ ಮಾತ್ರ ಎದುರಾಗದೆ ಮರೆಗೆ ಸರಿದು ಬಿಡುವಂತದು. ಲೈಂಗಿಕ ಕ್ರಿಯೆ ಮುಗಿದ ಬಳಿಕ ಜಾತಿಯು ತನ್ನ ಹಳೆಯ ವ್ಯಾಘ್ರುತೆಯಲ್ಲೆ ದಲಿತ ಮಹಿಳೆಯನ್ನು ತುಳಿದು ಮುಂದೆ ನಡೆದು ಬಿಡುತ್ತದೆ. ಇಲ್ಲು ಕೂಡ ಮೇಲು ಜಾತಿಗಳಿಗೆ ತಕ್ಕಂತೆ ವೇಶ್ಯಾ ಸಮುದಾಯಗಳನ್ನು ವಿಂಗಡಿಸಿಕೊಳ್ಳ ಲಾಗಿರುತ್ತದೆ. ಅತ್ಯಂತ ಕಡಿಮೆ ಮಟ್ಟದ ದೇವದಾಸಿಯರ ಮೇಲಿನ ಲೈಂಗಿಕ ಅಧಿಕಾರವು ಎಲ್ಲರಿಗೂ ಸಂಬಂಧಿಸಿದ್ದಾಗಿರುತ್ತದೆ.

ಗಮನಿಸಬಹುದಾದ ಅಂಶವೇನೆಂದರೆ; ಇಂತಹ ದಲಿತ ಮಹಿಳೆಯರ ಆಳದ ಜಾತ್ಯತೀತ ಸ್ವಭಾವವು ತಾಯ್ತನದಲ್ಲಿ ಇಡೀ ಸಮಾಜವನ್ನು ವಿನೀತವಾಗಿ ಪ್ರೀತಿಸುತ್ತದೆ. ತನ್ನ ಮೇಲಿನ ಆಕ್ರಮಣವನ್ನು ಸಹಿಸಿಕೊಂಡು ಭೂಮಾಲೀಕ ಜಾತಿಗಳ ಸೇವೆ ಮಾಡಿಕೊಂಡು ದಾಸ್ಯದಲ್ಲಿದ್ದುಕೊಂಡೆ ಎಲ್ಲರನ್ನೂ ಆಧರಿಸುವ ದಲಿತ ಮಹಿಳಾ ಸಮಾಜದ ಮೌಲ್ಯವು ತಾಯ್ತನದಲ್ಲೆ ನಡೆದುಕೊಳ್ಳುತ್ತದೆ. ತಾಯ ವಾತ್ಸಲ್ಯಕ್ಕೆ ಅವರು ಇವರು ಎಂಬ ಭೇದವಿಲ್ಲ. ತಾರತಮ್ಯವಿಲ್ಲದ ತಾಯ್ತನವು ನಿಸರ್ಗದ ಗುಣವನ್ನು ಪಡೆದಿರುವಂತದೇ ಆಗಿದ್ದು ಕ್ಷಮಯಾಧರಿತ್ರಿಯಂತೆ ತನ್ನ ಸಂಕಷ್ಟಗಳನ್ನು ತಾನೇ ಉಂಡು ಅರಗಿಸಿಕೊಳ್ಳುತ್ತದೆ. ತಾಯ್ತನಕ್ಕೆ ಜಾತಿ ವರ್ಗಗಳಿರುವುದಿಲ್ಲ. ದಲಿತ ಮಹಿಳೆಯ ಸಾಮಾಜಿಕ ಮೌಲ್ಯದಲ್ಲು ಜಾತಿಯಾಗಲಿ ವರ್ಗವಾಗಲಿ ಲಿಂಗ ಸಂಬಂಧಿ ಅಧಿಕಾರದ ಗರ್ವವಾಗಲಿ ಇರುವುದಿಲ್ಲ. ತಾಯ್ತನಕ್ಕೂ ಜಾತ್ಯತೀತತೆಗೂ ಅವಿನಾಭಾವ ಸಂಬಂಧವಿದೆ. ಸಂವಿಧಾನದ ಜಾತ್ಯತೀತ ಭಾವದಂತೆಯೆ ದಲಿತ ಮಹಿಳೆಯ ಜಾತ್ಯತೀತತೆಯು ತಾಯ್ತನದ ತತ್ವದಲ್ಲಿ ಸಮಾಜದ ಎಲ್ಲರನ್ನು ತೊಟ್ಟಿಲಲ್ಲಿ ತೂಗಬಲ್ಲದು. ತಾಯ್ತನದ ಜಾತ್ಯತೀತ ತಕ್ಕಡಿಯನ್ನು ತೂಗಬಲ್ಲ ದೊಡ್ಡಶಕ್ತಿಯು ದಲಿತ ಮಹಿಳೆಗೆ ಇದೆ. ತಾಯ್ತನದ ತಕ್ಕಡಿ ಯಾರಿಗೂ ತಾರತಮ್ಯ ಮಾಡಲಾರದು. ಅನ್ಯ ಬೇಧಕಲ್ಪ ಅದಕ್ಕೆ ಸಾಧ್ಯವಿಲ್ಲ. ತಾಯಾದವಳ ಅಂತಃಕರಣ ನೊಂದವರಿಗೆ ಅಮೃತವಾಗಬಲ್ಲದು. ಜಾತ್ಯತೀತ ತಾಯ್ತನಕ್ಕೆ ಸಮಾಜವನ್ನು ಸ್ವಚ್ಛಗೊಳಿಸುವ ಶಕ್ತಿಯಿದೆ. ಹಾಗೆಯೆ ಸರ್ವೋದಯದ ಗುಣವಿದೆ. ಜಾತ್ಯಾತೀತ ತತ್ವ ಆಳದಲ್ಲಿ ಬುದ್ಧನ ವಿವೇಕದಿಂದ ಬೆಳಗುತ್ತದೆ. ದಲಿತ ಮಹಿಳೆಯ ಭಾವನಾತ್ಮಕ ಸಂಬಂಧವು ಜಾತ್ಯತೀತ ವಾದುದೇ ಆಗಿದ್ದು ಅದರಲ್ಲಿ ತಾಯ್ತನದ ನೈತಿಕ ಹೊಣೆಗಾರಿಕೆಯಿದೆ.

ಹೊಸ ಕಾಲದ ವೈಚಾರಿಕತೆಗೆ ಇಂತಹ ಭಾವನೆಯ ಅಗತ್ಯವಿದೆ. ಬರಿಯ ಒಣ ವೈಚಾರಿಕ ಪ್ರತಿಭಟನೆಗಳು ಅನಂತವಾದ ಪಯಣಕ್ಕೆ ಸಾಕಾಗುವುದಿಲ್ಲ. ವೈಚಾರಿಕತೆಯು ಅಂತಃಕರಣದ ಭಾಗವಾಗಿರಬೇಕು. ಸಮಾಜದ ಕೇಡನ್ನು ಹಿಂಸೆಯಿಂದ ಮಣಿಸುವುದು ಅಸಾಧ್ಯ, ವಾತ್ಸಲ್ಯ, ಅಂತಃಕರಣ ಮಮಕಾರ ಮೌಲ್ಯಗಳು ಅಪಾರ ಶಕ್ತಿಯನ್ನು ಧಾರಣ ಮಾಡಿಕೊಳ್ಳಬಲ್ಲವು. ಆಧುನಿಕೋತ್ತರ ಜಗತ್ತಿನಲ್ಲಿ ಇಂತಹ ಭಾವನೆಗಳೆ ಕರಗಿ ಹೋಗುತ್ತಿರುವಾಗ ಮಹಿಳಾ ನಿರ್ವಚನಕ್ಕೆ ಈ ಅಂಶಗಳನ್ನು ಅನ್ವಯಿಕವಾಗಿ ಅನುಸಂಧಾನ ಮಾಡಿಕೊಳ್ಳಬೇಕಾಗಿದೆ.

ಸ್ವಯಂ ದಂಡನೆ

ಅಹಿಂಸೆಯ ದರ್ಶನವಿದ್ದವರು ಮಾತ್ರ ಯಾರನ್ನೂ ನೋಯಿಸಬಾರದು ಎಂದು ತಿಳಿದಿರುತ್ತಾರೆ. ದಲಿತ ಮಹಿಳೆ ತನ್ನನ್ನು ತಾನೆ ದಂಡಿಸಿಕೊಂಡು ನೋವ ನುಂಗಿ ನಗುತ್ತಾಳೆ. ಬಹುಪಾಲು ಎಲ್ಲ ಮಹಿಳೆಯರಲ್ಲಿ ಈ ಗುಣ ಸಮಾನವಾಗಿದೆ. ಸಂಸಾರ, ಸಮಾಜ ಎರಡರಲ್ಲು ಸವಾಲು ಎದುರಿಸಿ ವಿಫಲಳಾಗುವ ದಲಿತ ಮಹಿಳೆ ಪ್ರತಿಭಟಿಸುವ ರೀತಿಯಲ್ಲಿ ಅತ್ಯಂತ ಸೂಕ್ಷ್ಮವಾಗಿರುತ್ತಾಳೆ. ಮೂರು ಹಂತಗಳಲ್ಲಿ ಆಕೆ ತನ್ನ ಅಹಿಂಸಾ ಪ್ರತಿಭಟನೆಯನ್ನು ವ್ಯಕ್ತಪಡಿಸಿದ್ದಾಳೆ. ತನ್ನ ಮೇಲಿನ ಹಲ್ಲೆಗೆ ಮೊದಲು ಆಕೆ ಮೌನವಾಗಿ ಎಲ್ಲವನ್ನು ನಿರಾಕರಿಸುತ್ತಾಳೆ. ಎರಡನೆಯ ಹಂತದಲ್ಲಿ ಆಕೆ ತನ್ನ ಸದಸ್ಯರ ಜೊತೆ ಅಸಹಕಾರದಿಂದ ವರ್ತಿಸುತ್ತಾಳೆ. ಮೂರನೆ ಘಟ್ಟದಲ್ಲಿ ಎಲ್ಲರ ನಡುವೆ ಮೌನವಾಗಿ ಮಾತನಾಡದೆ ಸಹಕರಿಸದೆ ಊಟ ಬಿಟ್ಟು ಮೂಲೆಯಲ್ಲಿ ಕೂತುಬಿಡುತ್ತಾಳೆ. ಈ ಮೂರೂ ಬಗೆಯ ಪ್ರತಿರೋಧಗಳಲ್ಲು ಮಹಿಳೆ ತನಗೆ ತಾನೆ ದಂಡಿಸಿಕೊಳ್ಳುತ್ತಿರುತ್ತಾಳೆ. ಉಪವಾಸದಿಂದ ಯಾವ ಕೆಲಸವನ್ನು ಮಾಡದೆ ಗಾಢವಾದ ಏಕಾಂತ ರೋಧನದಲ್ಲಿ ಮಿಡಿವ ಆಕೆಯ ಭಾವಜಗತ್ತು ಆ ಹೊತ್ತಿಗೆ ಆಳದಲ್ಲಿ ಕುದಿಯುತ್ತಿರುತ್ತದೆ.

ಗಾಂಧೀಜಿಯು ಈ ಬಗೆಯ ಪ್ರತಿರೋಧಗಳನ್ನು ಅಸಹಕಾರ ಚಳುವಳಿಯಾಗಿ ಹಾಗೂ ಉಪವಾಸ ಚಳುವಳಿಯಾಗಿ ಕೊನೆಗೆ ಅಹಿಂಸಾ ಚಳುವಳಿಯಾಗಿ ರೂಪಾಂತರಿಸಿಕೊಂಡರು. ಗಾಂಧೀಜಿಯ ಇಂತಹ ಪ್ರತಿರೋಧವು ಸಮಾಜದ ಕೊನೆಯ ಮಹಿಳೆಯರಿಂದ ಭಾವಿಸಿಕೊಂಡಿರುವುದು ವಿಶೇಷ. ತಣ್ಣಗಿನ ಈ ಪ್ರತಿರೋಧವು ಎದುರಾಳಿಯ ಎಲ್ಲ ಶಕ್ತಿಯನ್ನು ಕರಗಿಸಬಲ್ಲದು. ಇದು ಅಂತಃಕರಣದ ಪ್ರತಿಭಟನೆಯದು. ಹಾಗೆಯೆ ತನ್ನನ್ನು ತಾನೆ ದಂಡಿಸಿಕೊಳ್ಳುತ್ತ ದಂಡನೆಗೆ ಒಳಗಾಗಬೇಕಾಗಿದ್ದವರನ್ನು ಪರಿವರ್ತಿಸುವ ಪರಿಯದು. ಕ್ರೈಸ್ತನ ನೀತಿ ಕೂಡ ಇಂತದೇ ಆಗಿತ್ತು. ದಲಿತ ಕುಟುಂಬಗಳಲ್ಲಿ ಸ್ವಯಂ ದಂಡನೆ ಸಾಮಾನ್ಯ. ಈ ದಂಡನೆಯು ಅತಿರೇಕಕ್ಕೆ ಹೋಗಿ ಜೀವವನ್ನೆ ಕಳೆದುಕೊಳ್ಳಬಲ್ಲದು. ಬಲಿದಾನದ ಗೀತೆಗಳಾಗಲಿ ಅನಾಥ ಹೆಣ್ಣು ಮಕ್ಕಳ ಜನಪದ ಕತೆಗಳಾಗಲಿ ಈ ಬಗೆಯ ಸ್ವಯಂ ದಂಡನೆಯ ವಿವರಗಳಿಂದ ತುಂಬಿ ಹೋಗಿವೆ. ಇದು ಉಪಾಯದಂತೆ ಕಂಡರೂ ಪ್ರತಿರೋಧದ ಪರಮ ಅಭಿವ್ಯಕ್ತಿ. ಗಾಂಧಿ ಇಂತಹ ಶಕ್ತಿಯಿಂದಲೆ ವಶಾಹತುಶಾಹಿ ಜಗತ್ತಿನ ಕೋವಿಗಳ ಸದ್ದನ್ನು ಅಡಗಿಸುತ್ತಿದ್ದುದು. ಈ ಕಾಲದ ಹೋರಾಟಗಳಿಗು ಇಂತಹ ಅಭಿವ್ಯಕ್ತಿಯ ಅವಶ್ಯಕತೆಯಿದ್ದು ಬಹುಪಾಲು ಎಲ್ಲ ಮಹಿಳೆಯರ ಆಳದಲ್ಲಿ ಮಡುಗಟ್ಟಿರುವ ದಟ್ಟ ವಿಷಾದದ ಹಾಗೆಯೆ ಅಹಿಂಸಾ ತತ್ವದ ಭಾವನೆಗಳನ್ನು ಬೃಹತ್ತಾಗಿ ಸಂಯೋಜಿಸಿ ಕೊಳ್ಳಬೇಕಾಗಿದೆ. ಹಂಚಿ ಉಂಡರೆ ಹಸಿವಿಲ್ಲ. ಜನಪದ ಸಮಾಜದ ತತ್ವವಿದು. ಬಡವರು ಮಾತ್ರವೆ ಇಂತಹ ನೀತಿಯ ಪಾಲಕರು. ದಲಿತ ಸಮಾಜದ ಒಳಗಿನ ಸಮಾನತೆಯ ಧ್ಯಾನವಿದು. ಹಂಚಿ ಉಂಡಾಗ ಮಾತ್ರ ಅದು ಆಹಾರ, ಆಹಾರದ ನೈತಿಕತೆಯನ್ನು ದಲಿತ ಮಹಿಳೆ ಗಾಢವಾಗಿ ಬಲ್ಲಳು. ಹಸಿವು ತೋರಿದ ದರ್ಶನವಿದು. ಇದ್ದುದನ್ನೆ ಹಂಚಿ ಉಂಡಾಗ

ಅದು ದೇಹಕ್ಕೆ ಸೇರುವುದಷ್ಟೆ ಅಲ್ಲದೆ ಸಂಬಂಧಗಳಿಗೂ ಸಮಾಜಕ್ಕೂ ಸಲ್ಲುತ್ತದೆ. ಹೊಟ್ಟೆ ತುಂಬಿದ ಸಮಾಜಕ್ಕೆ ಹಂಚಿಕೆಯ ತಿಳುವಳಿಕೆ ಇರುವುದಿಲ್ಲ. ಅದು ಎಲ್ಲವನ್ನು ತನ್ನದಾಗಿಸಿ ಕೊಳ್ಳುವುದು ಹೇಗೆ ಎಂದು ಚಿಂತಿಸುತ್ತಿರುತ್ತದೆ. ಅತಿಯಾಗಿ ತಿನ್ನುವುದು ಕೂಡ ಅನೈತಿಕ , ಅಧರ್ಮ ಹಾಗೆಯೆ ವಂಚನೆ ಕೂಡ. ಮೇಲ್‌ಜಾತಿಗಳು ತಿಂದು ತಿಂದು ಕೊಬ್ಬಿರುವಲ್ಲಿ ದಲಿತ ಸಮಾಜದ ಮಹಿಳೆಯರು ಬೇಡಿ ತಂದಾದರೂ ಅದನ್ನು ಹಂಚಿಕೊಳ್ಳುತ್ತಾರೆ. ಅಸ್ತಿತ್ವದ ಕಾರಣಕ್ಕಾಗಿ ಹಂಚಿ ಉಣ್ಣುವ ತತ್ವವನ್ನು ದಲಿತ ಸಮಾಜ ಅನುಸರಿಸಿದೆ.

ಹಂಚಿಕೊಂಡಾಗ ಮಾತ್ರ ಪ್ರೀತಿ ವಿಶ್ವಾಸ ಸಾಧ್ಯ. ಊಳಿಗಮಾನ್ಯ ಸಮಾಜಗಳು ಎಲ್ಲ ವನ್ನು ಕಿತ್ತುಕೊಳ್ಳುವ ಮೌಲ್ಯಗಳನ್ನೆ ಹೇರುವಲ್ಲಿ ಬಹುಪಾಲು ಮಹಿಳೆಯರು ಕೌಟುಂಬಿಕ ವ್ಯವಸ್ಥೆಯಲ್ಲಿ ಹಂಚಿಕೊಳ್ಳುವ ನೀತಿಯನ್ನು ಕಲಿಸಿವೆ. ಪುರುಷ ತನ್ನಿಂದ ಆದಷ್ಟನ್ನು ತಂದು ಹಾಕಿ ತನಗೆ ಬೇಕಾದಷ್ಟೆಲ್ಲವನ್ನು ತಿಂದು ತೇಗಿದರೆ; ತಾಯಾದವಳು ತನಗೆ ಇಲ್ಲದಿದ್ದರೂ ಮಕ್ಕಳಿಗೆ ಉಣ್ಣಿಸಿ ಅವರ ಸುಖದಲ್ಲಿ ತನ್ನ ಹಸಿವನ್ನು ಮರೆಯುತ್ತಾಳೆ. ಇದು ಭಾರತೀಯ ಮಹಿಳೆಯರೆಲ್ಲರ ಪ್ರಧಾನ ಗುಣ. ದಲಿತ ಮಹಿಳೆ ತನ್ನೆಲ್ಲ ಬಡತನದ ನಡುವೆಯೂ ಹಂಚಿಕೆಯ ಈ ನೀತಿಯನ್ನು ಬಿಡಲಾಗದಂತೆ ಸಂಬಂಧಗಳು ಬೆಸೆದುಕೊಂಡಿರುತ್ತವೆ. ಆಧುನಿಕ ಜಗತ್ತು ಹಂಚಿಕೆಯ ನ್ಯಾಯವನ್ನು ಸದಾ ಮರೆಮಾಚಿ ಖಾಸಗಿಯಾದ ಭಾವನೆಗಳನ್ನೆ ಬಿತ್ತುತ್ತಿರುತ್ತದೆ. ವೈಯಕ್ತಿಕ ಸುಖದ ಖಾಸಗೀತನವು ಸಮಾಜದ ಸಮಷ್ಠಿ ಸುಖಕ್ಕೆ ಯಾವತ್ತೂ ತೊಡಕಾಗುತ್ತಿರುತ್ತದೆ. ಎಷ್ಟೋ ಬಾರಿ ಚಳುವಳಿಗಳು ಕೂಡ ಹಂಚಿಕೆಯ ನೆಪದಲ್ಲೆ ಆ ಹಂಚಿಕೆಯನ್ನು ಬಲಿಷ್ಠ ಜಾತಿಗಳಿಗೆ ಕೇಂದ್ರೀಕರಿಸಿಕೊಳ್ಳುತ್ತಿರುತ್ತವೆ. ಪುರುಷ ಪ್ರಧಾನ ಸಮಾಜವು ಮಹಿಳೆಗೆ ಸಂಬಂಧಿಸಿದ ಎಷ್ಟೋ ಸವಲತ್ತುಗಳನ್ನೆಲ್ಲ ಕಿತ್ತುಕೊಂಡು ಆಕೆಗೆ ಹಂಚಿಕೆಯಾಗಬೇಕಾದ್ದನ್ನೆಲ್ಲ ತಾನೆ ಅನುಭವಿಸಿದೆ. ಆಸ್ತಿ ಹಕ್ಕಿನ ಬಗ್ಗೆ ಈಗಲೂ ಖಚಿತವಾದ ತೀರ್ಮಾನವನ್ನು ಪುರುಷ ನ್ಯಾಯವು ನೀಡಿಲ್ಲ. ಮಹಿಳೆಯರಂತು ಸಮಾಜದ ಸುಖಕ್ಕಾಗಿ ತನ್ನೆಲ್ಲ ಕಷ್ಟ ನಷ್ಟಗಳನ್ನು ಮರೆತು ಸೇವೆ ಮಾಡಬೇಕಾಗಿರುತ್ತದೆ. ಇಂತಹ ಸೇವೆಯು ಮಹಿಳೆಯರಿಗೆ ಕನಿಷ್ಟ ಪ್ರಮಾಣದ ಹಂಚಿಕೆಯನ್ನೂ ನೀಡುವುದಿಲ್ಲ.

ಸಮಾನತೆಯ ವಿಷಯದಲ್ಲು ಪುರುಷರೆ ಮೊದಲ ಸಾಲಿಗೆ ಸೇರಿಕೊಳ್ಳುತ್ತಾರೆ. ಸಮಾನತೆಯ ಫಲ ಅತ್ಯಂತ ಕೊನೆಯಲ್ಲಿ ಮಹಿಳೆಯರಿಗೆ ಸಾಧ್ಯವಾಗುವಂತಿದ್ದು ದಲಿತ ಮಹಿಳೆ ಇಲ್ಲೂ ಕೂಡ ವಂಚನೆಗೆ ಒಳಗಾಗುತ್ತಾಳೆ. ಸಮಾನತೆಯ ಬಗೆಗೆ ವಾದಿಸುವ ಚಿಂತಕರು ಮಹಿಳೆಯರಿಗೆ ಮೊದಲು ನ್ಯಾಯದ ಹಂಚಿಕೆಯಾಗಬೇಕೆಂದು ಹೋರಾಡು ವುದಿಲ್ಲ. ಹಂಚುವ ಅಧಿಕಾರವು ಪುರುಷಾಧಿಪತ್ಯದ ಕೈಯಲ್ಲೆ ಇರುತ್ತದೆ. ಮಹಿಳೆಯ ಹಂಚಿಕೊಳ್ಳುವ ಸ್ವಭಾವವು ನೈಸರ್ಗಿಕವಾದುದು. ಒಂದು ಮರ ಬಿಡುವ ಹಣ್ಣುಗಳನ್ನು ತಾನೇ ತಿಂದುಕೊಳ್ಳುವುದಿಲ್ಲ. ತನ್ನ ಸುತ್ತಲ ಜೀವ ಪರಿಸರಕ್ಕೆ ಅದನ್ನು ಹಂಚಿಬಿಟ್ಟಿರುತ್ತದೆ. ಈ ಬಗೆಯ ಹಂಚಿಕೆಯಿಂದಲೆ ಜೀವ ವೈವಿಧ್ಯತೆಯ ವಿಕಾಸ ಸಾಧ್ಯ. ಇಂತಹ ತತ್ವವನ್ನು ದಲಿತ ಲೋಕ ಆದಿಕಾಲದಿಂದಲು ಅನುಸರಿಸಿಕೊಂಡು ಬಂದಿದೆ. ಆಧುನಿಕ ಜಗತ್ತಿನ ನವ

ಬಂಡವಾಳಶಾಹಿ ಪುರುಷ ಪ್ರಭುತ್ವದ ಮುಂದೆ ದಲಿತ ಮಹಿಳೆಯರ ಇಂತಹ ನೈತಿಕ ಪ್ರತಿರೋಧದ ಹಂಚಿಕೆಯ ಸಾಕ್ಷಾತ್ಕಾರವು ತುಂಬಾ ಮಹತ್ವದ್ದಾಗಬಲ್ಲದು.

**ಸಂಸ್ಕೃತಿ ನಿಷ್ಠತೆ**

ಮಹಿಳೆಯರೆಲ್ಲರು ಸಂಸ್ಕೃತಿ ನಿಷ್ಠವಾದ ಜೀವನ ವಿಧಾನವನ್ನೆ ರೂಪಿಸಿಕೊಂಡವರು. ಹಾಗೆಂದು ಧಾರ್ಮಿಕವಾದ ಅಂಶಗಳು ಅವರಲ್ಲಿ ಇಲ್ಲವೆಂದಲ್ಲ. ಪುರುಷಶಾಹಿಯ ಧಾರ್ಮಿಕ ವ್ಯವಸ್ಥೆಯ ಜೊತೆಗೆ ಅವರು ಅನಿವಾರ್ಯ ಒಪ್ಪಂದಗಳನ್ನು ಮಾಡಿಕೊಂಡಿದ್ದಾರೆ. ಮೂಲತಃ ಸಂಸ್ಕೃತಿ ಎಂಬ ಮೌಲ್ಯ ವ್ಯವಸ್ಥೆಯನ್ನು ರೂಪಿಸಿದ್ದು ಮೊದಲಿಗೆ ಕಾಡಿನ ಮಹಿಳೆಯರೆ. ಅದು ಆ ಕಾಲದ ಅಗತ್ಯಕ್ಕೆ ತಕ್ಕಂತೆ ವಿಕಾಸಗೊಂಡು ಸಾಗಿ ಬಂದಿದೆ. ಪುರುಷರ ತಿಳುವಳಿಕೆಯು ಅದರಲ್ಲಿ ಸೇರಿಕೊಂಡಿದೆ. ಮಾತೃಮೌಲ್ಯ ವ್ಯವಸ್ಥೆಯು ಅಪ್ಪಟವಾಗಿ ಸಂಸ್ಕೃತಿ ನಿಷ್ಠವಾಗಿದ್ದ ಜೀವನಕ್ರಮವಾಗಿತ್ತು. ದಲಿತ ಮಹಿಳೆಯರ ಜೀವನ ಮೌಲ್ಯಗಳು ಈಗಲೂ ನಿಸರ್ಗದ ಸಂಬಂಧದಲ್ಲಿಯೆ ಗುರುತಿಸಿಕೊಳ್ಳುತ್ತವೆ. ಸಂಸ್ಕೃತಿ - ನಿಸರ್ಗ - ಮಹಿಳೆ ಈ ಮೂರು ಒಂದೇ ಭಾವದ ಬೇರೆ ಬೇರೆ ರೂಪಕಗಳು. ದಲಿತ ಮಹಿಳೆ ತನ್ನ ಗತಕಾಲದ ಸಂಸ್ಕೃತಿಯ ಬೇರುಗಳಿಂದಲೆ ವರ್ತಮಾನದ ಜೊತೆಗೆ ಪ್ರತಿಕ್ರಿಯಿಸುತ್ತಿರುತ್ತಾಳೆ. ಸಂಸ್ಕೃತಿ ನಿಷ್ಠವಾದ ಆಚರಣೆಗಳಿಗೆ ಭಂಗ ಉಂಟಾದಾಗಲೆಲ್ಲ ಆಕೆ ಧಾರ್ಮಿಕವಾದ ಪುರುಷಾಕೃತಿಗಳನ್ನು ಒಪ್ಪಿ ಅಧಿಕಾರವನ್ನು ಕಳೆದುಕೊಂಡದ್ದೂ ಇದೆ.

ಸಂಸ್ಕೃತಿಯು ಜಾತಿ ಬದ್ಧವಾದುದಲ್ಲ. ಮನುಷ್ಯ ಕೇಂದ್ರಿತವಾದ ತಿಳುವಳಿಕೆಯಿಂದ ನಿಸರ್ಗದ ಜೊತೆಗೆ ಸಂವಾದ ಮಾಡುವ ಸಾಂಸ್ಕೃತಿಕ ಮನಸ್ಸು ಧರ್ಮದ ಯಾಜಮಾನ್ಯವನ್ನು ಅನುಸರಿಸುವುದಿಲ್ಲ. ಧರ್ಮ ಲಿಂಗ ತಾರತಮ್ಯದ ಕೇಂದ್ರ. ಸಂಸ್ಕೃತಿ ಅದಕ್ಕೆ ವಿರುದ್ಧವಾದ ಲಿಂಗಸಮಾನ ತತ್ವವನ್ನು ಪ್ರತಿಪಾದಿಸುತ್ತದೆ. ಹೆಣ್ಣಿನ ಅನನ್ಯ ಚಹರೆಗಳು ಕಾಣುವುದೆ ಸಂಸ್ಕೃತಿಯ ಪರಿಸರದಲ್ಲಿ. ಆಕೆಗೆ ಸೃಜನಶೀಲವಾದ ಸ್ವಾತಂತ್ರ್ಯ ಸಿಕ್ಕಿರುವುದೂ ಕೂಡ ಸಂಸ್ಕೃತಿಯ ನಿರೂಪಣೆಗಳಲ್ಲಿ. ಧರ್ಮದ ಆವರಣದಲ್ಲಿ ಆಕೆಗೆ ಹಲವಾರು ಬಗೆಯ ಸೆರೆವಾಸವಿದೆ. ಧರ್ಮಸೆರೆಯಿಂದ ಬಿಡಿಸಿಕೊಳ್ಳಲು ಮಹಿಳೆ ಸಂಸ್ಕೃತಿಯ ಆಚರಣೆಗಳಿಗ ತೊಡಗುತ್ತಿರುತ್ತಾಳೆ. ಮೇಲು ಜಾತಿಯ ಮಹಿಳೆಯರಲ್ಲಿ ಇದು ವಿಶೇಷವಾಗಿದೆ. ಗ್ರಾಮದೈವಗಳು ಸಂಸ್ಕೃತಿಯ ಅವತರಣಿಕೆಗಳಾಗಿದ್ದು ಸ್ತ್ರೀತ್ವದ ಆಚರಣೆಗಳಾಗಿದ್ದವು. ಪುರುಷದೈವಗಳು ದೇವರ ರೂಪತಾಳಿ ಸ್ತ್ರೀತ್ವದ ಆಚರಣೆಗಳನ್ನು ತಡೆದು ತನ್ನ ಸಾಮರ್ಥ್ಯ ವನ್ನು ಕೊಂಡಾಡುವಂತಹ ಕಥನಗಳನ್ನು ಸೃಷ್ಟಿಸಿಕೊಂಡಾಗಲು ದಲಿತ ಮಹಿಳೆಯರು ಸಂಸ್ಕೃತಿ ನಿಷ್ಠವಾದ ಬಿಡಿ ಬಿಡಿ ಪದಗಳ ನಂಬಿಕೆ ಹಾಗೂ ಆಚರಣೆಗಳ ಅಭಿವ್ಯಕ್ತಿಯ ಕಡೆ ಸಾಗಿದ್ದಾರೆ. ಸಂಸ್ಕೃತಿ ನಿಷ್ಠವಾದ ಜೀವನವು ಸೃಜನಶೀಲವಾದುದು. ಧಾರ್ಮಿಕ ಆವರಣದಲ್ಲಿ ಮಹಿಳೆ ತನ್ನ ಎಲ್ಲ ಬಗೆಯ ನೋವುಗಳನ್ನು ಹಾಡಿಕೊಳ್ಳಲು ಸಾಧ್ಯವಿರಲಿಲ್ಲ. ದೇವರ ಭಜನೆ ಮಾಡುವಲ್ಲಿ ಆಕೆ ತನ್ನ ಅಳಲನ್ನು ತೋಡಿಕೊಳ್ಳುವಂತಿರಲಿಲ್ಲ. ಧಾರ್ಮಿಕವಾದ ಆರಾಧನೆ ಗಳು ಮಾನಸಿಕ ನೆಮ್ಮದಿಗೆ ಕಾರಣವಾಗುತ್ತಿದ್ದರೂ ದೀರ್ಘಕಾಲೀನ ಸೆರೆಗೆ ಅವರನ್ನು ಒಳಪಡಿಸುವ ಸಂಚನ್ನೂ ಮಾಡಿದೆ. ದಲಿತ ಮಹಿಳೆ ಇಂತಹ ಪರಿಸರದಲ್ಲಿ ಕುಟುಂಬದ

ಒಳಗೆಯೆ ಸಾಂಸ್ಕೃತಿಕವಾದ ಲೋಕಾಂತ ಹಾಗೂ ಏಕಾಂತಗಳನ್ನು ನಿರ್ಮಿಸಿಕೊಂಡದ್ದಿದೆ. ಹೊಸ ಕಾಲದ ಪ್ರತಿರೋಧ ಕೂಡ ಸಂಸ್ಕೃತಿಯ ಸುಪ್ತ ಮನಸ್ಸಿನಿಂದಲೆ ವೈಚಾರಿಕವಾದ ಆಯಾಮಗಳನ್ನು ಪಡೆಯಲು ಸಾಧ್ಯವಿದೆ. ದಲಿತ ಮಹಿಳೆಯರು ತಮ್ಮ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳಲು ಸಂಸ್ಕೃತಿನಿಷ್ಠವಾದ ಹೋರಾಟಕ್ಕಿಳಿಯುವುದು ಕಷ್ಟವಾಗಲಾರದು. ಕಪ್ಪು ಮಹಿಳೆಯರ ಹೋರಾಟ ಕೂಡ ಸಂಸ್ಕೃತಿ ನಿಷ್ಠವಾದುದೆ ಆಗಿತ್ತು. ಹಿಂದೂ ಧರ್ಮದ ಅವತಾರಗಳನ್ನು ದಲಿತ ಮಹಿಳೆ ಸಂಸ್ಕೃತಿಯ ಪ್ರತಿರೋಧಶಕ್ತಿಯಿಂದ ಮುಖಾಮುಖಿ ಯಾಗಬೇಕಾದ ಅನಿವಾರ್ಯತೆ ಇದೆ.

## ಅಹಿಂಸೆಯ ಅಂತಃಕರಣ

ಹಿಂಸೆಯನ್ನು ತಾಳಿಕೊಳ್ಳುವುದರಲ್ಲಿ ಭಾಗಶಃ ದಲಿತ ಮಹಿಳೆ ಜಗತ್ತಿನ ಎಲ್ಲ ಮಹಿಳೆಯರಿಗಿಂತಲು ಮೊದಲ ಸ್ಥಾನದವಳು. ಯಾರು ಅಪಾರವಾಗಿ ಹಿಂಸೆಯನ್ನು ಅನುಭವಿಸಿರುತ್ತಾರೊ ಅಂತವರು ಅಂತಃಕರಣದ ಆತ್ಯಂತಿಕ ಅಭಿವ್ಯಕ್ತಿಯನ್ನು ಬಲ್ಲವ ರಾಗುತ್ತಾರೆ. ಅಂಬೇಡ್ಕರ್ ಅವರಿಗಿದ್ದ ಅಂತಃಕರಣ ಅಗಾಧವಾದುದು. ಹಾಗಾಗಿಯೆ ಬುದ್ಧನ ಧ್ಯಾನ ಅವರಿಗೆ ಸಾಧ್ಯವಾದದ್ದು. ಅಂತೆಯೇ ಆ ಧ್ಯಾನದಿಂದ ಸಾಮಾಜಿಕ ವ್ಯವಸ್ಥೆಯನ್ನೆ ಅಂತಃಕರಣದ ಸಾಕ್ಷಾತ್ಕಾರಕ್ಕೆ ಒಳಪಡಿಸುವಂತೆ ಸಂವಿಧಾನವನ್ನು ರೂಪಿಸಲು ಸಾಧ್ಯವಾದದ್ದು. ದಲಿತ ಮಹಿಳೆಯರು ಹಿಂಸೆಯನ್ನು ತಾಳಿಕೊಂಡು ಬಂದ ಪರಿಯು ಅಂತಃಕರಣಕ್ಕೆ ಬಹುದೊಡ್ಡ ಸಾಕ್ಷಿ. ಆಧುನಿಕ ಯುಗದ ಮಹಿಳಾ ಹೋರಾಟಗಳಿಗೆ ಅಹಿಂಸೆಯ ಅಂತಃ ಕರಣವು ಬೇಕು. ಇಲ್ಲವಾದರೆ ಪುರುಷ ವ್ಯವಸ್ಥೆಯನ್ನು ದಂಡಿಸಿ ಮಾನವೀಕರಣಗೊಳಿಸಲು ಆಗುವುದಿಲ್ಲ. ದಂಡನೆಗೆ ಒಳಗಾದಂತೆ ಅದು ಯಾವತ್ತೂ ಬಲಿಷ್ಠವಾಗಿದ್ದು ಯಾವ ಭೌತಿಕವಾದ ಹೊಡೆತವೂ ಅದಕ್ಕೆ ತಟ್ಟುವುದಿಲ್ಲ. ಅದನ್ನು ಮಣಿಸಲು ಸಾಧ್ಯವಿರುವುದು ಅಹಿಂಸೆಯ ಅಂತಃಕರಣದ ಪ್ರತಿರೋಧ ಶಕ್ತಿಗಳಿಂದಲೆ. ಮಹಿಳೆಯರು ಈ ದಾರಿಯಲ್ಲಿಯೆ ಪುರುಷ ಶಾಹಿಯನ್ನು ಎದುರಿಸಿರುವುದು. ಅಹಿಂಸೆಯು ಹಿಂಸೆಯ ಶಕ್ತಿಗಿಂತಲೂ ಬಲಶಾಲಿ. ಹೊಡೆಯುವವರಿಗಿಂತ ಹೊಡೆಸಿಕೊಳ್ಳುವವರೆ ತುಂಬ ಗಟ್ಟಿಗರು. ಸುಖಿಗಳಿಂತ ಅಸುಖಿಗಳೆ ಹೆಚ್ಚು ತಾಳ್ಮೆಯುಳ್ಳವರು. ಪ್ರಬಲರಿಗಿಂತಲು ದುರ್ಬಲರೆ ಸಮರ್ಥರು. ಆಯುಧ ಹಿಡಿಯು ವುದು ಹೇಡಿತನದ ಲಕ್ಷಣವೂ ಆಗಬಲ್ಲದು. ಜ್ಞಾನಿಗಳೆನಿಸಿ ಕೊಂಡವರೆ ಮನುಷ್ಯತ್ವದ ವಿಷಯದಲ್ಲಿ ತುಂಬ ಅಜ್ಞಾನಿಗಳೆನಿಸಿ ಅಜ್ಞಾನಿಗಳೆನಿಸಿಕೊಡವರೇ ಎಷ್ಟೋ ವಿಷಯದಲ್ಲಿ ಗಾಢವಾದ ಅಂತಃಕರಣಶೀಲರಾಗಿರುತ್ತಾರೆ. ದಲಿತ ಮಹಿಳೆಯರು ಈ ಕ್ರಮದಲ್ಲೆ ಸಾಗಿ ಬಂದಿದ್ದು ಇಡೀ ಸಮಾಜದ ಕೊಳೆ ತೊಳೆಯಬಲ್ಲವರು. ಇಂತಹ ಹೊಸಕಾಲದ ಅನೇಕ ಒತ್ತಡಗಳನ್ನು ನಿಭಾಯಿಸುವ ತಾಳ್ಮೆ ವಿವೇಕ ವಿಶ್ವಾಸ ಅವರಿಗಿದೆ. ಅಂತಹ ಹಾದಿಯಲ್ಲೆ ಅವರು ಸಾಗಿಬಂದದ್ದು.

ತ್ಯಾಗದಲ್ಲಿ ತಾಳಿಕೆಯನ್ನು ಕಲಿತ ಮಹಿಳೆಯರೆಲ್ಲರಲ್ಲು ಅಹಿಂಸೆಯ ಸ್ವಭಾವವೇ ವಿಶೇಷ ವಾಗಿದೆ. ಮಹಿಳೆಯರ ತ್ಯಾಗ ಅಂತಃಕರಣದಿಂದ ರೂಪುಗೊಂಡ ಮೌಲ್ಯ, ಆದರೆ ಇಂತಹ ಮೌಲ್ಯವನ್ನು ಪುರುಷ ಸಮಾಜವು ತನ್ನ ಅನುಕೂಲಕ್ಕಾಗಿ ಸ್ವಾರ್ಥದಲ್ಲಿ ಬಳಸಿಕೊಂಡಿದೆ.

ಸಂಸಾರದ ಉದ್ಧಕ್ಕೂ ತ್ಯಾಗಮಯಿಯಾದ ಹೆಣ್ಣಿನ ಮೇಲೆ ಅತ್ಯಂತ ಕ್ರೂರವಾಗಿ ಪುರುಷಾಧಿಪತ್ಯವು ಅಧಿಕಾರ ಚಲಾಯಿಸಿ ಇಂತಹ ತ್ಯಾಗ ಕರ್ಮದಿಂದಲೆ ಆಕೆಗೆ ಮುಕ್ತಿ ಎಂದು ಧಾರ್ಮಿಕ ಅನುಶಾಸನವನ್ನು ಒಪ್ಪಿಸಿದೆ. ಮಹಿಳೆಯರ ಅಂತಃಕರಣದ ಆಕ್ರಂಧನವನ್ನು ಗೋಳು ಎಂದು ನಿರಾಕರಿಸುವ ಪುರುಷ ಸಮಾಜದ ಎದಿರು ಮಹಿಳೆಯರ ಇಂತಹ ಅಂತಃ ಕರಣ ಶಕ್ತಿಯು ಅಪಮೌಲ್ಯಗೊಂಡು ಅದರಿಂದ ಯಾವ ಪ್ರಯೋಜನವೂ ಇಲ್ಲದಂತಾಗಿದೆ. ಕಟುಕನ ಮುಂದೆ ಕಣ್ಣೀರು ಸುರಿಸಿದಂತಾಯ್ತು ಎಂದು ಬಡ ಗ್ರಾಮೀಣ ಮಹಿಳೆ ಹೇಳಿಕೊಂಡದ್ದನ್ನೆ ಎಲ್ಲ ಮಹಿಳೆಯರು ಹಾಡಿಕೊಳ್ಳಬೇಕಾದ ಪರಿಸ್ಥಿತಿಯಿದೆ. ಹೊಸ ಕನಸು ಕಾಣುವಲ್ಲಿ ದಲಿತ ಮಹಿಳೆಯು ಅಹಿಂಸೆಯ ಅಂತಃಕರಣದ ಈ ಮೌಲ್ಯವನ್ನು ಪರಿಶೀಲಿಸಿ ಕೊಳ್ಳಬೇಕಾಗಿದೆ. ಇಂತಹ ಶಕ್ತಿಯು ದುರ್ಬಲವಾದ ಅಭಿವ್ಯಕ್ತಿ ಎನಿಸಿರುವಲ್ಲಿ ಇನ್ನಷ್ಟು ಜಾಗೃತಿಯ ಅವಶ್ಯಕತೆಯಿದೆ. ಅಹಿಂಸಾ ಚಳುವಳಿಯ ಜೊತೆಗೆ ಸೃಜನಶೀಲವಾದ ಪ್ರತಿಭಟನೆಯು ಬಹಳ ಬಲಶಾಲಿಯಾದುದು. ಹಿಂಸೆಯಾಗಲಿ, ಅಹಿಂಸೆಯಾಗಲಿ ಎರಡೂ ಕೂಡ ಅನೇಕ ವೇಳೆ ಅಪರಿಪೂರ್ಣವಾದುವೇ ಆಗಿವೆ. ಸೃಜನಶೀಲ ಪ್ರತಿಭಟನೆಯ ಹೊಸ ಆಯಾಮಗಳನ್ನು ಈ ಕಾಲದಲ್ಲಿ ಹುಡುಕಬೇಕಾಗಿದ್ದು ದಲಿತ ಲೋಕದ ಅನುಭವವು ಅಂತಹ ಸಾಧ್ಯತೆಯನ್ನು ತೆರೆಯಬಲ್ಲದು. ಸಮಾಜದ ಎಲ್ಲ ಮಹಿಳೆಯರ ನಾಡಿ ಮಿಡಿತವಾಗಿರುವ ಈ ಗುಣವನ್ನು ಪುರುಷ ಸಮಾಜವು ಅಂತರ್ ದೃಷ್ಟಿಯಿಂದ ಪರಿಭಾವಿಸಬೇಕಾದದ್ದಿದೆ.

**ಅಖಂಡ ವಿಶ್ವಾಸ**

ದಲಿತ ಸಂಸ್ಕೃತಿಯಲ್ಲಿ ಅಖಂಡವಾದ ಲೋಕ ದೃಷ್ಟಿಯಿದೆ. ಅವಸಾನದ ಕೊನೆಯ ಕ್ಷಣದಲ್ಲೂ ಅದು ವಿಶ್ವಾಸವನ್ನು ಕಳೆದುಕೊಳ್ಳುವುದಿಲ್ಲ. ಪ್ರಪಂಚದಲ್ಲಿ ತನಗೆ ಏನೂ ಉಳಿದಿಲ್ಲ ಎಂದುಕೊಂಡಾಗಲೂ ಏನೊ ಒಂದು ಇದೆ ಎಂಬ ಸಕಾರಾತ್ಮಕ ವಿಶ್ವಾಸದಲ್ಲಿ ಬದುಕನ್ನು ಎದುರಿಸುತ್ತದೆ. ದಲಿತ ಮಹಿಳೆ ಎಂದೂ ವಿಶ್ವಾಸ ಘಾತುಕವಾದ ಮೌಲ್ಯಗಳನ್ನು ಪರಂಪರೆಯಲ್ಲಿ ಸೃಷ್ಟಿಸಿಲ್ಲ. ಎಲ್ಲರ ಹಿತಕಾಯುವ ವಿಶ್ವಾಸವೆ ಅನನ್ಯವಾದದ್ದು. ದೇವರ ಮೇಲಿನ ವಿಶ್ವಾಸಕ್ಕಿಂತ ಇದ್ದು ಜೈಸಬೇಕು ಎಂಬ ಧೋರಣೆಯೆ ದಲಿತ ಮಹಿಳೆಯಲ್ಲಿ ಹೆಚ್ಚು. ಪಿತೃಪ್ರಧಾನ ವ್ಯವಸ್ಥೆಯು ಆಕೆಯ ಎಲ್ಲ ಎಲ್ಲೆಗಳನ್ನು ಆಕ್ರಮಿಸಿಕೊಂಡಾಗಲು ಆಕೆ ವಿಶ್ವಾಸ ಕಳೆದುಕೊಳ್ಳಲಿಲ್ಲ. ಯಾವ ಅಧಿಕಾರವೂ ಇಲ್ಲದಿದ್ದಾಗಲೂ ಆಕಾಶವೆ ತನಗೆ ಆಧಾರ ಎಂದು ನಂಬಿದವಳು ಆಕೆ. ಹೀಗಾಗಿಯೆ ಅನಾದಿಗೆ ಆಕಾಶವೆ ಆಧಾರ ಎಂಬ ಆಕೆಯ ಸಾಂತ್ವನದಲ್ಲಿ ಯಾವ ಬಗೆಯ ಹಿಂಸೆಯನ್ನು ಎದುರಿಸುವ ಛಲವಿದೆ.

ಅಖಂಡವಾದ ಲೋಕದೃಷ್ಟಿಯು ಅಗಾಧವಾದ ವಿಶ್ವಾಸವನ್ನು ತಂದುಕೊಡುತ್ತದೆ. ಇಹದ ಎಲ್ಲ ಅಧಿಕಾರಗಳು ಕಳೆದು ಹೋದಾಗಲೂ ಭೌತಿಕ ಜಗತ್ತಿನ ಆಚೆಗಿನ ಲೋಕವೆಲ್ಲ ತನ್ನದೇ ಎಂಬ ಅಖಂಡ ಭಾವ ಉಂಟಾಗುತ್ತದೆ. ಭೂಮಿಯ ಸಹನ ಗುಣ ಹೀಗಾಗಿಯೆ ಮಹಿಳೆಯರಿಗೆ ಸಾಧ್ಯವಾಗಿರುವುದು. ಎಲ್ಲವನ್ನು ಕ್ಷಮಿಸುವ ವಿವೇಕ ಕೂಡ ಅಖಂಡವಾದ ಲೋಕದೃಷ್ಟಿಯಿಂದ ಬಂದುದು. ದಲಿತ ಮಹಿಳೆ ತನ್ನ ತಲೆ ಮೇಲೆ ನಿಂತ ಎಲ್ಲ ಜಾತಿಗಳನ್ನು

ಪುರುಷರನ್ನು ತಾಯ್ತನದ ಲೋಕ ದೃಷ್ಟಿಯಲ್ಲಿ ಸೈರಿಸಿಕೊಂಡಿದ್ದಾಳೆ. ಆದ್ದರಿಂದಲೆ ದಲಿತ ಮಹಿಳಾ ಲೋಕದೃಷ್ಟಿಯು ಅಖಂಡವಾದ ಅಂತಃಕರಣದಿಂದ ಹೊಂದಾಣಿಕೆ ಮಾಡಿ ಕೊಳ್ಳುತ್ತಲೆ ಹಿಂಸಿಸುವ ಸಮಾಜವನ್ನು ಮನ್ನಿಸುತ್ತದೆ. ಮಹಿಳೆಯರ ಲೋಕ ದೃಷ್ಟಿಯ ವಿಶ್ವಾಸವು ನಿಸರ್ಗನಿಷ್ಠವಾದುದು. ಅವರ ಭಾವನೆಗಳು ವಿಶೇಷವಾಗಿ ಸಲಹುವ ನೀತಿಯನ್ನೆ ಬಿಂಬಿಸುತ್ತಿರುತ್ತವೆ. ಇಂತಹ ಭಾವ ವಿಶ್ವಾಸದಿಂದಲೆ ಪುರುಷ ಸಮಾಜ ಮಹಿಳೆಯರಿಂದ ಅಸ್ತಿತ್ವವನ್ನು ಪಡೆದುಕೊಂಡದ್ದು. ಅಖಂಡವಾದ ನಂಬಿಕೆಯನ್ನು ಜಾತಿ ವ್ಯವಸ್ಥೆಯು ಸದಾ ತುಂಡು ಮಾಡಲು ಸಂಚು ಮಾಡುವ ಕಾರಣದಿಂದಲೆ ಸವರ್ಣೀಯ ಮಹಿಳಾ ವಾದಿಗಳು ದಲಿತ ಮಹಿಳೆಯರ ವಾಸ್ತವ ಲೋಕದ ಬಗ್ಗೆ ಸಂಕುಚಿತವಾಗಿ ಗ್ರಹಿಸುವಂತಾಗಿರುತ್ತದೆ. ಆದರೆ ದಲಿತ ಮಹಿಳೆಯು ಸಾಂಸ್ಕೃತಿಕವಾಗಿ ಸುಪ್ತ ಮನಸ್ಸಿನ ವ್ಯಕ್ತರೂಪಗಳಲ್ಲಿ ಅಖಂಡ ವಿಶ್ವವನ್ನೆ ತನ್ನದೆಂದು ನಂಬುತ್ತಾಳೆ. ಹೀಗಾಗಿಯೆ ದಲಿತ ಸ್ತ್ರೀಲೋಕವು ತನ್ನ ಮೇಲಿನ ಎಲ್ಲ ಸಮಾಜಗಳನ್ನು ಉದಾರವಾಗಿ ನಂಬುವುದು. ಆ ಸಮಾಜಗಳಿಗೆ ಸೇವೆ ಸಲ್ಲಿಸುವುದು ಕೂಡ ತನ್ನ ಮುಕ್ತಿ ಎಂದು ಸಾಂಸ್ಕೃತಿಕವಾಗಿ ಭಾವಿಸಿದ್ದು.

ಇಪ್ಪತ್ತೊಂದನೆ ಶತಮಾನದಲ್ಲಿ ಇಂತಹ ಅಖಂಡ ವಿಶ್ವಾಸವು ಭಗ್ನವಾಗುತ್ತಿರುತ್ತದೆ. ಆಧುನಿಕೋತ್ತರ ರಾಜಕಾರಣ ಮತ್ತು ತಂತ್ರಜ್ಞಾನವು ಭಾವ ಜಗತ್ತಿನ ಸಂಬಂಧಗಳನ್ನು ಕಿರಿದಾಗಿಸುತ್ತಿರುತ್ತವೆ. ಇದು ನಾಳಿನ ರೂಪ ವಿರೂಪದ ಅನಿವಾರ್ಯ ಪ್ರಕ್ರಿಯೆ. ಇಂತಹ ವೈರುಧ್ಯದ ಜೊತೆ ಸಾಗುವಲ್ಲಿ ದಲಿತ ಮಹಿಳೆಯು ತನ್ನ ಆದಿಕಾಲದ ಅಖಂಡ ವಿಶ್ವಾಸವನ್ನು ಪುನರ್ ಸೃಷ್ಟಿಸಿಕೊಳ್ಳುವುದು ಸಾಧ್ಯ. ಆ ದಿಕ್ಕಿನಲ್ಲಿ ಮಹಿಳಾ ಚಳುವಳಿಯು ದಲಿತ ಮನದ ಇಂತಹ ವಿಶ್ವಾಸವನ್ನು ತನ್ನ ನೀತಿಯಲ್ಲಿ ಸಂಯೋಗಿಸಿಕೊಳ್ಳಬೇಕಾಗಿದೆ.

ದಲಿತ ಮಹಿಳೆಯ ಕಥನವನ್ನು ಒಂದು ಕಾಲಕ್ಕೆ ದಲಿತ ಸಾಹಿತ್ಯವನ್ನು ನೋಡಿದಂತೆ ಅಷ್ಟೇ ಚೌಕಟ್ಟಿನಲ್ಲಿ ಪ್ರವೇಶಿಸಬೇಕಾದ್ದಿಲ್ಲ. ಎಲ್ಲ ಬಗೆಯ ಬೌದ್ಧಿಕ ಕಥನಗಳು ಆಯಾ ಕಾಲದ ಮುಕ್ತಿಯ ಅವಕಾಶಗಳು. ಇದಿಷ್ಟೇ ಅವಕಾಶವೇ ಅಂತಿಮವಲ್ಲ. ದಲಿತ ಮಹಿಳಾ ವಾದ ಕೂಡ ಈ ಹೊತ್ತಿನ ವೈಚಾರಿಕ ಗದ್ಯದ ಒಂದು ಸಾಧ್ಯತೆ. ದಲಿತ ಮಹಿಳೆಯರ ಒಳಗೂ ಅಂತರವಿದೆ. ಖಚಿತವಾಗಿ ಯಾರು ದಲಿತ ಮಹಿಳೆ ಎಂದು ನಿರ್ಧರಿಸುವುದು ಅಷ್ಟು ಸುಲಭವಲ್ಲ. ಹಿಂದೂ ವರ್ಣಾಶ್ರಮ ಪದ್ಧತಿಯಲ್ಲಿ ಕ್ರೂರವಾಗಿ ಹೆಚ್ಚು ತುಳಿತಕ್ಕೆ ಒಳಪಟ್ಟ ಹೊಲೆ ಮಾದಿಗರ ಮಹಿಳೆಯರನ್ನು ಮಾತ್ರವೆ ಗುರುತಿಸಿಕೊಂಡರು ಕೂಡ ಅವರ ಪ್ರತಿರೋಧದ ವ್ಯಾಪ್ತಿ ಕಡಿಮೆ ಆಗುವ ಸಾಧ್ಯತೆ ಇದೆ. ದಲಿತ ಸಾಹಿತ್ಯದ ಸಂದರ್ಭದಲ್ಲಿ 'ದಲಿತ' ಎಂಬ ಪರಿಕಲ್ಪನೆಯು ವಿಶಾಲವಾಗಿ ಬೌದ್ಧಿಕ ಸಂಕೇತವಾಗಿದ್ದರೂ ದಲಿತ ಮಹಿಳೆಯ ಸ್ಥಿತಿ ಅಷ್ಟು ಬಲವಾದುದಲ್ಲ. ಒಟ್ಟಾಗಿ ಎಲ್ಲ ಕೆಳಜಾತಿಗಳ ಮಹಿಳೆಯರನ್ನು ದಲಿತರು ಎಂದು ಗುರುತಿಸಕೊಂಡಾಗಲು ಅವರವರ ಅನನ್ಯತೆಗೆ, ನ್ಯಾಯದ ಒತ್ತಾಯಕ್ಕೆ ಕೊರತೆಗಳೂ ಗೊಂದಲಗಳೂ ಉಂಟಾಗುತ್ತಿರುತ್ತವೆ. ವರ್ತಮಾನದ ಸವಾಲುಗಳ ನಡುವೆ 'ದಲಿತ ಮಹಿಳೆ' ಎಂಬುದನ್ನು ಜಾತಿ ಮತ್ತು ಬೌದ್ಧಿಕ ಸಂಕೇತಗಳ ಮೂಲಕವೆ

ಗಮನಿಸಬೇಕಾಗುತ್ತದೆ. ಜಾತಿಯ ವಿನಾಶಕ್ಕಾಗಿ ಅನಿವಾರ್ಯವಾಗಿ ತನ್ನ ಜಾತಿಯ ಚಹರೆಯನ್ನು ದಲಿತ ಮಹಿಳೆ ಅನುಸರಿಸುವುದು ಅಪರಾಧವಲ್ಲ. ಶೋಷಿಸುವ ಜಾತಿಗಳು ತಮ್ಮ ಜಾತಿವಾದವನ್ನು ಅನುಸರಿಸಿದಾಗ ಅದು ಅಪರಾಧ. ಶೋಷಿಸುವ ಯಾವ ಕ್ರಮಗಳೂ ಇಲ್ಲದ ಜಾತಿಯು ಅಪಾಯಕಾರಿಯಲ್ಲ. ಇಂತಹ ಜಾತಿಯಿಂದಾಗಿ ತನಗೆ ಈ ಬಗೆಯ ಹಿಂಸೆ ಹಾಗೂ ಶೋಷಣೆ ಎದುರಾಗಿದೆ ಎಂದು ಆ ಜಾತಿಯನ್ನೆ ಪ್ರತಿರೋಧ ಶಕ್ತಿಗಾಗಿ ಬಳಸಿಕೊಳ್ಳುವುದು ಹಾಗೂ ಅದರ ಮೂಲಕ ಸಂಘಟಿತರಾಗಿ ಒಟ್ಟು ಜಾತಿ ವಿನಾಶಕ್ಕೆ ತೊಡಗುವುದು ಜಾತ್ಯತೀತತೆಯ ಹೋರಾಟವೆ ಆಗಿರುತ್ತದೆ. ಅದೆ ಮೇಲು ಜಾತಿಗಳು ಮತೀಯವಾಗಿ ವರ್ತಿಸುವುದು ಜಾತ್ಯತೀತವಾಗುವುದಕ್ಕಲ್ಲದೆ ಜಾತಿಯನ್ನು ಬಲಪಡಿಸಿ ಕೊಳ್ಳುವುದಕ್ಕಾಗಿ ಆಗಿರುತ್ತದೆ. ಆಧುನಿಕೋತ್ತರ ಭಾರತದಲ್ಲಿ ಜಾತಿ ವರ್ಣ ವರ್ಗ ಮತ ಮೌಢ್ಯ ಹಾಗೂ ಧಾರ್ಮಿಕ ಯಾಜಮಾನ್ಯಗಳು ದೊಡ್ಡ ಪ್ರಮಾಣದಲ್ಲಿ ಬೆಳೆಯುತ್ತ ಶೋಷಣೆಯ ಹೊಸ ದಾರಿಗಳನ್ನು ಕಂಡುಕೊಳ್ಳುತ್ತಿರುವಾಗ ದಲಿತ ಮಹಿಳೆಯು ಒಟ್ಟು ಮಹಿಳಾವಾದದ ಭಾಗವಾಗಿಯೆ ಹೋರಾಟವನ್ನು ರೂಪಿಸಿಕೊಳ್ಳಬೇಕಾಗಿಲ್ಲ. ಹಾಗೆಯೆ ಪ್ರಧಾನವಾದ ಹೊಸ ಕಾಲದ ಸಮಸ್ಯೆಗಳನ್ನು ಒಂದು ವರ್ಗದ ಮಹಿಳೆಯರ ಗುಂಪುಗಳು ಎದುರಿಸುತ್ತಿದ್ದರೆ ಬೇರೆ ಬೇರೆ ಚಹರೆಯ ವಿಭಿನ್ನ ಸ್ತ್ರೀ ಸಮುದಾಯಗಳು ಕಾಲದ ಬೇರೆ ಬೇರೆ ತಾರತಮ್ಯ ಮತ್ತು ಪೂರ್ವಾಗ್ರಹಗಳನ್ನು ನಾಶಪಡಿಸುವ ಕಡೆಗೆ ಚಲನಶೀಲವಾಗುತ್ತ ಸಮಾನ ಅಪಮಾನ ಮತ್ತು ಕನಸುಗಳನ್ನು ಹೊಂದಿಸಿಕೊಂಡು ಪಯಣ ಮಾಡಬೇಕಾಗಿದೆ. ಮಹಿಳಾ ಚಳುವಳಿಯು ಬಹುರೂಪದ ಹಲವು ಧಾರೆಗಳಿಂದ ಬೆಳೆದು ಆನಂತರವೆ ಅದು ಐಕ್ಯ ಕೂಟದಿಂದ ವ್ಯವಸ್ಥೆಯನ್ನು ಸರಿಪಡಿಸಿ ತಾನೇ ಈ ಪುರುಷ ವ್ಯಾಪ್ತಿಗಳನ್ನು ದಾಟಿ ರಾಜ್ಯಾಧಿಕಾರವನ್ನು ಹಿಡಿಯಬೇಕಿದೆ. ಇದು ಕನಸಿನಲ್ಲಿ ಸಾಧ್ಯವಾಗುವ ಆದರ್ಶವಲ್ಲ. ಸ್ತ್ರೀ ಲೋಕವು ಎಲ್ಲ ಎಲ್ಲೆಗಳನ್ನು ಮೀರಿದ ನಾಗರೀಕ ಜಗತ್ತನ್ನು ಕೈಹಿಡಿದು ನಡೆಸಬಲ್ಲದು.

## ಅನುಭವ ಕಥನ

# ಖ್ಯಾತ ಗೀಗೀ ಮೇಳದ ಕಲಾವಿದೆ ಅಂಬವ್ವ ತಿಕೋಟ

ಹರಿಶ್ಚಂದ್ರ ದಿಗ್ಸಂಗಿಕರ್

(ಖ್ಯಾತ ಗೀಗೀಕಾರ್ತಿಯಾದ ಅಂಬವ್ವ ತಿಕೋಟ ಉತ್ತರ ಕರ್ನಾಟಕದಲ್ಲಿ ಹೆಣ್ಣಿನ ಪಕ್ಷ ಹಿಡಿದು ಹರದೇಶಿ-ನಾಗೇಶಿ ಪರಂಪರೆಯನ್ನು ಕಟ್ಟಿದವಳು. ದೇವದಾಸಿಯಾಗಿದ್ದರೂ ಆ ಸಾಮಾಜಿಕ ವ್ಯವಸ್ಥೆಯ ಇಕ್ಕಟ್ಟಿನಿಂದ ಹೊರಬಂದು ಗೀಗೀ ಕಲೆಯನ್ನು ಒಬ್ಬ ಹೆಣ್ಣಾಗಿ ಪ್ರಚಾರ ಮಾಡಿದವಳು. ಹತ್ತಾರು ಮೇಳಗಳನ್ನು ಕಟ್ಟಿ ಬೆಳೆಸಿದವಳು. ಹೆಣ್ಣಿನ ಮಾನಾಪಮಾನಗಳನ್ನು ಸಹಿಸಿಕೊಂಡು, ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ವೇದಿಕೆ ಹತ್ತಿ ಪುರುಷರಿಗೆ ಸರಿಸಮಾನವಾಗಿ ನಿಂತು ಈ ಕಲೆಯನ್ನು ನಂಬಿ, ಹೋರಾಟದ ಬದುಕನ್ನು ನಡೆಸಿದವಳು. ಉತ್ತರ ಕರ್ನಾಟಕದಲ್ಲಿರುವ ಊಳಿಗಮಾನ್ಯ ವ್ಯವಸ್ಥೆಯ ಮಧ್ಯದಲ್ಲಿನ ಅಂಚಿನ ಮಹಿಳಾ ಲೋಕದ ಪ್ರತಿನಿಧಿಗಳಾದ ಗೀಗೀಕಾರ್ತಿಯರ ಕುರಿತು ವಿಶೇಷ ಸಂಶೋಧನಾ ಆಸಕ್ತಿಯನ್ನು ಹೊಂದಿರುವ ಡಾ. ಹರಿಶ್ಚಂದ್ರ ದಿಗ್ಸಂಗಿಕರ್ ಅವರು ತಾವು ನಡೆಸಿದ ಸಂದರ್ಶನದ ಭಾಗವನ್ನು ಆಧರಿಸಿ ಅಂಬವ್ವಳ ಅನುಭವ ಕಥನವನ್ನು ಅವಳ ಮಾತುಗಳಲ್ಲಿಯೇ ನಿರೂಪಿಸಿಕೊಟ್ಟಿದ್ದಾರೆ.-ಸಂ)

ಪ್ರಾದೇಶಿಕವಾಗಿ ಉತ್ತರ ಕರ್ನಾಟಕದ ಭಾಗವು ಹಿಂದುಳಿದ ಪ್ರದೇಶವೆಂಬ ಸಾರ್ವತ್ರಿಕವಾದ ಹಣೆಪಟ್ಟಿ ಕಟ್ಟಿಕೊಂಡಿದೆ. ಅದರಲ್ಲಿಯೂ ಶೈಕ್ಷಣಿಕ, ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯವಾಗಿ ಹಿಂದುಳಿದ ದಲಿತರು, ಭೂ ಹಿಡುವಳಿದಾರರ ಸೇವೆ ಮಾಡಿಕೊಂಡು ಬದುಕುವ ಕಾಲವೊಂದಿತ್ತು. (ಈಗಲೂ ಕಡಿಮೆ ಪ್ರಮಾಣದಲ್ಲಿ ಇದೆ) ಇದು ಸ್ವಾತಂತ್ರ್ಯ ಪೂರ್ವ ಹಾಗೂ ನಂತರದ ಎಪ್ಪತ್ತರ ದಶಕದವರೆಗೂ ನಡೆದುಕೊಂಡು ಬಂದಂತಹ ಕ್ರಿಯೆ. ಎಪ್ಪತ್ತರ ದಶಕದಲ್ಲಿ 'ಕರ್ನಾಟಕ ದಲಿತ ಸಂಘರ್ಷ ಸಮಿತಿ' ಹುಟ್ಟು ಪಡೆದ ನಂತರ ದಲಿತರಲ್ಲಿರುವ ಮೂಢನಂಬಿಕೆ, ಕಂದಾಚರಣೆಗಳು ತೊಲಗಿ, ಸ್ವಾಭಿಮಾನ ಮೂಡಲಾರಂಭಿಸಿತು. ಅದಕ್ಕಿಂತಲೂ ಪೂರ್ವದಲ್ಲಿ ಬದುಕಿ, ಬಾಳಿ, ವೃದ್ಧಾಪ್ಯ ಅನುಭವಿ ಸುತ್ತಿರುವ ಕಲಾವಿದೆ ಅಂಬವ್ವ ಅವರನ್ನು ಭೇಟಿಯಾಗಿ ಮಾತುಕತೆ ನಡೆಸಿದಾಗ ಅವರಿಂದ ತಿಳಿದುಬಂದ ವಿಷಯವನ್ನೇ ನೇರವಾಗಿ ನಿರೂಪಿಸಿದ್ದೇನೆ.

ಒಂದು ಕಾಲದಲ್ಲಿ ದಲಿತರ ಓಣಿಯಲ್ಲಿ ಚೆನ್ನಾಗಿರುವ ಹೆಣ್ಣನ್ನು ಕಂಡರೆ ವ್ಯವಸ್ಥೆ ಆಕೆಯನ್ನು ದೇವರಿಗೆ ಬಿಡಿಸುವ ಹುನ್ನಾರ ನಡೆಸುತ್ತಿತ್ತು. ಗಂಡು ಮಕ್ಕಳಿಲ್ಲದ ಕುಟುಂಬಕ್ಕೆ ಅಥವಾ ಕುಟುಂಬದ ಹಿರಿಯ ಮಗಳು ದೇವರಿಗೆ ಮೀಸಲು. ಆಕೆ ಪೋಷಕರ ಮೂಢ ನಂಬಿಕೆಗೆ ಬಲಿಯಾಗಿ ಮುತ್ತು ಕಟ್ಟಿಸಿಕೊಂಡು ದೇವದಾಸಿಯಾಗುತ್ತಿದ್ದಳು. ಅವಳಿಗೆ ಮುತ್ತುಕಟ್ಟಲು ಬೇಕಾದ ಬಾಜದ ದಿನಿಸು ಮತ್ತು ಸಾಮಾನುಗಳನ್ನು ಕೊಡಿಸುವವನೆ ಆಕೆಗೆ ಇಟ್ಟುಕೊಂಡವನಾಗಿರುತ್ತಿದ್ದನು. ಇಂತಹ ದೇವದಾಸಿ ಸಂಪ್ರದಾಯಕ್ಕೆ ಬಲಿಯಾದವರು ಮೂರು ರೀತಿಯ ಆಯ್ಕೆಗೆ ಒಳಪಡಬೇಕಾಗಿತ್ತು.

೧. ದೇವದಾಸಿಯನ್ನು ಮೊದಲಿಗೆ ಉಡಿ ತುಂಬಿದವನೆ ಗಂಡನೆಂದು ಭಾವಿಸಿ (ಕೈಹಿಡಿದ ಗಂಡನಲ್ಲ) ಬದುಕಬೇಕಾಗಿತ್ತು.
೨. ದೇವರ ಹೆಸರಿನ ಮೇಲೆ ಜಗಾ ಹೊತ್ತು, ಕಂಡ ಗಂಡಸರ ಸೇವೆ ಮಾಡಿಕೊಂಡಿರ ಬೇಕಾಗಿತ್ತು.
೩. ದೇವದಾಸಿಯಾಗಿ ಮಹಾನಗರಗಳ ಕೆಂಪು ದ್ವೀಪ (Redlight) ಪ್ರದೇಶಗಳಿಗೆ ಹೋಗಿ ವೇಶ್ಯಾ ವೃತ್ತಿ ಜೀವನ ನಡೆಸಬೇಕಾಗಿತ್ತು.

ಈ ಮೇಲಿನ ಮೂರರಲ್ಲಿಯ ಅನಿವಾರ್ಯದ ಆಯ್ಕೆಯನ್ನು ಧಿಕ್ಕರಿಸಿ, ದೇವದಾಸಿತನ ಕ್ಕೊಂದು ಸಾಂಸ್ಕೃತಿಕ ಚಹರೆಯನ್ನು ಕೊಡುವುದರ ಮೂಲಕ ಕರ್ನಾಟಕದ ಜನಪದ ಕಲೆಯಾದ ಗೀಗೀ ಹಾಡುಗಾರಿಕೆಯಲ್ಲಿ ಶಕ್ತಿ ತುಂಬಿದವಳು ಅಂಬವ್ವ. ಶಕ್ತಿ ಶ್ರೇಷ್ಠವಾದ ಹಾಡುಗಳನ್ನು ಆಗ ಗಂಡಸರೆ ಹಾಡುತ್ತಿದ್ದರು. ಆ ಕಲೆಗೂ ಕೂಡ ಹೆಂಗಸರ ಅವಶ್ಯಕತೆ ಯಿತ್ತು. ಹಾಗಾಗಿ ದೇವದಾಸಿತನದಿಂದ ಸಿಡಿದು, ಗೀಗೀ ಹಾಡಿನ ನಾಗೇಶಿ ಹಾಡುಗಾರ್ತಿ ಯರಾಗಿ, ಸಣ್ಣಾಟದ ಹೆಣ್ಣು ಪಾತ್ರಧಾರಿಗಳಾಗಿ, ಸಾಂಸ್ಕೃತಿಕ ಲೋಕದಲ್ಲಿ ಗುರುತಿಸಿಕೊಂಡ ಹೆಣ್ಣು ಮಕ್ಕಳು ಕಲಾವಿದರಾದರು. ಗೀಗೀ ಕಲೆ ಹಾಡುಗಾರಿಕೆಯಾಗಿ, ಜನಪದ ಕಲೆಯಾಗಿ, ಸ್ವಾತಂತ್ರ್ಯ ಹೋರಾಟದಲ್ಲಿ ಧುಮುಕಲು ಹಳ್ಳಿಗಳಿಗೆ ಸಮೂಹ ಸಂವಹನವಾಗಿ ಜನ ಜಾಗೃತಿ ಯನ್ನು ಮೂಡಿಸಿದಂತಹ ಕಲೆ. ಹೆಣ್ಣು ಜನಾಂಗವು ಸಮಾನತೆಯನ್ನು ಪ್ರತಿಪಾದಿಸಲು ಪ್ರೇರಣೆ ನೀಡಿದ ಕಲೆ. ಗಂಡಸರಿಗೆ ಸರಿಸಮಾನವಾಗಿ ಶೆಡ್ಡು ಹೊಡೆದು ಉತ್ತರ ಕರ್ನಾಟಕದ ತುಂಬೆಲ್ಲಾ ಪ್ರದರ್ಶನ ಕೊಟ್ಟ ಗೀಗೀ ಹಾಡಿನ ನಾಗೇಶಿ ಹಾಡುಗಾರ್ತಿಯಾದ ಅಂಬವ್ವ ತಿಕೋಟ ಅವರ ಅನುಭವ ಕಥನದ ಒಂದು ನೋಟವನ್ನು ಹಿಡಿದಿಡಲು ಇಲ್ಲಿ ಪ್ರಯತ್ನಿಸ ಲಾಗಿದೆ.

ದಲಿತರಿಗೆ ಬದುಕಲು ಆರ್ಥಿಕವಾದ ಸಬಲತೆ, ಸಾಮಾಜಿಕವಾದ ಭದ್ರತೆ ಇಂದಿಗೂ ಕೂಡ ಇಲ್ಲ. ಕೃಷಿ ಕೂಲಿ ಕೆಲಸ ಸಿಕ್ಕರೆ ಮಾಡಬೇಕು. ಇಲ್ಲದಿದ್ದರೆ ಬೊಂಬಾಯಿ, ಪೂನಾ, ಗೋವಾ ಮತ್ತು ಹೈದರಾಬಾದನಂತಹ ಮಹಾನಗರಗಳಿಗೆ ವಲಸೆ ಹೋಗಿ ಬದುಕಬೇಕು. ಅಂಬವ್ವನ ತಾಯಿ ತೀರಿಕೊಂಡ ಮೇಲೆ, ಆಕೆಯ ತಂದೆ ಇನ್ನೊಂದು ಮದುವೆ ಮಾಡಿಕೊಳ್ಳ ಬೇಕಾಗಿತ್ತು. ಆದರೆ ಕಡು ಬಡತನದ ಸ್ಥಿತಿಯಲ್ಲಿ ಮೊದಲ ಮದುವೆಯೇ ದುರ್ಲಭ.

ಇನ್ನು ಎರಡನೆ ಮದುವೆಗೆ ಹೆಣ್ಣು ಕೊಡುವವರಾರು? ಮೇಲಾಗಿ ಸವತಿಯ ಮಗಳೊಬ್ಬಳು ಬೇರೆ. ಆಕೆಗೆ ನೋಡಿಕೊಳ್ಳುವವರಾರು? ಇಂತಹ ಲೆಕ್ಕಾಚಾರ ಹಾಕಿದವರು ಹೆಣ್ಣು ಕೊಡದೆ ನಿರಾಕರಿಸುತ್ತಾರೆ. ಆ ಸಂದರ್ಭದಲ್ಲಿಯೇ ಅಂಬವ್ವನ ತಂದೆಗೆ ಹೊಳೆದದ್ದು ಮಗಳನ್ನು ದೇವದಾಸಿಯನ್ನಾಗಿ ಮಾಡಿದರೆ ಮನೆಯಲ್ಲಿಯೇ ಇರುತ್ತಾಳೆ ಎಂದು ಬಗೆದು ಮದುವೆಯನ್ನು ತಿರಸ್ಕರಿಸಿ ಮಗಳನ್ನೇ ದೇವದಾಸಿಯನ್ನಾಗಿ ಮಾಡಿದನು.

ಅಂಬವ್ವಳ ಈ ಗೀಗೀ ಹಾಡುಗಾರಿಕೆಗೆ ಪ್ರೋತ್ಸಾಹ ನೀಡಿದವರಾರು ಎಂಬ ಕುತೂಹಲ ದಿಂದ ಕೇಳಿದ್ದಕ್ಕೆ ಅವಳು ದೇವದಾಸಿ ಅಂದ ಮೇಲೆ ಯಾವುದಾದರೂ ಒಂದು ಕಲೆಯನ್ನು ಕಲಿಯಬೇಕಾಗಿತ್ತು. ನಮ್ಮಪ್ಪನೆ ಈ ಗೀಗೀ ಹಾಡುಗಾರಿಕೆಗೆ ಹಾಕಿದ್ದು ಎಂದು ಹೇಳಿದಳು. ಚಿಕ್ಕವಳಿದ್ದಾಗ ಅಂಬವ್ವನಿಗೆ ಅವರ ತಂದೆ ಚೌಡಕಿ ಮಾಡಿಕೊಟ್ಟಿದ್ದನಂತೆ. ಆದರೆ ಅದು ಭಿಕ್ಷೆ ಬೇಡಿಕೊಂಡು ಮನೆ, ಮನೆ ತಿರುಗುವುದರಿಂದ ಹಿಡಿಸಲಿಲ್ಲ ಕಾಣಸ್ತಾದ. ಸಾವಿರ ಮಂದಿಯೊಳಗ ವೇದಿಕೆ ಹತ್ತಿ ಹಾಡೋದು, ಸಾಮಾನ್ಯ ಮಾತಲ್ಲ. ಚೌಡಕಿ ನುಡಿಸಿದರ ಕಿಮ್ಮತ್ತ ಇಲ್ಲ. ಡಪ್ಪ ಬಾರಿಸಿದರ ಸಾವಿರ ಜನ ಆಲಿಸಿ ಕೇಳತಾರ. ಅವರ ಮನ, ಬುದ್ಧಿ ಚಿತ್ತ ಎಲ್ಲವು ಒಮ್ಮೆಲೆ ಸೆಳೆಯಬಹುದೆಂದು ಅನ್ನಿಸಿರಬೇಕು. ನಮ್ಮ ಅಪ್ಪನು ಗೀಗೀ ಹಾಡುಗಳೆ ಕಲಿ ಅಂತ ಹೇಳಿದ ಅನ್ನೋದರಲ್ಲಿ ಅಂಬವ್ವಳ ಮುಗ್ಧತೆ ಅಡಗಿದೆ. ಬದುಕಿನ ಎಲ್ಲಾ ಕಹಿ ನೋವುಗಳನ್ನು ಅನುಭವಿಸಿದ ಈಕೆಗೆ ತಂದೆ ದೇವದಾಸಿಯನ್ನಾಗಿ ಮಾಡಿದ ಎಂಬ ಬಗ್ಗೆ ಆಕ್ರೋಶವಿಲ್ಲ. ಏಕೆಂದರೆ ಆಕೆಯ ಸಾಮಾಜಿಕ ಹಿನ್ನೆಲೆಗೆ ಹೀಗೆ ಯೋಚನೆ ಮಾಡುವ ಶಕ್ತಿ ಇರಲಿಲ್ಲ. ದೇವದಾಸಿತನದಿಂದ ನರಳುವವರ ಸ್ಥಿತಿ ಕೂಡಾ ಹೀಗೇನೆ ಇದೆ.

ಅಂಬವ್ವ ಗೀಗೀ ಹಾಡುಗಾರಿಕೆಯನ್ನು ಆರಂಭಿಸಿದ್ದಾಗ ಅವಳಿಗೆ ಇನ್ನೂ ಹನ್ನೆರಡು ವರ್ಷ ಆಗಿದ್ದಿಲ್ಲ. ಅವಳೇ ಹೇಳಿದಂತೆ ಅವಳ ಕಲಿಕೆ ಹಾಗೂ ಪ್ರಯೋಗ ನಡೆಸಿದ ಸ್ವರೂಪ ಹೀಗಿದೆ : ನಾನು ಸಾಲಿ ಕಲ್ತಕಿ ಅಲ್ಲ ನಿರಕ್ಷರಿ ಮನಶಾಳ್ರಿ. ನಮ್ಮೂರಾಗ ಒಬ್ಬ ಕವಿ ಇದ್ದ. ಅವನೆ ಹಾಡ ಕಲಸ್ತಿದ್ದ. ಹುಡಗಿ ಹುಷಾರೈತಿ ಹಾಡಾ ಕಲಸೋಣ ಅಂತ ನಮ್ಮಪ್ಪನ ಜೋತಿ ಮಾತಾಡಿದ್ರು. ಒಂದು ತಿಂಗಳದಾಗ ನಾಲ್ಕು ಸಖಿ. ನಾಲ್ಕು ಖ್ಯಾಲಿ, ಎರಡ ಚೌಕ ಪದ ಕಲಿತಿದ್ದೆ. ಅದಕ್ಕ ಗುರುವಿಗಿ ನಾಲ್ಕು ನೂರ ರೂಪಾಯಿ ದಕ್ಷಿಣೆ ಕೊಡಬೇಕಾಗಿತ್ತು. ಮೊದಲನೆ ಹಾಡುಗಾರಿಕೆಗೆ ನಾನು ಚಡಚಣಕ್ಕೆ ಹೋದೆ. ಅಲ್ಲಿಂದಲೆ ಹಾಡಲಿಕ್ಕ ಆರಂಭ ಮಾಡಿದೆ. ಮೊದಲು Stage ಹತ್ತಿ ಹಾಡುವಾಗ ಕೈಕಾಲ ಥರಥರ ನಡಗುತ್ತಿದ್ದುವು. ಯಾರ ಏನಾರ ಅಂತಾರಂತೆ ಅನಸತಿತ್ತು. ಆದರೆ ಗೀಗೀ ಹಾಡುಗಾರಿಕೆಯಲ್ಲಿ ಹೆಣ್ಣನ್ನ ಕಾಣದ ಜನರು (ನಾಗೇಶಿ ಪಕ್ಷದಿಂದಲೂ ಗಂಡಸರೆ ಹಾಡುತ್ತಿದ್ದರು) ಹೆಣ್ಣು Stageಗೆ ಬಂದರೆ ಜನಾ ಬಾಯಿ ತೆರೆದು ಜೊಲ್ಲು ಸುರಿಸುತಿದ್ರು. ಹೆಣ್ಣುಮಗಳು ಹಾಡಿಗೆ ಬರತಾಳಂದ್ರ ಜನಾ ಊರಿಂದ ಹಾಡ ಕೇಳಾಕ ಎತ್ತಿನ ಬಂಡಿ ಕಟಿಕೊಂಡು ಬರತ್ತಿದ್ದರು. ಜಾತ್ರೆ ಮೋಜಿನ ಜೊತೆ ಈ ಹಾಡ ಕೇಳಾ ಹವ್ಯಾಸಾನೂ ಜನರಲ್ಲಿತ್ತು. ನಮ್ಮ ಜೊತೆ ಬೆಂಬಲಕ್ಕಾಗಿ ಹಾಡ ಕಲಿಸಿದ ಗುರು ಇರುತ್ತಿದ್ದ. ಅಂವ ಹರದೇಶಿ ಹಾಡತಿದ್ದ ನಾನು ನಾಗೇಶಿ ಹಾಡತ್ತಿದ್ದೆ. ಹಾಡ ಕೇಳಾಕ

ಹೆಚ್ಚು ಜನಾ ಇದ್ದರ ಹಾಡಲಾಕ ಹೆಚ್ಚಿನ ಹುರುಪು ಬರುತ್ತಿತ್ತು. ನನ್ನದು ಮತ್ತು ಮದರಿ ಭಾಗಣ್ಣನ ಮೇಳ ಜೋರಾಗಿದ್ದವು. ಅಶ್ಲೀಲದ ಹಾಡುಗಳಿದ್ದಾಗಲೆ ಹೆಚ್ಚಿನ ಮೋಜು ಇರುತಿತ್ತು.

ಒಂದು ಹೆಣ್ಣು ಸಾವಿರಾರು ಜನಗಳ ಮಧ್ಯೆ ಸವಾಲ್-ಜವಾಬ ಹಾಡಿನ ಪ್ರಕಾರದಲ್ಲಿ ಅಶ್ಲೀಲದ ಪದಗಳನ್ನು ಬಳಸಿಕೊಂಡು ಹಾಡುವ ಹಾಡಿಕೆ. ಅಂತಹ ಸಂದರ್ಭದಲ್ಲಿ ಜನ ತಮ್ಮ ಸಂತೋಷಕ್ಕಾಗಿ ಒನ್ಸ್ ಮೋರ್ ಹಾಡಬೇಕು ಅಂತ ಕೇಳವರು, ಓಡಿ ಹೋಗಿ ದಂಡಿ ತಂದು ತಲಿಗಿ ಕಟ್ಟವರು. ಆ ಕಟ್ಟೊ ನೆಪದಲ್ಲಿ ನನಗ ಮುಟ್ಟವರು. ದೂರದ ಸಭೆಯೊಳಗಿಂದ ಕಲ್ಲ ತೂರವರು (ಹರಳುಗಳು) ಹಾಡಿನ ಸಂದರ್ಭದಲ್ಲಿ ಬೇರೆಯವರಿಗೆ ಮೋಜು ಕೊಟ್ಟು, ಮುಜುಗರದಿಂದ ದುಃಖ ಅನುಭವಿಸಬೇಕಾದ ಪರಿಸ್ಥಿತಿ ಇತ್ತು. ಇವು ಒಂದೇ ಜಾತ್ರೆಯಲ್ಲಲ್ಲ. ಹತ್ತಾರು ಜಾತ್ರೆಗಳಲ್ಲಿ ನಡೆಯುವ ಕ್ರಿಯೆಗಳಿವು. ಇವಕ್ಕೆ ಅನಿವಾರ್ಯವಾಗಿ ಒಗ್ಗಿಕೊಳ್ಳಬೇಕಾದ ಸ್ಥಿತಿ ಇತ್ತು.

ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಹೆಣ್ಣು ಮಗಳು ಮನೆಯ ಹೊರಗಡೆ ಗಂಡಸರ ಒಪ್ಪಿಗೆ ಇಲ್ಲದೆ ಹೋದರೆ ಮತ್ತೆ ಬಂದು ಮನೆ ಸೇರುವುದು ಕಷ್ಟದ ಮಾತು. ಇಂತಹ ಸ್ಥಿತಿಯಲ್ಲಿ ಅಂಬವ್ವ ಇಂತಹ ಜೊಳ್ಳು ಬೆದರಿಕೆಗೆ ಹೆದರದೆ ಗಂಡಸಿನಂತೆ ಸಮಾನತೆಯನ್ನು ಬಿತ್ತುವ ಸಲುವಾಗಿ ಹೆಣ್ಣು ಶ್ರೇಷ್ಠವೆಂದು ಹಾಡುವುದಕ್ಕೆ ಹತ್ತಾರು ಗಂಡಸರ ಮೇಳದಲ್ಲಿ ಹಗಲು/ರಾತ್ರಿ ಕೂಡಿಯೇ ತನ್ನ ಜೀವಮಾನದ ಮುಕ್ಕಾಲು ಭಾಗದ ವಯಸ್ಸು ಕಳೆದಿದ್ದಾಳೆ.

ಹಾಡಿಕೆಯನ್ನು ಯಾವಾಗ ಮತ್ತು ಹೇಗೆಲ್ಲ ಮಾಡಿಕೊಂಡು ಸಾಗುತ್ತಿದ್ದಿರಿ ಎಂದದ್ದಕ್ಕೆ ಆ ಬಗ್ಗೆ ಹೇಳುತ್ತಾ ಅಂಬವ್ವ : ಹೋಳಿ ಹುಣ್ಣಿಮೆ ಆದ ಮೇಲೆ (ಮಾರ್ಚ್ ತಿಂಗಳ ಕೊನೆಯ ವಾರ) ಊರುಗಳ ಮ್ಯಾಲ ಹಾಡಲಿಕ್ಕ ಹೋದರ ಮುಂದ ಕಿರಕತ್ತ ಹೂಡಿದ ಮ್ಯಾಲೆ (ಜೂನ್ ತಿಂಗಳಲ್ಲಿ) ಅಂದರೆ ಸುಮಾರು ಎರಡು-ಮೂರು ತಿಂಗಳ ಕಾಲಾವಧಿ ಬೇಕಾಗತಿತ್ತು ಎಂದಳು. ಮನೆಯ ಕಡೆಯ ಕೌಟುಂಬಿಕ ಜಂಜಡಗಳನ್ನು ಬಿಟ್ಟು ಹಾಡಕೋತ ಊರೂರು ತಿರುಗಾಡ ಬೇಕಾಗುತ್ತಿತ್ತು. ಬೇಸಿಗೆಯ ಬಿಸಿಲಿನಲ್ಲಿ  ಕೆಳಗೆ ಕಾಲು (ಪಾದಗಳ) ಮೇಲೆ ನೆತ್ತಿ ಎರಡು ಸುಡುತ್ತಿದ್ದವು. ಆಗ ಯಾವ ಸಾರಿಗೆ ಸಂಪರ್ಕದ ಸೌಲಭ್ಯಗಳಿರಲಿಲ್ಲ. ಹಳ್ಳಿಗಳಿಗೆ ಹೋಗ ಬೇಕಾದರೆ ಕಾಲ್ನಡಿಗೆಯಲ್ಲಿಯೇ ಹೋಗಬೇಕು. ಈ ಎರಡು ಮೂರು ತಿಂಗಳ ಕಾಲಾವಧಿ ಯಲ್ಲಿ ಹಾಡಲಿಕ್ಕೆ ಕರೆದುಕೊಂಡು ಹೋದಂತಹವರೆ ಊಟದ ವ್ಯವಸ್ಥೆ ಮಾಡಿಸುತ್ತಿದ್ದರು. ಜಾತ್ರೆ ಮಾಡುವವರು ನಮ್ಮದೆ ಜಾತಿಯವರಾಗಿದ್ದರೆ ತಮ್ಮ ಮನೆಗೆ ಕರೆದುಕೊಂಡು ಹೋಗಿ ಊಟ, ಚಹ, ನಾಷ್ಟಾದ ವ್ಯವಸ್ಥೆ ಮಾಡಿಸುತ್ತಿದ್ದರು. ರಾತ್ರಿ ಮಾತ್ರ ಠಿಕಾಣೆ. ೧೦-೧೨ರ ರಾತ್ರಿಯವರೆಗೂ ಹಾಡುಗಾರಿಕೆ ನಡಿತಿತ್ತು. ಇನ್ನು ಮುಂದ ೪-೫ ತಾಸಿನ ಸಲುವಾಗಿ ಎಲ್ಲಿ ಹೋಗಬೇಕಂತ ಹೇಳಿ ದೇವರ ಫೌಳಿ ಒಳಗೆ ಮಲಗಿಕೊಳ್ಳುತ್ತಿದ್ದೆವು. ಊರಿಗೆ ಹೋದಾಕ್ಷಣ ಇಳಿದುಕೊಳ್ಳುವ ವ್ಯವಸ್ಥೆಗಾಗಿ ಧರ್ಮಸಾಲಿ, ಪಂಚಾಯಿತಿ ಆಫೀಸ್ ಇರುತ್ತಿದ್ದವು. ಸ್ನಾನ ಕ್ಕಾಗಿ ಬಾವಿಗಳು ಮತ್ತು ಬೋರವೆಲ್‌ಗಳು. ಆವಾಗ ಹಳ್ಳ-ಕೊಳ್ಳ ಇದ್ದು. ನನ್ನ ೩೫

ವರ್ಷದ ಹಾಡಗಾರಿಕೆಯಲ್ಲಿ ಬರೀ ತಣ್ಣೀರಿನಿಂದ ಸ್ನಾನ ಮಾಡಿದ್ದೀನಿ. ಬಿಸಿ ನೀರ ಕಾಸಿ ಯಾರು ಕೊಡತಾರ ಹೇಳರಿ? ನಾಲ್ಕಾರು ಗಂಡಸರ ಜೊತೆಯಲ್ಲಿಯೇ ಸದಾ ಕಾಲ ಕಳಿಬೇಕಾಗಿತ್ತು. ಹೆಣ್ಣು ಗಂಡು ಅಂತಹ ಭೇದ ಮಾಡಿದರೆ ಹೊಟ್ಟೆ ತುಂಬುವುದು ಹೇಗೆ? ನಮ್ಮ ನಮ್ಮ ಕೆಲಸಕ್ಕೆ ನಾವು ಸಿದ್ಧರಾಗಿರಬೇಕು. ಗಂಡಸರ ಮಧ್ಯೆ ಹೆಣ್ಣಾಗಿ ಇರಬೇಕು ಅನ್ನೋ ನೋವು ಇತ್ತು. ಧೈರ್ಯನೂ ಇತ್ತು.

ನಾನು ಎರಡು-ಮೂರು ತಿಂಗಳ ಊರಾಗ ಇಲ್ಲದಾಗ ನನ್ನ ಮಕ್ಕಳು ಬಹಳ ಕಷ್ಟಪಟ್ಟು, ಯಾರೋ ರೊಟ್ಟಿ ಮಾಡಿಕೊಟ್ರ ಊಟ ಮಾಡಬೇಕು ಇಲ್ಲದಿದ್ದರ ಅದೇ ನುಚ್ಚಕಾಸಿ ತಿನ್ನಬೇಕು. ನಾನು ಇಷ್ಟ ಕಷ್ಟಪಟ್ಟರೂ ಸಿಗಾದೇ ೨೦೦೦/೩೦೦೦ ರೂ. ಜಾತ್ರಿಗೆ ಕರದರ ಮಾತ್ರ ಊಟ ಇಲ್ಲದಿದ್ದರ ನಾವೇ ಕೈಲಿ ಹಣ ಖರ್ಚು ಮಾಡಿ ಊಟ ಮಾಡಬೇಕು. ಖಾನಾವಳಿ ಖರ್ಚು, ನಮ್ಮ ಮೇಳದವರ ದಿನದ ಖರ್ಚು, ಹಿಂಗಾಗಿ ದುಡ್ಡು ಉಳಿತಿದ್ದಿಲ್ಲ. ಏನೋ ಒಂದು ಕಲೆ ಕಲತಿವಿ ಅನ್ನೋದಕ್ಕ ಹಾಡದಂಗ ಅನ್ನುವ ಮಾತು ಬಹಳ ದುಃಖದ ಸಂಗತಿಯಾಗಿ ಹೊರಹೊಮ್ಮುತ್ತಿತ್ತು. ಏಕೆಂದರೆ ಎರಡು ಮೂರು ತಿಂಗಳು, ಕೌಟುಂಬಿಕ ಸಂಪರ್ಕವನ್ನು ಕಡಿದುಕೊಂಡು ನಾಡಿನಾದ್ಯಂತ ತಿರುಗಾಡಿ ತಮ್ಮ ಕಲೆ ಪ್ರದರ್ಶನ ಮಾಡಿ ಜನರನ್ನು ರಂಜಿಸುತ್ತ, ತನ್ನೊಡಲ ದುಃಖವನ್ನು ನುಂಗಿಕೊಳ್ಳುತ್ತ ಬದುಕಿದ ಅಂಬವ್ವ ಕಲೆಯ ಬಗೆಗಿನ ಪ್ರೀತಿ ಇಟ್ಟುಕೊಂಡೆ ಮುಂದೆ ಸಾಗಿ ಬಂದವಳು.

ಅಂಬವ್ವ ಹೆಣ್ಣಿನ ಪರವಾಗಿ ಪದಕಟ್ಟಿ ಹಾಡುವ ಪರಂಪರೆಯನ್ನು ಬೆಳೆಸಿ ಮುಂದುವರಿಸಿ ದವಳು. ಹೆಂಗಸು ಹಾಡಲು ನಿಂತ ಮೇಲೆನೆ ಶಕ್ತಿ ಶ್ರೇಷ್ಠವೆಂಬ ಹಾಡುಗಾರಿಕೆಗೆ ಬೆಲೆ ಬಂದಿರುವುದು. ಹಾಡುಗಾರಿಕೆಯಲ್ಲಿ ಅಂಬವ್ವ ಅಕ್ಕಮಹಾದೇವಿ, ನೀಲಗಂಗಾ, ನೀಲಾವತಿ, ಅನಸೂಯಾ ಮತ್ತು ಪೌರಾಣಿಕ ಹಾಡುಗಳಾದ ಬಿಸಮಿಲ್ಲಾ, ತಿರುನೀಲಕಂಠ, ಸಿದ್ಧರಾಮ ಚರಿತ್ರೆ ಮುಂತಾದ ಹಾಡುಗಳನ್ನು ಹಾಡುತ್ತಿದ್ದಳು. ಉಳಿದಂತೆ ಮೇಳದಲ್ಲಿ ಯಾವ ರೀತಿ ಹಾಡುಗಾರಿಕೆಗೆ ಒಲವು ಹೆಚ್ಚುತ್ತದೆಯೋ ಅದೇ ರೀತಿ ಹಾಡಿಕೋತ ಹೋಗತ್ತಿದ್ದಳು. ಅಂಬವ್ವ ಹಾಡಿ ಬಂದಂತಹ ಸ್ಥಳಗಳಲ್ಲಿ ಸಾಂಗ್ಲಿ, ಎಳವಿ, ಗೋವಾ, ಮುಂಬಯಿ ಮೊದಲಾದ ವುಗಳು ಇವೆ. ಆದರೆ ಹೆಚ್ಚಾಗಿ ಉತ್ತರ ಕರ್ನಾಟಕದ ಹಳ್ಳಿ ಹಳ್ಳಿಗಳಲ್ಲಿ ಅಂಬವ್ವ ಯಾರು ಅನ್ನುವುದು ಗೊತ್ತಿದೆ. ಕರ್ನಾಟಕದಿಂದ ಹೊರಗೆ ಹೋಗಿ ಹಾಡಿ ಬಂದಂತಹ ಸ್ಥಳಗಳಲ್ಲಿ, ಗೋವಾ ರಾಜ್ಯದ ಹಾರಬಾರ, ಪಣಜಿ, ಬಯನಾ ಬೀಚ್, ಮುಂಬಯಿಯ ದೋಬಿಘಾಟ, ಕೋಮಾಟಿಪುರ ಮೊದಲಾದವು ಸೇರಿವೆ. ಇವು ಅಸಂಘಟಿತ ಕನ್ನಡಿಗರು ಬದುಕಿಗಾಗಿ ವಲಸೆ ಹೋಗಿರುವ ಸ್ಥಳಗಳು.

ಗೋವಾ ಹಾಗೂ ಮುಂಬಯಿಯಂತಹ ಮಹಾನಗರಗಳ ಸಂಬಂಧವನ್ನು ಇಟ್ಟು ಕೊಂಡಂತಹ ರೀತಿಯೇ ಬೇರೆ. ಮಹಾನಗರಗಳಿಗೆ ಅಸಂಘಟಿತ ಕೂಲಿ ಕಾರ್ಮಿಕರಾಗಿ ವಲಸೆ ಹೋದಂತಹ ಜನರು. ದೇವದಾಸಿತನದ ಚುಚ್ಚು ಮಾತುಗಳನ್ನು ಸಹಿಸಲಾರದೆ ನಗರಗಳ ರೆಡ್‌ಲೈಟ್ ಏರಿಯಾಗಳಿಗೆ ಹೋಗಿ ವಾಸ್ತವ್ಯ ಮಾಡಿದಂತವರು. ತಮ್ಮ

ತಾಯ್ನಾಡಿನ ಬಗೆಗಿರುವ ವಾತ್ಸಲ್ಯವನ್ನು ಹಿಂಗಿಸಬಯಸಿದ್ದು ಗೀಗೀ ಹಾಡಿನ ಮೂಲಕ. ಅವರಲ್ಲಿ ಅಲ್ಪಸಂಖ್ಯಾತರು, ಹಿಂದುಳಿದವರು ಮತ್ತು ದಲಿತರು. ಇವರ ನೇರ ಸಂಬಂಧ ವೆಂದರೆ ಅದೇ ಜಾತಿಯವರು ತಾನೇ! ಆ ಜಾತಿಯಲ್ಲಿ ಉಳಿದುಕೊಂಡು ಬಂದಿರುವ ಕಲೆ ಕೇಳಿ ಸಂತೋಷಿಸುವ ಸಲುವಾಗಿ ಹೊರನಾಡಿನಲ್ಲಿ ಒಗ್ಗಟ್ಟಾಗಿ ಮನರಂಜನೆ ಪಡೆಯಲು ಇವರನ್ನೂ ಕರೆಸುತ್ತಿದ್ದರು. ನಗರಗಳಲ್ಲಿ ಜನರ ಕೈಯಲ್ಲಿ ಹಣ ಇರುತ್ತದೆ. ಅಲ್ಲಿ ಹಾಡಿದರೆ ಅವರಿಗೆ ಮನರಂಜನೆ ಸಿಗುತ್ತದೆ; ನಮಗೆ ಹಣ ಸಿಗುತ್ತದೆಂದು ನಗರಗಳಿಗೆ ಹೋಗುತ್ತಿದ್ವಿ ಎಂದು ತಮ್ಮ ಆರ್ಥಿಕ ಅವಲಂಬನೆಯನ್ನು ನೇರವಾಗಿ ಹೇಳುತ್ತಾ ಸಾಗಿದಳು.

ನಿಮ್ಮ ಹಾಡುಗಾರಿಕೆಗೆ ಪ್ರಶಸ್ತಿ ಪುರಸ್ಕಾರಗಳು ಏನಾದರೂ ಬಂದಿವೆಯೆ? ಅಂತಾ ಕೇಳಿದ್ದಕ್ಕೆ: ನಮ್ಮ ಹಾಡಕ್ಕಿ ಕೇಳಿ ಯಾರ ಇನಾಮ ಕೊಡತಾರ, ಎರಡು-ಮೂರು ದಿನ ಹಾಡಿಸಿಕೊಂಡು ನೂರ ಅಥವಾ ಇನ್ನೂರು ರೂಪಾಯಿ ಕೊಟ್ಟಿದ್ದರೆ ಬಹಳಷ್ಟು ಹೆಚ್ಚಾಯಿತು. ಕಲಬುರ್ಗಿಯಲ್ಲಿನ ಹೀರಾಪುರದಲ್ಲಿ ನನ್ನ ಜೊತೆ ಹಾಡುವ ಹರದೇಶಿ ಹಾಡುಗಾರನಾದ ಶಾಂತಪ್ಪನಿಗೆ ಒಂದು ದೊಡ್ಡ ಪ್ಲಾಟ ಕೊಟ್ಟಿದ್ದಾರೆ. ನನಗೂ ತೆಗೆದುಕೋ ಎಂದು ಹೇಳಿದರು. ಆದರೆ ಜೀವಂತ ಇರುವವರೆಗೂ ದೇವರ ಜಾತ್ರೆಗೆ ಬಂದು ಹಾಡಬೇಕು ಎಂದು ಕರಾರು ಮಾಡಿದರು. ಕಲಬುರ್ಗಿಯಂತಹ ಊರಿಗೆ ಹೋಗಿ ಮನೆ ಕಟ್ಟಿಕೊಂಡು ಇರಲು ಆಗುತ್ತದೆಯೆ? ಎಂದು ಬಿಟ್ಟು ಬಿಟ್ಟೆ.

ಅದೇ ರೀತಿ ದೇವಾಲಯ ತೆಗನೂರಿನಲ್ಲಿ ಮರೆಪ್ಪ ಮಹಾರಾಜರು ಕರಿಗೂಳೇಶ್ವರ ಸಂಸ್ಥಾನದ ಕೆಳಗಿನ ಹೊಲ ಕೊಡತ್ತೇನೆ. ನಾನು ಬದುಕಿರುವಷ್ಟು ದಿನ ಬಂದು ಹಾಡಬೇಕು ಅಂತ ಹೇಳಿದರು. ನಾನು ಒಬ್ಬಾಕಿ, ಮಕ್ಕಳೆಲ್ಲ ಸಣ್ಣಾವು, ಹೊಲ ತಗೊಂಡು ಏನು ಮಾಡಲಿ, ಅದರ ರೇಖ-ದೇಖ ಮಾಡವರ್‍ಯಾರು ಅಂತ ಬಿಟ್ಟಬಿಟ್ಟಿದ್ದೇನೆ. ಮೇಲಿನ ಎರಡು ಇನಾಮುಗಳು ಅಂಬವ್ವ ಬಿಟ್ಟು ಕೊಟ್ಟು ಯಾವ ಆಶೆಯು ಇಲ್ಲದೆ ಬದುಕುತ್ತಿರುವ ಸಂಗತಿಗೆ ಸಾಕ್ಷಿಯಾಗಿವೆ.

ನಿಮ್ಮ ನಂತರ ಈ ಕಲೆ ಬೆಳೆಸಲು ಪ್ರಯತ್ನಿಸಲಿಲ್ಲವೆ? ಅಂದಾಗ; ನನ್ನ ಹಿರಿಯ ಮಗಳಾದ ಅನಸೂಯಾ ೧೦ನೇ ತರಗತಿಯಲ್ಲಿದ್ದಳು. ಈ ಹಾಡುಗಾರಿಕೆಯ ಪರಂಪರೆ ಮುರಿಯಬಾರದು ಅಂತ ಅಕಿಗಿ ನಾಗೇಶಿ ಹಾಡುಗಳು ಕಲಿಸಬೇಕೆಂದು ಬಹಳ ಪ್ರಯತ್ನ ಮಾಡಿದೆ. ಆದರೆ ಆಕೆ ಹೇಳಿದ್ದು ನನಗೆ ಬೇಡಕೊಂಡ ತಿನ್ನುವ ಗಂಡನಿಗೆ ಕೊಟ್ಟು ಮದುವೆ ಮಾಡು; ನಾನು ಈ ಹಾಡಕ್ಕಿ ಒಲ್ಲೆ ಅಂದಳು. ಆಗಲೆ ಆಕೆ ಸಾಲಿನು ಕಲ್ತಿದ್ದಳು. ಅಕಿನ ಇಚ್ಛಾ ಪ್ರಕಾರ ಬದಕಲೆಂದು ನಾನು ಸುಮ್ಮನಾದೆ. ಈಗ ಆಕೆಯು ಕಲಬುರ್ಗಿ ಜಿಲ್ಲೆ ಶಹಪೂರ ತಾಲ್ಲೂಕಿನ ಸರ್ಕಾರಿ ಆಸ್ಪತ್ರೆಯೊಳಗೆ ನರ್ಸ ಆಗಿ ಕೆಲಸ ಮಾಡತ್ತಿದ್ದಾಳೆ. ತಿಂಗಳಿಗಿ ೮೦೦೦/- ಸಂಬಳ ತೊಗೊತಾಳ. ನಮಗೂ ಕಳುಹಿಸುತಾಳ. ಹಾಗಾಗಿ ಈ ಹಾಡಗಾರಿಕಿ-ದೇವದಾಸಿ ಸಂಪ್ರದಾಯಕ್ಕೆ ಯಾವಾಗ ನಿರ್ಬಂಧ ಹೇರಿದರೋ ಆಗಲೆ ನಾಗೇಶಿ ಸಂಪ್ರದಾಯ ಮುಕ್ತಾಯ ಆದಂತಾಯ್ತು ಎಂದು ಬದಲಾವಣೆಯನ್ನು ವಿವರಿಸುತ್ತಾಳೆ.

ಈಗ ಅಂಬವ್ವ ತನ್ನ ಹಾಡುಗಾರಿಕೆಯನ್ನು ಸಂಪೂರ್ಣವಾಗಿ ನಿಲ್ಲಿಸಿದ್ದಾಳೆ. ತನ್ನ ೩೫ ವರ್ಷದಲ್ಲಿ ಪ್ರತಿ ವರ್ಷ ಒಂದು ಬಾರಿಯು ತಪ್ಪಿಸದೆ ತನ್ನ ಊರಾದ ಯಮನೂರಪ್ಪನ ಜಾತ್ರೆಯಲ್ಲಿ ಹಾಡಿದಾಕೆ ಅವಳು. ಈಗ ಬೆಳಗಿನವರೆಗೂ ಹಾಡಿದರ ೩೦೦/೪೦೦ ರೂ. ಕೊಡತಾರ. ಹಾಡಿದ ಕೂಲಿ ಆಗೋದಿಲ್ಲವೆನ್ನುತ್ತಾಳೆ. ಹಾಡಿನಿಂದ ಆಕೆಗೆ ಯಾವ ಲಾಭವು ದಕ್ಕಿಲ್ಲವೆಂದು ಭೌತಿಕವಾಗಿ ಕಾಣಿಸುವುದಿಲ್ಲ. ಆದರೆ ಆಂತರಿಕವಾಗಿ ಅವಳ ಕುಟುಂಬ ಜಾಗೃತಿಯಾಗಿರುವುದು ಕಂಡು ಬರುತ್ತದೆ. ಮಗಳು ಸರಕಾರಿ ನೌಕರಿಯಲ್ಲಿದ್ದಾಳೆ. ಇಬ್ಬರು ಗಂಡು ಮಕ್ಕಳು ಕೆಲಸಕ್ಕೆ ಹೋಗುತ್ತಿದ್ದಾರೆ. ತುಂಬು ಕುಟುಂಬ ಹೊಂದಿದಾಕೆ. ಆದರೂ ಕೂಡ ಸರಕಾರ ಕೊಡ ಮಾಡುವ ದೇವದಾಸಿ ಆಶ್ರಯ ಮನೆಯಲ್ಲಿದ್ದಾಳೆ. ಹಾಡುಗಾರರಿಗೆ ಪಿಂಚಣಿ ಮಾಡುತ್ತಾರೆ. ಆದರೆ ಅದರಿಂದಲೂ ವಂಚಿತಳಾಗಿದ್ದಾಳೆ. ಏಕೆಂದರೆ ಪಿಂಚಣಿಗಾಗಿ ಹಾಡುಗಾರಿಕೆಯ ಪ್ರಮಾಣ ಪತ್ರಗಳು ಬೇಕು. ಅವು ಈಕೆಯ ಹತ್ತಿರವಿಲ್ಲ. ಈಕೆಯ ನಿರ್ಲಕ್ಷ್ಯದಿಂದ ಗೆದ್ದಲು ಹತ್ತಿ ಹಾಳಾಗಿವೆ. ಹೀಗಾಗಿ ಸರಕಾರದ ಪಿಂಚಣಿ ಸಿಗುತ್ತದೆಂಬ ಆಶೆಯೂ ಆಕೆಗಿಲ್ಲ. ಒಂದು ಕಾಲಕ್ಕ ಊರೂರು ತಿರುಗಾಡಿ ಗೀಗೀ ಕಲೆಯನ್ನು ಬೆಳೆಸಿದಾಕೆ. ನೂರಾರು ಕಷ್ಟಗಳನ್ನು ನುಂಗಿ ಜನರಿಗೆ ಸಂತೋಷ ಉಂಟು ಮಾಡಿದಾಕೆ. ಈಗ ಅಂಬವ್ವನೆಂದು ಗುರುತು ಹಿಡಿಯಲಾರದಷ್ಟು ನಲುಗಿ ಹೋಗಿದ್ದಾಳೆ.

# ಮಹಿಳಾ ಅಭಿವ್ಯಕ್ತಿ : ಅಂದು

## ೧. ಆಹತ ಹೃದಯ*

ಗಿರಿಬಾಲೆ

(ಸಣ್ಣ ಕಥೆಗಳ ರಾಣಿಯೆಂದು ಹೆಸರಾದ ಯು. ಸರಸ್ವತಿ ಗಿರಿಬಾಲೆ ಅವರು 'ಗಿರಿಬಾಲೆ' ಎಂಬ ಕಾವ್ಯನಾಮದಿಂದಲೇ ಸಾಹಿತ್ಯ ಪರಂಪರೆಯಲ್ಲಿ ಹೆಸರಾದವರು. ತಮ್ಮ ೧೫ನೇ ವಯಸ್ಸಿಗೆ ೫೧ ವಯಸ್ಸಿನ ರಾಯಶಾಸ್ತ್ರಿ ರಾಜವಾಡೆಯವರೊಂದಿಗೆ ಮದುವೆಯಾಗಿದ್ದ ಗಿರಿಬಾಲೆ ಅವರು ತಮ್ಮ ಹೆಣ್ಣು ಬದುಕಿನ ಎಲ್ಲಾ ಇಕ್ಕಟ್ಟು ಸವಾಲುಗಳನ್ನು ಕಥನ ಮಾಡಿದ್ದಾರೆ. ಸ್ಥಾಪಿತ ಮರೀಯವಾದ ಧರ್ಮ ಮತ್ತು ಪಿತೃಪ್ರಧಾನ ವ್ಯವಸ್ಥೆಗಳು ಹೇಗೆ ಹೆಣ್ಣನ್ನು ಶೋಷಿಸುತ್ತಾ ಅವಳ ಬದುಕನ್ನು ನಿರ್ನಾಮ ಮಾಡಿವೆ ಎಂಬುದನ್ನು ಇಲ್ಲಿನ ಎರಡೂ ಕತೆಗಳು ಅಭಿವ್ಯಕ್ತಿಸುತ್ತವೆ. ಅವರು ತಮ್ಮ ಬರೆವಣಿಗೆಯನ್ನು ಆರಂಭಿಸಿದ ಕಾಲಾವಧಿಯಲ್ಲಿದ್ದ ಅಬಲಾ ಸ್ತ್ರೀಯರ ಸಮಸ್ಯೆ ಹಾಗೂ ವಿಧವಾಶ್ರಮಗಳ ಹೆಸರಿನಲ್ಲಿ ನಡೆಯುತ್ತಿದ್ದ ಪರಿತ್ಯಕ್ತ ಮಹಿಳೆಯರ ಸಮಸ್ಯೆಗಳನ್ನು ಕುರಿತ ಅನುಭವ ಲೋಕವನ್ನು ಇಲ್ಲಿನ 'ಆಹತ ಹೃದಯ' ಮತ್ತು 'ಅವಳ ಉದ್ಧಾರ' ಕತೆಗಳು ಕಟ್ಟಿಕೊಡುತ್ತವೆ.-ಸಂ)

"ಬಾಲ ಬ್ರಹ್ಮಚಾರಿ ಬ್ರಹ್ಮಾನಂದ ಯೋಗಿಗಳ ಕೊಲೆಯಾಯಿತು" - ಎಂಬ ಸಮಾಚಾರವು ಊರಲ್ಲಿ ಕಾಡುಕಿಚ್ಚಿನಂತೆ ಹಬ್ಬಿತು!

ಜನರೆಲ್ಲ ಹಾರಿಬಿದ್ದು, ಆಶ್ಚರ್ಯದಿಂದ ಬಾಯಲ್ಲಿ ಬೆಟ್ಟನ್ನು ಹಾಕಿ, ಯೋಗಿಗಳ ಮಠದತ್ತ ಓಡತೊಡಗಿದರು. ಅವರ ಶಿಷ್ಯವೃಂದದವರಂತೂ "ಲೋಕಕ್ಕೇನೋ ಕೇಡುಗಾಲ ಬರಲಿದೆ" ಎಂದು ಭೀತಿಗೊಂಡವರಾಗಿ ಮೈ ಬೆವರನ್ನು ಸುರಿಸುತ್ತ, ಹರಿನಾಮಸ್ಮರಣೆಯೊಡನೆ, "ಗುರುಗಳು ಪವಾಡ ಮಾಡುತ್ತಿಲ್ಲವಷ್ಟೇ?" ಎಂದು ತರ್ಕಿಸುತ್ತ ಮಠವನ್ನಡರುತ್ತಿದ್ದರು. ಎದ್ದು, ಬಿದ್ದು, ಎಲ್ಲರೂ ನಿಜಾಂಶವನ್ನು ತಿಳಿಯಲು ಓಡುತ್ತಿದ್ದರೇ ವಿನಹ ಯಾರಿಗೂ ಆ ಸಮಾಚಾರವು ನಿಜವಿದ್ದೀತೆಂಬ ಭರವಸೆಯಿದ್ದಿಲ್ಲ.

ಯೋಗಿಗಳ ಮಹಿಮೆಯೆಂದರೇನು! ಅವರ ಕೊಲೆಯಾಗುವುದೆಂದರೇನು! ಅಂತೂ ಮಠಕ್ಕೆ ಹೋದರೆ "ಹೌದು; ಇಲ್ಲ" ಎಂಬುದರ ಇತ್ಯರ್ಥವಾಗುವುದಲ್ಲಾ! ಅದಕ್ಕಾಗಿಯೇ ಜನರು ಧಾವಿಸುತ್ತಿದ್ದರು.

ಮಠವನ್ನು ತಲುಪಿ ನೋಡುವಾಗ, ಹೆಬ್ಬಾಗಿಲಲ್ಲಿ ಜನರು ಕಿಕ್ಕಿರಿದಿದ್ದರು. ಯಾವ ಮಠದ ಮುಂದೆ, ಹಾದು ಹೋಗಬೇಕಾದರೂ, ಕೈಯಲ್ಲಿ ಬಿಡಿಸಿದ್ದ ಕೊಡೆಯಿದ್ದರೆ ಮಡಚಿ, ಹೆಗಲಲ್ಲಿರುವ ಶಾಲನ್ನು ಕಳಚಿ ಕಂಕುಳಲ್ಲಿ ತುರುಕಿ, ಕಾಲಿನ ಜೋಡುಗಳನ್ನು ಕೈಯಲ್ಲಿ ಹಿಡಿದು, ಜನ ಹಾದು ಹೋಗಿ ತಮ್ಮ ಭಕ್ತಿ ವಿಶ್ವಾಸಗಳನ್ನು ಪ್ರದರ್ಶಿಸಬೇಕಾಗಿತ್ತೋ, ಯಾವ ಮಠದ ಮುಂದೆ ಅವರ್ಣರು ಹೋಗಲು ಅನರ್ಹರಾಗಿದ್ದರೋ, ಯಾವ ಮಠದ ಮುಂದೆ ವಾಹನಾದಿಗಳ ಮೇಲೆ ಹೋಗಲು ಜನರು ಭಯಪಡುತ್ತಿದ್ದರೋ, ಇಂದು, ಅದೇ ಮಠದ ಮುಂದೆ, ಜಾತಿಮತ ಭೇದಗಳನ್ನು ಮರೆತು, ವಿವಿಧ ಉಡುಪುಗಳನ್ನು ಧರಿಸಿ ಜನರು ಗುಂಪು ಕೂಡಿದ್ದರು. ನಾಲ್ಕೈದು ಕಾರುಗಳೂ ನಿಂತಿದ್ದವು. ಗೊಂದಲಗೊಂಡ ಜನರು, ತಾವು ಮಠದ ಪ್ರಾಂಗಣದಲ್ಲಿ ನಿಂತಿರುವೆವೆಂಬುದರ ಪರಿವೆಯಿಲ್ಲದೆ, ಬಾಯಲ್ಲಿದ್ದ ತಾಂಬೂಲವನ್ನು ಕೈಯ್ಯಲ್ಲಿದ್ದ ಬೀಡಿ-ಸಿಗರೇಟುಗಳನ್ನು ಅಲ್ಲಲ್ಲೇ ಬಿಸುಟರು.

ಜನರಿಗೆ ಬೇಕಾದುದೀಗ ಒಂದೇ ವಿಷಯ. "ಯೋಗಿಗಳು ನಿಜವಾಗಿಯೂ ಕೊಲೆ ಯಾದರೆ?" ಎಂಬುದನ್ನು ತಿಳಿಯುವ ಲವಲವಿಕೆ. ಒಂದು ವೇಳೆ ಹೌದಾದರೆ, ಎಲ್ಲರಿಗೂ ಒಮ್ಮೆಗೇ ಒಳಕ್ಕೆ ನುಗ್ಗಿ, ಯೋಗಿಗಳ ಕಳೇಬರವನ್ನು ನೋಡಬೇಕೆಂಬ ಅತ್ಯುತ್ಕಟವಾದ ಇಚ್ಛೆ. ಅದರಿಂದಾಗಿ ಅಲ್ಲಿಯ ನುಗ್ಗಾಟಕ್ಕೆ ಸಿಕ್ಕಿ ಮೈ ಪುಡಿಯಾದರೂ ಜನರಿಗೆ ಲಕ್ಷ್ಯವಿಲ್ಲದೆ ಹೋಯಿತು.

೨

ಇದ್ದಕ್ಕಿದ್ದಂತೆಯೇ "ಸರಿಯಿರಿ, ದಾರಿಬಿಡಿ" ಎಂಬ ಅಧಿಕಾರವಾಣಿ ಕೇಳಿಸಿತು.

ಜನರು ಬೆಚ್ಚಿ ನೋಡುತ್ತಾರೆ - ಪೋಲೀಸ್ ಸೂಪರಿಂಟೆಂಡೆಂಟರು! ಜನಸಂದಣಿಯಲ್ಲಿ ನುಗ್ಗುತ್ತ, ಒಳಗೆ ಧಾವಿಸಿ ಹೋಗಲು ಪ್ರಯತ್ನ ಪಡುತ್ತಿದ್ದರು.

ಒಮ್ಮೆಗೆ, ಜನರ ಗುಲ್ಲು ಅಡಗಿ ಸೂಜಿ ಚೆಲ್ಲಿದರೂ ಕೇಳಿಸುವಂತಾಯಿತು! ಒಳಕ್ಕೆ ಹೋದ ಪೋಲೀಸ್ ಅಧಿಕಾರಿಗಳು ತಮ್ಮನ್ನನುಸರಿಸಿ ಬಂದ ಪೋಲೀಸರನ್ನು ಕುರಿತು, ಶವದ ಸುತ್ತ ಗುಂಪು ಕೂಡಿದ್ದ ಶಿಷ್ಯ, ಭಕ್ತ ವೃಂದವನ್ನು ಚದರಿಸುವಂತೆ ಆಜ್ಞಾಪಿಸಿದರು. ಅನಂತರ ಶವಕ್ಕೆ ಹೊದೆಸಿದ್ದ ಬಟ್ಟೆಯನ್ನು ತೆಗೆದರು.

ಅವರ ಕೈ ನಡುಗಿ ಹೋಯಿತು! ನೋಡುತ್ತಾರೆ-ಯೋಗಿಗಳ ಎದೆಯ ಮೇಲೆ ನಾಲ್ಕಾರು ಇರಿತಗಳಿದ್ದವು. ಗುಂಡಿಗೆಯು ಉಪಯೋಗಿಸಲ್ಪಟ್ಟ ಆಯುಧದ ಆಘಾತದಿಂದಾಗಿ ಆಳವಾಗಿ ತೋಡಲ್ಪಟ್ಟದ್ದಿತು! ಬಲಗೈ ಉದ್ದಕ್ಕು ಸೀಳಲ್ಪಟ್ಟದ್ದಿತು! ಹರಿದ ರಕ್ತದಿಂದಾಗಿ ಯೋಗಿಗಳ ಕಾವಿವಸ್ತ್ರವು ತೊಯ್ದು, ಒಣಗಿದ್ದುದರಿಂದ ರೊಟ್ಟೆಯಂತಾಗಿದ್ದಿತು. ಶವದ ಮುಖ ಭಯಂಕರವಾಗಿ ನೋಡಲು ಅಸಹ್ಯವುಂಟುಮಾಡುತ್ತಿದ್ದಿತು.

ಅಧಿಕಾರಿಗಳು ಒಮ್ಮೆ ಸುತ್ತಲೂ ನೋಡಿದರು. ಎಲ್ಲರ ಮುಖದಲ್ಲೂ ಭಯ ಮಿಶ್ರಿತ ವಾದ ಚಿಹ್ನೆ ಮೂಡಿದ್ದಿತು. ತಮ್ಮ ಪುಸ್ತಕದಲ್ಲಿ ಏನನ್ನೋ ಬರೆದ ಅನಂತರ, ಅವರು, ಅಲ್ಲಿದ್ದವರಲ್ಲಿ ಕೆಲ ಸಂಗತಿಗಳನ್ನು ಕೇಳಿದರು.

‘ಮಠದ ಆಡಳಿತೆದಾರರಲ್ಲಿ ಕೆಲ ವಿಷಯ ಕೇಳಬೇಕಾಗಿದೆ’

‘ನಾನು ಇಲ್ಲೇ ಇರುತ್ತೇನೆ ಮಹಾಸ್ವಾಮಿ’

‘ಈ ಘಟನೆ ಸಾಧಾರಣ ಎಷ್ಟೊತ್ತಿಗೆ ನಡೆಯಿತು?’

‘ನಮಗೆ ತಿಳಿದುದು ಪ್ರಾತಃಕಾಲ ಏಳು ಘಂಟೆಗೆ’

‘ಅಷ್ಟರವರೆಗೆ ನಿಮಗೆ ಕೊಲೆಯ ವಿಚಾರ ತಿಳಿದಿಲ್ಲವೆ?’

‘ಇಲ್ಲ ಸ್ವಾಮಿ’

‘ಏಳು ಘಂಟೆಯವರೆಗೆ ಅವರನ್ನು ಕಾಣದೆ, ನೀವು ಹುಡುಕುವ ಪ್ರಯತ್ನ ಮಾಡಲಿಲ್ಲವೆ?’

‘ಇಲ್ಲ; ಯಾಕೆಂದರೆ, ದೇಹದಲ್ಲಿ ಅಸೌಖ್ಯವಿರುವಾಗ, ಏಳು ಘಂಟೆಗೂ ಹೆಚ್ಚಿನ ಸಮಯದವರೆಗೆ ಅವರು ವಿಶ್ರಾಂತಿ ತೆಗೆದುಕೊಳ್ಳುವುದುಂಟು.’

‘ಮೊದಲು ಯಾರಿಗೆ ಈ ವಿಷಯ ತಿಳಿಯಿತು?

‘ಪುಟ್ಟಣ್ಣ ಶ್ಯಾನುಭಾಗರಿಗೆ. ಅವರು ಇಲ್ಲೇ ಇದ್ದಾರೆ’

“ಓಹೋ ಪುಟ್ಟಣ್ಣ ಶ್ಯಾನುಭಾಗರು!. ನೀವು ಮೊದಲು ಯೋಗಿಗಳನ್ನು ನೋಡಲು ಇಷ್ಟಪಟ್ಟುದೇಕೆ?”

ಪುಟ್ಟಣ್ಣ ಶ್ಯಾನುಭಾಗರ ಕಣ್ಣುಗಳಿಂದ ನೀರು ಗಳಗಳನೆ ಸುರಿಯಲಾರಂಭಿಸಿತು. ಮೈ ಮೊದಲೇ ಮುಳ್ಳೆದ್ದು ನಡುಗುತಿದ್ದಿತು. ಕೀರಲು ಧ್ವನಿಯಿಂದ ಅವರೆಂದರು.

‘ಮಹಾಸ್ವಾಮಿ! ನಾನು ಬಡವ! ನನಗೇನೂ ತಿಳಿಯದು! ನಾನು ನಿತ್ಯದಂತೆ ಗುರುಗಳನ್ನು ಎಬ್ಬಿಸಲು ಹೋದಾಗ, ಅವರನ್ನು ಕಾಣಲಿಲ್ಲ. ‘ಬೇಗ ಎದ್ದಿರಬೇಕು; ಪ್ರಮಾದವಾಯಿತು; ನಾನು ಬರಲು ಹೊತ್ತಾಯಿತೇನೋ, ಪ್ರಾತಿರ್ವಿಧಿಗಳಿಗಾಗಿ ತೋಟಕ್ಕೆ ಹೋಗಿರಬೇಕು’ ಎಂದು ಅಂಜಿ ಕ್ಷಣ ಹೊತ್ತು ಅಲ್ಲೇ ನಿಂತೆ!’ -

‘ನೀವು ಯೋಗಿಗಳನ್ನು ಈ ಸ್ಥಿತಿಯಲ್ಲಿ ನೋಡುವ ಮೊದಲು, ಏನೂ ಸಂದೇಹ ಗೊಂಡಿಲ್ಲವೆ?’

‘ಪಾದಸಾಕ್ಷಿ ಮಹಾಸ್ವಾಮಿ! ಸ್ವಪ್ನದಲ್ಲೂ, ಎಂದಾದರೂ ಈ ಮಠದಲ್ಲಿ ಇಂತಹ ಸಂದರ್ಭ ಬಂದೀತೆಂದು ಊಹಿಸಿರಲಿಲ್ಲ!. ಯಾವ ಮಠದಲ್ಲಿ ಪರಂಧಾಮನ ಪೀಠ ಸ್ಥಾಪನೆಯಾಗಿದೆಯೋ, ಅದರಲ್ಲಿ, ಅದೂ ಕೂಡ, ಮಠಾಧಿಪತಿಗಳ ಕೊಲೆಯೆಂದರೆ, ನನಗೇಕೋ ಭ್ರಮೆ ಹಿಡಿದುಹೋದೆ!’

‘ಆ ವರ್ಣನೆಗಳೆಲ್ಲಾ ಆಮೇಲಾಗಲಿ. ಕೇಳುವ ಪ್ರಶ್ನೆಗೆ ಸರಿಯಾದ ಉತ್ತರ ನನಗೀಗ ಬೇಕಾಗಿರುವುದು. ಅವರನ್ನು ಕಾಣದೆ, ನಿಮಗೆ ಯಾವ ಸಂದೇಹವೂ ಉಂಟಾಗಲಿಲ್ಲವಷ್ಟೆ?’

‘ಅಯ್ಯೋ ಈಗಲೂ ಯಾವ ಸಂದೇಹವೂ ಇಲ್ಲವಲ್ಲಾ! ಇದೇನೋ ಮಾಯೆಯೆಂದೇ ನನ್ನ ಕಲ್ಪನೆ’

‘ನೀವು ಅವರನ್ನು ನಿಶ್ಚಿತ ಸ್ಥಳದಲ್ಲಿ ಕಾಣದೆ ಏನು ಮಾಡಿದಿರಿ!’

‘ಮೊದಲೇ ಹೇಳಿದೆನಲ್ಲಾ ಕ್ಷಣ ಹೊತ್ತು ಸ್ತಬ್ಧನಾಗಿ ನಿಂತೇ ಇದ್ದೆ. ಅನಂತರ ಕೆರೆಯಲ್ಲಿರಬಹುದೆಂದು ತೋಟಕ್ಕೋಡಿದೆ’

‘ಕೆರೆಯ ಪಕ್ಕದಲ್ಲಿರಲಿಲ್ಲ. ತುಲಸೀ ತೋಟಕ್ಕೋಡಿದೆ. ಅಲ್ಲಿ ........’

‘ಅಲ್ಲಿ ನೋಡಿದಿರಿ, ನೋಡಿದ ಕೂಡಲೇ ಏನು ಮಾಡಿದಿರಿ?’

‘ಇದೆಂಥ ಪ್ರಶ್ನೆ! ನನ್ನ ಪಂಚಪ್ರಾಣಗಳೂ ಹಾರಿದವು! ಕಣ್ಣುಗಳನ್ನು ನಂಬಲೇ ಇಲ್ಲ! ದಂಗುಬಡಿದು ಕ್ಷಣ ಹೊತ್ತು. ಕಣ್ಣುಜ್ಜುತ್ತ ನಿಂತೆ. ತಲೆಸುತ್ತಿ ಬವಳಿ ಬಂದಂತಾಯಿತು..... ಗಟ್ಟಿಯಾಗಿ ಅರಿಚಿಕೊಂಡೆ!’

‘ಆಮೇಲೆ?’

‘ಆಮೇಲೆ ಒಳಗಿನ ಜನರು ಒಬ್ಬೊಬ್ಬರಾಗಿ ಓಡಿಬಂದರು. ಅನಂತರ ಒಳಕ್ಕೆ ಎತ್ತಿದೆವು’.

‘ಯಾವ ಸ್ಥಿತಿಯಲ್ಲಿ ದೇಹ ಬಿದ್ದಿತ್ತು?’

‘ಈಗ ಮಲಗಿರುವಂತೆಯೆ, ಆದರೆ ಕಾಲುಗಳು ಮಾತ್ರ ಅಸ್ತವ್ಯಸ್ತವಾಗಿದ್ದವು’

‘ಆ ಸ್ಥಳವನ್ನು ತೋರಿಸಿರಿ’

- ಎಂದಂತೆ ಅಧಿಕಾರಿಗಳು ಸರಿದರು. ಒಬ್ಬಿಬ್ಬ ಜವಾನರನ್ನು ತನ್ನನ್ನನುಸರಿಸುವಂತೆ ಹೇಳಿ, ಮತ್ತುಳಿದವರನ್ನು ಅಲ್ಲೇ ಕಾವಲಿರುವಂತೆ ಆಜ್ಞಾಪಿಸಿದರು.

ತೋಟಕ್ಕೆ ಹೋಗಿ, ಕುರಿತ ಸ್ಥಳವನ್ನು ಸೂಕ್ಷ್ಮವಾಗಿ ಅವಲೋಕಿಸಿ ಪುಸ್ತಕದಲ್ಲಿ ಬೇಕಾದ ವಿಷಯಗಳನ್ನು ನಮೂದಿಸಿಕೊಂಡ ಮೇಲೆ, ಪುನಃ ಏನೇನೋ ಕೇಳಿ ತಿಳಿದು ಅದನ್ನು ಬರೆದುಕೊಂಡು, ಆ ಸ್ಥಳವನ್ನೊಮ್ಮೆ ಸ್ಥೂಲವಾಗಿ ದಿಟ್ಟಿಸಿದರು.

ಅಡಿಕೆ, ತೆಂಗು, ಮಾವು ಮುಂತಾದ ಮರಗಳು ಒತ್ತೊತ್ತಾಗಿ ದೂರದಲ್ಲಿ ಬೆಳೆದಿದ್ದವು. ಸಮೀಪದಲ್ಲೆ ಕೆಲ ಹೂವಿನ ಗಿಡಗಳು, ತುಲಸೀ ಗಿಡಗಳು, ನೆಲದ ಮೇಲೆ ಹಸಿರು ಹುಲ್ಲು ದಟ್ಟವಾಗಿ ಬೆಳೆದು, ನಡೆದವರ ಹೆಜ್ಜೆಯ ಗುರುತುಗಳನ್ನು ಎತ್ತಿ ಕಾಣಿಸುವಂತೆ ಮಾಡಿತ್ತು. ಕಂದು ಬಣ್ಣಕ್ಕೆ ತಿರುಗಿದ ಹುಲ್ಲಿನ ಸ್ಥಳದಲ್ಲೇ ಶವವಿದ್ದುದಾಗಿ ಶ್ಯಾನುಭಾಗರೂ ಮತ್ತು ನೋಡಿದವರೂ ಹೇಳಿದರು. ಅಲ್ಲಿಯ ಕೆಲಸ ತೀರಿದ ಬಳಿಕ ಶವದ ಬಳಿಗೆ ಬಂದರು. ತಿರುಗಿ ವಿಚಾರಣೆಗೆ ಪ್ರಾರಂಭವಾಯಿತು.

೩

‘ಶವವನ್ನು ಇಲ್ಲಿಗೆ ಸಾಗಿಸಿದ ಅನಂತರ ಏನಾದರೂ ಕಾರಣ ತಿಳಿಯುವ ವಿಚಾರಣೆ ಮಾಡಿದರೆ?’

‘ನಮಗೆ ಏನು ಮಾಡುವುದಕ್ಕೂ ದಿಕ್ಕು ತೋಚಲಿಲ್ಲ. ಠಾಣೆಗೆ ಆಳುಗಳನ್ನು ಕಳುಹಿಸಿದೆವು. ಅದು ಹೇಗೋ ಊರೆಲ್ಲ ವಿಷಯ ಹಬ್ಬಿ, ಜನರು ನೆರೆದು ಗಲಭೆ ಮಾಡುತ್ತಿರುವುದನ್ನು ನೋಡಿಯೇ ಇರುತ್ತೀರಿ. ಎಷ್ಟು ವಿಚಾರ ಮಾಡಿದರೂ ನಮಗೆ ಕಾರಣವೇ ಹೊಳೆಯುತ್ತಿಲ್ಲ!’

‘ಯಾರಾದರೂ - ಶತ್ರುಗಳು?’

‘ಸ್ವಾಮಿ, ತಮಗೆ ಯೋಗಿಗಳ ವಿಷಯ ಏನು ತಿಳಿದಿದೆ! ಬೇಸರ ಮಾಡಬೇಡಿ. ಅವರೆಂದರೇನು! ಶತ್ರುಗಳೆಂದರೇನು! ಇಲ್ಲಿ ನೆರೆದಿರುವ ಜನರಲ್ಲಿ, ಸ್ವಲ್ಪ ಮಹಾ ಪಾದಗಳ

ಮೇಲೆ ಇರುವ ಅವರ ಭಾವನೆಗಳನ್ನು ಕೇಳಿ ತಿಳಿಯಬಹುದು. ಯಾವ ಜಾತಿಯವರೇ ಇರಲಿ, ಯಾವ ಮತಸ್ಥರೇ ಇರಲಿ, ಏಕ ಕಂಠದಿಂದ ಇವರನ್ನು ಹೊಗಳದಿರಲಾರರು. ತ್ಯಾಗಿಗಳಿಗೆ ಶತ್ರುಗಳೆಂದರೇನು!'

'ಆದರೂ, ಗುಪ್ತ ಶತ್ರುಗಳಿಲ್ಲದಿರುತ್ತಾರೆಯೆ? ಪುಣ್ಯದ ಜತೆಗೆ ಪಾಪವೂ ಹುಟ್ಟಿದ್ದಲ್ಲವೆ 'ಹೇಗಿರಬಹುದು' ಎಂದು ನಿಮ್ಮಲ್ಲಾರಾದರೂ, ಏನಾದರೂ ತರ್ಕಿಸಿದ್ದರೆ ತಿಳಿಸಬೇಕು...... ಅಂದರೆ ನಮ್ಮ ಕೆಲಸವು ಸುಲಭವಾಗಬಹುದು'.

'ವರ್ಷಗಟ್ಟಲೆ ಕುಳಿತು ತರ್ಕಿಸಿದರೂ ನಮಗೆ ಸಂದೇಹ ಬರುವ ವ್ಯಕ್ತಿಯೇ ಇಲ್ಲ. ದಯಾಮಯರಾದ, ಧರ್ಮ ಮೂರ್ತಿಗಳ ಮೇಲೆ ಯಾರು ತಾನೆ ಕೈಮಾಡಲು ಧೈರ್ಯಪಟ್ಟಾರು? ಕಾರಣವಾದರೂ ಏನು?'

'ಅಂದ ಮೇಲೆ ಯೋಗಿಗಳೇ ಈ ಅರ್ಥವಿಲ್ಲದ ಬಾಳಿನ-ಮೇಲಿನ ವೈರಾಗ್ಯದಿಂದ ಆತ್ಮಹತ್ಯೆ ಮಾಡಿಕೊಂಡಿರಬಹುದೆ?'

'ಶಾಂತಂ. ಪಾಪಂ! ಆತ್ಮಹತ್ಯೆ ಮಹಾಪಾತಕವೆಂದು ಸಾಮಾನ್ಯರಿಗೂ ತಿಳಿದಿದೆ. ಇವರಂತೂ ಜ್ಞಾನದ ನಿಧಿಯು! ದೇವರ ಸಾಕ್ಷತ್ ಅವತಾರವು! ಯೋಗಬಲದಿಂದ ದೇಹವನ್ನು ತ್ಯಜಿಸುವ ಶಕ್ತಿಯುಳ್ಳ ಮಹಾತ್ಮರು! ಎಲ್ಲಾದರೂ ಆತ್ಮಹತ್ಯೆಯನ್ನು ಸ್ವಪ್ನದಲ್ಲಾದರೂ ಎಣಿಸಿಯಾರೆ?'

'ಅಸಂಭವ! ಅಸಂಭವ!'

ಅಲ್ಲಿ ನೆರೆದಿದ್ದವರೆಲ್ಲ ಘೋಷಿಸಿದರು.

'ಅಂತೂ ಹೇಗೂ ಒಬ್ಬರು ಕಾರಣವಾಗಿರಲೇಬೇಕು. ನೀವು ಹೇಳುವುದನ್ನೆಲ್ಲ ಕೇಳುವು ದಾದರೆ ಯೋಗಿಗಳ ಕೊಲೆಯೇ ಆಗಿಲ್ಲವೆಂದು ತಿಳಿಯಬೇಕಾಗುತ್ತದಷ್ಟೆ!'

'ಏನು ವಿಚಿತ್ರವೋ ತಿಳಿಯಲಾಗುವುದಿಲ್ಲ! ಮೇಲೂ ಮಠದೊಳಕ್ಕೆ ಯಾರು ತಾನೆ ಹೇಗೆ ತಾನೆ ಪ್ರವೇಶಿಸಲು ಸಾಧ್ಯ?'

'ಮಠದೊಳಗಿನವರೇ ಆಗಿರಲಾರರೇಕೆ?'

ಈ ಪ್ರಶ್ನೆಯನ್ನು ಕೇಳುತ್ತಲೆ ಅಲ್ಲಿದ್ದವರೆಲ್ಲರ ಮುಖವೂ ಬೀಳುಪೇರಿತು!

'ನಾವು ಹಿಂದೂಗಳು ಸ್ವಾಮಿ! ಗುರುದ್ರೋಹವನ್ನು ಮಾಡುವ ಚಂಡಾಲರು ನಮ್ಮಲಿಲ್ಲ!'

- ಎಂದೆಲ್ಲರೂ ಏಕವಾಗಿ ಕೂಗಿದರು.

'ನಿನ್ನೆ ಮಠದೊಳಗಿದ್ದವರೆಲ್ಲ ಅತ್ತ ಸಾಲಾಗಿ ನಿಲ್ಲಿರಿ!'

- ಎಂಬ ಆಜ್ಞೆಯಾಗುತ್ತಲೆ ಸ್ವಲ್ಪ ಹೊತ್ತು ಕಲರವವುಂಟಾಯಿತು. ಆದರೂ ಹತ್ತಿಪ್ಪತ್ತು ಮಂದಿ ಪ್ರಯಾಸದಿಂದಲೇ, ತಾತಮುತ್ತಾತಂದಿರೆಲ್ಲರ ಸ್ಮರಣೆ ಮಾಡುತ್ತ ಬೇರೆಯಾಗಿ ನಿಂತರು.

ಸೂಪರಿಂಡೆಂಟರು ಅವರನ್ನೆಲ್ಲ ತಮಗೆ ಬೇಕಾದ ರೀತಿಯಿಂದ ಪ್ರಶ್ನೆಗೆ ವಿಷಯಗಳನ್ನು ತಿಳಿದು ಗುರುತು ಮಾಡಿಕೊಂಡರು. ಕೊನೆಗೆ ಮುಖ ಸಣ್ಣದು ಮಾಡಿಕೊಳ್ಳುತ್ತ -

'ಜನ್ಮದಲ್ಲಿ ಪಾಠ ಕಲಿಸುವ ಕೇಸು!" ಎಂದು ನಿಟ್ಟುಸಿರಿದರು.

ಜನರು, ಇನ್ನು ಒಳಕ್ಕೆ ನುಗ್ಗುವುದು ಹೆಚ್ಚುತ್ತಲೇ ಇತ್ತು. ಪೋಲೀಸರ ಬೆದರಿಕೆಯ ಕೂಗಾಟವೂ ಅಂತೆಯೇ. ಕೊನೆಗೆ ಸೂಪರಿಂಡೆಂಟರ ಕಟ್ಟಳೆ ಮೇರೆಗೆ ಎಲ್ಲರನ್ನು ಹೊರಕ್ಕೆ ಅಟ್ಟಿ, ಪೋಲೀಸನೊಬ್ಬನು ಹೆಬ್ಬಾಗಿಲಲ್ಲಿ ನಿಂತು, ಗಟ್ಟಿಯಾಗಿ -

'ಯೋಗಿಗಳು ನಿಜವಾಗಿಯೂ ಕತ್ತಿ ತಿವಿತಗಳಿಂದ ಕೊಲೆಯಾಗಿದ್ದಾರೆ!' ಎಂದು ಕಿರಿಚಿ ಜನರ ತಳಮಳಿಸುವ ಮನಸ್ಸಿನಲ್ಲಿ ತರ್ಕದ ಬುಗ್ಗೆಯನ್ನೆಬ್ಬಿಸಿದನು.

ಊರೆಲ್ಲ ಶೋಕ ಸಾಗರದಲ್ಲಿ ಮುಳುಗಿತು! ಯೋಗಿಗಳಿಂದ ಅನೇಕ ವಿಧವಾಗಿ ಉಪಕೃತ ರಾದ ಬಡವರು ತಮ್ಮ ಭಾಗ್ಯ ನಿಧಿಯು ಅಂತಹ ಘೋರ ಮತ್ತು ಹೀನ ರೂಪದಿಂದ ಕೊನೆಗೊಂಡುದನ್ನು ಕೇಳಿ ಪಟ್ಟ ದುಃಖ; ಅವರ ಕೈಕೆಳಗೆ ಜ್ಞಾನಾರ್ಜನೆ ಮಾಡಿದ ಮತ್ತು ಮಾಡುತ್ತಿದ್ದ ಶಿಷ್ಯವೃಂದದ ದುಃಖ, ಆಶ್ರಿತರ ದುಃಖ ಇವೆಲ್ಲ ಹೇಳ ತೀರದು. ಕೇವಲ ಉಪಕೃತರು ಮಾತ್ರವಲ್ಲ. ಎಲ್ಲರೂ ಯೋಗಿಗಳ ಅನೇಕ ಅಸದೃಶವಾದ ಗುಣಗಳನ್ನು ಹೊಗಳಿ ಹೊಗಳಿ ಪಟ್ಟ ಶೋಕದ ಭರದಿಂದ, ನಿಟ್ಟುಸಿರುಗಳ ಬೇಗೆಯಿಂದ ವಾಯು ಮಂಡಲವೇ ಕಾದುಹೋಯಿತು.

ಕೊಲೆಗಡುಕರಿಟ್ಟ ಶಾಪಗಳಿಗೆ ತುದಿಮೊದಲಿಲ್ಲ. ಅದೆಷ್ಟು ಪಾಪಗಳು ಒಂದುಗೂಡಿ ಆ ಕೊಲೆಗಡುಕರ ರೂಪವಾಗಿ ಬಂದಿರಬೇಕೋ ಎಂದೂ ಯಾರಿಂದಲೂ ತರ್ಕಿಸಿ ಬಗೆಹರಿಯ ದಂತಾಯಿತು. ಬಾಲ್ಯದಿಂದಲೂ ತದೇಕ ಧ್ಯಾನ್ಯದಿಂದ ದೇವರನ್ನು ಅರ್ಚಿಸಿ, ದೇವರಿಟ್ಟ ಕಟ್ಟಳೆಗಳಿಗೆ ಚ್ಯುತಿಯಿಲ್ಲದಂತೆ ವರ್ತಿಸಿ, ಚಿಗುರುತಿರುವ ನಾಸ್ತಿಕತನವನ್ನು ಏಳಗೊಡದೆ ತಡೆದು, ಧರ್ಮ ಸೇವೆಯನ್ನು ನಿರಾತಂಕವಾಗಿ ಮಾಡುತ್ತಿದ್ದ ಧರ್ಮ ಪ್ರಚಾರಕರ ಇಂತಹ ಅವಮಾನ! ಕಲಿಕಾಲ ಅಂತ್ಯವಾಗುವುದರಲ್ಲಿ ಹೆಚ್ಚು ಸಮಯವಿಲ್ಲವೆಂದು ಎಲ್ಲರೂ ಏಕಭಾವದಿಂದ ತೀರ್ಮಾನಿಸಿದರು.

ಚಿಕ್ಕ ಮಕ್ಕಳೂ ಕೂಡ ಅತಿ ದುಃಖದಿಂದ 'ಅಮ್ಮ, ಎರಡೆರಡು ಸೌಟು ತೀರ್ಥ ಕೊಡುತ್ತಿದ್ದರಲ್ಲ ಅವರು ಇನ್ನಿಲ್ಲವೆ?' ಎಂದು ಕೇಳಿ ಕೇಳಿ ಮರುಗಿದವು. ಹೆಚ್ಚೇಕೆ, ಊರಿನಲ್ಲಿ ನಲಿಯುತ್ತಿದ್ದ ಆನಂದಲಕ್ಷ್ಮಿಯು ಅಂದು ಯಾವ ಮೂಲೆಗೋ ಹೋಗಿ ಅವಿತು ಕೊಂಡಂತಿತ್ತು!

ಊರವರ ಪರಿಸ್ಥಿತಿ ಇಂತಿರಲು ಶವದ ಬಳಿಯಲ್ಲೇ ಗಸ್ತು ಹೊಡೆಯುತ್ತಿದ್ದ ಪೋಲೀಸರ ಮತ್ತು ಅಧಿಕಾರಿಗಳ ತಲೆಗಳು ಮಾತ್ರ ಬೇರಾವ ವಿಚಾರಗಳಲ್ಲೂ ಇಲ್ಲದೆ 'ಮುಂದೇನು ಮಾಡಬೇಕು?' ಎಂದು ತಿಳಿಯದವರಾಗಿ ಕಂಗಾಲ ಸ್ಥಿತಿಯಲ್ಲಿದ್ದರು.

ತಟ್ಟನೆ ಸೂಪರಿಂಟೆಂಡೆಂಟರೆಂದರು -

'ಯಾವ ಅಭ್ಯಂತರವನ್ನು ಹೇಳದೆ ನನಗೆ ಮಠದ ಮೂಲೆ ಮೂಲೆಗಳನ್ನು ಪರಿಶೀಲಿಸಲು ಅವಕಾಶ ಕೊಡಬೇಕು!'

ಆಡಳಿತಗಾರರು ಹಾಗೆಯೇ ಅವರಿಗೆ ಪ್ರತಿ ಸ್ಥಳವನ್ನು ತೋರಿಸಿದರು.

ಇನ್ನು ಉಳಿದುದು ದೇವರ ಪೀಠ?

'ರಾತ್ರೆ ದೇವರಿಗೆ ಪೂಜೆ ನಡೆಯಿತು ಅಲ್ಲವೆ?'

'ಇಲ್ಲದೆ ಉಂಟೆ? ಅದು ನಿಯಮ'

'ದೇವರ ಮೈಮೇಲಿನ ಆಭರಣಗಳು ಹಾಗೆಯೇ ಇವೆ! ಏನೀ ವೈಚಿತ್ರ್ಯ ಯಾವ ಕಾರಣ ತಾನೆ ಈ ಕೊಲೆಗೆ ಇರಬಹುದೆಂದು ಹೊಳೆಯುವುದಿಲ್ಲವಲ್ಲ!'

'ದೇಶದಲ್ಲಿ ಏನೋ ಮಹಾ ಉತ್ಪಾತ-ಅನಾಹುತವಾಗಲಿದೆ! ಇದು ಸೂಚನೆ ಅಷ್ಟೆ! ಆದರೆ ........'

ಮಾತು ಮುಗಿಯುವುದರೊಳಗೆ, ಏನಾಶ್ಚರ್ಯ! ಹೆಂಗಸೊಬ್ಬಳ ನಗುವಿನ ಧ್ವನಿ! ಯಾರೂ ಕಿವಿಗಳನ್ನು ನಂಬಲಿಲ್ಲ!

'ಹಿಡಿಯಿರವಳನ್ನು!'

ಸೂಪರಿಂಟೆಂಡೆಂಟರ ಆಜ್ಞೆಯಾಯಿತು.

೪

ಉನ್ಮಾದಿನಿಯಂತೆ ಕಂಡ ಆ ಹೆಂಗಸು ಹಿಂದಿಗಿಂತಲೂ ಹೆಚ್ಚಾಗಿ ನಕ್ಕಳು!

"ಹಿಡಿಯುವುದು ಬೇಡ! ಅಂಥ ಸಂದರ್ಭದ ಭಯವಿರುತ್ತಿದ್ದರೆ ನಾನು ಎದುರಾಗುತ್ತಲೆ ಇದ್ದಿಲ್ಲ! ನನ್ನನ್ನು ಕಂಡು ಹಿಡಿಯುವುದು ನಿಮ್ಮ ಹಣೆಯಲ್ಲೂ ಬರೆದಿದ್ದಿಲ್ಲ! ಹ ಹ್ಹಾ ಹ್ಹಾ! .......ನಿಮ್ಮನ್ನೆಲ್ಲ ಹೀಗೆ ನೋಡಲು ನನಗೆಷ್ಟು ಆನಂದ! ........ಹ್ಹಾ ಹ್ಹಾ! !!"

ಇನ್ನೇನು ಆಗಲಿದೆಯೆಂದು ದುಃಖ ಮಿಶ್ರಿತ ಕುತೂಹಲದಿಂದ ಜನರಿರಲು ಮಠದ ಆಡಳಿತಗಾರರು ಬಾಣದಂತೆ ಆಕೆಯೆಡೆಗೆ ನೆಗೆದು, ಆಕೆಯ ಕೆನ್ನೆಗೆ ಬಲವಾದೊಂದು ಏಟು ಬಿಗಿದರು.

ತುಳಿದ ಸರ್ಪಿಣಿಯಂತೆ ಆಕೆ ಸೆಟೆದು ನಿಂತಳು. ಭೀಕರ ಗರ್ಜನೆಯೊಂದಿಗೆ ಆಕೆಯೆಂದಳು.

"ನೃಶಂಸ! ನಿನ್ನ ಗುರುವಿನ ರಕ್ತವನ್ನೇ ಹೀರಿ ಮೆರೆಯುವ ನನಗೆ ನಿನ್ನ ರಕ್ತಪಾನದ ಅವಧಿ ಸಮೀಪಿಸಿದೆ! ಇದೋ!"

ಅದರೊಂದಿಗೆ ಸೊಂಟದಿಂದ ರಕ್ತಸಿಂಚಿತ ಚಾಕುವೊಂದನ್ನು ತೆಗೆದು ನೆಗೆದಳು! ತಕ್ಷಣವೇ ಆಕೆಯನ್ನಡ್ಡಗಟ್ಟಲಾಯಿತು.

ಆಕೆ ಉಬ್ಬಸ ಬಿಡುತ್ತಿದ್ದಳು. ಕಣ್ಣುಗಳು ಕೆಂಡವಾಗಿದ್ದವು.

ಪೋಲೀಸರು ಆಡಳಿತಗಾರರನ್ನು ಬಂಧಿಸಿದರು.

"ಆಯಿತೆ? ಸಾಹೇಬರೆ! ಮಠವನ್ನು ನೋಡಿಯಾಯಿತೆ? ತೃಪ್ತಿಯಾಯಿತೆ? ನಿಮ್ಮನಿನ್ನು ಕಷ್ಟಕ್ಕೊಳಪಡಿಸಲು ನನಗಿಷ್ಟವಿಲ್ಲ! ಈ ದೈವೀಕ ಬಾಲ ಬ್ರಹ್ಮಚಾರಿಗಳ ಕೊಲೆಪಾತಕಿಯು ನಾನು! ನಾನೇ! ನಾನು-ನಾನು-ಸೀತಾ! ನಾನಾಗಿ ಬಂದು ಒಪ್ಪಿಕೊಳ್ಳುತ್ತಿದ್ದೇನೆ! ನನ್ನನ್ನು ನಂಬಿ! ಬಿಡಿ! ಓಡಿ ಹೋಗಲಾರೆ! ನನಗೆ ಬೇರೆ ಪ್ರಪಂಚವಿಲ್ಲ! ಆದರೆ ....... ಮೊದಲು ತಮಗೆ ಮಠವನ್ನು ನೋಡಲು ಆಸೆಯಲ್ಲವೆ?"- ಎಂದಳಾಕೆ.

"ಅಮ್ಮ, ನೀನಾರು?"

- ಎಂದು ಸೂಪರಿಂಟೆಂಡೆಂಟರು ಆಶ್ಚರ್ಯದಿಂದ ಕೇಳಿದರು.

ಎಲ್ಲರೂ ಚಿತ್ರದಂತೆ ಮೂಕರಾಗಿ ನಿಂತಿದ್ದರು.

"ನಾನೆ? ನನ್ನ ಮನೆಗೆ ಬನ್ನಿ; ಹೇಳುತ್ತೇನೆ ಹೂಂ? ಏಕೆ ಹಾಗೆ ನೋಡುತ್ತೀರಿ? ನಿಮ್ಮಾಣೆ ನಾ ಹುಚ್ಚಿಯಲ್ಲ! ಇದೇ ಬನ್ನಿ; ಹೆಚ್ಚು ದೂರವಿಲ್ಲ! ಆಶ್ಚರ್ಯಪಡಬೇಡಿರಪ್ಪಾ! ಕೊಂಚದೂರ ಹಿಂಬಾಲಿಸಿ!"

- ಎಂದಂತೆ ಆಕೆ ಹಾರಿಹಾರಿ ಮುಂದಿನ ಕೋಣೆಯನ್ನು ಹೊಕ್ಕಳು. ಸೂಪರಿಂಟೆಂಡೆಂಟರು ಒಬ್ಬಿಬ್ಬರೊಡನೆ ಆಕೆಯನ್ನು ಹಿಂಬಾಲಿಸಿದರು. ಆಕೆಯನ್ನು ಬಂಧಿಸದ ತಮ್ಮ ಅಜಾಗರೂಕತೆಯನ್ನು ಹಳಿದುಕೊಂಡರು.

"ಇಲ್ಲೇನು ತೋರುತ್ತದೆ?" ಆಕೆ ಕೇಳಿದಳು.

"ಏನೂ ಇಲ್ಲವಲ್ಲ!" ಸೂಪರಿಂಟೆಂಡೆಂಟರೆಂದರು.

"ಈಗ?"

- ಎನ್ನುತ್ತ ಆಕೆ ಬಟ್ಟೆಗಳನ್ನಿಡಲು ಗೋಡೆಗೆ ಆಣಿಗಳ ಮೂಲಕ ನಿಲ್ಲಿಸಿದ ಮರದ ಚೌಕಟ್ಟನ್ನೆತ್ತಿ ಕೆಳಗಿಟ್ಟು ಅದರೆಡೆಯಲ್ಲಿ ಅಡಗಿಕೊಂಡಿದ್ದ ಕೀಲಿಯ ತೂತಿಗೆ ಕೀಲಿಕೈಯನ್ನು ಹಾಕಿ ಬೀಗ ತೆಗೆದಂತೆ ತಿರುಪಿ ಗೋಡೆಯನ್ನು ದೂಡಿದಳು!

"ನಿಸ್ಸಂದೇಹ, ಈಕೆ ಯಕ್ಷಿಣಿ" ಎಂದು ನಿರ್ಧರಿಸಿದರು ಅಲ್ಲಿದ್ದವರು. ಏಕೆಂದರೆ, ಅವರು ಆ ಗೋಡೆ ಲಘುವಾಗಿ ಬಾಗಿಲಿನಂತೆ ತಿರುಗಿನಿಂತು ದಾರಿಯನ್ನುಂಟುಮಾಡಿದುದನ್ನು ನೋಡಿ ಸ್ತಂಭಿತರಾದರು! ಹಾಗೆಯೇ, ಮನಸ್ಸಿನಲ್ಲಿ "ಒಂದು ವೇಳೆ ಇದು ಮಠದೊಳಗಿನ ದೇವತೆಯಾಗಿರಬಹುದೆ? ಅನಾಚಾರದಿಂದ ಕುಪಿತಳಾಗಿ ಏನಾದರೂ ಅಪಾಯ ಮಾಡಲಾರದಷ್ಟೆ?" ಎಂಬ ವಿಚಾರವೂ ಏಕೋ ಮಿಂಚಿನಂತೆ ಬಂದೋಡಿತು.

"ಇದೀಗ ನನ್ನ ಮನೆ!" ಆಕೆ ನುಡಿದಳು.

ಅವರು ನೋಡಿದರು. ಭವ್ಯವಾದೊಂದು ಕೊಠಡಿ-ಏಕೆ? ಕೇಲೀ ಗೃಹವೇ ಅದಾಗಿತ್ತು.

ಆಶ್ಚರ್ಯದ ಮೇಲಾಶ್ಚರ್ಯ! ವಿರಕ್ತಿಯೇ ಕೊಂಡಿರಬೇಕಾದ ಮಠವೆಲ್ಲಿ! ಮನ್ಮಥನ ರಂಗಸ್ಥಲವಾದೀ ಕೊಠಡಿಯೆಲ್ಲಿ!

"ಅಮ್ಮಾ, ನೀನು ಯಾರೇ ಆಗಿರು. ನೀನೀಗ ಮಾಡುತ್ತಿರುವ ಗೂಢ ಕೆಲಸದ ಅರ್ಥವನ್ನು ನೀನು ಹೇಳಲೇಬೇಕು!

"ಸಾಹೇಬರೇ! ಅದಕ್ಕಾಗಿಯೇ ಸಿದ್ಧತೆ ಇದೆಲ್ಲ. ಇಷ್ಟು ದಿನಗಳವರೆಗೆ ಈ ಮಠದಲ್ಲಿ ಇದೊಂದೇ ಕೊಠಡಿಯೆಂದು ನಾನಿದ್ದೆ. ಅಲ್ಲ; ನಿನ್ನೆ ಅರ್ಥವಾಯಿತು. ಇಂತಹ ಅನೇಕ ಕೊಠಡಿಗಳಿರುವುವು ಈ ನರಕವಾಸದಲ್ಲಿ!"

"ನೀನೀ ರಹಸ್ಯವನ್ನು ಹೇಗರಿತೆ? ನಿನ್ನ ಉದ್ದೇಶವಾದರೂ ಏನು?'

'ನನ್ನ ಮನೆಯ ರಹಸ್ಯ ನನಗೆ ತಿಳಿದುದರಲ್ಲಾಶ್ಚರ್ಯವೇನು? ಉದ್ದೇಶವೆಂದರೆ ಇಷ್ಟೆ. ನಿಜವಾಗಿ ಅಜ್ಞಾತ ಅಬಲೆಯರ ಉದ್ಧಾರ ಮಾಡುವುದು!'

ಆಕೆ ವಿಕಟವಾಗಿ ನಕ್ಕಳು.

ಸೂಪರಿಂಟೆಂಡೆಂಟರು ಏನೋ ಹೇಳಲೂ ತೋಚದವರಾಗಿ ಪಳಪಳ ಕಣ್ಣು ಬಿಡುತ್ತಾ ನಿಂತರು.

'ಕೇಳಿ ಸಾಹೇಬರೆ! ಇದು ಯಾವ ದೇವತೆಗೆ ಸಹ್ಯವಾಗಬಹುದು? ಯೋಗಿಗಳು ಅವರೂ ರಕ್ತ ಮಾಂಸವುಳ್ಳವರೇ. ವಿರಕ್ತಿಗೊಂಡು ಸನ್ಯಾಸ ಸ್ವೀಕರಿಸಿದವರೆಲ್ಲ ಬಾಲ ಬ್ರಹ್ಮಚಾರಿಗಳೆಂದು ಬೆಳಗಬೇಕು; ಇದು ಯಾವ ನ್ಯಾಯ? ಹಾಗೆ ಆಶಿಸುವುದು ಜನರ ಮೂಢತನವಲ್ಲವೆ? ಕಾಡಿನಲ್ಲಾದರೆ ಒಂದು ವೇಳೆ ಸಾಧ್ಯವೋ ಏನೋ! ಅಲ್ಲೂ ಕೂಡ ರಂಭಾ, ಮೇನಕೆಯರು ತಪ್ಪುವುದಿಲ್ಲ. ಮನಸ್ಸಿನ ಆವೇಗಕ್ಕೆ ಬಲಿ ಬೀಳದ ಭೀಷ್ಮನು ಸಾವಿರಕ್ಕೊಬ್ಬ ನಿರಬಹುದು...... ಹೋಗಲಿ: ಅದನ್ನು ಮನ್ನಿಸಿದರೂ, ಇಂತಹ ಅಕ್ರಮವೇ?...... ವಿಶ್ವಾಸಘಾತ?'

ಆಕೆ ಪುನಃ ಕಿಲಕಿಲ ನಕ್ಕಳು. ಕ್ಷಣದಲ್ಲೇ ಕಣ್ಣುಗಳು ಹನಿದುಂಬಿದುವು. ಗಂಟಲು ಇದ್ದಕ್ಕಿದ್ದಂತೆ ಬಿಗಿದು ಬಂತು.

ಆಕೆಯನ್ನು ಮಾತಾಡಿಸಲು, ಯಾರಿಗೂ ಬಾಯಿ ಬಾರದೆ ಹೋಯಿತು. ಕೊಂಚ ಹೊತ್ತಿನ ಮೇಲೆ ಆಕೆ. ದೀನ ದುಃಖಿತ ಸ್ವರದಿಂದ ಹೇಳತೊಡಗಿದಳು -

ಐದು ವರ್ಷಗಳಿಂದ, ಸ್ವರ್ಗವೆಂದು ನಂಬಿ ಈ ನರಕ ಕುಂಡದಲ್ಲಿದ್ದು ಬಂದಿದ್ದೇನೆ. ಎಂತಹ ಮೋಸ! ಮಾರ್ಜಾಲ ಸನ್ಯಾಸಿ!...... ಆತನಿಗೆ ನಿಜವಾಗಿಯೂ ಸರಿಯಾದ ಶಿಕ್ಷೆಯಾಯಿತೇಳಿ! ಆತನ ಮರಣಕ್ಕೆ ಮೂಢರು ಅತ್ತರೂ ನಾ ನಗುತ್ತೇನೆ'

ಆಕೆ ನಿಜವಾಗಿಯೂ ನಕ್ಕಳು! ಅನಂತರ ತನ್ನ ಪ್ರಲಾಪವನ್ನು ಮುಂದುವರಿಸಿದಳು.

'ಯಾವಾಗ ಇಂದ್ರಿಯಗಳನ್ನು ವಶಪಡಿಸಿಕೊಳ್ಳಲು ಶಕ್ತಿ ಸಾಲದಾಗುವುದೋ ಅಂದಿಗೆ, ಪರರ ಕಣ್ಣಿಗೆ ಮಣ್ಣೆರಚಲಿಕ್ಕಾಗಿ ಆತ್ಮವಂಚನೆ ಮಾಡಿ ಬಾಳುವುದಕ್ಕಿಂತ ಸತ್ತುದರಲ್ಲಿ ಕೆಟ್ಟು ಹೋಗುವುದೇನು? ಧರ್ಮ!.......ನಾನು ನಿಜವಾಗಿಯೂ ಧರ್ಮಕ್ಕೆ ಸಹಾಯ ಮಾಡಿದೆ! ಅಂದು ನಾ ಚಿಕ್ಕವಳಿದ್ದೆ. ಸಾರಾಸಾರ ವಿಚಾರ ಜ್ಞಾನವಿರಲಿಲ್ಲ. ಈಗ ತಿಳಿಯಿತು....... ಅಲ್ಲದೆ, ಡಂಭಾಚಾರಗಳಿಂದ ವಂಚಿಸಲ್ಪಟ್ಟು, ಹುಟ್ಟಿದ ಇವರ ಮೇಲಿನ ನನ್ನ ಭಕ್ತಿ ಅಪಾರವಿತ್ತು! ನಾನು ದೇವರೆಂದು ಬಗೆದೆ! ಆದರೆ, ಗೋಮುಖವ್ಯಾಘ್ರವೆಂದು ನಿನ್ನೆ ತಿಳಿಯಿತು.........

'ಸಾಹೇಬರೆ! ನನಗೀಗ ಇವರ ನಾಶದಿಂದ ಮಹಾನಂದವಾದರೂ, ನಾನೀ ಯೋಗಿಗಳನ್ನು ನಿನ್ನೆಯ ತನಕ ಜೀವದ ಜೀವವೆಂದು ಪ್ರೀತಿಸಿದ್ದೆ! ಕೇವಲ ನಿಸ್ವಾರ್ಥಭಾವದಿಂದ! ಹೌದು..... ಆದರೆ, ನಾನಾಗಿ ಮಾಡಿದ ಧೈರ್ಯವಲ್ಲ! ಇವರು ಪ್ರೀತಿಸಲು ಕಲಿಸಿಕೊಟ್ಟರು'

ಅತ್ಯಂತ ವೇದನೆ ಪಡುವವಳಂತೆ ಆಕೆ ಹೃದಯವನ್ನು ಹಿಸುಕಿಕೊಳ್ಳುತ್ತ ನಿಂತಳು. ಅಲ್ಲಿದ್ದವರು ಕಲ್ಲಾಗಿ ನಿಂತು ಕೇಳುತ್ತಿದ್ದರು.

೫

ಚೇತರಿಸಿಕೊಂಡವಳಾಗಿ ಆಕೆ ನುಡಿದಳು:

'ಐದು ವರ್ಷಗಳ ಹಿಂದಿನ ಮಾತು. ಈ ಯೋಗಿಗಳಿಗೆ ನಮ್ಮಲ್ಲಿ ಭಿಕ್ಷೆ ಇದ್ದಿತು. ನಮ್ಮ ಮೂಢಭಕ್ತಿಯು, ಅದೆಂತಹ ದಪ್ಪವಾದ ತೆರೆಯನ್ನು ನಮ್ಮ ಕಣ್ಣು ಪೊರೆಯ ಮರೆಯಲ್ಲಿ ಹರವಿದೆ ಎಂಬುದು ಈಗ ಮಾತ್ರ ತಿಳಿಯುತ್ತದೆ. ಆಗ?...... ನಾನು ಆ ಪಾದಗಳನ್ನು ತೊಳೆಯುತ್ತಿದ್ದೆ. 'ಮರೆತೆಯಾ?' ಎಂಬ ಪಿಸುಮಾತಿನ ವಾಕ್ಯವನ್ನು ಕೇಳಿ ನಡುಗಿದೆ........ ಕಣ್ಣೆತ್ತಿ ನೋಡಿದೆ! ಎಂತಹ ದಿವ್ಯ ತೇಜಸ್ಸು! - ನನಗೆ ಆಗ ಹಾಗೆ ಕಾಣಿಸಿತು- ಮಂದಹಾಸ್ಯವು ನೃತ್ಯಪಾಡುತ್ತಿತ್ತು ಆ ಮುಖದಲ್ಲಿ! ನನಗಾಗ 'ಮರೆತೆಯಾ?' ಎಂಬ ವಾಕ್ಯದ ಅರ್ಥವಾಗಲಿಲ್ಲ. 'ರಾತ್ರಿ' ಎಂದು ಪುನಃ ಕೇಳಿಸಿತು. ರೋಮಾಂಚವಾಯಿತು. ಆ 'ರಾತ್ರಿ' ಶಬ್ದದ ಅರ್ಥ ನನಗೆ ಸ್ಪಷ್ಟವಾಯಿತು. ಅಥವಾ ಆ ಮುಖಭಾವದಿಂದ ಅರ್ಥ ಮಾಡಿಕೊಂಡಿರ ಬೇಕು!

'ನಾನು ತುಂಬು ಯೌವನೆಯಾಗಿದ್ದೆ. ಪ್ರಪಂಚದ ಸೌಖ್ಯ ಸಾರಗಳನ್ನು ಮನದಲ್ಲೇ ಊಹಿಸುವಷ್ಟು ಶಕ್ತಳೂ ಆಗಿದ್ದೆ. ಏಕಾಂತದಲ್ಲಿ ನಾನು ಯೋಚಿಸಿದ ಯೋಚನೆಗಳೇನು? ಸಾವಿರಾರು ಉಗಿ ಬಂಡಿಗಳೇ ನನ್ನ ಮೆದುಳಲ್ಲಿ ಓಡಾಡಿದಂತೆ ಭಾಸವಾಯಿತು. 'ದೇವರು ಯಾವ ದೇಹದಲ್ಲಿ ನೆಲೆಸಿರುವನೋ, ಆ ದೇಹ ನನ್ನದಾಗುವುದು......... ಆದರೆ ಪಾಪ ವಲ್ಲವೆ? ಛೆ, ಪಾಮರಳಾದ ನನಗೆ ಅದರ ಗೂಢವೇನು ಅರ್ಥವಾಗಲಿದೆ? ಎಂದು ಸಮಾಧಾನಗೊಂಡೆ.

'ಅಂದಿನ ಹಗಲು ದೀರ್ಘವಾಗಿ ಕಾಣಿಸಿತು......

'ರಾತ್ರಿ!......

'ನಾನು ಆ ಕೊಠಡಿಯ ಬಳಿಗೆ ಹೋದಾಗ ಬಾಗಿಲಲ್ಲೇ ನಿಂತಿದ್ದರು!

'ಪುನಃ ಅದೇ ದೃಢ ಸ್ವರದ ಪ್ರಶ್ನೆ: 'ಏನು ಪರಕೀಯಳಂತಾಚರಿಸುತ್ತಿರುವೆ? ನಿನಗೆ ಪೂರ್ವ ಜನ್ಮದ ಸ್ಮರಣೆ ಲವಲೇಶವೂ ಉಳಿಯದಿರಲು ಕಾರಣವೇನು? ಎಷ್ಟು ಸಮಯ ದಿಂದ ನಿನ್ನನ್ನು ಅರಸುತ್ತ ಸುತ್ತಾಡಿದೆ! ನೀನು ಗುರುತಿಸುವೆಯೆಂದಿದ್ದೆ!

'ದಿಗ್ಭ್ರಾಂತಳಾಗಿ ನಿಂತೆ! ತೀರ ಪರಿಚಿತರಂತೆ ಆಡುತ್ತಿರುವರಲ್ಲ. ಏನಿದು! ಒಂದೂ ತಿಳಿಯದಾಗಿದೆಯಲ್ಲ! "ತಾವು ಏನಾಡುತ್ತಿರುವಿರೆಂಬುದನ್ನು ಅರ್ಥಮಾಡಿಕೊಳ್ಳಲಾರ ದವಳಾಗಿರುವೆ. ದಯೆಯಿಟ್ಟು ವಿವರಿಸಿರಿ!' ಎಂದೆ.

'ಉತ್ತರ ಕ್ಷಣದಲ್ಲಿ, ನನ್ನ ಕೈ ಬಿಗಿಯಾದ ಹಿಡಿತದಲ್ಲಿ ಸಿಕ್ಕಿಕೊಂಡಿತು. ಆಹಾ! ಆಗ ನಾನು ನನ್ನನ್ನು ಏನೆಂದು ತಿಳಿದುಕೊಂಡೆ? ಧನ್ಯೆಯೆಂದು! ಈಗ .......?'

ಆಕೆ ಕಣ್ಣು ಮುಚ್ಚಿಕೊಂಡಳು. ಮುಖ ಕೆಂಪೇರಿತು. ಕಣ್ಣೀರು ಧಾರೆಧಾರೆಯಾಗಿ ಸುರಿಯಿತು. ಸೆರಗಿನಿಂದ ಕಣ್ಣುಗಳನ್ನೊರಸುತ್ತಾ ಪುನಃ ನುಡಿದಳು'.

'ಅವರೆಂದರು'. ನಾನು ಪೂರ್ವಜನ್ಮದ ಅವರ ಪತ್ನಿಯಂತೆ...... ಆಗ ಅವರು ಪರಸ್ತ್ರೀ ಲೋಲರಾಗಿ ನನ್ನನ್ನು ಅಲಕ್ಷಿಸುದುದರ ಫಲವಾಗಿ, ಈ ಜನ್ಮದಲ್ಲಿ ಸನ್ಯಾಸಿಯಾಗು ವಂತಾಯಿತಂತೆ! ...............ಪೀಠದ ದಿವ್ಯಮಹಿಮೆಯಿಂದ ಜ್ಞಾನ ಬೆಳಗಿ, ಇದೆಲ್ಲ ತಿಳಿಯುವಂತಾಯಿತಂತೆ.........

'ಕೇಳಿ ಮೈಪುರೆತೆ! ಅಂದಿನ ನಮ್ಮ ಕ್ರಿಯೆಗಳು ಇಂದಿನವರೆಗೆ ಗೋಪ್ಯವಾಗಿದ್ದವು, ಮುಂದೆಯೂ ಇರುತ್ತಿದ್ದವು. ಆದರೆ ನಾನು ಸ್ವಾರ್ಥಪರಳಾಗಬಾರದಷ್ಟೆ?........ ಆ ರಾತ್ರಿ ನಮ್ಮ ಸ್ನೇಹ ಎಲ್ಲಿಯತನಕ ಬೆಳೆಯಿತೆಂದರೆ ತಿಂಗಳೊಳಗೆ, ಇದೋ....... ಯಾರ ಸಂಶಯವೂ ಇಲ್ಲದೆ ಈ ಕೊಠಡಿಯೊಳ ಹೊಕ್ಕೆ! ಇದೀಗ ಐದನೆಯ ವರ್ಷ! ಇಂದು, ನಾನು ನನ್ನನ್ನೇ ಸಂತೋಷದಿಂದ ವಿಧವೆಯನ್ನಾಗಿ ಮಾಡಿಕೊಂಡಿರುತ್ತೇನೆ! ನನಗೆಷ್ಟು ಆನಂದ!'

ಆಕೆ ಹಲ್ಲು ಕಿರಿದಳು. ಸೂಪರಿಂಟೆಂಡೆಂಟರು ತದೇಕ ಧ್ಯಾನದಿಂದ ಆಕೆಯ ಮಾತು ಗಳನ್ನಾಲಿಸುತ್ತಿದ್ದರು. ಆಕೆಯ ಹೃದಯದಿಂದ ಚಿಮ್ಮಿ ಬರುತ್ತಿದ್ದ ಮಾತುಗಳು ಒಂದಲ್ಲ ಒಂದು ರೀತಿಯಿಂದ ಪ್ರಯೋಜಕವಾಗಿಯೇ ಕಂಡು ಬಂದುದರಿಂದ ಆಕೆಯ ಆ ವಾರ್ತಾ ವಿವರಣೆಗೆ ತಡೆ ಹಾಕಲಿಲ್ಲ.

ಆಕೆ ಪುನಃ ನುಡಿಯ ತೊಡಗಿದಳು:

'ಐದು ವರ್ಷಗಳಿಂದ ನಾವು ಸಂಸಾರ ಮಾಡಿದ್ದೇವೆ! ದೇವರ ಮುಂದೆ ನಮ್ಮ ವಿವಾಹವೇ ಆಗಿತ್ತು; ಆದರೂ ಜನರಲ್ಲಿ ಬಾಲ ಬ್ರಹ್ಮಚಾರಿಗಳೆಂದೇ ಪ್ರಸಿದ್ಧರಾಗಿರುವರಿವರು! ಪಾಪದ ಪ್ರಶ್ನೆಯೆದ್ದಾಗ ಇಲ್ಲದ ವೇದಾಂತ ವಿಷಯಗಳನ್ನೆತ್ತಿ ನನ್ನ ಬಾಯಿಗೆ ಬೀಗ ಹಾಕುತ್ತಿದ್ದರು! ನಾನೂ ನನ್ನ ಮಹಾದ್ಭಾಗ್ಯವನ್ನು ಕೊಂಡಾಡುತ್ತಾ ಇಂದಿನವರೆಗೆ ಪಾದಸೇವೆ ಮಾಡಿದೆ! ನಿನ್ನೆ ಎಲ್ಲ ಬಯಲಾಯಿತು!'

ಆಕೆ ರೋಷದಿಂದ ಹಲ್ಲು ಕಡಿದುಕೊಂಡಳು.

'ದೈವಚಿಂತನೆಯೇ ಬೇರೆ!...........ಹೌದು; ಇದೀಗ ಸಂಶಯ ಬರುತ್ತಿದೆ! ಅದೋ, ಅಲ್ಲಿದೆ ಹಾಲಿನ ಪಾತ್ರೆ! ದಿನವೂ ಕುಡಿಯುತ್ತಿದ್ದೆ. ನಿನ್ನೆ ಕುಡಿಯಲಿಲ್ಲ. ಅದರಲ್ಲಿ ಅವಶ್ಯ ಏನೋ ಬೆರೆತಿರಬೇಕು! ಏಕೆಂದರೆ, ಹಾಲು ಕುಡಿದು ಮಲಗಿದೊಡನೆ ನನಗೆ ಗಾಢನಿದ್ರೆ ಬಂದು ಬಿಡುತ್ತಿತ್ತು! ನಿನ್ನೆ ಹಾಗಾಗಲಿಲ್ಲ. ಬಹಳ ಹೊತ್ತಿನವರೆಗೆ ಹರಟುತ್ತ ಸಂತೋಷ ದಿಂದಲೇ ನಾವಿಬ್ಬರೂ ಕಳೆದೆವು. 'ಹಾಲು ಕುಡಿದು ಮಲಗು ಚಿನ್ನಾ' ಎಂದರು. 'ಊಟ ಜಾಸ್ತಿಯಾಗಿದೆ. ತಡೆದು ಕುಡಿವೆ' ಎಂದೆ. ಅವರು ಮೈದಡವುತ್ತ ಅಡ್ಡಾದರು. ನನಗಲ್ಲೇ ಜೊಂಪು ಹತ್ತತೊಡಗಿತು. ಹಾಲಿನ ಪಾತ್ರೆಯನ್ನು ಎತ್ತಿಕೊಟ್ಟು 'ಕುಡಿ' ಎಂದರು. ಅದು ಪ್ರೇಮದ ಒತ್ತಾಯವೆಂದು ಗ್ರಹಿಸಿದೆ. ಇಷ್ಟವಿಲ್ಲದಿದ್ದರೂ ಕುಡಿಯುವವಳೇ ಇದ್ದೆ.

ಅಷ್ಟರಲ್ಲಿ ಹೊರಗಿನಿಂದ ಯಾರೋ ಭೇಟಿಗೆ ಬಂದಿರುವರೆಂಬ ಸಂಕೇತ ಬಂದು ಅವರು 'ಬರುವೆ' ಎಂದವರೆ ಹೊರಗೆ ಹೋದರು....... ಹಾಲಿನ ಲೋಟವನ್ನಡಗಿಸಿಟ್ಟು ಮಲಗಿದೆ. ಜೊಂಪು ಹತ್ತಿತು.........

'ಯಾಕೋ ಎಚ್ಚರವಾಯಿತು. ನೋಡಿದಾಗ ನನ್ನ ಪಕ್ಕದಲ್ಲಿ ನನ್ನ ಹೃದಯೇಶ್ವರ ನಿರಲಿಲ್ಲ. ಕುಳಿತೆ. ಕೊಂಚ ಹೊತ್ತು ನಿರೀಕ್ಷಿಸಿದೆ. 'ಈ ಪೀಠದ ಕೆಲಸ ಕಷ್ಟವಪ್ಪಾ, ರಾತ್ರೆಯೂ ಬಿಡುವಿಲ್ಲ; ಜನ ಭೆಟ್ಟಿಗೆ ಬರುತ್ತಲೇ ಇರುತ್ತಾರೆ. ಹಾಳಾದ ಮೂಢಜನ!' ಎಂದು ಶಪಿಸುತ್ತ, ಏಕಾಂತ ತಡೆಯದೆ, ಮೆಲ್ಲನೆ ಮುಂದಿನ ಕೊಠಡಿಯಲ್ಲಾದರೂ ಅಡ್ಡಾಡಿ ನಿರೀಕ್ಷಿಸುತ್ತಿ ರೋಣವೆಂದು ಹೊರಕ್ಕೆ ಬಂದೆ. ಪಕ್ಕದ ಕೊಠಡಿಯನ್ನು ದಾಟುವಾಗ ಇದೋ ಇಂಥ ಗೋಡೆಯೆಂದು, ಇಷ್ಟರವರೆಗೆ ಬೇರೆ ಇದೆಯೆಂಬುದನ್ನು ಅರಿತಿರಲಿಲ್ಲ. ಕಾರಣ ಒದಗಿ ಬರಲಿಲ್ಲ....... ಆ ಬಿರುಕಿನಿಂದ ಬೆಳಕಿನ ಕಿರಣವೊಂದು ತೋರಿಬರುತ್ತಿತ್ತು. ಕಿವಿಗೊಟ್ಟು ಆಲಿಸಿದಾಗ ಅಯ್ಯೋ!...... ಎಂಥ ಭೀಕರ ಸ್ವರ!.........

ಆಕೆ ಆವೇಶ ಮರುಕಳಿಸಿದಂತಾಗಿ ಕೈಯ ಚಾಕುವನ್ನು ಮೇಲಕ್ಕೆತ್ತಿದಳು! ಅಲ್ಲಿದ್ದವರೆಲ್ಲ ಸರಿದುಕೊಂಡರು. ಆಕೆ ವಿಕಟವಾಗಿ ನಕ್ಕು ಪುನಃ ಹೇಳತೊಡಗಿದಳು:

'ಸ್ವರವು ಭೀಕರವಾಗಿತ್ತು; ಏಕೆಂದರೆ ಅದು ಹೆಂಗಸಿನ ಕಂಠ ಧ್ವನಿಯಾಗಿತ್ತು. ಅದು ಭೀಕರ ಏಕೆಂದರೆ ನನಗೆ ಹಾಗೆ ....... ಸಾಹೇಬರೆ!

ಸ್ತ್ರೀಯ ಹೃದಯಕ್ಕೆ ನಿರಾಶೆಯುಂಟಾದರೆ, ಆಗಬೇಕಾದ ಪರಿಣಾಮಕ್ಕೆ ನಾನು ಸಂಕಲ್ಪಿಸಿದೆ. ಮಿಂಚಿನಂತೆ ಮನಸ್ಸಿಗೊಂದು ವಿಚಾರ ಹೊಳೆಯಿತು...... ಅಯ್ಯೋ, ಆಗ ನನ್ನ ಮನಸ್ಸು ಪಟ್ಟ ಅವಸ್ಥೆ! ನನ್ನ ಪರಿಸ್ಥಿತಿಯ ಹೆಣ್ಣೊಬ್ಬಳಿಂದ ಮಾತ್ರ ತಿಳಿಯಲು ಸಾಧ್ಯ!......... ತಟ್ಟನೆ ನನ್ನ ಕೊಠಡಿಗೆ ಹೋದೆ. ಇದೇ! ಈ ಚಾಕುವನ್ನೆತ್ತಿ ಪುನಃ ಆ ಸ್ಥಳಕ್ಕೆ ಹೋಗಿ ನಿಂತೆ.........

'ಅರ್ಧ ತಾಸಿನಲ್ಲಿ, ಇದೇ ಈ ನಾಟಕ....... ಗೋಡೆ ತಿರುಗಿತು. ಬಾಲ ಬ್ರಹ್ಮಚಾರಿಗಳು, ಬಾಲಲೀಲೆಗಳನ್ನು ತೀರಿಸಿ ಹೊರಕ್ಕೆ ಬಂದರು....... ಇದೇನಿದು? ನಾನು ಕೈ ಹಿಡಿದು ಕೇಳಿದೆ. ಹುಚ್ಚು ಹಿಡಿದ ಸಿಂಹದಂತೆ ನನ್ನನ್ನು ಆ ಸಾತ್ವಿಕ ಮೂರ್ತಿಯು ತಳ್ಳಿ ಹಾಕಿ 'ನಿನಗಿವೆಲ್ಲ ಕೇಳುವ ಅಧಿಕಾರವಿಲ್ಲ'ವೆಂದು ಒರಟಾಗಿ ಉತ್ತರ ಕೊಡುವುದಾಯಿತು! 'ನಾನು ಪತ್ನಿ; ನನಗಧಿಕಾರವಿದೆ' ಎಂದು ನಾನು ಹೇಳಿದಾಗ, ಒದೆಯೊಂದು ಬಿತ್ತು. 'ತಾವು ಬಾಲ ಬ್ರಹ್ಮ ಚಾರಿಗಳು ಕೇವಲ ನನ್ನನ್ನುದ್ಧರಿಸಲು ಆಶ್ರಮ ಧರ್ಮ ಮೀರಿದವರು; ಅಲ್ಲವೆ?' ಎಂದು ನಾನು ಕೇಳಿದೆ. 'ಶ್ರೀ ಕೃಷ್ಣನನ್ನು ಬಾಲ ಬ್ರಹ್ಮಚಾರಿಯೆಂದೇ ವೇತ್ತರು ಒಪ್ಪುವರು-ನಡೆ ನಿನ್ನ ಕೋಣೆಗೆ' ಎಂದರು........

'ಮಾತಿಗೆ ಮಾತಾಯಿತು. ಒಂದರಮೇಲೊಂದು ಒದೆ, ಜಿಗುಟುಗಳು ಬರುತ್ತಲೂ, ನಾನೂ ಮನುಷ್ಯಳೇ...... ಸಮಾಧಾನದ ಎಲ್ಲೆ ಮೀರಿತು. ಆಗಲೆ ಯಾವ ಕಾರಣದಿಂದಲೋ ನನ್ನನ್ನು ತೋಟಕ್ಕೆ ತಳ್ಳುತ್ತ ಹೋದರು!....... ನನ್ನ ಬಾಳುವೆಯನ್ನು ಮನಸ್ಸಿನಲ್ಲೇ

ಪರಿಶೀಲಿಸಿದೆ....... 'ಆಹಾ, ನಾನಿಟ್ಟ ಭಕ್ತಿ, ಪ್ರೇಮಗಳ ಈ ರೀತಿ ಪರ್ಯವಸಾನವೆ? ಇಷ್ಟು ವರ್ಷಗಳಿಂದಲೂ ನಾನು ಈ ರೀತಿ ವಂಚಿಸಲ್ಪಡುತ್ತಿದ್ದೇನೆ?' ಎಂಬ ಪ್ರಶ್ನೆ ಯೆದ್ದಿತು...... ನನ್ನ 'ಪತಿ' ಎಂದ ಮೇಲೆ ಕಂಡವರ ಪಾಲಾಗಲು ಇಷ್ಟವಿಲ್ಲ...... ಅವರ ಯೋಗ್ಯತೆ ಇಷ್ಟೇ ಎಂದು ನನಗಾಗ ಸ್ಪಷ್ಟವಾಯಿತು.

"ನನ್ನಂತೆಯೇ ಅನೇಕರು ನಂಬಿ. ಈ ನರರಾಕ್ಷಸನ ಕಾಮತೃಷ್ಣೆಯನ್ನು ತಣಿಸಲು ಕಾರಾಗೃಹ ವಾಸಿಗಳಾಗಿರುವರೆಂಬುದನ್ನು ನಿನ್ನೆ ಮಾತ್ರ ತಿಳಿದೆ? ನಿನ್ನೆಯತನಕ ಇದು ವೈಕುಂಠವೆಂದು ನನಗೆ ಭ್ರಮೆಯಿತ್ತು! ಹಹ್ಹಾ! ವೈಕುಂಠ! ಘೋರ ನರಕವಲ್ಲವೆ ಇದು?..... ಮೂಢ ಜನ! ಹಾಂ - ಅನುಭವಿಸಿದ ಅಬಲೆಯರು ಹೋಗಲಿ; ಇನ್ನಾದರೂ ಕೆಲ ಸ್ತ್ರೀಯರಾದರೂ ಈ ನರಕವಾಸದಿಂದ ತಪ್ಪಬಹುದಷ್ಟೇ?........ಯಾರಿಗೆ ಗೊತ್ತು; ಎಲ್ಲಿಂದ ಆವೇಶವುಂಟಾಯಿತೆಂದು? - ಚಾಕು ಎತ್ತಿದಾಗ ಇದ್ದ ನನ್ನ ಸಂಕಲ್ಪವು ವಿಪರೀತವಾಗಿ ಕೊನೆಗೊಂಡಿತು......ಈಗ...... ನನಗೆ ಸಂಪೂರ್ಣ ನಂಬಿಕೆ; ನನ್ನ ಪತಿ ನನ್ನವರೇ ಎಂದು!...."

ಆಕೆ ಸರಕ್ಕನೆ ಸರಿದು ಕೊಠಡಿಯನ್ನು ಬಿಟ್ಟೋಡಿದಳು!

೬

ಸೂಪರಿಂಟೆಂಡೆಂಟರು ಆ ವಿಚಿತ್ರ ರಮಣಿಯನ್ನು ಹಿಂಬಾಲಿಸಿ ಕಂಡಾಗ ಆಕೆ ಶವದ ಬಳಿ ಕುಳಿತಿದ್ದಳು. ಆಕೆ ಮಗುವಿನಂತೆ ಅಳುತ್ತಿದ್ದಳು. ಉನ್ಮತ್ತಳಂತೆ ಏನೇನೋ ಪ್ರಲಾಪಿಸುತ್ತಿದ್ದಳು. ಆಕೆಯನ್ನು ಬಂಧಿಸುವಂತೆ ಹೇಳಲು ಅವರಿಗೆ ಬಾಯಿ ಬರಲಿಲ್ಲ. ಆಕೆ ವಿಧವಿಧವಾಗಿ ಶವವನ್ನು ಸವರುತ್ತ ಬೊಬ್ಬಿಡತೊಡಗಿದಳು. ಆ ದೃಶ್ಯವು ಭಯಂಕರವೂ, ದುಃಖಮಯವೂ ಆಗಿದ್ದಿತು. ಯೋಗಿಗಳ ಶಿಷ್ಯವೃಂದಕ್ಕಿದು ಸಹ್ಯವಾಗಲಿಲ್ಲ. ಆದ್ದರಿಂದ ವರೆಲ್ಲ. "ಇವಳಾರೋ ಹುಚ್ಚಿಯಿರಬೇಕು; ಓಡಿಸಿರಿವಳನ್ನು" ಎಂಬುದನ್ನು ಕೇಳುತ್ತಲೇ ಆಕೆ ನಗುವಿನಿಂದೊಡಗೂಡಿದ ಅಳುವಿನಿಂದ.

"ನಾನು ಹುಚ್ಚಿಯಲ್ಲವೆ? ಹುಚ್ಚರು ನೀವೆಲ್ಲ! ನಾನಿವರನ್ನು ನನ್ನ ಪತಿಯೆಂದು ನಂಬಿದ್ದೆ. ನೀವಿವರನ್ನು 'ಬಾಲ ಬ್ರಹ್ಮಚಾರಿ'ಗಳೆಂದು ನಂಬಿ ಮೋಸ ಹೋಗಿರುವಿರಿ. ಯೋಗ್ಯ ಗೃಹಸ್ಥನಿಗೆ ಸಲ್ಲಬೇಕಾದ ಮಾರ್ಯದೆಗೂ ಅನರ್ಹರಾದ ಈ ಸನ್ಯಾಸಿ ವೇಷದ ರಾವಣನನ್ನು ವಿವಿಧ ರೀತಿಯಿಂದ ಸೇವಿಸಿದ ನೀವಲ್ಲವೆ ಹುಚ್ಚರು? ವಂಶಪಾರಂಪರ್ಯವಾಗಿ ನೀವೆಲ್ಲ ಈ ಮಠದೊಳಗೆ ತಿರುಗಿದ್ದರೂ, ನಿಮಗೆ ತಿಳಿದಿರುವ ಭಾಗವೆಂದರೆ, ಇದೋ, ಈ ಹತ್ತಾರು ಹೊಲಸು ಕೊಠಡಿಗಳು! ಹುಚ್ಚಿಯಾದ ನಾನು ಸಹಸ್ರಾರು ವರ್ಷಗಳ ರಹಸ್ಯವನ್ನರಿಯಲು ಸಮರ್ಥಳಾದೆ. ನನ್ನಂತಹ ಇನ್ನೊಬ್ಬ ಹುಚ್ಚಿಯನ್ನು ಈಗಲೇ ನಾನು ನಿಮಗೆ, ಇದೇ ಮಠದೊಳಗೆ ತೋರಿಸಬಲ್ಲೆ! ಆದರೆ, ನನಗಿಷ್ಟವಿಲ್ಲ. ಅವಳಿಂದಾಗಿಯೇ ನಾನು ನನ್ನ ಹೃದಯೇಶ್ವರನನ್ನು ಕೊಲ್ಲಬೇಕಾಯಿತು. ಇನ್ನು ಅದೆಷ್ಟು ಹುಚ್ಚಿಯರಿರುವರೋ! ಅಯ್ಯೋ, ಮನುಷ್ಯರು ಒಬ್ಬರನ್ನೇ ಆಯುಷ್ಯದ ಕೊನೆಯವರೆಗೆ ಪ್ರೀತಿಸುವುದು ಸಾಧ್ಯವೆಂದು ತಿಳಿದಿದ್ದೆ..... ಹೌದು; ಅಲ್ಲದೆ ಮತ್ತೇನು? ಇವರು ಮನುಷ್ಯರಲ್ಲ; ಹಾಗಿದ್ದರೆ ಹೀಗೆ

ನನ್ನನ್ನು ಮೋಸಗೊಳಿಸಬಹುದಿತ್ತೆ? ಇನ್ನು ನನಗೆ ಗತಿಯಾರು? ಪ್ರಿಯತಮ ತಮಗೆ ಸಿಟ್ಟಿರಬಹುದು; ತಮ್ಮ ಕೀರ್ತಿಗೆ ಕಲಂಕ ತಂದೆನೆಂದು, ತಾವು ಅಲ್ಲಿ ಕುಳಿತು ನನ್ನನ್ನು ಶಪಿಸುತ್ತಿರಬಹುದು. ಆ ಕಲಂಕ ಮಾತ್ರ ತಮಗೆ ವೇದನೆ ಕೊಡುತ್ತಿದೆಯಲ್ಲವೆ? ಹಾಗಾದರೆ ಕೇಳಿ-ಅದಕ್ಕಿಂತ ಸಹಸ್ರ ಸಹಸ್ರ ಪಾಲು ನನ್ನೀ ಆಹತ ಹೃದಯ ವೇದನೆಗೊಳ್ಳುತ್ತಿದೆ. ತಮ್ಮನ್ನೇ ಸರ್ವಸ್ವವೆಂದು ನಂಬಿದವಳಿಗೆ ಈ ರೀತಿ ಮೋಸ ಮಾಡಲೆಂದು, ಇನ್ನು ತಮ್ಮನ್ನು ಇಲ್ಲೇ ಇಟ್ಟುಕೊಂಡು ವಂಚಿಸಲ್ಪಡಲು ಇಷ್ಟವಿಲ್ಲದುದುರಿಂದಲೇ ಹಾಗೆ ಮಾಡಿದೆ........ಹೌದು; ನನ್ನವರಾದುದರಿಂದಲೇ ಈ ಧೈರ್ಯ, ನಾನು ಪೂರ್ವ ಜನ್ಮದ ಪತ್ನಿಯಲ್ಲವೆ?....... ಏನು?.....ನಿಜವೇನು? ಬರಬೇಕೆ? ಇದೋ ಬಂದೆ......ಅಲ್ಲಿ ಮಾತ್ರ........"

ಎಲ್ಲರೂ ಆಕೆಯ ಕಡೆಗೆ ಧಾವಿಸುವುದರೊಳಗೆ ಆಕೆಯ ಕೈಯೊಳಗಿನ ಚಾಕು ಆಕೆಯ ಹೃದಯವನ್ನು ಸಂಪೂರ್ಣವಾಗಿ ಪ್ರವೇಶಿಸಿತು. ಆಕೆಯ ದೇಹ ಯೋಗಿಗಳ ದೇಹವನ್ನೇ ಒರಗಿಕೊಂಡಿತು.

ಸೂಪರಿಂಟೆಂಡೆಂಟರು ಅಗಲವಾದ ಹೊದಿಕೆಯೊಂದನ್ನು ತರಿಸಿ ಎರಡು ಶವಗಳನ್ನು ಅದರಿಂದ ಮುಚ್ಚಿದರು. ಆಗ ಯಾರಾರ ಮನಸ್ಸು ಯಾವಾವ ವಿಚಾರ ಮಾಡುತ್ತಿತ್ತೆಂಬುದನ್ನು ಊಹಿಸುವುದು ಸಾಧ್ಯ? ಸೂಪರಿಂಟೆಂಡೆಂಟರು ಬಂಧಿತರಾಗಿದ್ದ ಆಡಳಿತದಾರರನ್ನು ಕರ್ಕಶ ಸ್ವರದಲ್ಲಿ ಕೇಳಿದರು!

'ನೀವವಳನ್ನು ಹೊಡೆದುದಕ್ಕೆ ಕಾರಣ?'

'ಉಂಡ ಅನ್ನಕ್ಕವಳು ದ್ರೋಹವನ್ನು ಬಗೆಯಬಹುದೆ?

'ಅವಳು ಅನ್ನವನ್ನುಣ್ಣುವಳೆಂದು ಗೊತ್ತಿದ್ದೂ ಏಕೆ ಗಲಭೆಯನ್ನು ಮಾಡಿದ್ದು? ಮೊದಲೇ ಹೇಳಬಹುದಿತ್ತಲ್ಲ? - ಅವಳ ಮೇಲೆ ಸಂಶಯವಿದೆಯೆಂದು?'

ಛೇ! ಹೆಂಗಸೊಬ್ಬಳಿಗೆ ಅಷ್ಟು ಧೈರ್ಯ ಬಂದೀತೆಂದು ಸ್ವಪ್ನ ಬೀಳಲಿಲ್ಲ'.

'ಅಂತೂ ಯೋಗಿಗಳ ನೀತಿಯನ್ನು ಕೆಡಿಸಲು ನೀವೆಲ್ಲ ಸಹಾಯಕರೆನ್ನಿ!'

'ನಾವು ಕೆಲಸದವರು, ಧನಿಗಳು ಹೇಳಿದಂತೆ ಕೇಳುವುದು ನಮ್ಮ ಕರ್ತವ್ಯ!'

'ಇದೆಲ್ಲ ಬಲಾತ್ಕಾರದಿಂದ ಕೊಡುವ ಆಶ್ರಮದ ಫಲ! ನಿಜವಾದ ವಿರಾಗಿಯು ಬರುವವರೆಗೂ ಈ ಮಠವನ್ನು ಸರಕಾರದ ವಶದಲ್ಲಿಟ್ಟುಕೊಳ್ಳಲು ಪ್ರಯತ್ನಿಸಲಾಗುವುದು'

'ಅಂತಹ ವಿರಾಗಿಯು ಎಷ್ಟು ವರ್ಷಗಳೋ-ಯುಗಗಳೋ ಸಂದ ಮೇಲೆ ಹುಟ್ಟುವನೋ, ಆವರೆಗೆ ಮಠ ಹಾಳುಬೀಳಬೇಕೆಂದು ತಮ್ಮ ಮತವೆ?

'ಹಾಳು ಬೀಳಬೇಕೆಂದಲ್ಲ; ಯೋಗ್ಯ ಸ್ಥಿತಿಯಲ್ಲಿರಬೇಕೆಂದು. ಮಠದ ಸ್ಥಾಪಕರ ಹೆಸರು ಹಾಳಾಗಬಾರದೆಂದು. ಈಗಲೇ ಮಠ ಅಂತಃಪುರವಾಗುತ್ತಾ ಬಂದಿದೆ. ಒಂದು ಶೃಂಗಾರ ಸಂಜ್ಞೆಯನ್ನು ನೋಡಿಯಾಯಿತು. ಇನ್ನೊಂದಿದೆಯೆಂದು ಈ ಅಭಾಗಿನಿಯ ಮಾತಿನಿಂದ ತಿಳಿಯಿತು. ಪಾಪ, ಇದರಲ್ಲಿರುವ ಕಾರಾಗೃಹವಾಸಿಗಳನ್ನಾದರೂ ಬಿಡೋಣ'.

ಸೂಪರಿಂಟೆಂಡೆಂಟರು ತಮ್ಮ ಅನುಯಾಯಿಗಳ ಸಹಾಯದಿಂದ ಗೋಡೆಗಳನ್ನೆಲ್ಲಾ ತಡವರಿದು, ಏಳೆಂಟು ಸ್ತ್ರೀಯರನ್ನು ಹೊರಬರುವಂತೆ ಮಾಡಿದರು. ಆಶ್ವಾಸನೆ ಕೊಟ್ಟ

ಮೇಲೆ ತಮ್ಮ ಕರುಣ ಕಥೆಗಳನ್ನು ವಿವರಿಸಿದರು. ಪ್ರತಿಯೊಬ್ಬರ ಕಥೆಯೂ ಹೆಚ್ಚು ಕಡಿಮೆ ಸೀತೆಯಂತಹದೆ....... ಪ್ರತಿಯೊಬ್ಬರೂ ತಾವೇ ಯೋಗಿಗಳ ಪೂರ್ಣ ಪ್ರೇಮಭಾಗಿಗಳೆಂದು ತಿಳಿದು ಬಾಳಿದುದು ಆಶ್ಚರ್ಯ! ಅವರೆಲ್ಲರಿಗೆ ತಮ್ಮ ದೇವತೆಯ ಕೊಲೆಯಾದುದು ತಿಳಿಯುತ್ತಲೆ ಹೌಹಾರಿದರು. ನಿರ್ಗತಿಕರಾದ ಅವರ ಬಾಳಿನಲ್ಲಿ ಕತ್ತಲು ಕವಿಯಿತು.

*

ಅದೊಂದು ಸಮಾಧಿಯನ್ನವಲೋಕಿಸುತ ಛಾಯಾ ಶರೀರವೊಂದು ನಡೆದಿತ್ತು. ಸಮಾಧಿಯನ್ನು ಸಮೀಪಿಸುತ್ತಲೆ ಅದು ಕೂಗಿತು -

'ಪ್ರಿಯತಮ, ಏಳಿ, ಏಳಿ! ಏನಿದು ಆಲಸ್ಯ?'

'ಪ್ರಿಯೆ, ಕಾದು ಕಾದು ಬೇಸತ್ತು ಅಡಗಿಕೊಂಡೆ. ಇಂದು ಬರಲು ಏಕೆ ಹೊತ್ತಾಯಿತು?'

'ಹೊತ್ತಾಯಿತೆ? ಸುಟ್ಟ ಜನರು ನಮ್ಮನ್ನು ಒಂದೇ ಜಾಗದಲ್ಲೇಕೆ ಹೂಳಲಿಲ್ಲ? ನಾನು ದೂರದ ಸ್ಮಶಾನದಿಂದ ಬರಬೇಡವೆ?'

'ನಮ್ಮ ಆತ್ಮಗಳು ಒಂದುಗೂಡಿದ್ದರೂ ಹುಚ್ಚು ಜನರು ಶರೀರಕ್ಕೇಕೆ ಅಷ್ಟು ಮಹತ್ವ ಕೊಡುತ್ತಾರೋ ತಿಳಿಯದು'

'ಅದಿರಲಿ; ನನ್ನನ್ನು ಕ್ಷಮಿಸಿದ್ದೀರಾ?'

'ಪ್ರಿಯೆ ನೀನಲ್ಲವೆ ನನ್ನನ್ನು ಕ್ಷಮಿಸಬೇಕು'

'ಅದೇಕೋ?'

'ನಾನು ನಿನ್ನನ್ನು ವಂಚಿಸಿದೆ. ಆದರೆ, ನೀನು ನಿನ್ನ ಪ್ರೀತಿಯ ಶಿಖರವನ್ನು ತೋರಿಸಿದೆ! ವೀರಸ್ತ್ರೀಯಲ್ಲವೆ ನೀನು? ಬಹಳ ಉತ್ತಮ ಕಾರ್ಯ ಮಾಡಿದೆ. ಇಲ್ಲದಿದ್ದರೆ, ತಿಳಿದೂ ತಿಳಿದೂ ಏಕೋ ನನ್ನ ಕೈಯಿಂದ ಎಷ್ಟು ಅಕೃತ್ಯಗಳು ನಡೆಯುತ್ತಿರುತ್ತವೆ. ಅವೆಲ್ಲವುಗಳಿಂದ ನನ್ನನ್ನುಳಿಸಿದ ಪುಣ್ಯ ನಿನ್ನದು'

'ಬ್ರಹ್ಮಚರ್ಯೆಯನ್ನು ಕಾಪಾಡುವುದು ಅಷ್ಟು ಕಷ್ಟವಲ್ಲವೆ?'

'ಹೌದು; ನಾನಿದ್ದ ವಾತಾವರಣದಲ್ಲಿ ಅದು ಎಂದೆಂದಿಗೂ ಅಸಾಧ್ಯ!'

'ಈಗ ನಮಗೆ ಯಾರ ಭಯ?'

'ನಾವ ಸ್ವತಂತ್ರ ಬಾ, ಅಲೆಯೋಣ ಬಾ; ನಾಳೆಯ ಬೆಳಗಿನವರೆಗೆ ನಲಿಯೋಣ ಬಾ'

'ಆಜ್ಞೆ'.

---

* ಕೃಪೆ : ಗಿರಿಬಾಲೆ ಸಾಹಿತ್ಯ ವಾಚಿಕೆ, ಮರೆಯಲಾಗದ ಬರಹಗಾರರು ಮಾಲಿಕೆ, ಸಂ: ಶ್ರೀವಳ್ಳಿ ಟಿ.ಎಸ್., ೧೯೯೪, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

# ೨. ಅವಳ ಉದ್ಧಾರ*

ಗಿರಿಬಾಲೆ

ಪತಿತೆಯೊಬ್ಬಳು ವಿಧವಾಶ್ರಮದ ಮುಂದೆ ನಿಂತಿದ್ದಳು. 'ಭಗಿನಿ, ಸಂಕೋಚಪಡಬೇಡ. ಬಾ, ಒಳಗೆ ಬಾ, ನಿನ್ನ ಮನೆಯೇ ಎಂದು ತಿಳಿ. ಸಮಾಜರೂಪೀ ಕರಾಳ ರಾಕ್ಷಸನಿಂದ ನಿಮಂಥವರನ್ನು ರಕ್ಷಿಸಲೆಂದೇ ಈ ಆಶ್ರಮದ ಸ್ಥಾಪನೆಯಾಗಿರುತ್ತದೆ'.

ಪತಿತೆಯ ಕಣ್ಣುಗಳಲ್ಲಿ ನೀರು ತುಂಬಿತು. ಅಹ! ತನ್ನದಲ್ಲದ-ತನ್ನೊಂದು ಸಣ್ಣ ಅಪರಾಧಕ್ಕಾಗಿ ಮನೆಯಿಂದಲೇ ಹೊರದೂಡಿ, ಬೀದಿಯ ಭಿಕಾರಿಣಿಯನ್ನಾಗಿ ಮಾಡಿದ ತನ್ನವರೆಲ್ಲಿ! ಸಹೋದರ ವಾಂಛೆಯಿಂದ ಅನಾಥಳಾದ ತನ್ನನ್ನು ಬರಮಾಡಿಸಿಕೊಳ್ಳುತ್ತಿರುವ ಈ ಮಹಾತ್ಮರೆಲ್ಲಿ!

ಅವಳು ಆಶ್ರಮದ ವ್ಯವಸ್ಥಾಪಕರನ್ನು ಹಿಂಬಾಲಿಸಿದಳು. ವಿಶಾಲವಾದೊಂದು ಕೊಠಡಿ. ಆಶ್ರಮದ ಕಾರ್ಯ ನಿರ್ವಾಹಕ್ಕಾಗಿ ಮೀಸಲಾಗಿಟ್ಟುದೆಂದು ಕಂಡೊಡನೆ ತಿಳಿದು ಬರುವಂಥ ವ್ಯವಸ್ಥೆಯುಳ್ಳದಾಗಿತ್ತು. ವ್ಯವಸ್ಥಾಪಕರು, ತಮ್ಮ ಆಸನದಲ್ಲಿ ಕುಳಿತು, ಮೇಜಿನ ಮೇಲಿದ್ದ ದಾಖಲೆಯ ಪುಸ್ತಕವನ್ನು ತೆಗೆದರು.

'ನಿನ್ನ ಊರಾವುದು ತಾಯಿ?'

'ಚಿಂತಾಮಣಿ'

'ಹೆಸರು?'

'ಗೋಪಿ'

'ವಯಸ್ಸು?'

'ಇಪ್ಪತ್ತಮೂರು'

'ಮಕ್ಕಳಾಗಿದ್ದುವೆ?'

'..................'

ಹೇಳಮ್ಮ, ನಾಚುಗೆ ಬೇಡ'

' ಈ ಸ್ಥಿತಿಗೆ ಬಂದು ಹತ್ತು ವರ್ಷಗಳಾಗುತ್ತ ಬಂದವು. ನನ್ನ ಭಾಗ್ಯವು ಹಾಳಾದಾಗ ನಾನು ಇನ್ನೂ ಪ್ರಾಯಕ್ಕೆ ಬಂದಿರಲಿಲ್ಲ.........

'ಸರಿ', ಬಾಲವಿಧವೆ, ಆದರೆ ಇದೀಗ ಮನೆಯವರು ಕೈಬಿಡಲು ಕಾರಣವೇನು? ತಿಳಿಸ ಬಹುದೆ?

'........................ ನನ್ನ ಭಾವನರು...........ನನಗೀಗ ಏಳು ತಿಂ-ಗ-ಳು'

'ನಮ್ಮ ಆಶ್ರಮದ ಸಂಗತಿಯು ನಿನಗೆ ಹೇಗೆ ತಿಳಿಯಿತು ತಾಯಿ?'

'ಪತ್ರಿಕೆಗಳ ಜಾಹಿರಾತಿನ ಮೂಲಕ'

'ನಿನಗೆ ಓದು ಬರಹವುಂಟೆ?'

'ಶಾಲೆಗೆ ಹೋದವಳಲ್ಲ. ಆದರೂ ಓದಿ ಅರ್ಥಮಾಡಿಕೊಳ್ಳುವಷ್ಟು ತಿಳಿಯುತ್ತದೆ'

'ಸರಿ, ಯಾವ ಚಿಂತೆಯೂ ಇಲ್ಲದೆ ನೀನಿನ್ನು ಸುಖವಾಗಿರಬಹುದು. ಪ್ರಕೃತ ಮಾತೃ ಮಂದಿರ ವಿಭಾಗದಲ್ಲಿ ನಿನ್ನನ್ನಿರಿಸುವೆವು. ಅಲ್ಲಿ ಮಾತೆಯು ನಿನ್ನನ್ನು ನಿಶ್ಚರ್ಯವಾಗಿಯೂ ಪ್ರೀತಿಸುವರು'.

೨

ವಿಧುರನೊಬ್ಬನು ವಿಧವಾಶ್ರಮದ ಮುಂದೆ ನಿಂತನು. 'ದಯಮಾಡಿಸಬೇಕು ರಾಯರು. ತಮ್ಮದೇ ಸಂಸ್ಥೆ ಇದೆಂದು ತಿಳಿಯಬೇಕು. ಸಂಕೋಚಮಾಡಬಾರದು. ಒಳಕ್ಕೆ ಬರೋಣಾಗಲಿ'

ವಿಧುರನು ವ್ಯವಸ್ಥಾಪಕನನ್ನು ಹಿಂಬಾಲಿಸಿದನು. ಇಬ್ಬರೂ ಏಕಾಂತಕ್ಕೆ ನಡೆದರು.

'ನಿಮ್ಮ ಪ್ರಸಿದ್ಧಿ ಪತ್ರಿಕೆಯ ಪ್ರಕಾರ ನಾನು ಬಂದಿರುವುದಾಗಿದೆ. ದೊಡ್ಡ ಮನೆ, ಬೇಕಾದ ಸಂಪತ್ತು; ಮಕ್ಕಳಿಲ್ಲ. ಅವಳು ಹೋಗಿ ವರ್ಷವಾಯಿತು. ಇದ್ದಾಗಲೂ ಕಾಹಿಲೆ. ಸಂಸಾರ ಸುಖವಿಲ್ಲ. ಪ್ರಾಯ ಮೀರಿದರೂ ಒಂದು ಆಸೆ-ಒಂದು ಭ್ರಾತಿ-ಒಂದಾದರೂ ಮಗುವಾಗಿ, ಸಂಪತ್ತಿಗೆ ವಾರಸು ದೊರೆಯುವುದೋ, ಪಿತೃಋಣ ತೀರೀತೋ ಏನೋ ಎಂದು! ಸಣ್ಣ ಹುಡುಗಿಯನ್ನು ಮದುವೆಯಾಗುವ ಪ್ರಾಯ-ಮೀರಿತು ನೋಡಿ!'

'ಛೆ, ರಾಯರೆ! ತಮಗೆ ಪ್ರಾಯ ಸಂದಿರುವುದೆಂದು ಹೇಳಿದುದಾರು? ಹೆಚ್ಚಾದರೆ ಐವತ್ತೋ! ಸಂದೇಹ. ಪಾಶ್ಚಿಮಾತ್ಯರು ನೋಡಿ, ಐವತ್ತರಲ್ಲಿ ಯೌವನೋದಯವೆನ್ನುವರು. ತಮ್ಮಂತಹವರ ಸಹಾಯವಾಗಲೆಂದೇ - ಅನಾಥರಿಗೆ ದಾರಿಗಾಣಿಸಲೆಂದೇ ನಾವೀ ಆಶ್ರಮ ವನ್ನು ಬಹು ಶ್ರಮದಿಂದ ನಡೆಸುತ್ತಾ ಬರುತ್ತಿದ್ದೇವೆ. ತಮ್ಮಂಥಾ ಎಷ್ಟೊಂದು ಸದ್ಗೃಹಸ್ಥರು ನಮ್ಮಿಂದ ಸಂತೋಷ ಕಾಣಲಿಲ್ಲ! ಎಷ್ಟೊಂದು ಅನಾಥ-ಅಬಲೆಯರು ಮಕ್ಕಳನ್ನು ಮರಿ ಗಳನ್ನು ಹಡೆದು ಸಮಾಜದಲ್ಲಿ ಗೌರವಸ್ಥಾನವನ್ನು ಹೊಂದಲಿಲ್ಲ! ಎಲ್ಲ ಈಶ್ವರ ಕೃಪೆ! ತಮ್ಮ ಸುಖಕ್ಕಾಗಿ, ತಾವು ಇಷ್ಟಪಡುವ ಪ್ರಾಣಿಯನ್ನು ಆರಿಸಿಕೊಳ್ಳಬಹುದು. ಬಾಲವಿಧವೆ ಯರು, ಪ್ರೌಢವಿಧವೆಯರು, ಮಕ್ಕಳ ತಾಯಂದಿರು, ಭರ್ಗವತಿಯರು ಇವರಲ್ಲಾರಾದರೂ ಸರಿಯೆ, ತಮ್ಮ ತೋರಿಕೆಗೆ ಬಂದೊಡನೆ ತಮ್ಮ ಗೃಹಿಣಿಯೆಂದು ತಿಳಿಯಿರಿ'.

'ಅದೆಲ್ಲಾ ಸರಿಯೆ. ನನಗೆ ಪ್ರಾಯ ಬಂದ, ಒಂಟಿ ಸ್ತ್ರೀಯೇ ಆಗಬೇಕಾಗಿದೆ. ತಮ್ಮ ಖರ್ಚು ಏನು ತಗಲಬಹುದು?'

'ತಮ್ಮಂಥವರು ಹಾಗೆ ಕೇಳಬಾರದು. ಅನಾಥೋದ್ಧಾರಕ್ಕಾಗಿ ವ್ಯಯಿಸಲ್ಪಡುವ ಹಣ. ಅದು ಎಷ್ಟಾದರೇನು? ತಾವು ಇಷ್ಟಪಟ್ಟಷ್ಟು'.

'ಐನೂರು?'

'ರಾಯರೇ!'

'ಹೋಗಲಿ. ಸಾವಿರ'

'ತಾವು ನಮ್ಮ ಗೋಪಿಯನ್ನು ನೋಡಬೇಕು. ಸುರಸುಂದರಿ, ಸದ್ಗುಣಿ, ಮಗಳಂತೆ ವರ್ಷದಿಂದ ಸಾಕಿದ್ದೇವೆ. ಅವಳ ಕೂದಲು ಮುಡಿಯ ಬೆಲೆಯಿಲ್ಲ ರಾಯರೆ ತಮ್ಮ ಸಾವಿರ! ಅದೋ, ಇತ್ತ, ಈ ಕಿಟಕಿಯ ಕಡೆಗೆ ಬನ್ನಿ. ಅಲ್ಲಿ ನೋಡಿ. ತುಲಸಿಗೆ ನೀರೆರೆಯುತ್ತಾಳಲ್ಲಾ ಅವಳೇ ನಾಳೆ ತಮ್ಮ ಗೃಹಿಣಿಯಾಗತಕ್ಕವಳು! ತಮ್ಮಂತಹ ಶ್ರೀಮಂತರನ್ನು ಸೇರಿ ಅವಳ ಹಾಳಾದ ಭಾಗ್ಯವು ಬೆಳಗಲಿ!'

'ಏನು!............ಅವಳೆ? ನನ್ನವಳು? ಇರಲಿ. ಮರುಮಾತಿಲ್ಲದೆ ಐದು ಸಾವಿರವೆಂದು ಒಪ್ಪಿಕೊಂಡೆನು. ನಿಮ್ಮ ಆಶ್ರಮವು ಚಿರಸ್ಥಾಯಿಯಾಗಲಿ. ಇಂಥ ಸ್ತ್ರೀಯರು ನಿಮ್ಮ ಆಶ್ರಮದಲ್ಲಿ ಇನ್ನೂ ಹೆಚ್ಚಲಿ. ಆರ್ಯ ವಿಧಿರೀತ್ಯಾ, ನಾಳೆಯೇ ಶುಭಮುಹೂರ್ತವಾಗ ಬಹುದೆ?'

'ತಮ್ಮ ಆಜ್ಞೆಗೆ ವಿರೋಧವೆ?'

'ನಮಸ್ಕಾರ!'

'ನಮಸ್ಕಾರ!'

೩

ಆಶ್ರಮದ ಬಯಲಲ್ಲಿ ಅವರಿಬ್ಬರು ಮಾತಾಡುತ್ತಿದ್ದರು.

'ಮಗು, ತಾಯಿ! ನೀನು ದುಃಖಿಸುವುದೇಕೆ?'

'ಅಯ್ಯೋ, ನನ್ನನ್ನು ಇಲ್ಲೇ ಇರಗೂಡಿ. ಏನೋ, ಬಲಪ್ರಯೋಗದಿಂದಾಗಿ ಮಾತ್ರ ನಾನು ಪತಿತೆಯಾದೆನಲ್ಲದೆ, ಆತ್ಮಸಾಕ್ಷಿಯಾಗಿ ನನಗೆ ಪೂರ್ವ ಸಂಪ್ರದಾಯದಲ್ಲಿ ನಂಬಿಕೆಯೂ, ಭಕ್ತಿ ಗೌರವಗಳೂ ಇವೆ. ಆತ್ಮತಃ ನಾನು ಪರಿಶುದ್ಧಳು-ಹಾಗೆಯೇ ಸಾಯುವ ವರೆಗೂ ಇರಬೇಕೆಂದು ನನ್ನ ಆಸೆ. ಅದನ್ನೇಕೆ ಕೆಡಿಸುವಿರಿ? ಇಷ್ಟು ದಿನ ತಾಯಿ ತಂದೆಯರಂತೆ ಸಾಕಿ ಕೊನೆಗೆ ಬಿಟ್ಟು ಹಾಕುವಿರಾ? ಸ್ವೇಚ್ಛೆಯಿಂದಲ್ಲದೆ, ಆಶ್ರಮಗಳಲ್ಲಿ ಬಲಪ್ರಯೋಗ ಮಾಡಲ್ಪಡುವುದಿಲ್ಲವೆಂದು ಕೇಳಿದ್ದೆ. ಅದು ಸುಳ್ಳೆ?'

'ಏನು ಹುಚ್ಚಿ ಮಗು ನೀನು! ಇಷ್ಟು ಚಿಕ್ಕ ಪ್ರಾಯ! ಪ್ರಪಂಚವೆಲ್ಲಾ ಆನಂದ ಸಾಗರದಲ್ಲಿ ಓಲಾಡುತ್ತಿದೆ! ಇಂಥಾ ರೂಪ! ಬದಲು ಪತಿಯ ಪ್ರೀತಿಯೇನೆಂಬುದರ ಕಲ್ಪನೆ ಕೂಡ ಇಲ್ಲದವಳು! ಹಾಗೆಲ್ಲಾ ಹಚ್ಚಿಕೊಳ್ಳಬಾರದು. ದೊಡ್ಡ ಮನೆ ಸೇರುವೆ. ಬೇಕಾದ ಸಂಪತ್ತು. ಒಳ್ಳೆ ಗುಣಿ ಗೃಹಸ್ಥ. ಅಲ್ಲದೆ ಒಬ್ಬೊಂಟಿಗ. ಅತ್ತೆ ಮಾವಂದಿರ ಕಾಟವಿಲ್ಲ. ಸವತಿ ಮಕ್ಕಳ ಉಪದ್ರವವಿಲ್ಲ. ಸ್ವತಂತ್ರಳಾಗುವೆ. ನೀನು ಸುಖಪಟ್ಟರೆ ನಮಗೆ ಆನಂದ. ನಿಮ್ಮಂಥವರ

ಉದ್ಧಾರವೇ ನಮ್ಮ ಆಶ್ರಮದ ಧ್ಯೇಯ! ಅಲ್ಲದೆ ಆಜನ್ಮ ನೀವೆಲ್ಲರೂ ಇಲ್ಲೇ ಕುಳಿತು ಕೊಂಡರೆ ನಮ್ಮಿಂದ ಸಾಕಲು ಸಾಧ್ಯವಾಗುವುದೆ ತಾಯಿ? ಗತಿಯಿಲ್ಲದವರಿಗೆ ಗತಿಕಾಣಿಸಲೆಂದು ಮಾತ್ರ ಈ ಆಶ್ರಮ ಮಗು! ಅಲ್ಲಗಳೆದರೆ ನಮ್ಮನ್ನು ನಿಷ್ಠೂರರೆಂದು ತಿಳಿಯಬೇಕಾಗಿ ಬಂದೀತು!'

'ಹಾಗಾದರೆ, ಅಮ್ಮಾಜಿಯವರ ಉಪದೇಶದ ಅರ್ಥವೇನು?'

'ವ್ಯಭಿಚಾರ ಮಾತ್ರ ದೋಷವಮ್ಮಾ, ಒಬ್ಬನೊಂದಿಗೆ ಜೀವನ ನಿರ್ವಾಹಕ್ಕಾಗಿ ಸಂಸಾರ ಮಾಡುವುದು ತಪ್ಪಲ್ಲ. ನಿನ್ನ ಹೊಸ ಪತಿಯೊಂದಿಗೆ ಪತಿವ್ರತೆಯರ ತತ್ವಗಳನ್ನು ನೀನು ಅನುಸರಿಸಿದರೆ ನಿನಗೆ ಮೋಕ್ಷವು ನಿಶ್ಚಯ'.

'ನನ್ನ ಮಗುವಿನ ಗತಿ?'

'ಎಲ್ಲಿಯ ಮಗು ತಾಯಿ? ಅದು ಅನೀತಿಯ ಸಾಕ್ಷಿ. ಒಬ್ಬ ಕಾಮುಕನ ವಾಸನಾಪಿಂಡ! ಅದು ಆಶ್ರಮದಲ್ಲೇ ಉಳಿಯಲಿ! ಅನಾಥ ಬಾಲಕರೊಂದಿಗೆ ಬೆಳೆದು ಕಲಾಶಾಲೆಯಲ್ಲಿ ಕಲಿತು ಪ್ರಸಿದ್ಧಿಗೆ ಬರಲಿ. ಅದನ್ನು ನೀನು ಹೆತ್ತಿರುವೆಯೆಂದು ಯಾರಲ್ಲೂ ಪ್ರಸ್ತಾಪಿಸಬೇಡ. ನಿನ್ನ ಜೀವನದಲ್ಲಿ ಅದೊಂದು ಅಜ್ಞಾತ ಸಂಭವವಾಗಿರಲಿ'.

ಅವಳಿನ್ನೇನು ಮಾತಾಡಲು ಸಾಧ್ಯ? ಅವಳದ್ದೇನು ನಡೆಯಬಹುದು? ಮಾರನೆ ದಿನ, ಆಶ್ರಮದ ವ್ಯವಸ್ಥಾಪಕರ ಎಡಕೈಯು ಐದು ಸಾವಿರದ ಥೈಲಿಯನ್ನು ಹಿಡಿದುಕೊಳ್ಳುವಾಗ ಬಲಕೈಯು ಗೋಪಿಯನ್ನೊಬ್ಬ ಮುದುಕನ ಕೈಯನ್ನು ಹಿಡಿಸಿತು!

೪

ನೂತನ ಸಂಸಾರವು ಸಾಗುತ್ತಿರುವಾಗ ಒಂದು ದಿನ ನಟ್ಟಿರುಳಲ್ಲಿ, 'ಬೆಡಗುಗಾತಿ! ಸಾಕು ನಿನ್ನ ಬಿನ್ನಾಣವೆಲ್ಲ. ಕುಡಿಯಬಾರದಂತೆ - ಕುಡಿದರೆ ಕೆಟ್ಟುಹೋಗುವುದೇನು? ನಾನು ಗಳಿಸಿಟ್ಟ ಹಣವನ್ನು, ನಾನು ಉಪಭೋಗಿಸದೆ ಯಾರಿಗಿಡಲಿ? ನಿನ್ನನ್ನು ಕಟ್ಟಿಕೊಂಡು ವರ್ಷವಾಯಿತು. ಒಂದು ಮಗುವಾದರೂ ಹುಟ್ಟಿದರೆ ಸಾರ್ಥಕವಾಗುತ್ತಿತ್ತು. ಬಾಳಿನ ನೋವನ್ನು ಮರೆಯಲು ಕುಡಿಯುತ್ತಿದ್ದರೆ ನಿನ್ನದೇನು ನಷ್ಟ? ಅಧಿಕಪ್ರಸಂಗ ಮಾಡಿದೆಯಾದರೆ ಒದೆ ತಿನ್ನ ಬೇಕಾದೀತು'.

'ಅಯ್ಯೋ, ಹಾಗಲ್ಲ-ಕುಡಿತವು ಕೆಟ್ಟದೆಂದು ಕೇಳಿದ್ದೆ. ಹಣ ಹಾಳಾಗಲಿ. ಅದಾಗಲೆ ದೇಹವನ್ನೆಲ್ಲಾ ಕೆಡಿಸಿಕೊಂಡಿರುತ್ತೀರಿ. ಇನ್ನು ಕುಡಿದು, ಆತ್ಮವನ್ನೂ ಏಕೆ ಹಾಳು ಮಾಡಿಕೊಳ್ಳ ಬೇಕೆಂದಿಷ್ಟೆ, ನಾನು ಹೇಳುವುದು.........ಮತ್ತೆ ನಿಮಗೆ ಹೇಳಲು ನನಗೇನು ಅಧಿಕಾರವಿದೆ?'

'ನನ್ನಾತ್ಮವು ಅದೆಂದೋ ಹಾಳಾಗಿ ಹೋಗಿದೆ. ಮೇಲಾಗಿ ನಿನ್ನಂಥಹ ಗೊಡ್ಡು ಹೆಣದೊಂದಿಗೆ ಸಂಸಾರ! ಇನ್ನೇನು ಬೇಕು ನನ್ನಾತ್ಮ ಹಾಳಾಗಲಿಕ್ಕೆ? ಕುಡಿತವು ನನಗೆ ಹೊಸತಲ್ಲ. ಹೆಚ್ಚು ಹರಟೆ ಬೇಡ. ಹೋಗಾಚೆ! ನಿನ್ನನ್ನು ಹೊರದೂಡಿದರೇನು? ನೀನಾರು ನನಗೆ ಉಪದೇಶ ಮಾಡಲಿಕ್ಕೆ? ನನಗೇನು? ಹಣವುಂಟು-ನಿನ್ನಂಥ ಹತ್ತು ಮಂದಿಯೂ ಇದ್ದಾರೆ. ನಿನ್ನಂತಹ ಗೊಡ್ಡಿಗೆ ತೆರಲಿಲ್ಲವೆ ಐದು ಸಾವಿರ?'

‘ಸುಮ್ಮನೆ ಏಕೆ ಗೊಡ್ಡು-ಗೊಡ್ಡು ಎನ್ನುತ್ತೀರಿ? ನಿಮ್ಮಾತ್ಮವು ಒಪ್ಪುತ್ತದೆಯೆ? ಅಥವಾ ನೆರೆಕರೆಯವರ ಕಣ್ಣಿಗೆ ಮಣ್ಣು ಹಾಕಲು ಹಾಗೆ ಹೇಳುವಿರಿ? ನಾನು ಗೊಡ್ಡು ಎಂಬುದಕ್ಕೆ ಸಿದ್ಧಾಂತವೇನು? ಹೊರ ನೋಟಕ್ಕೆ ಗಂಡ ಹೆಂಡರಂತಿದ್ದರೆ ನಮ್ಮದು ತಂದೆ ಮಕ್ಕಳಂತಹ ಸಂಬಂಧ! ಹೇಳಿ-ನನ್ನ ದೇಹವನ್ನು ಪತ್ನೀರೂಪದಿಂದ, ಸ್ಪರ್ಶಿಸಬೇಕಾದ ರೀತಿಯಲ್ಲಿ, ಸ್ಪರ್ಶಿಸಿರುತ್ತೀರೆ? ಹಾಗಿದ್ದ ಮೇಲೆ ನನ್ನನ್ನು ಗೊಡ್ಡು ಎಂದು ಹೇಗೆ ನಿರ್ಧರಿಸಿದಿರಿ? ನಾನು ಹೇಗೂ ಪತಿತೆ; ಎಂದ ಮೇಲೆ ನನಗೆ ನಾಚುಗೆಯೇನು? ನಾನು ಗೊಡ್ಡಾಗಿ ಇದ್ದಿದ್ದರಾದರೂ ಸಮಾಜದಲ್ಲಿ ನನಗೆ ಸ್ಥಾನವಿರುತಿತ್ತೋ ಏನೊ! ಹಾಗಿರುತ್ತಿದ್ದರೆ ನಿಮ್ಮಲ್ಲಿಗೇಕೆ ಬರುತ್ತಿದ್ದೆ? ನಾನು ಗರ್ಭಿಣಿಯಾದ ದೋಷವೇ ನನ್ನನ್ನು ಪತಿತೆಯನ್ನಾಗಿ ಮಾಡಿತು-ನಾನು ಗೊಡ್ಡಲ್ಲ-ನನ್ನ ಮಗು ಆಶ್ರಮದಲ್ಲಿ ಬೆಳೆಯುತ್ತಿದೆ.........................ಮುದ್ದಾದ ಮಗು........

‘ಏನು!.......................ನೀನು ವ್ಯಭಿಚಾರಿಣಿಯೆ? ಭಲೆ-ನಿನ್ನಂತಹ ಸೂಳೆಗೆ ನಾನು ಐದು ಸಾವಿರ ತೆತ್ತೆನೆ? ಆ.......................ಮಗನೇಕೆ ನನಗೆ ಈ ವಿವರವನ್ನು ತಿಳಿಸಲಿಲ್ಲ! ಪಾಪಿ! ನನ್ನ ಐದು ಸಾವಿರ!’

‘ಯಾರಲ್ಲಿ ಕೇಳುತ್ತೀರಿ? ನಿಮ್ಮಲ್ಲಿ ನಾನು ಬೇಡಿದೆನೆ? ಯಾರಿಗೆ ಕೊಟ್ಟಿರಿ? ಯಾಕೆ ಕೊಟ್ಟಿರಿ? ನನಗೇನು ಗೊತ್ತು? ನನ್ನನ್ನು ಗೋಳುಹೊಯ್ದು ಫಲವಾದರೂ ಏನು? ನಾನು ಅನಾಥೆ-ಪತಿತೆ-ಅದೃಷ್ಟಹೀನೆ-ತಮ್ಮನ್ನು ಸೇರಿಯೂ ಸುಖದಿಂದ, ಗೌರವದಿಂದ ಇರಲು ಭಾಗ್ಯವಿಲ್ಲದ ಭಿಕಾರಿಣಿ....................!

ಎರಡು ಒದೆಗಳು.

‘ಸುಖ? ಇನ್ನಾವ ಸುಖಬೇಕು ನಿನಗೆ? ಉಣ್ಣಲಿಲ್ಲವೆ? ಉಡಲಿಲ್ಲವೆ? ಮೇಲಾಗಿ ನನ್ನಲ್ಲಿ ಅಧಿಕಾರ ಮಾಡುತ್ತೀ. ಷಂಡನೆಂದು ಹಂಗಿಸುತ್ತೀ. ರಾಕ್ಷಸಿ-ಕುಲಟೆ-ನಡೆ-ಬಿಡು ನನ್ನ ಮನೆಯನ್ನು-ಬಿಟ್ಟು ಹೊರಡು’.

‘ದೇವರೆ! ಎಲ್ಲಿಗೆ ಹೋಗಲಿ ಈ ಅಪರ ರಾತ್ರೆಯಲ್ಲಿ................!!!’

‘ಅಲ್ಲಿಗೆ, ನಿನ್ನ ಮಗುವಿನ ತಂದೆಯಲ್ಲಿಗೆ, ಓಡು.............ಐದು ಸಾವಿರ! ಬೆಳಗಾಗಲಿ; ಅವನನ್ನೊಂದು ಕೈ ನೋಡುವೆನು’

ಕುಡುಕನು ಅವಳನ್ನು ಹೊರದಬ್ಬಿ ಬಾಗಿಲು ಹಾಕಿಕೊಂಡನು. ಅವಳು ಪುನಃ ನಿರಾಶ್ರಿತೆ!

೫

ಅದೇ ರಾತ್ರಿ ದಾರಿಯಲ್ಲಿ.

‘ಏ, ಅಮ್ಮಾ, ಯಾರು ನೀನು ಈ ರಾತ್ರಿ ಯಾಕೆ ಬೀದಿಯಲ್ಲಿ ಅಲೆಯುತ್ತೀ?’

‘ವಿಧಿಯಪ್ಪಾ, ವಿಧಿ! ಅದನ್ನೆಲ್ಲಾ ಏನು ಕೇಳುತ್ತೀ - ನಾನೇನೆಂದು ಹೇಳಲಿ?’ ‘ನೀನು ಚಂದಾಗಿದ್ದೀಯಲ್ಲಾ?’

‘...........................’

'ಏನಮ್ಮಾ ಮಾತಾಡುವುದಿಲ್ಲ. ನಿನ್ನನ್ನು ನೋಡಿದರೆ, ಮನೆಗೆ ಲಾತು ಕೊಟ್ಟು ಬಂದವಳಂತೆ ತೋರುತ್ತದೆ. ಹಾಗಿದ್ದರೆ ಚಿಂತೆ ಬೇಡ. ಮಹಬೂಬಿ ಭಲೇ ಸಂತೋಷಪಟ್ಟಾಳು.

ಬರುತ್ತೀಯಾ ಅಲ್ಲಿಗೆ ಹೋಗೋಣ?'

'ಯಾರಪ್ಪಾ, ಅದು, ಮಹಬೂಬಿಯೆಂದರೆ?'

'ಅದೆಲ್ಲಾ ನಿನಗೆ ಯಾಕೆ? ಬಾ, ಭಲೇ ರಂಗಿನಲ್ಲಿ ಕಾಲ ಕಳೆಯಬಹುದು'.

'ನಡೆಯಪ್ಪಾ; ಇಡಿಮುಳುಗಿದವರಿಗೆ ಛಳಿಯೇನು? ಆಗುವುದೆಲ್ಲಾ ಆಗಲಿ. ಪ್ರಪಂಚದ ನಿಜಸ್ವರೂಪವಾದರೂ ಹೇಗಿದೆ ನೋಡೋಣ!'

'ಒಳ್ಳೆ ಜಾಣೆಯಮ್ಮಾ ನೀನು ಹೀಗೆ ಬಾ'.

*

ಮಹಬೂಬಿಯ ಮನೆಗೆ ಹೋದ ಮೇಲೆ:

'ಬೂಬಾಜಾನ್, ನೋಡು ನಿನಗೊಂದು ಹಕ್ಕಿ!'

'ಯಾರೆಲೋ ಅದು! ಏನಿದು ಜೊಪ್ಪೆ..............ಆದರೆ, ಅವಳನ್ನು ನೋಡುತ್ತಲೆ; 'ಆಹಾ, ಇದಾರು! ಭಲೆ ಖುಬಿಯಾಗಿದ್ದಾಳಲ್ಲಾ! ಬಾ, ಬಾಯಿ, ನೀನು ನನ್ನ ಮಗಳು! ಬಾ, ಹೀಗೆ ಬಾ'

ಅವಳೇನೆನ್ನುವಳು? ಅಲಂಕೃತವಾದ ಮನೆಯನ್ನೊಮ್ಮೆ ವಿಷಾದ ದೃಷ್ಟಿಯಿಂದ ನೋಡಿದಳು. ಅವಳಿಗೆ ತನ್ನ ಮುಂದಿನ ದಿನಗಳು ಅಲ್ಲಿ ಹೇಗೆ ಕಳೆಯಲಿದೆಯೆಂಬುದರ ಅರಿವಾಯಿತು. ಮಾರನೇ ದಿನವೇ ಅವಳ ಕಾರ್ಯಕ್ರಮವು ತೊಡಗುವುದು.

ವಿಧವಾಶ್ರಮದಿಂದ ಆದುದು ಇದೇ ಏನು?

ಅವಳ ಉದ್ಧಾರ?

---

* ಕೃಪೆ : ಗಿರಿಬಾಲೆ ಸಾಹಿತ್ಯ ವಾಚಿಕೆ, ಮರೆಯಲಾಗದ ಬರಹಗಾರರು ಮಾಲಿಕೆ, ಸಂ: ಶ್ರೀವಲ್ಲಿ ಟಿ.ಎಸ್., ೧೯೯೪, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

# ಕರುಳ ಕ್ರಂದನ

ಕೆ. ನೀಲಾ

ಅವ್ವನ ಉದರದ ಕರುಳು
ಹೊಕ್ಕಳ ಬಳ್ಳಿಗೆ ಬೆಸೆದು
ಕಿವಿಯಲ್ಲಿ ಉಸಿರಿದ್ದು
"ಛೀ ಹೆಣ್ಣು ಮಗು
ಬೇಕಿರಲಿಲ್ಲ ನಮಗಾರಿಗೂ ....."
ಹುಟ್ಟಿಸಿದರು ಯಾಕಾಗಿ...?

ಚಂದ್ರ ಬಂದ ಮೂರು ಬಾರಿ
ಹಾಲ್ದಿಂಗಳು ಚೆಲ್ಲುತ
ಮತ್ತಷ್ಟೇ ಬಾರಿ
ಕಾರ್ಗತ್ತಲು ಚೆಲ್ಲುತ
ಆಗ ಬೀಜ ಬಿತ್ತಿದ ಒಡೆಯ ಬಂದ
"ಬರೀ ಹೆಣ್ಣು ಫಲ
ಒಳ್ಳೆಯದಿತ್ತು ಬರಡು ನೆಲ
ಕಿತ್ತಿ ಹಾಕು ಈ ಕಸ....."
ಅವ್ವ ಕೇಳುವ ಕಿವಿಗಳೇಕೆ ಕೊಟ್ಟೆ?
ಚಿಂತಿಸುವ ಮೆದುಳೇಕೆ ಇಟ್ಟೆ?
ನಾನು 'ಜೀವರಸ'ವಲ್ಲವೇ?
ಕಸವೆಂದು ನಿಜವಾದಲ್ಲಿ
ಈ ಪವಿತ್ರ ಗರ್ಭ ಕಸದೊಟ್ಟಿಯೇ?
ಈ ಬೀಜ ಬಿತ್ತಿದವನ ಹೊಟ್ಟೆ
ಕಸದ ಬುಟ್ಟಿಯೇ?
ನಿಜವ ನುಡಿ ತಾಯೇ

ಜಗದ ಸಂಚಲನೆಯ ಜೀವ ಚೈತನ್ಯವೇ?
ನನ್ನ ಪಾಲಿನ ಏಕೈಕ ಸತ್ಯವೇ?

ಬೆಳಕು ಬರುವ ಮುನ್ನ
ಕತ್ತಲು ಮುಗಿವ ಮುನ್ನ
ಏಕೆ ನೋವಾಗುತ್ತಿರುವೆ ಅವ್ವ?
ನಿನ್ನ ದೇಹ ರಕ್ತದ ತುಣುಕು ನಾನು
ಕೇಳಬಾರದ ಮಾತೆ ಹೇಳು?
ಮತ್ತೂ ಅಳುವಾದಳು ಅವ್ವ
ಆಕ್ರಂದನವೇ ಮೈಯಾದಳು

ಗರ್ಭ ಕೋಟೆಯ ಬಾಗಿಲು
ಉಳಿಯಿಂದ ಒಡೆಯುವ ಶಬ್ದ!
ಹೆಬ್ಬಾಗಿಲು ತೆರೆದು
ಕೊಲ್ಲುವವರ ಕರೆದು
ಹೊರಗೆಳೆವ ನನ್ನ
ಹೇಳು ಇವರಾರವ್ವ...?
ಪ್ರಶ್ನೆಗಳ ಪರಿಣಾಮಕ್ಕೆ
ಕರುಳು ಕಲ್ಲಾಯಿತು
ಮೌನ ಬಂಡೆಗಲ್ಲಾಯಿತು

ಇದೊಂದು ಆಧಾರ ಕಳಕೊಂಡ ನನ್ನ
ಕರುಣೆಯಿಟ್ಟು ಕೊಲ್ಲಿರಿ ದಾಯಿ
ಕತ್ತಲು ಗರ್ಭದಿಂದ
ಬೆಳಕ ಬಾಗಿಲಿಗೆ ನಿಂತಿರುವೆ
ಮಮತೆಗಿನಿತಾದರೂ ನೆಲೆ ಇಟ್ಟು
ತಲೆ ಒಡೆಯಿರಿ
ಅವ್ವಯ್ಯ ಒಳಗೆ ತೂರಿದ ಕತ್ತರಿ
ನೋವಾಗಿಸದಿರಲಿ ಹೆತ್ತ ಅಲ್ಲಲ್ಲ ಹೊತ್ತ ಒಡಲಿಗೆ
ಮತ್ತೆ ಮೆತ್ತಗೆ ಕತ್ತರಿಸಲಿ
ಈ ಕುತ್ತಿಗೆ ನರವ
ಇಲ್ಲಿದೆ "ಹೆಂಗೂಸ ಜೀವ"

# ಈ ಸಂಚಿಕೆಯ ಲೇಖಕರು

೧. ಡಾ. ಕೆ. ಕೇಶವಶರ್ಮ, ಪ್ರವಾಚಕರು, ಕನ್ನಡ ಭಾರತಿ, ಕುವೆಂಪು ವಿಶ್ವವಿದ್ಯಾನಿಲಯ, ಜ್ಞಾನ ಸಹ್ಯಾದ್ರಿ, ೫೭೭ ೪೫೧, ಶಿವಮೊಗ್ಗ ಜಿಲ್ಲೆ.

೨. ಡಾ. ಮೀನಾಕ್ಷಿ ಬಾಳಿ, ಅಧ್ಯಾಪಕರು, ಕನ್ನಡ ವಿಭಾಗ, ಎಂ.ಎಸ್.ಐ. ಪದವಿ ಕಾಲೇಜು, ಗುಲ್ಬರ್ಗಾ.

೩. ಡಾ. ಬಿ.ಆರ್. ಕವಿತಾ ರೈ, ಜಯಶ್ರೀ ನಿಲಯ, ಶಾರದಾನಗರ, ಮಾಡೂರು, ಕೋಟೆಕಾರ್, ಬೀರಿ, ಮಂಗಳೂರು (ದಕ್ಷಿಣ ಕನ್ನಡ ಜಿಲ್ಲೆ).

೪. ಡಾ. ಎಸ್.ವಿ. ಪ್ರಭಾವತಿ, ೩೦೧, ಪಲ್ಲವಟೆರೇಸ್ (ಟಾಕೀಸ್), ಜಯನಗರ, ೬ನೇ ಬ್ಲಾಕ್, ಬೆಂಗಳೂರು ೮೨.

೫. ಡಾ. ಕೆ. ಸರೋಜಾ, ಸಹ ಪ್ರಾಧ್ಯಾಪಕರು, ಮಾನವ ವಿಕಾಸ ವಿಭಾಗ, ಕೃಷಿ ವಿಶ್ವವಿದ್ಯಾಲಯ, ಧಾರವಾಡ ೫೮೦ ೦೦೫.

೬. ಡಾ. ಎಸ್.ಎಸ್. ಅಂಗಡಿ, ಹಿರಿಯ ಶ್ರೇಣಿ ಅಧ್ಯಾಪಕರು, ಹಸ್ತಪ್ರತಿ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬.

೭. ಶ್ರೀ ಬಿ.ಕೆ. ಶಿವರಾಜ, ಸಂಶೋಧನಾ ವಿದ್ಯಾರ್ಥಿ, ಮಹಿಳಾ ಅಧ್ಯಯನ ವಿಭಾಗ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ.

೮. ಶ್ರೀ ವಿಠೋಬ ಭೀಮಣ್ಣ, ಸಂಶೋಧನಾ ವಿದ್ಯಾರ್ಥಿ, ಅರ್ಥಶಾಸ್ತ್ರ ವಿಭಾಗ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ.

೯. ಡಾ. ಬಿ.ಎಸ್. ಗೀತಾ, ಪೋಸ್ಟ್ ಡಾಕ್ಟರಲ್ ಫೆಲೊ ಆಫ್ ಐಸಿಎಚ್ಆರ್, ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು ವಿಶ್ವವಿದ್ಯಾಲಯ, ಜ್ಞಾನಭಾರತಿ, ಬೆಂಗಳೂರು ೫೬೦ ೦೫೬.

೧೦. ಶ್ರೀ ಬಿ. ಸುಜ್ಞಾನಮೂರ್ತಿ, ಸಹಾಯಕ ನಿರ್ದೇಶಕರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬.

೧೧. ಡಾ. ಶಿವಾನಂದ ಎಸ್. ವಿರಕ್ತಮಠ, ಅಧ್ಯಾಪಕರು, ಮಹಿಳಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬.

೧೨. ಡಾ. ಬಸವರಾಜ ಸಬರದ, ನಿರ್ದೇಶಕರು, ಬಸವಾದಿ ಶರಣ ಸಾಹಿತ್ಯ ಕೇಂದ್ರ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೧೩. ಡಾ. ಶಾಂತಾ ಅಸ್ಟಿಗೆ, ಅಧ್ಯಾಪಕರು, ಸಮಾಜಶಾಸ್ತ್ರ ವಿಭಾಗ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಸೇಡಂ, ಗುಲ್ಬರ್ಗಾ ಜಿಲ್ಲೆ.

೧೪. ಶ್ರೀ ಗೋವಿಂದರಾಜು, ಸಂಶೋಧನಾ ವಿದ್ಯಾರ್ಥಿ, ಶಿಕ್ಷಣ ವಿಭಾಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೧೫. ಡಾ. ನೊಗಳ್ಳಿ ಗಣೇಶ್, ಮುಖ್ಯಸ್ಥರು, ಜಾನಪದ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬.

೧೬. ಡಾ. ಹರಿಶ್ಚಂದ್ರ ದಿಗ್ಸಂಗಿಕರ್, ಹಿರಿಯ ಶ್ರೇಣಿ ಅಧ್ಯಾಪಕರು, ಜಾನಪದ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬.

೧೭. ಗಿರಿಬಾಲೆ ಸಂ: ಶ್ರೀವಲ್ಲಿ ಟಿ.ಎಸ್., ೧೯೯೪, ಗಿರಿಬಾಲೆ ಸಾಹಿತ್ಯ ವಾಚಿಕೆ, ಮರೆಯಲಾಗದ ಕಥೆಗಾರರು ಮಾಲಿಕೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೮. ಶ್ರೀಮತಿ ಕೆ. ನೀಲಾ, ೧೨/೧-ಸಿ, ಪಿ.ಡಬ್ಲ್ಯೂ.ಡಿ ಕ್ವಾಟ್ರಸ್, ಹಳೆ ಜೇವರ್ಗಿ ರಸ್ತೆ, ಗುಲಬರ್ಗಾ.

ಮಹಿಳೆಯ ಅಸ್ಮಿತೆ, ಅಸ್ತಿತ್ವಗಳನ್ನು ಗುರುತಿಸುವ, ಅವಳ ಬದುಕನ್ನು ಸುಗಮವಾಗಿಸುವ ದಿಸೆಯಲ್ಲಿ ಚಿಂತನೆ ನಡೆಸುವ ಮಾಧ್ಯಮಗಳಿಗಾಗಿ ಹುಡುಕಾಟ ನಡೆಸಬೇಕಿದೆ. ಏಕೆಂದರೆ ಈವರೆಗೆ ಈ ಪುರುಷಪ್ರಧಾನ ಸಮಾಜಕ್ಕೆ ಮಹಿಳೆಯನ್ನು ದುಡಿಸಿಕೊಳ್ಳುವುದು ಹೇಗೆ ಎಂಬುದೇ ಚಿಂತೆಯಾಗಿದೆಯೇ ಹೊರತು ಅವಳ ಅಗತ್ಯಗಳನ್ನು ಗಮನಿಸಬೇಕೆಂದು ಅನಿಸಿದ್ದಿಲ್ಲ. ಇಂದಿನ ಜಾಗ್ರತ ಮಹಿಳೆ ತನ್ನ ವರ್ತಮಾನ, ಭವಿಷ್ಯಗಳನ್ನು ತಿದ್ದಿ ರೂಪಿಸುವ ಸಾಮರ್ಥ್ಯವನ್ನು ಕ್ರಮೇಣ ಪಡೆಯುತ್ತಿದ್ದಾಳೆ. ಈ ಹಂತದಲ್ಲಿ ಗಂಭೀರವಾದ ಚಿಂತನೆ, ಚರ್ಚೆ, ಸಲಹೆ, ಸೂಚನೆಗಳನ್ನು ಕೊಡುತ್ತಾ ಅವಳ ಪ್ರಯತ್ನಕ್ಕೆ ನೆರವಾಗುವ ಪತ್ರಿಕೆಗಳ ಅಗತ್ಯವನ್ನು ಪೂರೈಸುವ ಪ್ರಯತ್ನವಾಗಿ ಈ ಮಹಿಳಾ ಅಧ್ಯಯನ ಪತ್ರಿಕೆ ಕೆಲಸ ಮಾಡುತ್ತಿದೆ. ಇಲ್ಲಿನ ಚಿಂತನೆ, ಚರ್ಚೆಗಳು ತಾತ್ತ್ವಿಕ ನೆಲೆಯ ಶೋಧಗಳಲ್ಲಿರುವ ವಿದ್ವಾಂಸರೂ ಕ್ರಿಯಾಕ್ಷೇತ್ರಗಳಲ್ಲಿರುವ ಕಾರ್ಯಕರ್ತರೂ ಪರಸ್ಪರ ಸಂವಾದ ನಡೆಸಲು ನೆರವಾಗುವಂತಿರಲಿ ಎಂಬ ಆಶಯದವಾಗಿವೆ.



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ